# ಸಿದ್ಧಹಸ್ತ

ಗೌರವ ಸಂಪಾದಕ:

ತಿ. ತಾ. ಶರ್ಮ

ಸಹಕಾರ:

ವಿ. ಎಸ್. ನಾರಾಯಣರಾವ್

ನೀಲತ್ತಹಳ್ಳಿ ಕಸ್ತೂರಿ

# ಸಿದ್ಧಹಸ್ತ

(ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ ಸಂಭಾವನಾ ಗ್ರಂಥ)

ಸಂಪಾದಕ :

ಸು. ರಂಗಸ್ವಾಮಿ

ಹಂಸಧ್ವನಿ ಪ್ರಕಾಶನ

ರಾಜಾಜಿನಗರ : : ಬೆಂಗಳೂರು-೧೦

SIDDAHASTHA — Sambhavana Grantha. A Collection of Articles by various Authors on the Life and Works of Sri Siddavanahalli Krishna Sharma, renowned Kannada Writer. Editor and Publisher: S. Rangaswamy, Hamsa Dhwani Prakashana, 599, Sixth Block, Rajajinagar, Bangalore-10. I Edition: June, 1973. 
Art by G. K. Satya.



ಬೆಲೆ: ರೂ. ೨೦

ಮುದ್ರಣ:
ರಾಘವ ಪ್ರಿಂಟರ್ಸ್
ವಿಜಯನಗರ, ಬೆಂಗಳೂರು–೪೦.

# ಅರಿಕೆ

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ ಅವರ ಜೀವನ, ಸಾಹಿತ್ಯ ಎಷ್ಟು ವಿಸ್ತಾರವಾದ ಕ್ಷೇತ್ರದಲ್ಲಿ ಕೆಲಸ ಮಾಡಿದೆ ಎನ್ನುವುದಕ್ಕೆ ಈ ಸಂಭಾವನಾ ಗ್ರಂಥದಲ್ಲಿ ಪ್ರಕಟವಾಗಿರುವ ಲೇಖನಗಳೇ ಸಾಕ್ಷಿ. ಕೃಷ್ಣಶರ್ಮರು ನಮ್ಮ ಸಮಾಜದ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದಾರೆ.

ಕೃಷ್ಣಶರ್ಮರ ಬಗ್ಗೆ ಪ್ರೀತಿ, ವಿಶ್ವಾಸ, ಆದರ, ಸ್ನೇಹ, ಮೆಚ್ಚುಗೆ, ಕೃತಜ್ಞತೆ ಮುಂತಾದ ಹೃದಯಸ್ಪರ್ಶಿ ಭಾವನೆಗಳನ್ನು ಈ ಸಂಭಾವನಾ ಗ್ರಂಥದ ಲೇಖಕರು ತಮ್ಮ ಲೇಖನಗಳಲ್ಲಿ ವಿವರಿಸಿದ್ದಾರೆ. ಪ್ರತಿಯೊಂದು ಲೇಖನದಲ್ಲೂ ಶರ್ಮರ ಸರಳತೆ, ಪ್ರಾಮಾಣಿಕತೆ, ದೇಶಭಕ್ತಿ ಪ್ರತಿಧ್ವನಿಸಿದೆ. ಶರ್ಮರಿಂದ ಪ್ರಭಾವಿತರಾದವರು, ಉಪಕೃತರಾದವರು ತಮ್ಮ ಜೀವನದ ಸಾರ್ಥಕತೆಗೆ ಶರ್ಮಾಜಿಯೇ ಕಾರಣರೆಂದು ಹೃತ್ಪೂರ್ವಕವಾಗಿ ಹೇಳಿದ್ದಾರೆ. ಇದು ಶರ್ಮರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

ಕೃಷ್ಣಶರ್ಮರ ವ್ಯಕ್ತಿತ್ವವನ್ನೇ ಆಗಲಿ, ಸಾಹಿತ್ಯವನ್ನೇ ಆಗಲಿ, ಸೇವಾಕ್ಷೇತ್ರಗಳ ಸಮೀಕ್ಷೆಯನ್ನೇ ಆಗಲಿ ನಮ್ಮ ೩೧೨ ಪುಟಗಳ ಪರಿಮಿತಿಯಲ್ಲಿ ಸಮಗ್ರವಾಗಿ ಅಡಕಮಾಡುವುದು ಅಸಾಧ್ಯವಾಗಿದೆ. ಅಷ್ಟು ವಿಶಾಲವಾದುದು ಶರ್ಮರ ವಿಚಾರ. 'ಶರ್ಮ ಮತ್ತು ಹೈದರಾಬಾದ್'ಗೆ ಸಂಬಂಧಿಸಿದಂತೆ ಐತಿಹಾಸಿಕ ದಾಖಲೆಯಾಗಬಲ್ಲ ಅನೇಕ ವಿಷಯಗಳು ನಮಗೆ ಮತ್ತು ನಮ್ಮ ಮಾನ್ಯ ಲೇಖಕರಿಗೆ ತಿಳಿಯದೇ ಹೋಗಿರಬಹುದು. ಶರ್ಮರು ಆರೋಗ್ಯದಿಂದ ಇದ್ದಿದ್ದರೆ ನಮಗೆ ಸಂಗ್ರಹಿಸಲಾಗದೆ ಹೋದ ಅನೇಕ ವಿಚಾರಗಳನ್ನು ಅವರಿಂದ ಕೇಳಿ ತಿಳಿದುಕೊಳ್ಳಬಹುದಾಗಿತ್ತು ; ಗ್ರಂಥದಲ್ಲಿ ಅಳವಡಿಸಬಹುದಾಗಿತ್ತು. "ಸಿದ್ಧಹಸ್ತ" ಕೃಷ್ಣಶರ್ಮರು ನಾಡು-ನುಡಿಗೆ ಸಲ್ಲಿಸಿರುವ ಸ್ಮರಣೀಯ ಸೇವೆಗೆ ಸೂಕ್ತವಾಗಿದೆಯೇ ಎಂಬ ಸಂದೇಹ ನಮಗಿದೆ. ಆದರೂ ಸಿದ್ದವನಹಳ್ಳಿ ಕೃಷ್ಣಶರ್ಮರ ವ್ಯಕ್ತಿತ್ವ, ಸಾಹಿತ್ಯ, ಸೇವಾಕ್ಷೇತ್ರಗಳ ಸಮೀಕ್ಷೆಯನ್ನೊಳಗೊಂಡ ಸಂಭಾವನಾ ಗ್ರಂಥ ಪ್ರಕಟಣೆಯ ಅವಶ್ಯಕತೆ ಇತ್ತು. ಅದು ಇಂದು ಕೈಗೂಡಿದೆ.

ಪೂಜ್ಯ ರಾಳ್ಳಪಲ್ಲಿ ಅನಂತ ಕೃಷ್ಣಶರ್ಮ ಅವರು ಹೇಳುವಂತೆ "ಪಾದರಸದಂತೆ ಎಲ್ಲೂ ನಿಲುಗಡೆಯಿಲ್ಲದೆ ಹಾರಾಡುತ್ತಿದ್ದ" ವ್ಯಕ್ತಿ, ಕೃಷ್ಣಶರ್ಮ, ಇಂದು "ಶಯ್ಯಾ

ಬಂಧಿತ". ಶರ್ಮರ ಅನಾರೋಗ್ಯದ ಬಗ್ಗೆ ಎಲ್ಲರಿಗೂ ಆತಂಕ. ತಮ್ಮ ಲೇಖನದಲ್ಲಿ ಶ್ರೀಮತಿ ತಿರುಮಲೆ ರಾಜಮ್ಮ (ಭಾರತಿ) ನವರು ತಮ್ಮ ಅಚ್ಚುಮೆಚ್ಚಿನ ತಮ್ಮ 'ಕಿಟ್ಟು'—ಕೃಷ್ಣಶರ್ಮರ ಆಯಸ್ಸು-ಆರೋಗ್ಯವನ್ನು ಕುರಿತು ಜಗದೀಶ್ವರನಲ್ಲಿ ಈ ರೀತಿ ಮೊರೆಯಿಟ್ಟಿದ್ದಾರೆ.

"ಇಂತಹ ದೇಶ ಪ್ರೇಮಿಯನ್ನು, ಮಾನವ ಪ್ರೇಮಿಯನ್ನು, ಸಾಹಿತ್ಯ ಭಕ್ತನನ್ನು ತನ್ನ ಭೃತ್ಸರ ಭೃತ್ಸನನ್ನು ದಯಾಳುವಾದ ಜಗದೀಶ್ವರನು ಹೀಗೇಕೆ ವಿಪರೀತ ಪರೀಕ್ಷೆಗೆ ಗುರಿಮಾಡುತ್ತಿರುವನು? ಸಜ್ಜನರನ್ನು ಹೀಗೆ ದುಃಖಿತರನ್ನಾಗಿ ಮಾಡುವ ನಿನ್ನ ಈ ಪರೀಕ್ಷೆಯಿಂದ ನಿನಗಾಗುವ ಸಮಾಧಾನವೇನು ? ಪ್ರಭುವೇ ! ಇನ್ನಿದನ್ನು ಸಾಕುಮಾಡು, ಕನಿಕರಿಸು, ನನ್ನ ತಮ್ಮನು ಅಸಾಧಾರಣ ಪ್ರತಿಭಾ ಸಂಪನ್ನನು. ಆತನಿಂದ ಸಲ್ಲಬಹುದಾದ ಜಗತ್ಸೇವೆಗೆ ಈ ವಿಧದ ಆತಂಕಗಳು ಬರಬಾರದು. ಅದು ನಿನ್ನ ಮಹಿಮೆಗೇ ಕಳಂಕವಾದೀತು. ಲೋಕಹಿತವು ನಿನ್ನದೇ ಅಲ್ಲವೇ ? ಅದಕ್ಕೆ ಸಮರ್ಥರಾದವರಿಗೆ ಪೂರ್ಣಾಯುರೋಗ್ಯವನ್ನು ನೀಡದಿದ್ದರೆ ಲೋಕಹಿತ ಕಾರ್ಯವು ಹೇಗೆ ಸಮರ್ಪಕವಾಗಿ ನಡೆದೀತು ? ಈ ಒಂದು ಜೀವ ನೊಂದರೆ ಸಹಸ್ರ ಜೀವಶಕ್ತಿಗಳು ನಷ್ಟವಾದಂತೆಯೇ ಸರಿ. ಇದನ್ನು ಭಾವಿಸು. ಸಜ್ಜನರನೇಕರು ದುರ್ದೈವಿಗಳೆಂದು ಕರೆಸಿಕೊಂಡರೆ ಅದು ನಿನ್ನ ಕೀರ್ತಿಯೇ ? ಈ ಅಪವಾದದಿಂದ ಪಾರಾಗಬೇಕಾದರೆ ಮೊದಲು ನಿನ್ನ ಕೃಪಾಕಟಾಕ್ಷವನ್ನು ಇತ್ತ ಕಡೆ ತಿರುಗಿಸು."

ಇದು "ಭಾರತಿ"ಯವರ ಹಾರೈಕೆ ಮಾತ್ರವಲ್ಲ ; ಇಡೀ ನಾಡಿನ ಹಾರೈಕೆ.

೨೦-೬-೧೯೭೩ —ಸು. ರಂಗಸ್ವಾಮಿ

# ಮೊದಲ ನೋಟ

ಸಿದ್ದವನಹಳ್ಳಿ ಒಂದು ಕುಗ್ರಾಮ ; ಅದು ಚಿತ್ರದುರ್ಗ ಜಿಲ್ಲೆಯಲ್ಲಿದೆ. ಇದು ಕನ್ನಡ ನಾಡಿನ ಎಲ್ಲ ಪ್ರಜೆಗಳ ನಾಲಿಗೆಗಳಲ್ಲೂ ನುಡಿದು, ಕರಳುಗಳಲ್ಲೂ ಮಿಡಿದು ಆತ್ಮಗಳನ್ನು ಅದು ಏಳಿಸುತ್ತಿದ್ದರೆ ಅದಕ್ಕೆ ಕಾರಣ ಆ ಹಳ್ಳಿಯಲ್ಲಿ ಹುಟ್ಟಿದ ಒಂದು ಕೂಸು. (ಶ್ರೀನಿವಾಸ ಜನ್ಮಧಾರಣ ಮಾಡಿ ಮಾಸ್ತಿಗೆ ಒಂದು ಸ್ಥಾನಮರ್ಯಾದೆಯನ್ನು ಗಳಿಸಿಕೊಡಲಿಲ್ಲವೆ!) ಆ ಕೂಸೇ ಕೃಷ್ಣಶರ್ಮ. ಜೀವ ಒಂದರ ಧನ್ಯತೆಗೆ, ಜೀವನ ಒಂದರ ಪವಿತ್ರತೆಗೆ ಹುಟ್ಟು ಕಾರಣವಲ್ಲ, ಸಂಪತ್ತು ಕಾರಣವಲ್ಲ, ಪದದ ಪ್ರತಿಷ್ಠೆ ಕಾರಣವಲ್ಲ. ಅವು ಕೊಂಚಮಟ್ಟಿಗೆ ಪೋಷಕವಾಗಬಹುದು. ಸರಳ ಜೀವನ, ನಿಸ್ವಾರ್ಥ ಜೀವನ, ಪರೋಪಕಾರವೇ ಜೀವನದ ಪರಮಾರ್ಥವೆಂದು ನಂಬಿ ನಡೆಯುವಿಕೆ, ಆಸ್ತಿಕ್ಯ–ಹೆಚ್ಚೇನು ಇವೆಲ್ಲವುಗಳ ಒಟ್ಟು.

ಕೃಷ್ಣಶರ್ಮ ನನ್ನ ಗೋತ್ರ ಬಂಧು ; ಮನೆ ಭಿನ್ನ ಆದರೆ ಮನ ಅಭಿನ್ನ. ಈ ವಿಚಾರವಾಗಿ ಹೆಚ್ಚು ಏನೂ ಹೇಳದೆ ಇರುವುದು ವಿವೇಕ. 'ವಿಶ್ವಕರ್ನಾಟಕ' ಪತ್ರಿಕೆ, ಆ ಪತ್ರಿಕೆಯ ಮೂಲಕ ನಡೆದ ರಾಷ್ಟ್ರ ಭಾರತದ ಸೇವೆ, ಕನ್ನಡ ನಾಡಿ ಸೇವೆ, ಇಷ್ಟನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಹೇಳಬಹುದಾದರೆ ನನ್ನ ಹೃದಯ ಸನ್ನಿವರ್ತಿ ಸ್ವರ್ಗವಾಸಿ ಕೋಲಾರ ಸಂಪದ್ಗಿರಿರಾಯರು ಹೇಳುತ್ತಿದ್ದಂತೆ,

"ವಿಶ್ವಕರ್ನಾಟಕದ ಜೀವ ತಿ. ತಾ. ಶರ್ಮ ; ಅದರ ಜೀವಾಳ ಕೃಷ್ಣಶರ್ಮ; ಆದರೆ ಈ ಜೀವ–ಜೀವಾಳಗಳ ಮಧ್ಯೆ ಇದೆಯೆಂದು ನಾವು ಭಾವಿಸುವ ಗೆರೆ ಅಸ್ಪಷ್ಟ, ಅಗೋಚರ."

ಇಷ್ಟು ಮಾತ್ರ ನಾನು ಹೇಳಬಲ್ಲೆ; ಕೃಷ್ಣಶರ್ಮರ ಸೇವೆ, 'ವಿಶ್ವಕರ್ನಾಟಕ'ದ ಸೇವೆ, ಇವೆರಡನ್ನೂ ಬೇರೆ ಬೇರೆ ಮಾಡುವ ಪ್ರಯತ್ನ ಸಲ್ಲದು. ಒಂದು ವಿಚಾರವನ್ನು ಇಲ್ಲಿ ಕೊಡುತ್ತೇನೆ. ಶೈಲಿಯಲ್ಲಿ ಹೇಗೋ ಹಾಗೆಯೇ ಆದರ್ಶ, ಆದರ್ಶ ಸಾಧನೆಯ ಮಾರ್ಗ, ಆ ಮಾರ್ಗ ತುಳಿದು ಅಡಿಗಡಿಗೂ ಎದುರಿಸಬೇಕಾಗಿ ಬಂದ ಗಂಡಾಂತರಗಳ ಸನ್ನಿವೇಶಗಳಲ್ಲಿ ತೋರಿಸಿದ ಶೀಲ, ಶೌರ್ಯ, ಎಲ್ಲದರಲ್ಲಿಯೂ, ಇಬ್ಬರು ಶರ್ಮರಲ್ಲಿ ವ್ಯತ್ಯಾಸ ಇದ್ದರೂ ತೀರ ಸ್ವಲ್ಪ.

ಕೀರ್ತಿಶೇಷ ಪಂಡಿತ ಜವಹರಲಾಲ್ ನೆಹರುಗಳು Glimpses of the World History ರಚಿಸಿದರಷ್ಟೆ. ಅದನ್ನು ಭಾಷಾಂತರ ಮಾಡಿ ನೆಹರುಗಳ

ಜ್ಞಾನಾನುಭವಗಳ ರಸಸತ್ವಗಳನ್ನು ಕನ್ನಡ ಬಲ್ಲವರಿಗೆಲ್ಲ ಲಭ್ಯಮಾಡಿಕೊಡಬೇಕೆಂದು ಒಂದು ದಿನ ನಿಶ್ಚಯಕ್ಕೆ ಬಂದೆವು.

ಕೃಷ್ಣ—ಗ್ರಂಥ ದೊಡ್ಡದು; ಅದನ್ನು ಎರಡಾಗಿ ಮಾಡೋಣ. ಒಂದೊಂದು ಭಾಗವನ್ನು ಒಬ್ಬೊಬ್ಬರು ಕನ್ನಡಕ್ಕೆ ಇಳಿಸೋಣ.

ನಾನು—ಅದು ಒಂದು ದಾರಿ; ನನಗೆ ಇನ್ನೊಂದು ದಾರಿ ತೋರುತ್ತಿದೆ.

ಕೃಷ್ಣ—ಅದು ಯಾವುದು ಆ ದಾರಿ?

ನಾನು—ಗ್ರಂಥದ ಮೊದಲ ಹತ್ತು ಪತ್ರಗಳನ್ನು ಒಬ್ಬರು; ಎರಡನೆಯ ಹತ್ತು ಪತ್ರಗಳನ್ನು ಇನ್ನೊಬ್ಬರು; ಹೀಗೆ ಕ್ರಮವಾಗಿ ಹಂಚಿಕೊಳ್ಳೋಣ. ಮೊದಲ ಹತ್ತು ಪತ್ರಗಳು ನನ್ನದಾದರೆ, ಎರಡನೆಯ ಹತ್ತು ನಿನ್ನವು; ಮೂರನೆಯ ಹತ್ತು ನನ್ನವು; ನಾಲ್ಕನೆಯ ಹತ್ತು ನಿನ್ನವು. ಹೀಗೆ ನಡೆಯಲಿ ಹಂಚಿಕೆ, ಮುಂದುವರಿಯಲಿ ಭಾಷಾಂತರ.

ಕೃಷ್ಣ—ಮಾತುಗಳ ಆರಿಕೆ, ಬಳಕೆ; ವಾಕ್ಯಗಳ ರಚನೆ; ಇವೇ ಮೊದಲಾದವುಗಳಲ್ಲಿ ಹತ್ತು ಹತ್ತು ಪತ್ರಗಳಲ್ಲೂ ಅಂತರ ಎದ್ದು ಕಾಣಬರುವುದಿಲ್ಲವೆ? ವಾಚಕರ ಪಾಲಿಗೆ ಅದೊಂದು ತೊಡಕಾಗಬಹುದಲ್ಲವೆ?

ನಾನು—ಭಾಷಾಂತರ ಮಾಡಿದ ಮೇಲೆ ಮೊದಲ ಹತ್ತು ಪತ್ರಗಳ ಹಸ್ತಪ್ರತಿಯನ್ನು ನಿನಗೆ ಕಳುಹಿಸುತ್ತೇನೆ. ನೀನು ಅದನ್ನು ನಿರ್ದಾಕ್ಷಿಣ್ಯವಾಗಿ 'ಸವರಿಸು'. ನಿನ್ನ ಮೊದಲ ಹತ್ತು ಪತ್ರಗಳ ಹಸ್ತಪ್ರತಿಯನ್ನು ನನಗೆ ಕಳುಹಿಸು. ನಾನು ಅದನ್ನು ನೋಡಿ 'ಸವರಿಸು'ತ್ತೇನೆ. ಈ ಬಗೆಯ ಪರಸ್ಪರ 'ಸವರಣೆ' ಆದಮೇಲೆ ಒಂದು ದಿನ ಕೂತು ಎರಡು ಕೈವಾಡಗಳಲ್ಲಿ ಕಂಡುಬರಬಹುದಾದ ಅಂತರವನ್ನು ಪರೀಕ್ಷಿಸಿ, ಸರಿಪಡಿಸೋಣ.

ಕೃಷ್ಣ—ಕೂಡೋಣ; ಹಾಗೆ ಕೂಡುವುದಕ್ಕೆ ಮೊದಲು ನಾವು ಮಾಡಬೇಕಾದುದೇನೆಂಬುದು ಇಬ್ಬರಿಗೂ ಚೆನ್ನಾಗಿ ಗೊತ್ತಿದೆ.

ನಾನು—ಅದೇನು, ಕೊಂಚ ಸ್ಪಷ್ಟವಾಗಿ ಹೇಳಬಾರದೆ?

ಕೃಷ್ಣ—ಭರ್ಜರಿ ಊಟ!

ಇಬ್ಬರೂ ಹೊಟ್ಟೆತುಂಬ ನಕ್ಕೆವು. ಭಾಷಾಂತರ ಕೆಲಸ ಮುಂದುವರಿಯಿತು. ಮುಗಿಯಿತು; ಅಚ್ಚಾದ ಮೇಲೆ ಓದಿದಾಗ 'ಕೃಷ್ಣಶರ್ಮನ ಭಾಷಾಂತರ ಯಾವುದು; ನನ್ನ ಭಾಷಾಂತರ ಯಾವುದು' ಎಂದು ಕಂಡು ಹಿಡಿಯುವುದು ಕಷ್ಟವಾಯಿತು! ಇಂದೂ "ಜಗತ್ಕಥಾವಲ್ಲರಿ"ಯನ್ನು ಯಾರೇ ಓದಲಿ 'ಯಾವ ಹತ್ತು ಪತ್ರಗಳು ಯಾವ ಶರ್ಮರ ಭಾಷಾಂತರ' ಎಂದು ಹೇಳಲು ಸಾಧ್ಯವಿಲ್ಲ. ಕೃಷ್ಣಶರ್ಮರೇ ಈ ವಿಚಾರದಲ್ಲಿ ಹೇಳುವುದೇನು ಕೇಳಿ!

"ಹತ್ತು ಪತ್ರ ಅವರು, ಹತ್ತು ಪತ್ರ ನಾನು, ಹೀಗೆ ಕನ್ನಡಿಸಿದ್ದೇವೆ.

ಇದರಿಂದ ಶೈಲಿಯ ವ್ಯತ್ಯಾಸ ಕೊಂಚ ಮಟ್ಟಿಗೆ ಕಾಣಿಸಬಹುದು. ಆದರೂ ಬಹಳ ಹೆಚ್ಚಾಗಿ ಕಾಣಿಸಲಿಕ್ಕಿಲ್ಲವೆಂದು ನಮ್ಮ ಭಾವನೆ".

ಇಷ್ಟು ಹೇಳಿದ ಮೇಲೂ ಕೃಷ್ಣಶರ್ಮರ ಶೈಲಿಯಲ್ಲಿ ಅವರದೇ ಆದ ವ್ಯಕ್ತಿತ್ವವೇನುಂಟು ಅದು ಎದ್ದು ಕಾಣುತ್ತದೆ. ಅವರ ವಾಕ್ಯರಚನೆ ಸೂತ್ರಪ್ರಾಯದಂತೆ. ಉದಾಹರಣೆಗೆ ಅವರ ಸರ್ವಜ್ಞನನ್ನು ಕುರಿತು ಬರೆದ ಪ್ರಬಂಧ.

ಹೀಗೆಯೆ ಸಾಮಾನ್ಯವಾಗಿ ಯಾವ ವಿಚಾರದಲ್ಲೂ ನಮ್ಮಿಬ್ಬರ ಮಧ್ಯೆ ಎದ್ದು ಕಾಣುವ ವ್ಯತ್ಯಾಸವಿಲ್ಲ. ಸಮಾನ ಸಂಸ್ಕಾರ, ಸಮಾನ ಮನೋಧರ್ಮ, ಸಮಾನ ಆದರ್ಶ.

ಇಷ್ಟು ಹೇಳಿದ ಮೇಲೂ ನಮ್ಮಿಬ್ಬರಲ್ಲೂ ಮೂಲಭೂತವಾದ ಸ್ವೈಜದಲ್ಲಿ ಕೊಂಚ ವ್ಯತ್ಯಾಸವಿದೆ. ಕೃಷ್ಣಶರ್ಮರ ಮಾತು ಸದಾ ಸವಿ; ನನ್ನ ಮಾತು ಆಗಾಗ ಕಹಿ, ಅಪ್ರಿಯ. ಕೃಷ್ಣಶರ್ಮ ಮೇಲೆ ನೋಡುವುದಕ್ಕೆ 'ಸೌಮ್ಯಮೂರ್ತಿ'; ಆದರೆ ಒಳಗೆ 'ಕ್ರಾಂತಿಮೂರ್ತಿ'. ನಾನಾದರೊ ಹೊರಗೆ 'ವಿಪ್ಲವಮೂರ್ತಿ', ಒಳಗೆ 'ಶಾಂತಮೂರ್ತಿ'. ಸ್ವರ್ಗವಾಸಿ ಸಂಪದ್ಗಿರಿರಾಯರೊಮ್ಮೆ ನಮ್ಮಿಬ್ಬರನ್ನು ಕುರಿತು "ಶರ್ಮ ನೀನು ವಿಡಂಬನಕಾರ; ಕೃಷ್ಣಶರ್ಮ ನಗೆಗಾರ" ಎಂಬುದಾಗಿ ಹೇಳಿದ್ದು ನನಗೆ ನೆನಪಿದೆ. "ನಿನ್ನ ಬರಹದ ಆಳದಡಿಯಲ್ಲಿ ಎಲ್ಲೋ ಕೊಂಚ ಸಿಡಿಮದ್ದನ್ನು ಇಟ್ಟೇ ಇರುತ್ತೀಯೆ. ಅದು ನಿನ್ನ ಗುರು ರಾಮಲಿಂಗಾ ರೆಡ್ಡಿ ಪ್ರಸಾದ. ವಾಲ್ಟೇರ್, ಹೀನ್, ಬೆಲ್ ಜಾಕರನ್ನು ಓದಿದ್ದರ ಫಲ" ಎಂಬುದಾಗಿ ಅವರು ನನಗೆ ರಾಂಚಿಯಿಂದ ಬರೆದ ಪತ್ರದಲ್ಲಿ ಹೇಳುತ್ತಾ "ನಾನೂ ನೀನೂ ಇಬ್ಬರೂ ಅಹಿಂಸಾವ್ರತಿಯ ಶಿಷ್ಯರಲ್ಲವೆ" ಎಂದು ನನ್ನನ್ನು ಕೆರಳಿಸಿದ್ದರು. ಅವರು ಕೃಷ್ಣಶರ್ಮರಲ್ಲಿ, ಅವರ ಪರಿಹಾಸದಲ್ಲಿ ಔದಾರ್ಯವನ್ನೂ ಪ್ರೇಮವನ್ನೂ ಕಂಡರು.

ಕೃಷ್ಣಶರ್ಮರ ಆಹ್ವಾನ ಮನ್ನಿಸಿ ಒಮ್ಮೆ ಹೈದರಾಬಾದಿಗೆ ಹೋದೆ. ಅಲ್ಲಿ ಹಲವು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದೆ. ಹೈದರಾಬಾದ್-ಸಿಕಂದರಾಬಾದಿನ ಕನ್ನಡಿಗರನ್ನೆಲ್ಲ ಒಂದುಗೂಡಿಸಿ ಅವರಲ್ಲಿ ಭಾಷಾಭಿಮಾನ, ಸ್ವಾತಂತ್ರ್ಯಾಭಿಮಾನ ಮೂಡಿಸುವುದರಲ್ಲಿ ಕೃಷ್ಣಶರ್ಮರ ದೂರದೃಷ್ಟಿಯನ್ನು ಕಂಡೆ. ಅವರ ವ್ಯವಸ್ಥಾಕೌಶಲವನ್ನು ಕಂಡೆ. ಅವರು ಯಾರಿಗೆ ಬೇಡ? ಎಲ್ಲರಿಗೂ ಬೇಕು! ಕೃಷ್ಣಶರ್ಮರು ಆಂಧ್ರಜನನಾಯಕ ಮಾಡಪಾಟಿ ಹನುಮಂತರಾಯರಿಗೂ ಬೇಕಾದವರೆ! ಮಹಾರಾಷ್ಟ್ರದ ಜನನಾಯಕ ವೈದ್ಯರಿಗೂ ಬೇಕಾದವರೆ!

ಇನ್ನೊಮ್ಮೆ ಹೈದರಾಬಾದಿಗೆ ಹೋದೆ. 'ವಿಶ್ವಕರ್ನಾಟಕ'ವನ್ನು "ಲಿಮಿಟೆಡ್ ಕಂಪೆನಿ" ಯನ್ನಾಗಿ ಮಾಡುವ ಸಂದರ್ಭವದು. ಆಗ ಗುಡಗಂಟೆ ರಾಮಾಚಾರ್ಯರೆಂಬುವರು ಹೈದರಾಬಾದಿನಲ್ಲಿ ಮಂತ್ರಿಗಳಾಗಿದ್ದರು. ಮಂತ್ರಿಗಳೆಂದರೆ ಮಂತ್ರಿಗಳಲ್ಲ. ಹೈದರಾಬಾದಿನ ನಿಜಾಮರಿಗೆ ಬಹಳ ಆಪ್ತರಾಗಿದ್ದವರು. ರಾಮಾಚಾರಿ

ಗಳು ಹೇಳಿದ ಮಾತು ನಿಜಾಮರ ಮಾತು! ಈ ರಾಮಾಚಾರ್ಯರಿಗೂ ಕೃಷ್ಣಶರ್ಮರಿಗೂ ಇದ್ದ ಸ್ನೇಹ ಆಳ, ಅಳತೆ ಮೀರಿದ್ದು. ಕೃಷ್ಣಶರ್ಮರ ಮಾತೆಂದರೆ ರಾಮಾಚಾರಿಗಳ ಮಾತು! ಅವರ ಅಂತರಂಗಗಳ ಐಕ್ಯತೆ ಆ ಮಟ್ಟದ್ದಾಗಿತ್ತು.

ನಾನು—ಶರ್ಮ, ಕಂಪೆನಿಗೆ ಇಬ್ಬರು 'ಪೈರೆಕ್ಟರು'ಗಳು ಬೇಕಲ್ಲ?

ಶರ್ಮ—ನಾನೊಬ್ಬನಾಗಬಹುದಲ್ಲ?

ನಾನು—ಹಾಗೆ ಆಗಬಹುದಾದರೆ ಅದು ನನ್ನ ಭಾಗ್ಯ.

ಶರ್ಮ—'ವಿಶ್ವಕರ್ನಾಟಕ'ದೊಂದಿಗೆ ಬಾಂಧವ್ಯ ಕಲ್ಪಿಸಿಕೊಳ್ಳುವುದು ನನ್ನ ಭಾಗ್ಯ.

ನಾನು–ನೀನೂ ಮೈಸೂರಿನವನೆ. ಹೈದರಾಬಾದ್ ಕರ್ನಾಟಕದವರು ಒಬ್ಬರಾಗಬೇಕು. ನನ್ನ ಆಸೆ 'ವಿಶ್ವಕರ್ನಾಟಕ' ಪತ್ರಿಕೆಯ ಆಡಳಿತ ವ್ಯವಸ್ಥೆಯಲ್ಲಿ ಕರ್ನಾಟಕದ ನಾಲ್ಕೂ ಭಾಗಗಳ ಪ್ರತಿನಿಧಿಗಳೂ ಇರಬೇಕೆಂಬುದು.

ಶರ್ಮ—ಆ ವಿಚಾರ ಕ್ರಮಶಃ ಫಲಿಸಬೇಕು. ಸದ್ಯಕ್ಕೆ ಹೈದರಾಬಾದಿನ ಕನ್ನಡಜನರ ಪರವಾಗಿ ಶ್ರೀ ಗುಡಗಂಟಿ ರಾಮಾಚಾರ್ಯರು ನನ್ನ ಲಕ್ಷ್ಯದಲ್ಲಿದ್ದಾರೆ.

ಅಲ್ಲಿಗೆ ಮಾತುಕತೆ ಮುಗಿಯಿತು. ಬಹಳ ಮಾಡಿ ಮಾರನೆಯ ದಿನ ಬೆಳಿಗ್ಗೆ ನಾವಿಬ್ಬರೂ ರಾಮಾಚಾರ್ಯರ ಮನೆಗೆ ಹೋದೆವು. ಅದೊಂದು "ನವಾಬರ ಆಸ್ಥಾನ ಅಥವಾ ದಿವಾನ್-ಇ-ಖಾಸ್" ನಂತೆ ಇತ್ತು. ಶರ್ಮರು ನನಗೆ ರಾಮಾಚಾರ್ಯರ ಪರಿಚಯ ಮಾಡಿಕೊಟ್ಟರು. ಅವರ ಸರಳ ಗಾಂಭೀರ್ಯ ನೋಡಿ ನಾನು ಬೆರಗಾದೆ. 'ಇವರೇನೇ ನಿಜಾಮರ ಅಂತರಂಗ ಸ್ನೇಹಿತರು' ಅನ್ನಿಸಿತು. ಇಂತಹ ರಾಮಾಚಾರ್ಯರ ಆಪ್ತವರ್ಗಕ್ಕೆ ಸೇರಿದವರು ಶರ್ಮರು.

"ಸುಖಸಂಕಥಾವಿನೋದ"ದಿಂದ ಕೊಂಚ ಕಾಲ ಹಾಕಬೇಕೆಂದರೆ ಕೃಷ್ಣಶರ್ಮರ ಸಹವಾಸ ಮಾಡಬೇಕು. ಅವರೊಂದಿಗೆ ನಡೆಸುವ ಸಂಭಾಷಣೆಯಿಂದ ಏನೋ ಸಂತೋಷವಾಗುತ್ತದೆ; ಸಮಾಧಾನವಾಗುತ್ತದೆ; ಮತ್ತಷ್ಟು ಅವರೊಂದಿಗೆ ಮಾತನಾಡೋಣ ಅನ್ನಿಸುತ್ತದೆ. ಅವರ ಮಾತಿನಲ್ಲಿ ಕಥೆ ಇವೆ, ವಿನೋದವಿದೆ, ಸುಖವಿದೆ. ಅವರು ಆಗಾಗ ಹೈದರಾಬಾದಿನ ಸಣ್ಣಪುಟ್ಟ ನವಾಬರ, ಸರದಾರರ, ಕಥೆಗಳನ್ನು ಹೇಳುವುದುಂಟು. ಈ ಕಥೆಯೊಂದನ್ನು ಕೇಳಿ: ಭಾಷೆ ನನ್ನದು; ಆದಷ್ಟು ಮಟ್ಟಿಗೆ ಕೃಷ್ಣಶರ್ಮರ ಮಾತುಗಳನ್ನೇ ಬಳಸಿದ್ದೇನೆ.

ಒಬ್ಬ ಬ್ರಾಹ್ಮಣ, ಅಹನ್ಯಹನಿಕಾಲಕ್ಷೇಪ. ಒಬ್ಬ ಸಾಹೇಬ; ಇರಲು ಮನೆ ಇಲ್ಲ, ಮಾಡಲು ಕೆಲಸವಿಲ್ಲ. ಆದರೂ ದೌಲತ್ ಮಾಡುವ ಪಂಗಡದವನಲ್ಲವೆ ಅವನು; ನವಾಬನಂತೆ ಜೀವನ ನಡೆಸಬೇಕೆಂಬ ಆಸೆ. ಇಬ್ಬರೂ ಬಡಾದೋಸ್ತಿಗಳು. ಒಂದು ದಿನ ಸಾಹೇಬ ತನ್ನ ಆಸೆಯನ್ನು ತಿಳಿಸಿದ. ತಕ್ಷಣ ಬ್ರಾಹ್ಮಣ ಹೇಳಿದ 'ಅದಕ್ಕೇನು ಕಷ್ಟ? ಒಂದು ದರ್ವಾಜಾ ತೆಗೆದರೆ ಆಯಿತು' ಅಂದ. ಸಾಹೇಬನಿಗೆ

ಅರ್ಥವಾಗಲಿಲ್ಲ. ಬ್ರಾಹ್ಮಣ ಮಿತ್ರ ವಿಸರಿಸಿದ. "ಒಂದು ಚೌಕ ಹುಡುಕು; ನಾಲ್ಕು ಕಂಬಗಳು ಇದ್ದೇಇರುತ್ತವೆ. ಆ ಕಂಬಗಳಿಗೆಲ್ಲ ಹಿತ್ತಾಳೆ ತಗಡು ಹಾಕಿಸಿಬಿಡು. ಅದರ ಮೇಲೆ ಅಲ್ಲಲ್ಲಿ ಕುರಾನಿನ ಸುರಾಗಳನ್ನು ಕೆತ್ತಿಸಿಬಿಡು. ಒಂದು ಕಡೆ ಮೇಜು ಕುರ್ಚಿ ಹಾಕಿಕೊಂಡು ಕೂತುಕೋ. ಈ ಕಡೆಯಿಂದ ಕಿಂಗ್‌ಕೋಠಿ ಕಡೆಹೋಗುವ ಕಾರು, ಗಾಡಿ, ಮೊದಲಾದವುಗಳಿಗೆಲ್ಲ ಒಂದು ರೂಪಾಯಿ, ಅರ್ಧ ರೂಪಾಯಿ ಸುಂಕ ವಸೂಲುಮಾಡು. 'ಇದೇನಿದು' ಎಂದು ಯಾರಾದರೂ ಕೇಳಿದರೆ ಇದು ಪಿತ್ತಲ್ ಕಾ ದರವಾಜಾ. ಈ ದರ್ವಾಜಾ ಮೂಲಕ ಹಾದುಹೋಗುವ ವಾಹನಗಳಿಗೆಲ್ಲ ಸುಂಕ ವಸೂಲು ಮಾಡುವ ಹಕ್ಕನ್ನು ಆಲಾಹಜಾರವರು ನಮ್ಮ ಮನೆತನಕ್ಕೆ ಕೊಟ್ಟಿದ್ದಾರೆ. ಆ ಫರ್ಮಾನಿನ ಮರ್ಯಾದೆ ನಮ್ಮ ತಾತ ಮುತ್ತಾತಂದಿರ ಕಾಲದಿಂದ ನಡೆಯುತ್ತಿದೆ, ಎಂಬುದಾಗಿ ಹೇಳು" ಎಂಬುದಾಗಿ ಉಪದೇಶಮಾಡಿದ. ವಿಪ್ರವಾಕ್ಯವನ್ನು ಚಾಚೂ ತಪ್ಪದೆ ನಡೆಸಿದ ಸಾಹೇಬ. ಸಾಹೇಬ "ನಾನು ನವಾಬ್ ಜೀವನ ನಡೆಸುತ್ತಿದ್ದೇನೆ" ಎಂಬ ಭ್ರಾಂತಿ ವಿಲಾಸದಲ್ಲಿದ್ದಾನೆ! "ನಾನು ಸುಖ ಜೀವನ ನಡೆಸುತ್ತಿದ್ದೇನೆ" ಎಂದು ಪಿತ್ತಲ್ ಕಾ ದರ್ವಾಜಾ ಸುಂಕದ ಪಾಲುಗಾರ ಬ್ರಾಹ್ಮಣ ನೆಮ್ಮದಿಯಾಗಿ ಜೀವನ ನಡೆಸುತ್ತಿದ್ದಾನೆ!

ಇಂತಹ ಹತ್ತಾರು ಕಥೆಗಳನ್ನು ಸ್ವಾರಸ್ಯವಾಗಿ ಹೇಳುತ್ತಾ, ನಗುತ್ತಾ, ಕೇಳುವವರನ್ನು ನಗಿಸುತ್ತಾ, ನಿಜಾಂಶಾಹಿ ಹೈದರಾಬಾದಿನ ಜನಜೀವನದ ವೈಖರಿಯನ್ನು ವರ್ಣಿಸುವರು. ಈ ಬಗೆಯ ಕಥನಕೌಶಲ ಎಲ್ಲರಿಗೂ ಹೇಗೆ ಲಭ್ಯವಾಗಬೇಕು?

ಕೃಷ್ಣಶರ್ಮರ ಸೇವಾ ಕ್ಷೇತ್ರ ವಿಶಾಲವಾದದ್ದು, ವೈವಿಧ್ಯತೆಯಿಂದ ಕೂಡಿದ್ದು. ಒಂದೊಂದು ಕ್ಷೇತ್ರದಲ್ಲೂ ಮಾಡಿದ ಕೆಲಸ ಕುರಿತು ಬರೆಯಲಾರಂಭಿಸಿದರೆ ಅದೊಂದು ಪುಟ್ಟ ಮಹಾಭಾರತವೇ ಆದೀತು. 'ಹರಟೆಮಲ್ಲ'ರಾಗಿ ಹಾಸ್ಯರಸಭರಿತ ಪ್ರಬಂಧಕಾರರಾದರು! 'ಗೆಳೆಯರ ಗುಂಪು' ಸಹವಾಸಿಯಾಗಿ ಸಾಹಿತಿಗಳಾದರು. 'ಕನ್ನಡ ಸಾಹಿತ್ಯ ಪರಿಷತ್ತಿ'ನ ಕಾರ್ಯದರ್ಶಿಯಾಗಿ ದಕ್ಷ ವ್ಯವಸ್ಥಾಪಕರೆನಿಸಿದರು. ಹೈದರಾಬಾದಿನ 'ಪ್ರಜೆ'ಯಾಗಿ ರಾಜಕೀಯ ಗಾಢಾಂಧಕಾರದ ಆ ರಾಜ್ಯದಲ್ಲಿ ಸ್ವಾತಂತ್ರ್ಯದ ಹಣತೆ ಹಚ್ಚಿದರು. ದೇಶೀಯ ಸಂಸ್ಥಾನಗಳ ಪರಿಷತ್ತಿನ ಕಾರ್ಯದರ್ಶಿಯಾಗಿ ಬ್ರಿಟಿಷ್ ಭಾರತ, ನರೇಂದ್ರ ಭಾರತಗಳೆರಡನ್ನೂ ಒಟ್ಟಿಗೆ ತರುವ ಸಾಹಸೋದ್ಯಮದಲ್ಲಿ ತೊಡಗಿದರು. "ವಿಶ್ವಕರ್ನಾಟಕ" ದ ಸಂಪಾದಕರಾಗಿ ಕ್ಷಾತ್ರತೇಜಸ್ಸಿನಿಂದ ಕೂಡಿದ ಮೇಧಾವಿ ಬರಹಗಾರರೆನಿಸಿದರು. 'ವರ್ಧಾಯಾತ್ರಿಕ' ರಾದರು. ಪರ್ಣಕುಟಿ 'ಶಬ್ದ ಚಿತ್ರಕಾರ'ರಾದರು. ಬಾಪು, ಜವಹರ್, ವಿನೋಬಾ, ಮರ್ಷಿ, ಸಾಹಿತ್ಯ ಕನ್ನಡ ಭಾಷಾಂತರಕಾರರಾಗಿ ಕನ್ನಡ ಸಾಹಿತ್ಯವನ್ನು ಸಂಪದ್ಯುಕ್ತವನ್ನಾಗಿ ಮಾಡಿದರು. ಕಡೆಯದಾಗಿ ಬೆಂಗಳೂರಿನಲ್ಲಿ (ಮಲ್ಲೇಶ್ವರ) "ಗಾಂಧಿ ಸಾಹಿತ್ಯ ಸಂಘ" ವನ್ನು ಸ್ಥಾಪಿಸಿದರು.

ಇಂದು ಶರ್ಮ ಮೈಸೂರಿನಲ್ಲಿ, ನಾಳೆ ಬೆಂಗಳೂರಿನಲ್ಲಿ. ಇನ್ನೊಂದು ವಾರ

ದೊಳಗಾಗಿ ಧಾರವಾಡದಲ್ಲಿ. ಹೈದರಾಬಾದ್‌ನಲ್ಲಿ ನೆಲೆಸಿದರು. ಅಲ್ಲಿಂದ 'ಗಡಿಪಾರ್' ಆಗಿ ಮುಂಬಯಿಗೆ ಹೋದರು, ವರ್ಧಾಕ್ಕೆ ಹೋದರು. ಕಟ್ಟಕಡೆಯದಾಗಿ ಬೆಂಗಳೂರಿನಲ್ಲಿ ನಿಂತರು! ಇದೆಂತಹ ಜೀವ! ಎರಡು ದಿನ ನೆಟ್ಟಗೆ ಒಂದೂರಲ್ಲಿ ಇರುವುದಿಲ್ಲ. ಕೃಷ್ಣಶರ್ಮರನ್ನು ಪುಟ್ಟಹುಡುಗನಾಗಿಸಿಂದ ಬಲ್ಲ 'ಭಾರತಿ'ಯವರು ಅವರನ್ನು "ಪಾದರಸ" ಅನ್ನುತ್ತಾರೆ. ನಿಜವಾದ ಮಾತು. ಕೃಷ್ಣಶರ್ಮರು ಘನ, ಗಂಭೀರ, ಚೈತನ್ಯಪೂರ್ಣ.

ಅವರ ಆರೋಗ್ಯ ಕೆಡದೆ ಇದ್ದಿದ್ದರೆ ಬೆಂಗಳೂರು ನಗರದ ಸಾರ್ವಜನಿಕ ಜೀವನ ಕೃಷ್ಣಶರ್ಮರಿಂದ ಮತ್ತಷ್ಟು ಸಮೃದ್ಧವಾಗುತ್ತಿತ್ತು. ಫಲಕಾರಿಯಾಗುತ್ತಿತ್ತು. 'ಗಾಂಧಿ ಸಾಹಿತ್ಯ ಸಂಘ'ದ ಕಾರ್ಯಕ್ಷೇತ್ರ ಮತ್ತಷ್ಟು ವಿಶಾಲವಾಗುತ್ತಿತ್ತು.

೨೦-೬-೧೯೭೩ —ತಿ. ತಾ. ಶರ್ಮ

# ವಂದನೆಗಳು

'ಸಿದ್ಧಹಸ್ತ' ಸಂಭಾವನಾ ಗ್ರಂಥ ಪ್ರಕಟಣೆಯ ಸಂದರ್ಭದಲ್ಲಿ ಅನೇಕರು ನಮ್ಮೊಂದಿಗೆ ಸಹಕರಿಸಿದ್ದಾರೆ.

ಮಾನ್ಯ ಲೇಖಕರು ತಮ್ಮ ಲೇಖನಗಳನ್ನು ಸಕಾಲಕ್ಕೆ ಕಳುಹಿಸಿಕೊಟ್ಟು ಉಪಕರಿಸಿದ್ದಾರೆ.

ಹಿರಿಯ ಸಾಹಿತಿ ತಿರುಮಲೆ ತಾತಾಚಾರ್ಯ ಶರ್ಮ ಅವರು ಗ್ರಂಥದ ಗೌರವ ಸಂಪಾದಕರಾಗಿ, ನಮ್ಮ ಉತ್ಸಾಹಕ್ಕೆ ಪ್ರೋತ್ಸಾಹ ನೀಡಿದ್ದಾರೆ.

ಸರ್ವಶ್ರೀ ವಿ. ಎಸ್. ನಾರಾಯಣರಾವ್, ನೀಲತ್ತಹಳ್ಳಿ ಕಸ್ತೂರಿಯವರು ಲೇಖನ ಸಂಗ್ರಹ ಕಾರ್ಯದಿಂದ ಆರಂಭವಾಗಿ ಗ್ರಂಥ ಪ್ರಕಟವಾಗುತ್ತಿರುವ ಇಂದಿನ ವರೆಗೂ ಬಹಳ ಉಪಯುಕ್ತವಾದ ಸಲಹೆ ಸಹಕಾರಗಳನ್ನು ನೀಡಿದ್ದಾರೆ.

ಸರ್ವಶ್ರೀ ಎಚ್. ಶ್ರೀನಿವಾಸಯ್ಯ, ಕೆ. ಎಸ್. ನಾರಾಯಣಸ್ವಾಮಿಯವರು ಶರ್ಮಾಜಿಯವರ ಭಾವಚಿತ್ರಗಳನ್ನು, ಕೆಲವು ಪಡಿಯಚ್ಚುಗಳನ್ನು ನೀಡಿದ್ದಾರೆ. ಶ್ರೀ ಜಿ. ಕೆ. ಸತ್ಯ ಮುಖಚಿತ್ರವನ್ನು ರಚಿಸಿಕೊಟ್ಟಿದ್ದಾರೆ.

ರಾಘವ ಪ್ರಿಂಟರ್ಸ್, ರೋಹಿಣಿ ಪ್ರಿಂಟರ್ಸ್‌ನವರು ಗ್ರಂಥದ ಒಳ ಸಾಹಿತ್ಯವನ್ನೂ ಭಾಸ್ಕರ್ ಬೈಂಡಿಂಗ್ ವರ್ಕ್ಸ್‌ನವರು ರಕ್ಷಾ ಕವಚದ ಮುದ್ರಣವನ್ನೂ ಮಾಡಿ ಕೊಟ್ಟಿದ್ದಾರೆ.

ಗಾಂಧೀ ಸಾಹಿತ್ಯ ಸಂಘದ ಮಿತ್ರರ ಸಹಕಾರವನ್ನಂತೂ ಮರೆಯುವಂತಿಲ್ಲ.

ಇನ್ನೂ ಅನೇಕರು ಸಹಕರಿಸಿದ್ದಾರೆ.

ಎಲ್ಲರಿಗೂ ನಮ್ಮ ವಂದನೆಗಳು.

---

ಶ್ರೀ ಕೃಷ್ಣಶರ್ಮ ಅವರ ಜನ್ಮದಿನಾಂಕ: ಜುಲೈ ೩೧, ೧೯೦೪.
ಶ್ರೀ ನೀಲತ್ತಹಳ್ಳಿ ಕಸ್ತೂರಿಯವರ ಲೇಖನದಲ್ಲಿ ಆಗಸ್ಟ್ ಏಳು, ೧೯೦೪ ಎಂದು ಅಚ್ಚಾಗಿದೆ. ಇದು ಸರಿಯಲ್ಲ. (ಸಂ)

# ಅಂತರಂಗ

## ೩

## ಸಾಹಿತ್ಯ ದರ್ಶನ

## ೪
## ಸೇವಾ ದರ್ಶನ



## ೫
## ಆತ್ಮೀಯತೆ



## ೬
## ಅನುಬಂಧ

ಕೃಷ್ಣಶರ್ಮರ ತಂದೆ - ತಾಯಿ



ಶ್ರೀ ರಂಗಾಚಾರ್ಯ



ಶ್ರೀಮತಿ ಶೇಷಮ್ಮ



ಶಾರದಾ ಮಂಡಳ : ಆಲೂರು ವೆಂಕಟರಾವ್, ದ. ರಾ. ಬೇಂದ್ರೆ
ಮುಂತಾದವರೊಂದಿಗೆ ಕೃಷ್ಣಶರ್ಮ



ಗಾಂಧೀ ಗ್ರಂಥಮಾಲೆ ಸಂಪಾದಕ ಮಂಡಳಿಯಲ್ಲಿ ಕೃಷ್ಣಶರ್ಮ

ಜಯಪ್ರಕಾಶ್ ನಾರಾಯಣ್ ಅವರೊಂದಿಗೆ ಶರ್ಮಾಜಿ

# ನೆನಪಿನ ಚಿತ್ರಗಳು

ಸಿದ್ದವನಹಳ್ಳಿ ಕೃಷ್ಣಶರ್ಮ

ನೆಲವತ್ತು ಐವತ್ತು ವರ್ಷದ ಹಿಂದಿನ ಕಾಲದ ಮಾತು. ನಾನು ಇನ್ನೂ ಹುಡುಗ, ಬಲು ತುಂಟ ಹುಡುಗ.

ಒಂದು ದಿನ ನಾವು ಮನೆಯವರು ಎಲ್ಲರೂ ನಮ್ಮ ಪಕ್ಕದ ತಾಲ್ಲೂಕಿನ ಹಳ್ಳಿಗೆ ಹೋದೆವು. ಆಗ ಮೋಟಾರು, ಬಸ್ಸು ಹಳ್ಳಿಗಳ ಕಡೆ ಇರಲಿಲ್ಲ. ರಸ್ತೆಗಳೂ ಸರಿಯಾಗಿ ಇರಲಿಲ್ಲ. ಮಳೆ ಬಂದರೆ ಸಾಕು ದಾರಿ ಎಲ್ಲಾ ಕೊರಕಲು. ಪ್ರಯಾಣವೆಲ್ಲ ಆಗ ಎತ್ತಿನ ಗಾಡಿಯಲ್ಲಿ ಇಲ್ಲವೆ ಕಾಲು ನಡಿಗೆ. ನಾವು ಸ್ವಲ್ಪ ಪ್ರತಿಷ್ಠಿತರು. ಎತ್ತಿನ ಗಾಡಿಯಲ್ಲಿ ಪ್ರಯಾಣ.

ಆ ಊರು ಬಂತು. ಊರು ಬರುವ ಮೊದಲೇ ನಮ್ಮ ತಂದೆ ಗಾಡಿಯಿಂದ ಇಳಿದು ನಡೆಯುತ್ತಿದ್ದರು. ಗಾಡಿಯ ಜೊತೆಯಲ್ಲಿ ಇಬ್ಬರು ದಾಸಯ್ಯಗಳು. ಅವರಲ್ಲಿ ಒಬ್ಬ ಭೀಮದಾಸ–ಕೊಂಡಿಕಾರ.

ಕೊಂಡಿಕಾರ ಎಂಬ ಮಾತು ಅರ್ಥ ಆಗಬೇಕಾದರೆ ಆಗಿನ ಕಾಲದ ವಾತಾವರಣ, ನಮ್ಮ ಮನೆತನದ ರೀತಿ ಸ್ವಲ್ಪ ಪರಿಚಯ ಆಗಬೇಕು.

* * * *

ನಮ್ಮದು ಶ್ರೀವೈಷ್ಣವ ಬ್ರಾಹ್ಮಣ ಕುಟುಂಬ. ನೆನೆದುಕೊಂಡರೆ ನನ್ನ ವಂಶ ಬಹಳ ದೊಡ್ಡದು. ನಮ್ಮ ತಂದೆಯ ತಾತಂದಿರು ಮೈಸೂರು ಪರಕಾಲ ಮಠದ ಶ್ರೀ ಕಾರ್ಯಕರ್ತರು ಆಗಿದ್ದರು. ಅವರ ಅಣ್ಣಂದಿರು ಪರಕಾಲ ಸ್ವಾಮಿಗಳು ಆಗಿದ್ದರು. ಶ್ರೀ ಶ್ರೀನಿವಾಸ ಬ್ರಹ್ಮತಂತ್ರ ಪರಕಾಲ ಯತೀಂದ್ರರು ಎಂದು ಅವರಿಗೆ ಹೆಸರು. ಅವರು ಆಗ ಮೈಸೂರು ಮಹಾರಾಜರಿಗೆ ರಾಜಗುರುಗಳು. ಆಗಲೂ ಈಗಲೂ ಪರಕಾಲ ಮಠ ರಾಜಗುರು ಸ್ಥಾನದಲ್ಲಿ ಇದೆ. ಅರಮನೆಯ ಔದಾರ್ಯವೇ ಅವರಿಗೆ ಆಧಾರ.

ಶ್ರೀ ಶ್ರೀನಿವಾಸ ಬ್ರಹ್ಮತಂತ್ರ ಸ್ವಾಮಿಗಳು ಸ್ವತಂತ್ರ ವೃತ್ತಿಯವರು. ಅವರ ಪಾಂಡಿತ್ಯ ಆಗಾಧ. ಆಗಿನ ಕಾಲಕ್ಕೆ ಪ್ರಕಾಂಡ ಪಂಡಿತರಿಗೆ ದಿಗ್ವಿಜಯಮಾಡಿ

ಬರುವುದು ಒಂದು ರೂಢಿ. ದಿಗ್ವಿಜಯ ಎಂದರೆ ಎಲ್ಲೆಲ್ಲಿ ಪ್ರಚಂಡ ಪಂಡಿತರು ಇದ್ದಾರೋ, ಅಲ್ಲಿಗೆ ಹೋಗಿ ಅವರನ್ನು ಶಾಸ್ತ್ರಾರ್ಥಕ್ಕೆ ಕರೆದು, ಅವರೊಡನೆ ಶಾಸ್ತ್ರಾರ್ಥ ಮಾಡಿ ಸೋಲಿಸುವುದು. ಎಂದರೆ ನಿರುತ್ತರರನ್ನಾಗಿ ಮಾಡುವುದು.

ಶ್ರೀ ಸ್ವಾಮಿಗಳೂ ದಿಗ್ವಿಜಯ ಮಾಡಿದರು. ಆ ಕಾಲಕ್ಕೆ ನಮ್ಮ ಮುತ್ತಾತನವರ ಕಾಲಕ್ಕೆ-ಪುಣೆಯಲ್ಲಿ ಮೋಹನ ಶಾಸ್ತ್ರಿ ಎಂಬ ಪ್ರಚಂಡ ಪಂಡಿತ. ಊರ ಬಾಗಿಲ ಮುಂದೆ ತನ್ನ ಪಾದರಕ್ಷೆಗಳನ್ನು ಕಟ್ಟಿ ಯಾರು ಬಂದರೂ ಅದರ ಕೆಳಗೆ ತೂರಿ ಬರಬೇಕು. ಎಂದರೆ ತನಗೆ ಶರಣಾಗತ ಆಗಿರಬೇಕು ಎಂದು ಡಂಗೂರ ಸಾರಿಸಿದ್ದನಂತೆ. ಆಗ ಅವನನ್ನು ವಾದದಲ್ಲಿ ಸೋಲಿಸಬಲ್ಲವರು ದಕ್ಷಿಣ ದೇಶಗಳಲ್ಲಿ ಯಾರೂ ಇಲ್ಲ ಎಂದು ಅವನಿಗೆ ಒಂದು ಬಗೆಯ ಹೆಮ್ಮೆ.

ಶ್ರೀನಿವಾಸ ಬ್ರಹ್ಮತಂತ್ರ ಯತೀಂದ್ರರು ಸಂಚಾರ ಮಾಡುತ್ತ ಪುಣೆಗೆ ಹೋದರು. ಅಲ್ಲಿ ಊರಬಾಗಿಲಿಗೆ ಕಟ್ಟಿದ್ದ ಆ ಪಾದರಕ್ಷೆಗಳ ತೋರಣಗಳನ್ನು ಕೆಳಗೆ ಹಾಕಿಸಿ ಊರೊಳಗೆ ಹೋದರು. ಮೋಹನ ಶಾಸ್ತ್ರಿಗಳ ಸಂಗಡ ವಾದಕ್ಕೆ ಕಾಲು ಕೆರೆದಂತೆ ಆಯಿತು.

ಆಮೇಲೆ ವಾದವೂ ನಡೆಯಿತು. ಶಾಸ್ತ್ರಾರ್ಥ ಬೇಗ ಮುಗಿಯಲಿಲ್ಲ. ಬಹುಕಾಲ ನಡೆಯಿತು. ಕಡೆಗೆ ಸ್ವಾಮಿಗಳು ತಮ್ಮ ಆರಾಧ್ಯ ದೈವ ಶ್ರೀ ಹಯಗ್ರೀವರ ಕೃಪೆಯಿಂದ ಗೆದ್ದರು. ಆಗ ಮೋಹನ ಶಾಸ್ತ್ರಿ ಸ್ವಾಮಿಗಳಿಗೆ ಶರಣಾಗತನಾಗಿ ತನ್ನ ಬಿರುದು ಬಾವಲಿ ಎಲ್ಲವನ್ನೂ ಸ್ವಾಮಿಗಳ ಪಾದಾರವಿಂದಕ್ಕೆ ಒಪ್ಪಿಸಿದ. ಅದರಲ್ಲಿ ಪಂಚಕಲಶವೂ ಒಂದು. ಸ್ವಾಮಿಗಳು ಆ ಪಂಚಕಲಶ ಸಮೇತ ಹಿಂದಕ್ಕೆ ಮೈಸೂರಿಗೆ ಬಂದರು.

ಬರುವ ಕಾಲಕ್ಕೆ ಕೆಲವು ವರ್ಷ ಆಗಿತ್ತು. ಇದಿರಿಗೆ ಇಲ್ಲವೆ ಹೋದದ್ದರಿಂದ ಮೈಸೂರು ಮಹಾರಾಜರಿಗೆ ಸ್ವಲ್ಪಮಟ್ಟಿಗೆ ಅಸಡ್ಡೆಯ ಭಾವ ಮೂಡಿತ್ತು. ಸ್ವಾಮಿಗಳನ್ನು ಇದಿರುಗೊಂಡು ಮಾಡಬೇಕಾದ ಮರ್ಯಾದೆಗಳನ್ನು ಮಾಡಲಿಲ್ಲ. ಸ್ವಾಮಿಗಳಿಗೆ ಸಿಟ್ಟು ಬಂತೋ ಏನೋ ; ಮೈಸೂರಿಗೆ ಬರುವುದಿಲ್ಲ ಎಂದರು. ಶ್ರೀರಂಗಪಟ್ಟಣದವರೆಗೆ ಬಂದರು. ಅಲ್ಲೇ ನಿಂತರು. ಅಲ್ಲೇ ಕೊಪ್ಪಲಿನಲ್ಲಿ ನಿಂತು ಒಂದು ಮಠವನ್ನು ಕಟ್ಟಿಸಿ ನೆಲಸಿದರು. ಅವರ ದೇಹಯಾತ್ರೆಯೂ ಅಲ್ಲೇ ಮುಗಿಯಿತು. ಈಗಲೂ ಅಲ್ಲೇ ಅವರ ಬೃಂದಾವನ ಇದೆ. ಅಲ್ಲಿ ಇರುವ ದೇವರಿಗೆ ಪೂಜೆ ಮುಂತಾದ್ದನ್ನು ದಿನವೂ ಮಾಡಲು ಏರ್ಪಾಟು ಇದೆ.

ಅವರನ್ನು ಕಂಡವರು ಯಾರೂ ಈಗ ಬದುಕಿಲ್ಲ. ಆದರೆ ಮಠದಲ್ಲಿ ಅವರ ಬಗ್ಗೆ ಎಷ್ಟೋ ದಂತಕಥೆ ಪ್ರಚಾರದಲ್ಲಿ ಇವೆ. ನಾನು ಹುಡುಗ ಆಗಿದ್ದಾಗ ಕೇಳಿದ ಒಂದನ್ನು ಮಾತ್ರ ಇಲ್ಲಿ ಬರೆಯುತ್ತೇನೆ.

ಒಂದು ಸಲ ಸ್ವಾಮಿಗಳಿಗೆ ಜ್ವರ ಬಂತಂತೆ. ಚಳಿ ಜ್ವರ. ಮೈ ಎಲ್ಲಾ ನಡುಗು

ತ್ತಿತ್ತು. ಆದರೆ ಆಹ್ನಿಕಾದಿಗಳನ್ನು ಮಾಡಬೇಕು. ಹಯಗ್ರೀವರ ಆರಾಧನೆಯನ್ನು ಬೇರೆಯವರಿಗೆ ಒಪ್ಪಿಸಬಹುದು. ಸಂಧ್ಯಾದಿ ಕರ್ಮಗಳನ್ನು ಒಪ್ಪಿಸುವ ಹಾಗಿಲ್ಲವಲ್ಲ.

ಸ್ವಾಮಿಗಳು ಆಹ್ನಿಕ ಮಾಡಬೇಕು. ಅದಕ್ಕಾಗಿ ಶುಚಿ ಆಗಬೇಕು. ಮೈ ನಡುಗುತ್ತ ಇದೆ. ಆದರೂ ಎದ್ದು ಹೋದರಂತೆ ಸ್ವಾಮಿಗಳು. ಹೋಗುವಾಗ ತಾವು ಕೂತಿದ್ದ ಆಸನದ ಕೃಷ್ಣಾಜಿನವನ್ನು ತೆಗೆದು ಅಲ್ಲಿಯೇ ಇದ್ದ ಗೂಟಕ್ಕೆ ತಗಲು ಹಾಕಿ, "ನಾನು ಬರುವವರೆವಿಗೂ ಬಿದ್ದಿರು. ಅಲ್ಲಿಯವರೆಗೆ ನೀನು ಅನುಭವಿಸು ರೋಗ" ಎಂದು ಹೇಳಿ ಹೋಗಿ ಆಹ್ನಿಕ ಮುಗಿಸಿಕೊಂಡು ಬಂದರಂತೆ.

ಅವರು ಎದ್ದು ಹೋದ ಕೂಡಲೇ ಗೂಟಕ್ಕೆ ನೇತು ಹಾಕಿದ್ದ ಕೃಷ್ಣಾಜಿನ ಪಟ ಪಟ ಹೊಡೆದುಕೊಳ್ಳಲಾರಂಭಿಸಿತಂತೆ. ಸ್ವಾಮಿಗಳಿಗೆ ಮಾತ್ರ ನಡುಕ ಇರಲಿಲ್ಲ. ಆಹ್ನಿಕ ಮುಗಿಸಿಕೊಂಡು ಬಂದು "ಬಾ ಇನ್ನು, ಈ ಮೈಗೆ ಬರಲಿ ಅವಸ್ಥೆ" ಎಂದು ಕೃಷ್ಣಾಜಿನವನ್ನು ಹಾಸಿಕೊಂಡರಂತೆ. ಮೈ ಮತ್ತೆ ನಡುಗಲು ಆರಂಭ.

ಆಧುನಿಕ ಕಾಲದ ರುಚಿಕಂಡ ಹಿರಿಯರು ಒಬ್ಬರು ಹೇಳಿದ ಕಥೆ ಇದು. ಆಗ ನಿಜ ಇದ್ದರೂ ನಮ್ಮ ಪಾಲಿಗೆ ಅಂತೂ ಕಥೆಯೇ. ನಂಬಲು ಕಷ್ಟ ಆದ ಕಥೆ.

* * * *

ನಮ್ಮ ತಂದೆಯ ತಾತ ರಂಗಾಚಾರ್ಯರು. ಶ್ರೀಕಾರ್ಯಕರ್ತರು. ಅವರಿಗೆ ಚಿತ್ರದುರ್ಗದ ಸಿದ್ದವನಹಳ್ಳಿಯಲ್ಲಿ ಆಸರೆ ಸಿಕ್ಕಿತು. ಅಲ್ಲಿದ್ದ ಜನ ಪ್ರಧಾನವಾಗಿ ತೆಲುಗು ಮಾತಾಡುವ ರೆಡ್ಡಿಗಳು. ಅವರನ್ನು ನಂಬಿ ಅಲ್ಲಿ ಕಾಲ ಹಾಕಲು ನಿಶ್ಚಯಿಸಿದರು.

ಅವರು ಅಲ್ಲಿ ಇದ್ದಾಗ ಒಂದು ಸಲ ಮಹಾರಾಜರ ಸವಾರಿ ಆ ದಾರಿಯಲ್ಲಿ ಹೋಯಿತು. ಅವರ ಹೆಂಡತಿ ವೆಂಕಟರಂಗಮ್ಮ ಹುಣಿಸೆ ಎಲೆಗಳಲ್ಲಿ ಒಂದು ಊಟದ ಎಲೆಯನ್ನು ಮಾಡಿಕೊಂಡು ಹೋಗಿ ಮಹಾರಾಜರಿಗೆ ಸಮರ್ಪಿಸಿದರಂತೆ.

ಅವರ ಮಗ ತಾತಾಚಾರ್ಯರು ಅಲ್ಪಾಯು. ಸುಮಾರು ಮೂವತ್ತು ವರ್ಷ ವಯಸ್ಸಿನಲ್ಲೇ ತೀರಿಕೊಂಡರು. ನಮ್ಮ ಅಜ್ಜಿ ಶೇಷಮ್ಮ. ಆಕೆಯ ತವರು ಮಧು ಗಿರಿ ತಾಲ್ಲೂಕಿನ ಗರಣಿ. ಆಕೆ ತನ್ನ ಮಗಳು ಮಗನನ್ನು ಕಟ್ಟಿಕೊಂಡು ಹಾಗೂ ಹೀಗೂ ಕಾಲ ನೂಕಿದಳು, ಮಗ ದೊಡ್ಡವನು ಆಗುವವರೆಗೆ.

ಮಗ ಇನ್ನೂ ದೊಡ್ಡವನು ಆಗುವ ಮೊದಲೇ ಅವನಿಗೆ ಮದುವೆ ಮಾಡಿಬಿಟ್ಟರು. ಮದುವೆ ಆದಾಗ ನಮ್ಮ ತಾಯಿಗೆ ನಾಲ್ಕೋ ಆರೋ ವಯಸ್ಸು. ಆ ಎಳೆಯ ವಯಸ್ಸಿನಲ್ಲೇ ಮಗನ ಜೊತೆಗೆ ಇರಲಿ ಎಂದು ಸೊಸೆಯನ್ನು ಕರೆತಂದರು ನಮ್ಮ ಅಜ್ಜಿ. ಮನೆಯಲ್ಲಿ ಯಾರೂ ಇರಲಿಲ್ಲವಲ್ಲ.

ಅಲ್ಲಿಂದ ಇಲ್ಲೇ ಬೆಳೆದರು ನಮ್ಮ ತಾಯಿ. ತವರು ಮನೆ ಅನಂತಪುರ ಜಿಲ್ಲೆಯಲ್ಲಿ ಹಳೆಯ ಬಳಗ. ಆದರೂ ಆಕೆ ಅಲ್ಲಿ ಹೋದದ್ದು ಅಪರೂಪ.

ಮನೆತನದ ಮಾತು ಹೇಳಿದೆ. ಆಗಿನ ಸಮಾಜದ ರೀತಿ ನೀತಿಗಳ ಪರಿಚಯವೂ ಸ್ವಲ್ಪ ಆಗಬೇಕು. ಇಲ್ಲದೆ ಇದ್ದರೆ ಅನೇಕ ಮಾತು, ರೂಢಿ ಅರ್ಥವಾಗುವುದಿಲ್ಲ.

* * * *

ನಮ್ಮದು ಗುರು ಮನೆ. ನಮ್ಮ ಮನೆಗೆ 'ತಿರುಮಾಳಿಗೆ' ಎಂದು ಕರೆಯುವ ರೂಢಿ–ಇದು ಶ್ರೀವೈಷ್ಣವ ಸಂಪ್ರದಾಯ. ಸ್ವಯಂ ಆಚಾರ್ಯ ಪುರುಷರು ಎಂದು ಕರೆಯುವ ಮನೆತನ ನಮ್ಮದು. ಇದು ರಾಮಾನುಜೀಯ ಪಂಥದ ವೈಶಿಷ್ಟ್ಯ.

ಭಗವದ್ರಾಮಾನುಜಾಚಾರ್ಯರು ಮೊದಲು ಗೃಹಸ್ಥರು ಆಗಿದ್ದು ಆಮೇಲೆ ಸನ್ಯಾಸಿಗಳಾದರು. ಅವರ ಧರ್ಮಸ್ಥಳ ಶ್ರೀರಂಗ. ಅವರ ಜೀವನ ಚರಿತ್ರೆ ಅತ್ಯದ್ಭುತ. ಆಗಿನ ಕಾಲಕ್ಕೆ ಅದ್ವೈತಿಗಳಲ್ಲಿ ಸ್ವಲ್ಪ ಆಡಂಬರ, ಜಂಬ ಬಂದಿತ್ತು ಎಂದು ಕಾಣುತ್ತದೆ. ಶುಷ್ಕ ವೇದಾಂತತ್ರಯರು ಆಗಿದ್ದಿರಬೇಕು. ಆದ್ದರಿಂದ, ವಿಶಿಷ್ಟಾದ್ವೈತ ಮತವನ್ನು ಇವರು ಪ್ರಚಾರ ಮಾಡಿದರು.

ಒಂದು ಪುನಶ್ಚೇತನಕ್ಕೆ ಕಾರಣ ಆದರು ರಾಮಾನುಜರು. ಗಾಂಧಿ ಸತ್ತ ಕೂಡಲೇ ಗಾಂಧೀವಾದದಲ್ಲಿ ತೊಡಗಿ ಸತ್ಯಾನುಷ್ಠಾನವನ್ನು ಅಹಿಂಸೆಯ ಆಚರಣೆಯನ್ನು ನಾವು ಕೈಬಿಟ್ಟ ಹಾಗೆ ಶಂಕರಾಚಾರ್ಯರ ಶಿಷ್ಯರಲ್ಲೂ ಶಬ್ದಕ್ಕೆ ಪ್ರಾಮುಖ್ಯತೆ ಕೊಟ್ಟು ಅನುಷ್ಠಾನವನ್ನು ಕೈಬಿಟ್ಟಿದ್ದಿರಬೇಕು. ಅವರ ಬದುಕಿನಲ್ಲಿ ಆತ್ಮೌಪಮ್ಯ ಕಾಣಲಿಲ್ಲ.

ರಾಮಾನುಜರಲ್ಲಿ ದಯೆ ತುಂಬಿ ತುಳುಕುತ್ತಿತ್ತು. ಭಕ್ತಿಯನ್ನು ಮುಖ್ಯವಾಗಿ ಮಾಡಿಕೊಂಡು, ಸಮಸ್ತ ಜೀವರಾಶಿಯೂ ತನ್ನಂತೆಯೇ ಎಂದು ಭಾವಿಸಿ ಬಾಳಿದರು ಆಚಾರ್ಯರು.

ಅದಕ್ಕೇ ಅವರ ಗುರುಗಳು ನಿಷೇಧಮಾಡಿದ್ದರೂ ದೇವಾಲಯದ ಗೋಪುರ ಹತ್ತಿ ಅಲ್ಲಿಂದ ಇಡೀ ಜನತೆಗೆ 'ತಿರುಮಂತ್ರ'ವನ್ನು ಸಾರಿ ಹೇಳಿದರು. ಅನೇಕರು ಅದರಿಂದ ಮೋಕ್ಷ ಪಡೆಯುವಂತೆ ಇದ್ದರೆ ತಾವು ಒಬ್ಬರು ಗುರುಗಳ ಅಪ್ಪಣೆಯನ್ನು ಮೀರಿದುದಕ್ಕಾಗಿ ನರಕಕ್ಕೆ ಹೋದರೂ ಚಿಂತೆ ಇಲ್ಲ ಎಂಬ ಭಾವ ಅವರದು.

ದೇವರು ಅವರಿಗೆ ದೀರ್ಘಾಯಸ್ಸನ್ನು ಕೊಟ್ಟ. ವಿಶಿಷ್ಟಾದ್ವೈತ ಧರ್ಮವನ್ನು ಜೀವಮಾನದಲ್ಲೆಲ್ಲಾ ಹರಡಿ, ತಮ್ಮ ತರುವಾಯ ಆ ಮತ ಸ್ಥಿರವಾಗಬೇಕೆಂದು ಸ್ವಯಂ ಆಚಾರ್ಯ ಪುರುಷರು ಯೋಜನೆ ಮಾಡಿದರು.

ಈ ಆಚಾರ್ಯ ಪುರುಷರು ಎಪ್ಪತ್ನಾಲ್ಕು ಮಂದಿ. ಅವರ ಕಾಲಕ್ಕೆ ಎಪ್ಪತ್ತು ನಾಲ್ಕು ಪೀಠಗಳೇ ಆದವು ಮತ ಪ್ರಸಾರಕ್ಕೆ. ಈ ಎಪ್ಪತ್ತು ನಾಲ್ಕು ಜನವೂ ಗೃಹಸ್ಥರು. ಸಂನ್ಯಾಸಿಗಳಲ್ಲ. ಗೃಹಸ್ಥರ ಮೂಲಕ ಧರ್ಮ ಪ್ರಚಾರ ಮಾಡಿಸಬೇಕೆಂದು ರಾಮಾನುಜಾಚಾರ್ಯರ ಮನಸ್ಸು.

ಈ ಗೃಹಸ್ಥ ಪೀಠಗಳಿಗೆ ಅವರು ಆರಿಸಿದ ಜನವೂ ಪಂಡಿತರು, ನಿಷ್ಠಾವಂತರು, ಆಚಾರ್ಯ ಸಂಪನ್ನರು, ತಪಸ್ವಿಗಳು.

ಬಹುಶಃ ಗೃಹಸ್ಥ ಪೀಠಗಳನ್ನು ಕಟ್ಟಿಸಿ ಗೃಹಸ್ಥರಿಗೆ ಧರ್ಮ ರಚನೆಯ ದಾರಿಯನ್ನು ವಹಿಸಿದುದು ಅದೇ ಮೊದಲು ಮಧ್ಯ ಕಾಲದಲ್ಲಿ. ಹಿಂದೆ ಋಷ್ಯಾಶ್ರಮ ಗಳಲ್ಲಿ ಅನೇಕರು ಗೃಹಸ್ಥರಾಗಿಯೇ ಇದ್ದರು. ಅಂಥವರ ವರ್ಚಸ್ಸು ನಮ್ಮ ಧರ್ಮದಲ್ಲಿ ಏನೂ ಕಡಿಮೆಯಿಲ್ಲ.

ವಶಿಷ್ಠ--ವ್ಯಾಸರ ಮಾತನ್ನೇ ತೆಗೆದುಕೊಳ್ಳೋಣ. ಇಬ್ಬರೂ ಗೃಹಸ್ಥಾಶ್ರಮಿ ಗಳು. ಅವರಿಂದಲೇ ತಾನೆ ಹಿಂದು ಧರ್ಮ ಉಳಿದಿದ್ದು.

ಗೃಹಸ್ಥಾಶ್ರಮವನ್ನು ಆದರಿಸಿ, ಗೃಹಸ್ಥರನ್ನು ಪೀಠಪತಿಗಳನ್ನಾಗಿ ಮಾಡಿದ ಸಾಹಸ ರಾಮಾನುಜಾಚಾರ್ಯರದು. ಅವರ ಹಾಗೆಯೇ ಜನತೆಯಲ್ಲಿ ಸರಾಗವಾಗಿ ಹಿರಿಯರು ಬೆರೆಯುವಂತೆ ಮಾಡಿದವರು ವೀರಶೈವರು. ಹಳ್ಳಿಯಲ್ಲೂ ಜಂಗಮರು ಇದ್ದಾರೆ. ಅಲ್ಲಲ್ಲಿ ಮಠಗಳು ಇವೆ. ಜಂಗಮರು ಗೃಹಸ್ಥರಾದರೂ ಪೀಠಗಳು ಸಂನ್ಯಾಸಿಗಳವು.

ಈ ಸಾಮ್ಯ ಎರಡರಲ್ಲೂ ಇದೆ. ಎರಡೂ ಜನತೆಯ ಭಾಷೆಯನ್ನು ಧರ್ಮ ವಾಹನವಾಗಿ ಮಾಡಿದವು. ಕನ್ನಡ ದೇಶಕ್ಕೆ ಮಾತ್ರ ಹೆಚ್ಚು ಹೊಂದಿಕೊಂಡಿತು ವೀರಶೈವ ಮತ. ಶ್ರೀವೈಷ್ಣವ ಮತವೂ ಹೆಚ್ಚಾಗಿ ತಮಿಳು ದೇಶಕ್ಕೆ ಹೊಂದಿ ಕೊಂಡಿತು. ವೀರಶೈವ ಆಂಧ್ರ ಮಹಾರಾಷ್ಟ್ರಗಳಲ್ಲಿ ವ್ಯಾಪಿಸಿದ ಹಾಗೆ ಶ್ರೀವೈಷ್ಣವ ಆಂಧ್ರ ಕರ್ನಾಟಕದಲ್ಲಿ, ಉತ್ತರದಲ್ಲಿ ಹರಡಿತು. ಅದರಲ್ಲಿ ಲಿಂಗಧಾರಣೆ, ಇವರಲ್ಲಿ ತಪ್ತ ಚಕ್ರಾಂಕನ. ಅದರಲ್ಲೂ ಭಕ್ತರೂ ಕವಿಗಳೂ ಆಗಿದ್ದಾರೆ. ಇದರಲ್ಲೂ ಆಗಿದ್ದಾರೆ. ಅವರು ಕನ್ನಡ ಭಾಷೆಯನ್ನು ದೇವತಾ ಭಾಷೆಯ ಮಟ್ಟಕ್ಕೆ ಏರಿಸಿದರು. ಇವರು ತಮಿಳು ಭಾಷೆಯನ್ನು ದೇವತಾ ಮಟ್ಟಕ್ಕೆ ಏರಿಸಿದರು. ಅವರ ವಚನಗಳು ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆ. ಹಾಗೆಯೇ ತಮಿಳಿನ ದಿವ್ಯ ಪ್ರಬಂಧಗಳು, ಸಿರಿ ಬಾಯಿನುಡಿ ತಮಿಳು ಸಾಹಿತ್ಯಕ್ಕೆ ದಿವ್ಯದಾನ.

ಇಬ್ಬರದೂ ವಿಶಿಷ್ಟ ಅದ್ವೈತ. ಇಬ್ಬರದೂ ಭಕ್ತಿಪ್ರಧಾನ. ಆದರೆ ಅವರದು ಶೈವ ಏಕೋ ಇವರದು ವೈಷ್ಣವ ಏಕೋ. ಸಂಶೋಧನೆ ಮಾಡಬೇಕಾದ ವಿಷಯ. ಕಾಲ ದೇಶ ವ್ಯಕ್ತಿಗಳ ಹಿನ್ನೆಲೆ ಇದ್ದರೂ ಇರಬಹುದು.

ಈ ಪೀಠಗಳು ಈಗ ಹೆಚ್ಚು ಆಗಿವೆ. ಪ್ರದೇಶ ಪ್ರದೇಶಗಳಲ್ಲೂ ತಿರುಮಾಳಿಗೆ ಗಳು ಆಗಿವೆ. ಕಾಲಕ್ರಮೇಣ ಆ ಪೀಠಗಳ ಪ್ರಾಶಸ್ತ್ಯ ಹೋಯಿತು. ಆ ಪೀಠ ಗಳ ಪತಿಗಳು ಬರಬರುತ್ತ ಪಾಂಡಿತ್ಯವನ್ನು ಕಳೆದುಕೊಂಡು ಬರೀ ಗೃಹಸ್ಥರು ಆದರು. ಪಾಂಡಿತ್ಯ ಹೋದರೆ ಹೋಗಲಿ ಎಂದರೆ ಬರಬರುತ್ತಾ ಆದರ್ಶ ಜೀವನವೂ ಕಡಿಮೆ ಆಯಿತು.

ಬದುಕೇ ಧರ್ಮದ ಜಾಡನ್ನು ಬಿಟ್ಟಾಗ ಜನರ ಮಾತೇನು ? ಈಗ ಅಧರ್ಮವೇ ಧರ್ಮ, ಅಸತ್ಯವೇ ಸತ್ಯ, ಅನ್ಯಾಯವೇ ನ್ಯಾಯ, ಗೂಂಡಾಗಿರಿಯೇ ಪ್ರತಿಷ್ಠೆ.

ತಲೆಹಿಡುಕ, ತಲೆತಿರುಕ, ತಲೆಗಡುಕ ಎಲ್ಲಾ ಒಂದೇ ಈಗ. ತಲೆ ಒಂದು ಕಂಡರೆ ಸಾಕು, ಅದರ ಒಳಗೆ ಏನು ಇದೆ ಎಂಬ ಲೆಕ್ಕವೇ ಇಲ್ಲ. ಇಂಥಾ ಕಾಲದಲ್ಲಿ ತಲೆಗೆ ಏನು ಬೆಲೆ?

ಎಲ್ಲಿಂದ ಎಲ್ಲಿಗೆ ಬಂದೆ. ನಮ್ಮದು ತಿರುಮಾಳಿಗೆ ಎಂದು ಎನಿಸಿಕೊಂಡಿತ್ತು. ನಮ್ಮ ತಂದೆಯವರ ಕಾಲಕ್ಕೆ ಸದಾ ಒಬ್ಬ ದಾಸಯ್ಯ ಇರುತ್ತಿದ್ದ ಮನೆಯಲ್ಲಿ. ಗುರುಗಳು ಎಲ್ಲಿಗಾದರೂ ಯಾವಾಗಾದರೂ ಸಂದೇಶ ಕಳುಹಿಸಬೇಕಾದರೆ ಅವನ ಮೂಲಕವೇ. ಅವನು ಕೊಂಡಿಕಾರ. ಅವನ ಕೈಯಲ್ಲಿ ಇದ್ದ ಕೊಂಡಿಕೋಲಿಗೆ ಝುಲ್ ಝುಲ್ ಎನ್ನುವ ಹಾಗೆ ಕೆಲವು ಕಬ್ಬಿಣದ ರೇಕು. ನಮ್ಮ ಕೊಂಡಿಕಾರ ಭೀಮದಾಸ ಬಹಳ ಶಿಸ್ತು. ಎಂದೂ ಸುಳ್ಳು ಹೇಳಿದವನಲ್ಲ. ತಿರುಮಾಳಿಗೆ ಎಂದರೆ ಅವನಿಗೆ ಬಲು ಭಕ್ತಿ. ಅವನು ಈಗ ಸತ್ತು ಸ್ವರ್ಗದಲ್ಲಿ ಇದಾನೆ ಎಂದೇ ನನ್ನ ನಂಬಿಕೆ.

ಸಂದೇಶಗಳನ್ನು ಮುಟ್ಟಿಸಿ ಗುರುಗಳು ಬರುವ ಊರಿಗೆ ಹೋಗಿ ಅಲ್ಲಿ ಸ್ವಾಗತದ ಸಿದ್ಧತೆ ಮಾಡಿ ಬಂದು, ಊರಿಗೆ ಗುರುಗಳನ್ನು ಬಿಜಮಾಡಿಸಿ, ಅವರು ಅಲ್ಲಿ ಇದ್ದಷ್ಟು ದಿನ ಶಿಷ್ಯರಿಂದ ಸ್ವಯಂಪಾಕದ ಏರ್ಪಾಟು ಮಾಡುವುದು ಕೊಂಡಿಕಾರನ ಕೆಲಸ. ಯಾರಾದರೂ ಚಕ್ರಾಂಕನ ಮಾಡಿಸಿಕೊಳ್ಳುವವರು ಇದ್ದರೆ ಅದಕ್ಕೂ ಅವನೇ ಏರ್ಪಾಟುಮಾಡಬೇಕು.

ಗುರುಗಳು ಊರಿಗೆ ಬಂದಾಗ ಅವರನ್ನು ಇದಿರುಗೊಂಡು ಶಂಖ ಧ್ವನಿಮಾಡಿ, ಸಣ್ಣ ಕಹಳೆಯನ್ನೋ ಶ್ರೀ ಚುರ್ಭಾಗಳನ್ನೋ ಊದುವುದು ಅವನ ಕೆಲಸ. ಒಂದು ಸಲ ಒಂದು ಊರು ಬಿಡುವಾಗ ಸಂಭ್ರಮದಿಂದ ಎಲ್ಲರೂ ಸ್ವಾಗತಿಸಲು ಊರು ದಾಟಿ ಬಂದರು. ಯಥಾ ಪ್ರಕಾರ ಕೊಂಡಿಕಾರ ಭೀಮದಾಸ ತನ್ನ ವಾದ್ಯವನ್ನು ಊದಿದ. ಆಗ ಊರಿನ ಪಟೇಲರ ಗಾಡಿಯನ್ನು ಅವರ ಹೋರಿಗಳನ್ನು ನಮಗಾಗಿ ಕೊಟ್ಟಿದ್ದರು. ಆ ಹೋರಿಗಳು ಹೊಸವು. ಅವಕ್ಕೆ ಸದ್ದು ಗದ್ದಲ ರೂಢಿ ಯಿರಲಿಲ್ಲ. ನಮ್ಮ ದಾಸಯ್ಯ ಸಣ್ಣ ಕಹಳೆ ಊದಿದನೋ ಇಲ್ಲವೋ ಅವು ಬೆದರಿ ನಾಗಲೋಟ ಕಿತ್ತವು. ದಾರಿ, ಜಾಡು, ಎಲ್ಲವನ್ನೂ ಬಿಟ್ಟು ಹೊಲಗಳಲ್ಲಿ ಓಡಿದವು. ಓಡಿ ಓಡಿ ದಣಿದರೂ ಓಟ ನಿಲ್ಲಲಿಲ್ಲ. ಕಡೆಗೆ ೧-೨ ಮೈಲಿ ದೂರ ಬಂದ ಮೇಲೆ ಇದಿರಿಗೆ ಒಂದು ಬಾರಿ ಬಣವೆ ಸಿಕ್ಕಿತು. ಹೋರಿಗಳು ಕಣ್ಣು ಮುಚ್ಚಿ ಓಡುತ್ತ ಆ ಬಣವೆಗೆ ಬಂದು ನುಗ್ಗಿ ಅದರಲ್ಲಿ ತಮ್ಮ ಕೋಡುಗಳನ್ನು ಸಿಕ್ಕಿಸಿಕೊಂಡವು. ಆಗ ಗಾಡಿ ನಿಂತಿತು.

ಆ ಗಾಡಿಯಲ್ಲಿ ಸಾಮಾನು ಹಾಕಿತ್ತು. ನಾನು ಚಿಕ್ಕ ಹುಡುಗ. ಒಬ್ಬನೆ ಬಲು ಜಂಬದಿಂದ ಅದರಲ್ಲಿ ಕೂತಿದ್ದೆ. ಹೋರಿಗಳು ಯಾವಾಗ ಅಡ್ಡ ತಿರುಗಿದವೋ ಆಗಲೇ ನಮ್ಮ ಭೀಮದಾಸನಿಗೆ ಪ್ರಾಣವೇ ಹಾರಿ ಹೋದಂತಾಯಿತು.

'ಸ್ವಾಮೀ ಬಲವಾಗಿ ಗೂಟ ಹಿಡಿದುಕೊಳ್ಳಿ' ಎಂದು ಹೇಳುತ್ತ ಗಾಡಿಯ ಹಿಂದೆ ಒಂದೇ ಓಟ ಓಡುತ್ತ ಬಂದ. ಅವನು ಹೇಳದೆ ಇದ್ದರೂ ಗೂಟಗಳನ್ನು ಬಲವಾಗಿ ಹಿಡಿದುಕೊಂಡೆ. ಪ್ರಾಣ ದಕ್ಕಿಸಿಕೊಳ್ಳಬೇಕಲ್ಲ ನಾನು.

ಅವನು ಗಾಡಿಯ ಹತ್ತಿರ ಬರುವ ವೇಳೆಗೆ ಹೋರಿಗಳು ಬಣವೆಗೆ ಸಿಕ್ಕಿ ಹಾಕಿಕೊಂಡಿದ್ದವು. ಗಾಡಿ ಹೊಡೆಯುವವನು ನಡುವೆ ಎಲ್ಲಿಯೋ ಜಾರಿ ಹೋಗಿದ್ದ. ಸಾಮಾನು ಎಲ್ಲವೂ ಉದುರಿಹೋಗಿತ್ತು. ಗಾಡಿಯಲ್ಲಿ ನಾನು ಒಬ್ಬನೇ ಒಬ್ಬ. ತಂದೆ ತಾಯಿ ಊರಿನವರು ಎಲ್ಲರೂ ನನ್ನ ಆಸೆಯನ್ನು ಬಿಟ್ಟಿದ್ದರು. ಹೇಗಾದರೂ ಮಾಡಿ ಬದುಕಿಸಿಕೊಳ್ಳಬೇಕು ಎಂದು ಓಡಿಬರುತ್ತಿದ್ದವನು ಭೀಮದಾಸ ಒಬ್ಬನೇ.

ಗಾಡಿಯ ಹತ್ತಿರ ಬಂದವನೇ ಗಾಡಿಯೊಳಕ್ಕೆ ಹಾರಿ ನನ್ನನ್ನು ಎಳೆದುಕೊಂಡು ಕೆಳಕ್ಕೆ ಧುಮುಕಿದ. ಆಮೇಲೆ ಅರ್ಧಗಂಟೆಯ ಹೊತ್ತಿಗೆ ಊರಿನವರು ಬಂದು ಎತ್ತು ಗಾಡಿಯನ್ನು ಬಿಡಿಸಿಕೊಂಡರು. ತೆಂಗಿನಕಾಯಿ ತರಿಸಿ ದೃಷ್ಟಿ ತೆಗೆದು ನಿವಾಳಿಸಿ ಒಡೆದರು ಪಟೇಲರು. ಇಂಥ ಪ್ರಸಂಗ ಹಲವು ಈಗಲೂ ನನಗೆ ನೆನಪು ಇವೆ. ಇದನ್ನು ಬರೆಯುವಾಗ ನಮ್ಮ ಭೀಮದಾಸ ನನಗೆ ನೆನಪಾಗಿ ಕಣ್ಣಲ್ಲಿ ನೀರು ಬರುತ್ತದೆ. ಗಟ್ಟಿಯಾಗಿ ಅಳುತ್ತಿದೇನೆ. ಏನೋ ಆಯಿತು ಎಂದು ನನ್ನ ಹೆಂಡತಿ ಓಡಿಬಂದಿದಾಳೆ. ಮನೆಯ ಹುಡುಗರು ಎಲ್ಲರಿಗೂ ಆಶ್ಚರ್ಯ.

ನನ್ನ ಅಂತರ್ಯವನ್ನು, ಭೀಮದಾಸನ ಆ ಸ್ವಾಮಿನಿಷ್ಠೆಯನ್ನು ಅವರು ಹೇಗೆ ಬಲ್ಲರು ? ನಾಯಿಗಳು ತುಂಬಾ ಸ್ವಾಮಿನಿಷ್ಠ ಎಂದು ಕತೆಗಳಲ್ಲಿ ಓದಿದ್ದೇನೆ, ಸುದ್ದಿಯಲ್ಲಿ ನೋಡಿದೇನೆ. ಆದರೆ ಅಂಥ ಸ್ವಾಮಿನಿಷ್ಠ ನಾಯಿಯನ್ನು ನಾನು ನೋಡಿಲ್ಲ. ಆದರೆ ನಾಯಿಗಿಂತ ಮನುಷ್ಯ ಕೀಳೆ ?

ನಾನು ನಂಬಬಲ್ಲ ಸ್ವಾಮಿನಿಷ್ಠ ಮನುಷ್ಯರ ಕತೆ ಕೇಳಿದೇನೆ. ನನ್ನ ಬಾಳಿನಲ್ಲೇ ಅಂಥ ಜೀವಿಯನ್ನು ನೋಡಿದೇನೆ. ಅವನ ನಿಷ್ಠೆಯ ಸವಿ ಉಂಡಿದೇನೆ.

ಆದರೂ ಕತೆಗಳಲ್ಲಿ, ಸುದ್ದಿಯಲ್ಲಿ ಸ್ವಾಮಿದ್ರೋಹಿಗಳ ಕತೆ ಬರುತ್ತವೆ. ಅವನ್ನು ನಂಬಲು ನನ್ನ ಅನುಭವ ಅಡ್ಡ. ನಂಬದೆ ಇರಲು ಮೇಲಿಂದ ಮೇಲೆ ಅಂಥ ಸುದ್ದಿ ಸಂಗತಿ ಬರುತ್ತವೆ.

* * * *

ನಮ್ಮ ತಂದೆ ಸಿದ್ದವನಹಳ್ಳಿ ರಂಗಾಚಾರ್ಯರು ವೈದಿಕರು. ದಿನವೂ ಅವರ ಆಹ್ನಿಕ ಭಗವದಾರಾಧನೆ ಮುಗಿಯುವ ವೇಳೆಗೆ ಮಧ್ಯಾಹ್ನ ಆಗುತ್ತಿತ್ತು. ಬೆಳಿಗ್ಗೆ ಮೂರು ಗಂಟೆಗೆ ಎದ್ದರೆ ಹಾಸಿಗೆಯಲ್ಲೇ ಕುಳಿತು, ಆ ಸ್ತೋತ್ರ ಈ ಸ್ತೋತ್ರ ಹೇಳುತ್ತಿದ್ದರು. ಬೆಳಕು ಹರಿಯುವವರೆವಿಗೂ, ಆಮೇಲೆ ಬಹಿರ್ದೇಶಕ್ಕೆ ಹೊಲಗಳ ಕಡೆ ಹೋಗಿ ಬರುತ್ತಿದ್ದರು. ಈಗಿನ ಹಾಗೆ ಮನೆಗಳಲ್ಲಿ ಕಕ್ಕಸ್ಸುಗಳು ಆಗ ರೂಢಿಯಲ್ಲೂ ಇರಲಿಲ್ಲ.

ಮಕ್ಕಳಿಗೆ ನಮಗೂ ಅದೇ ರೂಢಿ. ಈಗಿನ ಹಾಗೆ ಒಂದೊಂದು ಕೋಣೆಗೂ ಒಂದು ಕಕ್ಕಸ್ಸು, ಮೀಯುವ ಮನೆ ಇರಲಿಲ್ಲ. ಈಗ ಬೆಳಿಗ್ಗೆ ಎದ್ದರೆ ನಗರಗಳಲ್ಲಂತೂ ಎಲ್ಲೂ ಹೋಗಬೇಕಾಗಿಲ್ಲ. ಮಲಗುವ ಮನೆಯ ಪಕ್ಕದಲ್ಲೇ Attached bathroom, ಕಕ್ಕಸ್ಸು. ಮುಖ ತೊಳೆಯುವುದೂ ಅಲ್ಲೇ. ಕೆಲವು ಕಾಲದ ಮೇಲೆ ಮನೆಗಳಿಗೆ ಸ್ಥಳ ಕಡಿಮೆ ಆಗುತ್ತ ಬಂದರೆ ಮಂಚದ ಕೆಳಗೆ bath ಆಗಬಹುದು. ಮುಖ ತೊಳೆದುಕೊಳ್ಳುವುದು, ಶೌಚ ಅಲ್ಲೇ ಆದೀತು.

ನಮಗೆ ಈ ರೂಢಿ ಇತ್ತು. ಎಂದು ನಾವು ಹೊರಗೆ ಸಂಚಾರ ಹೋದಾಗ ದೇವಸ್ಥಾನಗಳಲ್ಲಿ ಇಳಿದುಕೊಂಡು ಅಲ್ಲಿ ಕಳ್ಳಿಯ ಸಾಲಿನ ಮರೆಗೆ ಬಹಿರ್ದೇಶಕ್ಕೆ ಕೂತುಕೊಳ್ಳಲು ನಮಗೆ ಸಂಕೋಚ ಇರಲಿಲ್ಲ. ಶೌಚ ಆದಮೇಲೆ ಸ್ವಲ್ಪ ಮಣ್ಣು ಹಾಕಿ ಮುಚ್ಚಿದರೆ ಆಯಿತು. ವಾಸನೆಯೂ ಬರುತ್ತಿರಲಿಲ್ಲ. ಗೊಬ್ಬರವೂ ಆಗುತ್ತಿತ್ತು. ಅದಕ್ಕೆ ಇರಬೇಕು ಸಾಧಾರಣವಾಗಿ ಊರಮುಂದಿನ ಹೊಲಗಳಲ್ಲಿ ಎಲ್ಲ ಹಳ್ಳಿಗಳಲ್ಲೂ ಪಯಿರು ಚೆನ್ನು. ಕಾಯುವುದು ಮಾತ್ರ ಬಲು ಬಿಗಿ.

ಬೆಳಿಗ್ಗೆ ಹೊರಗೆ ಹೋದರೆ ಬಿಸಿಲು ಏರಿದ ಮೇಲೆ ಹಿಂದಿರುಗಿರುತ್ತಿದ್ದರು ತಂದೆ. ಆಮೇಲೆ ಸ್ನಾನ, ಆಹ್ನಿಕ, ಆರಾಧನೆ.

ನಮ್ಮ ಊರಿಗೆ ಬೇರೆ ಊರಿನಿಂದ ಬರುವಾಗ ದಾರಿಯಲ್ಲಿ ತಿಪ್ಪೆಗಳ ಸಾಲು. ದಾರಿಯ ಉದ್ದಕ್ಕೂ ಹೊಲಸು ನಾತ. ಮೂಗು ಮುಚ್ಚಿಕೊಂಡು ಊರೊಳಕ್ಕೆ ಬರಬೇಕು. ಸಾಲದ್ದಕ್ಕೆ ಉದ್ದಕ್ಕೂ ಶೌಚಕ್ಕಾಗಿ ಕುಳಿತ ಹೆಂಗಸರು ನಮ್ಮನ್ನು ನೋಡಿ ಎದ್ದು ನಿಲ್ಲುತ್ತಿದ್ದರು. ಅವರನ್ನು ನೋಡುವ ನಾಚಿಕೆ, ಕಣ್ಣು ಮುಚ್ಚಿಕೊಳ್ಳಬೇಕು. ಕಣ್ಣು ಮೂಗು ಎರಡನ್ನು ಒಂದೇಸಲ ಮುಚ್ಚಿಕೊಂಡು ದಾರಿ ನಡೆಯಲು ನಮಗೆ ಸಾಧ್ಯ ಇರಲಿಲ್ಲ. ಕಣ್ಣು ಮುಚ್ಚಿಕೊಂಡು ಮೂಗು ತೆರೆದರೆ ಆ ನಾತ ಕುಡಿಯುತ್ತ ಊರೊಳಕ್ಕೆ ಹೋಗುತ್ತಿದ್ದೆವು.

ಈಚೆಗೆ ಹಳ್ಳಿಗಳನ್ನು ತಿಪ್ಪೆಯ ರಾಶಿಗಳು ದುರ್ವಾಸನೆ ಎಂದು ವರ್ಣಿಸುವುದು ಅತಿ ಆಗಿದೆ. ಪಂಡಿತ ಜವಾಹರಲಾಲರು ಈ ಹಳ್ಳಿಗಳ ಸಂಸ್ಕೃತಿ ಹೊಲಸು ಎಂದು ಹೇಳಿದ ಮೇಲೆ ಅದೊಂದು ಜಾಡೇ ಬಿದ್ದಿದೆ.

ಪಟ್ಟಣಗಳಲ್ಲಿ ಏನು ಕಡಿಮೆಯೇನಿಲ್ಲ. ದುರ್ವಾಸನೆ! ಮಲ್ಲೇಶ್ವರದ ಬಸ್ ನಿಲ್ದಾಣದಲ್ಲಿ ಬಸ್ಸಿಗಾಗಿ ಕಾಯುತ್ತ ಗಂಟೆಗಟ್ಟಲೆ ನಿಂತಿದ್ದಾಗ, ಬಸ್ಸಿನಲ್ಲಿ ಕುಳಿತು ಪ್ರಯಾಣ ಮಾಡುವಾಗ ಆ ಭಯಂಕರ ವಾಹನಗಳು ತಮ್ಮ ಡೀಸೆಲ್ ವಾಸನೆಯನ್ನು ಉಗುಳಿದಾಗ ಆ ನಾತವನ್ನು ತಡೆಯಲಾರದೆ ಮೂಗು ಮುಚ್ಚಿಕೊಳ್ಳುತ್ತೇನೆ. ಕೆಲವರಿಗೆ ಆ ವಾಸನೆಗೆ ವಾಂತಿಯೇ ಬರುತ್ತದೆ. ಆದರೂ ಈ ವಾಸನೆ ನಮಗೆ ಅಭ್ಯಾಸ. ಆದ್ದರಿಂದ ಇದು ನಮಗೆ ಅನಿವಾರ್ಯ.

ಗ್ರಾಮಗಳಲ್ಲಿ ಇದ್ದವರಿಗೆ ಅದೂ ಅನಿವಾರ್ಯ ಎಂಬುದು ನಮಗೆ ಆಗ ತಿಳಿದಿರ

ಲಿಲ್ಲ. ಈಗೀಗ ಅಲ್ಲಲ್ಲಿ ಗಾಂಧೀನಿಧಿಯ ಕಾರ್ಯಕರ್ತರೂ ಸರಕಾರವೂ ಸುಲಭ ಸಂಡಾಸುಗಳನ್ನು ಹಳ್ಳಿಯ ಜನರ ಉಪಯೋಗಕ್ಕಾಗಿ ಕಟ್ಟುತ್ತಿದ್ದಾರೆ. ಇದರಿಂದ ಒಂದು ರೀತಿಯಲ್ಲಿ ಹಳ್ಳಿಗಳೂ ಪಟ್ಟಣಗಳಾಗುತ್ತಿವೆ.

ಮತ್ತೆ ಎಲ್ಲೋ ಸುತ್ತಾಡಿದೆ. ಹೌದು, ಇದು ಕಥೆಯಲ್ಲ. ಕಥೆ ಆಗಿದ್ದರೆ ನೇರವಾಗಿ ಕಥೆಯನ್ನೇ ಹೇಳಬಹುದು. ಇದು ವೈಯಕ್ತಿಕ ಕಥನವೂ ಅಲ್ಲ. ನಾನು ಹುಡುಗ ಆಗಿದ್ದಾಗ ನಮ್ಮ ಪರಿಸ್ಥಿತಿ ಹೇಗೆ ಇತ್ತೋ ಅದರ ಚಿತ್ರಣ. ಇದರಲ್ಲಿ ದೇವರ ಮಾತು, ಸಮಾಜದ ಮಾತು ಮುಖ್ಯ. ಆದ್ದರಿಂದ ಅಲ್ಲಲ್ಲಿ ಹೀಗೆ ಸುತ್ತಾಟ ಅನಿವಾರ್ಯ.

ನಮ್ಮ ತಂದೆ ತುಂಬಾ ಸಹಿಷ್ಣುಗಳು. ಎಂದೂ ಅಧಿಕಾರವಾಣಿಯಿಂದ ಮಾತಾಡಿದ್ದೇ ಇಲ್ಲ–ಮಿತ ಭಾಷಿಗಳು ಹಿತಭಾಷಿಗಳು. ಅವರ ಶಾಂತಮೂರ್ತಿಯನ್ನು ನೆನೆದರೆ, ಅವರ ನಿರೋಗ ದೃಢಕಾಯವನ್ನು ನೆನೆದರೆ, ನಾವು ಏಕೆ ಹೀಗೆ ಇದ್ದೇವೆ ಎನಿಸುತ್ತದೆ. ನಮ್ಮ ತಾಯಿಯೂ ಅಷ್ಟೇ, ತುಂಬಾ ಆರೋಗ್ಯ. ಬಹಳ ಶ್ರಮ ಸಹಿಷ್ಣುಜೀವ. ಧಾರಾಳವಾದ ಕೈ. ಆಕೆಯ ಮಾತನ್ನು ಸಂದರ್ಭ ಬಂದಾಗ ಹೇಳುತ್ತೇನೆ.

ಇವರು ಯಾರೂ ವಿಶೇಷ ವ್ಯಕ್ತಿಗಳಲ್ಲ. ಆಗಿನ ಕಾಲದ ಜನರ ಪ್ರತೀಕ ಎಂದು ಇವರ ವಿಷಯವನ್ನು ಪ್ರಸ್ತಾಪಿಸುತ್ತಿದೇನೆ.

* * * *

ಸಿದ್ದವನಹಳ್ಳಿ ರಂಗಾಚಾರ್ಯರು ಅಂಥ ಪ್ರಕಾಂಡ ಪಂಡಿತರಲ್ಲ. ಚಿಕ್ಕಂದಿನಲ್ಲೇ ತಂದೆ ತೀರಿಕೊಂಡಿದ್ದರಿಂದ ಚಿಕ್ಕಮ್ಮನ ಮನೆಯಲ್ಲಿ ವಿದ್ಯೆ ಕಲಿತರು. ಅಲ್ಲಿ ನಾಲ್ಕಾರು ವರ್ಷ ಇದ್ದು ಸಂಸ್ಕೃತ ಕಲಿತರು. ಕಲಿತ ಸಂಸ್ಕೃತವೂ ಬಹಳ ಅಲ್ಲ. ಆದರೂ ಸರಳವಾಗಿ ಸಂಸ್ಕೃತದಲ್ಲಿ ಪದ್ಯ ಹೆಣೆಯುತ್ತಿದ್ದರು. ಕೆಲವು ಸಲ ಕೇಳಿದೇನೆ. ಮುಂದೆ ಆ ಪದ್ಯಗಳು ಬೇಕಾಗಬಹುದು ಎಂದು ತಿಳಿದಿದ್ದರೆ ಅವನ್ನು ಎತ್ತಿ ಜೋಪಾನವಾಗಿ ಇಟ್ಟುಕೊಳ್ಳುತ್ತಿದ್ದೆ. ಆಗ ಅದರ ಬೆಲೆ ತಿಳಿಯಲಿಲ್ಲ. ಕೈಬಿಟ್ಟೆ. ಈಗ ಅವರೂ ಇಲ್ಲ. ಕೇಳಲೂ ಸಾಧ್ಯವಿಲ್ಲ.

ಪಂಡಿತರು ಅಲ್ಲದೆ ಇದ್ದರೂ ಅನುಭವಸ್ಥರು ತಂದೆ. ತುಂಬಾ ವಿವೇಕಿಗಳು. ಪರನಾರೀ ಸೇವಕರು. ಅವರ ಸಂಯಮ, ಅವರ ನಿಗ್ರಹ ಎಷ್ಟು ಇತ್ತು ಎಂದರೆ ಎರಡು ಹೊತ್ತು ಊಟ, ಮಧ್ಯಾಹ್ನ ಕುರುಕಲು ಏನಾದರೂ ತಿಂಡಿ–ಇಷ್ಟು ವಿನಾ ಬೇರೆ ಏನನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ಎಂಥ ಚಳಿಯಲ್ಲೂ ಅವರ ಶಾಲು, ಅದರೊಳಗೆ ಜೋಡಿಸಿದ್ದ ತಾತಯ್ಯಂಗಾರಿ ಪೇಟೆಯ ಕೆಂಪಂಚಿನ ಪಂಚೆ ಬಿಟ್ಟು ಬೇರೆ ಏನನ್ನೂ ಹೊದೆಯುತ್ತಿರಲಿಲ್ಲ.

ಎನ್ನುತ್ತಾರಲ್ಲ ಅವರು. ಇವರದು ಒಂದು ಮಹಾಸಭೆ. ಅರುಂಧತೀಯ ಮಹಾ ಸಭೆ. ಅದಕ್ಕೆ ನಾನು ಅಧ್ಯಕ್ಷ. ನಮ್ಮ ಕಾರ್ಯದರ್ಶಿ ಬಾಬಯ್ಯ ಎಂತ. ಬಹಳ ಉತ್ಸಾಹಶಾಲಿ ಸಾಹಸಿ. ಒಂದು ಸಕಲ ಸದಸ್ಯರ ಸಭೆ ನಡೆದಾಗ ಮುರಳಿ ಪದ್ಧತಿ ಯನ್ನು ನಿಲ್ಲಿಸಬೇಕು ಎಂಬ ಗೊತ್ತುವಳಿ ತಂದೆ. ಸರ್ವಾನುಮತದಿಂದ ಅದು ತೀರ್ಮಾನ ಆಯಿತು. 1935 ರಲ್ಲೇ ಸುಧಾರಣೆಗೆ ಆಸಕ್ತಿ ಬೆಳೆದಿತ್ತು. ನಮ್ಮ ತೀರ್ಮಾನಗಳ ಪ್ರತಿ ಎಲ್ಲವೂ ಸಭೆಯಲ್ಲೇ ಇದ್ದ ಗುಪ್ತ ಪೋಲೀಸರಿಗೆ-ಖುಫಿಯಾ ಎನ್ನುತ್ತಿದ್ದರು-ಒಪ್ಪಿಸಬೇಕು. ಇಲ್ಲದಿದ್ದರೆ ಸಭೆ ನಡೆಸುವ ಹಾಗೆ ಇಲ್ಲ.

ಹೈದರಾಬಾದು ನಗರದಲ್ಲಿ ಆಗ ಕೊತ್ವಾಲರೇ ಹಿರಿಯ ಪೋಲೀಸ್ ಅಧಿಕಾರಿ. ಈಗ ಅದೇ ಹುದ್ದೆಯನ್ನೇ ಸಿಟಿ ಕಮೀಷನರ್ ಆಫ್ ಪೋಲೀಸ್ ಎನ್ನುತ್ತಾರೆ. ಸ್ವರಾಜ್ಯ ಬಂದ ಮೇಲೆ ಭಾಷಾವಾರು ಪ್ರಾಂತಗಳು ಆದಮೇಲೆ ಆಯಾ ಭಾಷೆಗಳು ಆಡಳಿತದಲ್ಲಿ ಬರಲಿಲ್ಲ. ಏನು ಕಾರಣವೋ ಇಂಗ್ಲೀಷೇ ಪ್ರಧಾನವಾಯಿತು. ಅದರಲ್ಲೂ ಹೈದರಾಬಾದಿನಲ್ಲಿ ಈ ಬದಲಾವಣೆ ವಿಶೇಷ.

ಆಗ ನಿಜಾಮರ ರಾಜ್ಯ, ಆಗಿನ ಕೊತ್ವಾಲರು ರಾಜಾ ವೆಂಕಟರಾಮರೆಡ್ಡಿ. ಅವರಿಗೂ ನಿಜಾಮರಿಗೂ ತುಂಬಾ ಸ್ನೇಹ ಹಾಗೂ ಕೊತ್ವಾಲರು ತಮ್ಮ ಮಿತಿಯನ್ನು ದಾಟುತ್ತಿರಲಿಲ್ಲ. ನಿಜಾಮರು ಟೆಲಿಫೋನ್ ಮಾಡಿದರೆ 'ಸ್ವಲ್ಪ ತಡೆಯಿರಿ' ಎಂದು ಹೇಳಿ ಪಗಡಿಯನ್ನು, ತಲೆಯುಡುಗೆಯನ್ನೂ ಇಟ್ಟುಕೊಂಡು ಬಂದು 'ಜೀ ಹುಜೂರ್' ಎನ್ನುತ್ತಿದ್ದರು.

ಒಂದು ದಿನ ಕೊತ್ವಾಲರು ನನ್ನನ್ನು ಕರೆಯಿಸಿದರು. ಒಂದು ದೊಡ್ಡ ಅರ್ಜಿ ಯನ್ನು ನನ್ನ ಕೈಯಲ್ಲಿ ಇಟ್ಟರು. ಅದು ಆ ಊರಿನ ಟಾಂಗಾದವರು ಸೇರಿ ಸಾಮೂಹಿಕವಾಗಿ ಬರೆದುಕೊಂಡ ಅರ್ಜಿ.

"ಅರುಂಧತೀಯರು ಇನ್ನು ಮುಂದೆ ಮುರಳಿ ಬಿಡುವುದಿಲ್ಲವಂತೆ, ನಮ್ಮ ಗತಿ ಯೇನು ? ನಾವು ಅವರನ್ನು ನಂಬಿ ಬದುಕುತ್ತಿದೇವೆ" ಎಂದು ಅವರ ವಾದ.

ಹರಿಜನರ 'ಮುರಳಿ'ಗಳಿಗೂ ಮುಸಲ್ಮಾನ ಬ್ರಹ್ಮಚಾರಿಗಳಿಗೂ ಏನು ಸಂಬಂಧ ಇದ್ದೀತು ? ಆದರೆ ಈ ಅನ್ಯೋನ್ಯಾಶ್ರಯ ನಮಗೆ ತಿಳಿಯಲಿಲ್ಲ.

ಕೊತ್ವಾಲರು ಅಭಿಮಾನದಿಂದ ನನ್ನ ಬೆನ್ನ ಮೇಲೆ ಗುದ್ದಿ ಹೇಳಿದರು: "ಶರ್ಮ, ಸುಧಾರಣೆ ಬೇಕು, ಸಮಾಜದಲ್ಲಿ ಸುಧಾರಣೆ ಆಗದೆ ಇದ್ದರೆ ಸಮಾಜ ಮಲತು ನಾರುತ್ತದೆ. ಆದರೆ ಈ ಸುಧಾರಣೆ ಯಾರಿಗೂ ನೋವು ಇಲ್ಲದೆ ಆಗಬೇಕು. ಗಾಂಧಿಯ ಜಾಣತನ ಅದೇ. ಆತನ ಅಹಿಂಸಾಮಾರ್ಗ ನನಗಂತೂ ಒಪ್ಪಿಗೆ. ಅದೇ ಸುಧಾರಣೆಗೆ, ಪ್ರಗತಿಗೆ ಪರಮ ಶ್ರೇಷ್ಠ. ಈ ಕೆಲಸ ಕ್ಷಾತ್ರದಿಂದ ಆಗತಕ್ಕದಲ್ಲ, ಸತ್ವದಿಂದ ಆಗಬೇಕು. ಮುರಳಿಗಳದೇ ಒಂದು ಸಭೆ ಕರೆಯಿಸು. ನಾನೂ ಬರುತ್ತೇನೆ. ಅವರೆಲ್ಲರೂ ಒಪ್ಪಿದರೆ ನಾನೇ ಇದನ್ನು ಮಾಡಿಸುತ್ತೇನೆ."

ಮುರಳಿಗಳ ಸಭೆಗೆ ಯಾರೂ ಬರಲಿಲ್ಲ. ಕೊತ್ವಾಲರನ್ನು ಕರೆಯಿಸುವ ಪ್ರಮೇಯವೇ ಬೀಳಲಿಲ್ಲ.

ಈ ಬಸವಿ, ಈ ಮುರಳಿ ಶಬ್ದಗಳು ಏಕೆ ಹುಟ್ಟಿಕೊಂಡವೋ ನನಗೆ ತಿಳಿಯ ಲಿಲ್ಲ. ನಮ್ಮಲ್ಲಿ ದೇವರಿಗೆ ಬಿಟ್ಟ ಗೂಳಿಯನ್ನು ಬಸವ ಎನ್ನುತ್ತಾರೆ. ಹಾಗೆ ದೇವ ದಾಸಿಯರನ್ನು ಬಸವಿ ಎಂದು ಕರೆದರೇನೋ ಮೊದಲು. ಆಮೇಲೆ ಇದು ಕಸುಬು ಆಯಿತೇನೋ! ಮನುಷ್ಯನ ಕಾಮ ಪ್ರವೃತ್ತಿ ಯಾವ ಯಾವ ರೀತಿಯಲ್ಲಿ ಪ್ರಕಟ ಆಗುತ್ತವೆಯೋ! ಕೃಷ್ಣನ ಮುರಳಿಗೂ ಈ ಮುರಳಿಗಳಿಗೂ ಏನು ಸಂಬಂಧವೋ!

ಈ ವೇಶ್ಯಾ ವೃತ್ತಿಯನ್ನು ನಿರ್ಮೂಲಮಾಡಲು ಮದರಾಸಿನ ದಿವಂಗತ ಡಾ|| ಮುತ್ತುಲಕ್ಷ್ಮಿ ರೆಡ್ಡಿ ಬಹಳ ಹೊಡೆದಾಡಿ ಕಾನೂನು ಮಾಡಿಸಿದರು. ಈಗ ಎಲ್ಲಾ ಪ್ರಾಂತಗಳಲ್ಲೂ ಈ ಕಾನೂನು ಇದೆ. ಆದರೆ ಹಾದರ ಮಾತ್ರ ನಿಂತಿಲ್ಲ.

ಆಗ ಒಬ್ಬಿಬ್ಬರು ಹಿರಿಯರು ಹೇಳಿದ ನೆನಪಿದೆ, "ಇವು Social gutter ಸಮಾಜದ ಚರಂಡಿಗಳು. ಇವನ್ನು ನಿಲ್ಲಿಸಿದರೆ ಹೊಲಸು ನೀರು ನೆಲದ ಮೇಲೆ ಹರಿಯುತ್ತದೆ."

ಈಗ ಇಡೀ ಸಮಾಜವೇ Gutter ಆಗಿದೆ. ಇದರಲ್ಲಿ ಹರಿಯುವ ಹೊಲಸು ನೀರು ನಮ್ಮ ಮೂಗಿಗೆ ನಾತ ಬಡಿಯುವುದೇ ಇಲ್ಲ, ನಮ್ಮ ಮೂಗು ಕಟ್ಟಿಕೊಂಡಿದೆ.

ಹರಿಜನರು ನೆನಪಿಗೆ ಬಂದರೆ ಹೆಂಡವೂ ನೆನಪಿಗೆ ಬರುತ್ತದೆ. ಆಗ ಊರಿ ನವರು ಯಾರೂ ಕುಡಿಯುತ್ತಿರಲಿಲ್ಲ. ಈಗಿನ ಹಾಗೆ ಕಳ್ಳಭಟ್ಟಿಗಳೂ ಇರಲಿಲ್ಲ. ಆದ್ದರಿಂದ ಹೆಂಡದ ಅಂಗಡಿ ಊರ ಹೊರಗೆಯೇ ಇರುತ್ತಿತ್ತು. ಅಲ್ಲೇ ಕುಡಿದು ತೂರಾಡುತ್ತ ಅವಾಚ್ಯನಾಗಿ ಮಾತನಾಡುತ್ತ, ತಮ್ಮವರೋ ಬೇರೆಯವರೋ ಹೆಂಗಸ ರನ್ನು ಮನಸ್ಸಿಗೆ ಬಂದ ಹಾಗೆ ಬೈಯುತ್ತ ಹೋಗಲು ಹರಿಜನರಿಗೆ ಅನುಕೂಲ, ಊರ ಹೊರಗಾದರೆ.

ನಮ್ಮ ಹೊಲಗಳ ಕಡೆಗೆ ಹೋಗಬೇಕಾದರೆ ಈ ಅಂಗಡಿಯ ಪಕ್ಕದಲ್ಲಿ ಹರಿಜನ ಕೇರಿಯ ಪಕ್ಕದಲ್ಲಿ ಹಾದು ಹೋಗಬೇಕಾಗಿತ್ತು. ಹಿಂದಿರುಗಿ ಬರುವಾಗ ಕತ್ತಲೆ. ಆದರೆ ಈ ದೃಶ್ಯ, ಕುಡಿದ ಗಂಡಸರು ಹೆಂಗಸರನ್ನು ಹೊಡೆಯುವ ದೃಶ್ಯ ಕಣ್ಣಿಗೆ ಬೀಳುತ್ತಿತ್ತು.

* * * *

ನಾನು ಸ್ವಲ್ಪ ದೊಡ್ಡವನು ಆಗುವ ವೇಳೆಗೆ ನಮ್ಮ ಊರಿನ ಹೊರಗೆ ಒಂದು ಹರಿಜನ ಶಾಲೆಯಿತ್ತು. ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ದಿವಾನಗಿರಿಯ ಪ್ರಸಾದ ಅದು. ಅದಕ್ಕೆ ಹರಿಜನರಲ್ಲೇ ಒಬ್ಬ ವಿದ್ಯಾವಂತ ಮೇಷ್ಟ್ರು. ಎಷ್ಟೋಸಲ ನಾನೂ ಆ ಶಾಲೆಗೆ ಹೋಗಿಬಂದಿದ್ದೇನೆ. ಆಗ ಇನ್ನೂ ಗಾಂಧೀಜಿಯ ಅಸ್ಪೃಶ್ಯತಾ ನಿವಾರಣೆಯ ಚಳುವಳಿ ಬಂದಿರಲಿಲ್ಲ.

ಯಾರಿಗೆ ಕ್ರಾಪು ಬೇಕೋ ಅವರು ದುಡ್ಡುಕೊಟ್ಟು ಮಾಡಿಸಿಕೊಳ್ಳಬೇಕು. ಅವರ ಹೊಲದಲ್ಲಿ ನಾಯಿಂದನಿಗೆ ಆಯ ಇಲ್ಲ. ಇದರಿಂದ ಅವನಿಗೆ ಲಾಭ ಆಯಿತೋ ಇವನಿಗೆ ಲಾಭ ಆಯಿತೋ ಅಂತೂ ಇಡೀ ಗ್ರಾಮ ಒಂದು ಸಮಾಜ ಇದು. ಊರೊಟ್ಟಿನ ಕೆಲಸ ಎಂಬುದು ಹೋಯಿತು. ಅವನದು ಅವನವನಿಗಾಗಿ ಬದುಕ ಬಹುದು ಎಂಬ ವ್ಯಕ್ತಿಸ್ವಾತಂತ್ರ್ಯದ ದೃಷ್ಟಿ ಜೀವನಕ್ಕೆ ಮೊದಲು ಆಯಿತು. ಒಂದರ ಹಿಂದೆ ಒಂದು ಕಸುಬುಗಳು ಮಾಯವಾಗುತ್ತ ಬಂದುವು. ಗ್ರಾಮ ಸ್ವರಾಜ್ಯದ ವಿಚಾರವೇ ಮಾಯವಾಯಿತು.

ಹೊಲಗಳಲ್ಲಿ ಕೂಲಿ ಮಾಡುವಾಗ ಮನೆಗಳಲ್ಲಿ ಕೂಲಿ ಮಾಡುವ ಬಸುರಿಯರಿಗೆ ದುಪ್ಪಟ್ಟು ಕೂಲಿ ಹೆರಿಗೆ ಆಗುವ ಮೊದಲು, ಆಮೇಲೆ ಅವರು ಕೂಲಿ ಮಾಡುವ ಹಾಗಿಲ್ಲವಲ್ಲ. ಅದಕ್ಕಾಗಿ ಅವರಿಗೆ ಈ ದುಪ್ಪಟ್ಟು. ಈಗ ಹೆರಿಗೆಯ ರಜಾ ಕೊಟ್ಟು, ಸಂಬಳ ಕೊಡುವುದಿಲ್ಲವೇ ಸರಕಾರ. ಆಗ ಹಳ್ಳಿಗಳಲ್ಲಿ ಜನರದೇ ಸರಕಾರ. ಇದೊಂದು ಬಗೆಯ Maternity Tax ಹೆರಿಗೆಯ ತೆರಿಗೆ, ಈಗ ಆ ಪದ್ಧತಿ ಅಳಿದುಹೋಗಿದೆ ಎಂದು ಕೇಳಿದೇನೆ. ಸಮಾಜವಾದದ ಮಾದರಿಯಲ್ಲಿ ಸಮಾಜ ವನ್ನು ಕಟ್ಟಬೇಕು ಎನ್ನುವವರಿಗೆ ಇಲ್ಲಿ ಇದೆ, ಆಚರಣ ಯೋಗ್ಯ ಸೂತ್ರ!

ಗಂಡು ಹೆಣ್ಣು ಸಮಾನ ಎಂದು ಈಗ ಹೇಳುತ್ತೇವೆ. ನಮಗೆ ಅದೊಂದು ಜಂಬ. ನಾನೇ ಹೊಲದಲ್ಲಿ ಜೋಳದ ತೆನೆ ಕೊಯ್ಯುವಾಗ, ಹತ್ತಿ ಬಿಡಿಸುವಾಗ ನೋಡಿದೇನೆ, ಗಂಡಸರು ಮೊದಲು, ತಮ್ಮ ಸಾಲನ್ನು ಮುಗಿಸಿದರೆ ಪಕ್ಕದ ಸಾಲಿ ನ ರ ನೆರವಿಗೆ ಹೋಗುತ್ತಿದ್ದರು. ಇದಿರು ಬಂದು ಆ ಸಾಲನ್ನು ಮುಗಿಸಿದ ಮೇಲೆ ಮುಂದಿನ ಸಾಲು. ಅದಕ್ಯೇ ಯಾವ ಸಾಲನ್ನೂ ಬಿಡುತ್ತಿರಲಿಲ್ಲ. ಇಷ್ಟಾ ದರೂ ಇವರಿಗೆ ಹೆಚ್ಚು ಕೂಲಿ, ಅವರಿಗೆ ಕಡಿಮೆ ಇರುತ್ತಿರಲಿಲ್ಲ. ಸಾಧಾರಣ ವಾಗಿ ಹೆಣ್ಣಾಳಿಗೆ ಕೊಡುತ್ತಿದ್ದ ಕೂಲಿಯನ್ನೇ ಕೊಡುತ್ತಿದ್ದರು. ಈಗಿನ ಹಾಗೆ ಗಂಟೆಗಟ್ಟಲೆ ಇರುತ್ತಿರಲಿಲ್ಲ ಕೆಲಸ. ಅಥವಾ ಕಂಟ್ರಾಕ್ಟ್ ಪದ್ಧತಿಯೂ ಇರಲಿಲ್ಲ.

ಎಲ್ಲರಲ್ಲೂ ಏನೋ ಒಂದು ಬಗೆಯ ಸಂತೋಷ, ತೃಪ್ತಿ ಇರುತ್ತಿತ್ತು.

ಹೊಲಗಳಲ್ಲಿ ಹತ್ತಿ ಬಿಡಿಸುತ್ತಿದ್ದವರಲ್ಲಿ ಆಗ ದುಡ್ಡಿನ ಕೂಲಿ ಇರಲಿಲ್ಲ. ಬಿಡಿಸಿದ ಹತ್ತಿಯನ್ನೇ ಚಿಕ್ಕ ಚಿಕ್ಕ ಕುಪ್ಪೆಗಳಾಗಿ ಇಡುತ್ತಿದ್ದರು; ಆ ಕುಪ್ಪೆಗಳಲ್ಲಿ ನಾಲ್ಕರಲ್ಲಿ ಒಂದು ಕೂಲಿ, ಸಂಜೆಗತ್ತಲು ಆಗುವ ವೇಳೆಗೆ ತಮ್ಮ ಕೂಲಿಯ ಹತ್ತಿಯನ್ನು ಹೊತ್ತುಕೊಂಡು ಹೆಂಗಸರು ಎಲ್ಲರೂ ಸಾಲಾಗಿ ಬರುತ್ತಿದ್ದರೆ ಅಮೃತ ಕುಂಭವನ್ನು ಹೊತ್ತು ಬರುವ ಮೆರವಣಿಗೆಯ ಹಾಗೆ ಇರುತ್ತಿತ್ತು.

ನಮ್ಮ ಮನೆಯ ಜಗುಲಿಯ ಮೇಲೆ ಒಂದು ಕಲ್ಲಿಗೆ ಕಣ್ಣು, ಮೂಗು ಬರೆದು ವಿಗ್ರಹ ಎಂದು ಕರೆದು ಕೂಡುತ್ತಿದ್ದೆವು ನಾವು ಮಕ್ಕಳು. ನಮ್ಮ ವಿಗ್ರಹ ಕಾಟಮ್ಮ ದೇವರು. ಅದಕ್ಕೆ ಅವರು ಎಲ್ಲರೂ ಒಂದು ಹಿಡಿ ಹತ್ತಿಯನ್ನು ಹಾಕಿಯೇ ಮುಂದಕೆ ಹೋಗಬೇಕು. ಆ ಹತ್ತಿಯನ್ನೆಲ್ಲಾ ನಾವು ಕೂಡಿಹಾಕಿ ಮೂರು ನಾಲ್ಕು ದಿನಕ್ಕೆ

ಒಮ್ಮೆ ಸೆಟ್ಟರ ಅಂಗಡಿಗೆ ಹಾಕಿ ಮಂಡಾಳುಂಡೆ–ಕಡಲೆಪುರಿಗೆ ನಮ್ಮ ಕಡೆ ಮಂಡಾಳು ಎನ್ನುತ್ತಾರೆ–ತರುತ್ತಿದ್ದೆವು. ಎಲ್ಲರೂ ಸೇರಿ ತಿನ್ನುತ್ತಿದ್ದೆವು.

ಹತ್ತಿ ಬೆಳೆದರೆ ಹೀಗೆ, ಬಿಳೀ ಜೋಳ ಬೆಳೆದರೆ ಬೆಳಸಿನ ತೆನೆಯ ಸಮಾರಾಧನೆ. ಜೋಳದ ಎಳೆತೆನೆ ಬಲು ರುಚಿ. ಆಗತಾನೇ ಕಾಳಿನಲ್ಲಿ ಹಾಲು ತುಂಬಿರುತ್ತದೆ. ಅರಗುವುದೂ ಸುಲಭ. ಆ ತೆನೆಯನ್ನು ಬಿಡಿಸಿ ತಂದು ಕಾಳನ್ನು ಹೊಸಕಿ ಅದಕ್ಕೆ ಹಾಕಬೇಕಾದ ದಿನಸನ್ನೆಲ್ಲಾ ಹಾಕಿ ತಿಂದರೆ ಎಷ್ಟು ಚೆನ್ನ! ರಾಗಿಯ ತೆನೆ ಗೋಧಿಯ ತೆನೆಗಳನ್ನು ಸುಟ್ಟು ಬೆಳೆಸು ಮಾಡಿ ತಿನ್ನುತ್ತಿದ್ದೆವು. ಎಷ್ಟೋ ಸಲ ಮನೆಗೇ ತರಿಸಿ ಕೊಂಡು ರಾತ್ರಿ ತಿಂದಿದೇನೆ.

ದೊಡ್ಡವನಾಗಿ ಪಟ್ಟಣ ಸೇರಿದ ಮೇಲೆ ಈ ಆನಂದ ಎಲ್ಲವೂ ಹೋಯಿತು. ಹೈದರಾಬಾದಿನಲ್ಲಿ ಇದ್ದಾಗ ಹರೆಯದವನು ಆಗಿದ್ದಾಗ, ಒಂದು ಸಲ ಕಲ್ಬುರ್ಗಿಗೆ ಹೋಗಿದ್ದೆವು. ಬೆಳಸು ತಿನ್ನಲೆಂದೇ ಅಡ್ವೋಕೇಟ್ ಗೋಪಾಲರಾಯರ ತೋಟಕ್ಕೆ ಅವರೂ ನಾನೂ ಜನಾರ್ಧನರಾಯರೂ ಹೋದೆವು. ಬೇಸಾಯ ಚೆನ್ನಾಗಿ ಮಾಡಿ ಸುತ್ತಿದ್ದುದರಿಂದಲೋ ಏನೋ ಅವರಿಗೆ ಒಕ್ಕಲಿಗ ಗೋಪಾಲರಾಯರು ಎಂದು ಹೆಸರು ಬಿದ್ದಿತ್ತು. ಆಗಿನ ಹಳ್ಳಿಗಾಡಿನ ಅನುಭವದ ಮಾತನ್ನು ಹೇಳುತ್ತಾ ಹೋದರೆ ಅದೇ ಒಂದು ಗ್ರಾಮಾಯಣ ಗ್ರಾಮಭಾರತ ಆಗುವುದು.

* * * *

ಒಂದು ಮಾತು ನೆನಪಿದೆ. ನಮ್ಮ ಹಳ್ಳಿಗಳಲ್ಲಿ ಬಸವಿ ಬಿಡುವ ಪದ್ಧತಿ ಇತ್ತಲ್ಲ. ಅದು ಬೆಳೆದು ಬೆಳೆದು ಇವರ ಸಂತಾನವೇ ಒಂದು ಗುಂಪು ಆಯಿತು. ಇವರಿಗೆ ತಾಯಿ ಗೊತ್ತು. ತಂದೆ ಯಾರು ಎಂಬುದು ಖಚಿತವಿಲ್ಲ. ಉಪನಿಷತ್ತಿನ ಹುಡುಗ ಸತ್ಯಕಾಮ ಜಾಬಾಲಿ ಇದ್ದ ಹಾಗೆ. ಇವರ ಗುಂಪು ಬೆಳೆದು ಅವರವ ರೊಳಗೇ ಮದುವೆಗಳು ಆದವು. ಎಲ್ಲರಂತೆ ಇವರಿಗೂ ಒಂದು ಬೆಡಗು, ಒಂದು ಜಾತಿ ಬೇಕಲ್ಲ. ನಮ್ಮ ಸೀಮೆಯಲ್ಲಿನ ಜನ ಗುಂಪು ಸೇರಿ ಏನು ಮಾಡಬೇಕು ಎಂದು ಆಲೋಚಿಸಿದರು. ಎಲ್ಲರೂ ಒಂದು ದಿನ ನಮ್ಮ ಮನೆಗೆ ಬಂದರು ತಂದೆಯವರ ಬಳಿಗೆ.

ಬಹಳ ಚಿಂತನ ಮಂಥನ ಮಾಡಿ ಅವರು ಇವರದೇ ಒಂದು ಜಾತಿಯಾಗಿ ಮಾಡಿ ಶ್ರೀಮುಖ ಕೊಟ್ಟರು. ವಿಷ್ಣುಭಕ್ತ ಬಣಜಿಗರು ಎಂದದ್ದು ನೆನಪು ಇದೆ.

ಬಸವಿ ಎಂಬ ಮಾತು ಬಂದಾಗ ಹೈದರಾಬಾದಿನಲ್ಲಿ ನನಗೆ ಆದ ಅನುಭವ ಒಂದು ನೆನಪಿಗೆ ಬರುತ್ತದೆ. ಇಲ್ಲಿ ಬಸವಿ ಬಿಡುವುದು ಹೇಗೋ ಅಲ್ಲಿ ಅರುಂಧ ತಿಯರಲ್ಲಿ ಮುರಳಿ ಬಿಡುವ ಪದ್ಧತಿ ಒಂದು ಇತ್ತು. ಅರುಂಧತೀಯರು ಎಂದರೆ ಅರುಂಧತಿಯ ಸಂತಾನ. ಇವರು ಹರಿಜನರಲ್ಲಿ ಎಡಗೈ. ನಮ್ಮಲ್ಲಿ ಮಾದಿಗರು

ಅವರು ಸಾರ್ವಜನಿಕ ಸೇವೆಯಲ್ಲೂ ತೊಡಗಿದ್ದರು. ವಿಶ್ವೇಶ್ವರಯ್ಯನವರ ದಿವಾನಗಿರಿಯ ಕಾಲ. ಎಲ್ಲೆಲ್ಲೂ ಮಂಡಳಿಗಳು, ಬೆಂಚು ಕೋರ್ಟುಗಳು. ತಾಲ್ಲೂಕು ಆರ್ಥಿಕ ಸಮ್ಮೇಳನಗಳು ರೂಢಿಯಲ್ಲಿ ಇದ್ದವು. ಬೆಂಚು ಕೋರ್ಟಿನಲ್ಲಿ ಮ್ಯಾಜಿಸ್ಟ್ರೇಟರು ಆದಾಗಲೂ ತಾಲ್ಲೂಕು ಮಂಡಳಿಯ ಉಪಾಧ್ಯಕ್ಷರು ಆದಾಗಲೂ, ತಾಲ್ಲೂಕು ಆರ್ಥಿಕ ಸಮ್ಮೇಳನ ನಡೆಸಿದಾಗಲೂ ಅವರ ಉಡುಪು ಅಷ್ಟೇ ಸಾದಾ. ಕಚ್ಚೆ ಹಾಕಿ ಒಂದು ಪಂಚೆ ಉಟ್ಟು, ಮೇಲೆ ಶಾಲು ಹೊದ್ದುಕೊಂಡು ಬರುತ್ತಿದ್ದರು. 1916 ರಲ್ಲೋ 1917 ರಲ್ಲೋ ನಮ್ಮ ಊರಿನಲ್ಲಿ ಒಂದು ಆರ್ಥಿಕ ಸಮ್ಮೇಳನ ಆಯಿತು. ಆಗ ಅವರಿಗೆ ಒಂದು ಪದಕವನ್ನು ಕೊಟ್ಟರು. ಸಾರ್ವಜನಿಕ ಸೇವಾ ಪ್ರಶಸ್ತಿ ಎಂದು. ಆಗಲೂ ಅವರ ಉಡುಪು ಯಥಾಪ್ರಕಾರವೇ.

ಆ ಪದಕ ಎಲ್ಲಿ ಹೋಯಿತೋ ಈಗ. ಕೆಲವು ವರ್ಷ ನನ್ನ ಬಳಿಯಲ್ಲಿ ಇತ್ತು. ಒಂದು ದಿನವೂ ನಮ್ಮ ತಂದೆ ಅದನ್ನು ಆಮೇಲೆ ನೋಡಲಿಲ್ಲ. ಅವತ್ತೂ ಅದನ್ನು ನೆಟ್ಟಗೆ ಕಣ್ಣೆತ್ತಿ ನೋಡಲಿಲ್ಲ.

ತೀರ್ಪು ಹೇಳುವುದರಲ್ಲಿ, ಪಂಚಾಯಿತಿ ಮಾಡುವುದರಲ್ಲಿ ಜಾಣರು. ಆಗ ಜನವೇ ಹಾಗೆ. ಸತ್ಯ ಪ್ರಿಯರು, ಧರ್ಮ ಪ್ರಿಯರು. ಪಕ್ಷಪಾತ ಇಲ್ಲದವರು. ಒಂದು ಸಲ ನಮ್ಮ ಊರಿನಲ್ಲಿ ಒಂದು ದೊಡ್ಡ ಜಗಳ ಬಿತ್ತು. ನಮ್ಮ ಊರು ಪ್ರಧಾನವಾಗಿ, ರೆಡ್ಡಿ ಜನರ ವಸತಿ. ಲಿಂಗಾಯಿತರು ಕಡಿಮೆ. ಆದರೂ ಯಾವಾಗಲೂ ಅವರಿಗೂ ಇವರಿಗೂ ಜಗಳ ಇದ್ದದ್ದೇ. ಕೋರ್ಟು ಕಚೇರಿಗಳವರೆಗೂ ಮುಟ್ಟಿದವು ಜಗಳಗಳು.

ಒಂದು ಸಹ ಊರಿನ ಹನುಮಂತರಾಯನ ಗುಡಿಗೆ ಸಂಬಂಧಿಸಿದ ಜಗಳ. ನಮ್ಮ ತಂದೆ ದೇವಸ್ಥಾನಕ್ಕೆ ಧರ್ಮದರ್ಶಿಗಳು. ಆದ್ದರಿಂದ ಈ ಜಗಳ ಇಲ್ಲಿಗೆ ಬಂತು. ಜಗಳದ ಕಾರಣ ಅತಿ ಕ್ಷುದ್ರ. ಆದರೆ ಅದರ ನಿಮಿತ್ತ ಕಚ್ಚೆ ಕಟ್ಟಿಕೊಂಡು ನಿಂತಿದ್ದ ಜನ ಪ್ರಬಲರು.

ನಮ್ಮ ಗುಡಿಗೆ ಒಬ್ಬ ದೇವದಾಸಿ. ವಾರ್ಷಿಕ ಉತ್ಸವದಲ್ಲಿ ಓಕಳಿ ಆಡುವ ಸಂಪ್ರದಾಯ ಇದೆ. ನಮ್ಮೂರಲ್ಲಿ ಆ ಹಬ್ಬ ಆಡುವುದು ಅವಳ ಕೆಲಸ. ಹಬ್ಬ ಹರಿ ದಿನಗಳಲ್ಲಿ ಗುಡಿಯನ್ನು ಚೊಕ್ಕಟಮಾಡಿ ಸಿಂಗರಿಸುವುದು ಅವಳ ಕರ್ತವ್ಯ. ಅವಳನ್ನು ನಮ್ಮೂರಿನ ಪಂಚಾಯಿತಿಯ ಛೇರ್ಮನ್ ಸಂಗ್ರಹಿಸಿಕೊಂಡಿದ್ದ. ಆತ ಹೂಗಾರವನು. ಲಿಂಗಾಯಿತ. ರೆಡ್ಡಿಗಳಲ್ಲಿ ಒಬ್ಬ-ನನ್ನನ್ನು ಸೇರಲಿ ಅವಳು ಎಂದ. ಅವಳು ಒಲ್ಲೆ ಎಂದಳು.

ಅದರ ಪರಿಣಾಮ ಅವಳಿಗೆ ಕಣಗಳಲ್ಲಿ ಕೊಡುವ ಆಯವನ್ನು ಕೊಡಬಾರದು ಎಂಬ ಕಟ್ಟು. ಅವಳ ಹೊಟ್ಟೆಯಮೇಲೆ ಹೊಡೆದು ಮಾತು ಕೇಳುವಂತೆ ಮಾಡಬೇಕು ಎಂಬ ಜಿದ್ದು. ಇದು ಪಂಚಾಯಿತಿಗೆ ಬಿತ್ತು.

ಮೂರು ರಾತ್ರಿ ನಡೆಯಿತು ಪಂಚಾಯಿತಿ. ನಮ್ಮ ಮನೆಯಲ್ಲೇ ನಡೆಯಿತು.

ಆದ್ದರಿಂದ ನನಗೆ ನಿದ್ದೆ ಇಲ್ಲ. ಎರಡೂ ಕಕ್ಷಿಗಳ ವಾದ-ವಿವಾದ, ಮೀಸೆ ಹುರಿ ಮಾಡುವಿಕೆ ಸ್ವಾರಸ್ಯವಾಗಿತ್ತು ಆಗಿತ್ತು. ಕಡೆಯ ದಿನ ತೀರ್ಪು.

"ದೇವದಾಸಿ ಎಂದು ಕಣದಲ್ಲಿ ಆಯ! ಕೊಡುತ್ತೇವೆ. ಕಣದಲ್ಲಿ ಆಯ ನಿಲ್ಲಿಸುವುದು ದೈವದ್ರೋಹ. ಅವಳು ಸೂಳೆತನ ಮಾಡಿದರೆ ಯಾರು ಅವಳ ಒಡೆಯರೋ ಅವಳಿಗೆ ಹೊಟ್ಟೆಗೆ ಹಾಕಬೇಕು. ಅವಳು ಇಷ್ಟ ಬಂದವರನ್ನು ಆರಿಸಿ ಕೊಳ್ಳಬಹುದು ತನ್ನ ಒಡನಾಟಕ್ಕೆ. ಆದರೆ ಬೇರೆ ಗುರಿಯನ್ನು ಮಾತ್ರ ಆರಿಸಿ ಕೊಳ್ಳುವಂತಿಲ್ಲ. ಅವಳು ಸೂಳೆತನ ಮಾಡಬಾರದು ಎಂಬುದು ನಮ್ಮ ಅಭಿಪ್ರಾಯ. ಆದರೆ ನಾವು ಕೊಡುವ ಆಯ ದ್ವಿಗುಣ ಆಗಬೇಕು. ಅದರಿಂದ ಅವಳ ವಿವಾಹ ಆದೀತು."

ಹಳ್ಳಿಗಳಲ್ಲಿ ಮೊದಲು ಈ ಆಯಗಾರರ ಪದ್ಧತಿ ಇತ್ತು. ಊರು ಸ್ವಸಂಪೂರ್ಣ ವಾಗಿ ಇತ್ತು. ರಾಜಕೀಯದಲ್ಲಿ ಆಗ ಫಾರಸೀ ಉರ್ದು ತಾನೇ ಮುಖ್ಯ. ನಮ್ಮ ದೇಶ ಮೊಗಲರ ಆಳ್ವಿಕೆಯಿಂದ ಮಾಡಿಕೊಂಡು, ಪರದಾಸ್ಯದಲ್ಲಿ ಮುಳುಗಿದುದಕ್ಕೆ ಇದಕ್ಕಿಂತ ಹೆಚ್ಚಿನ ಕುರುಹು ಬೇಕಿಲ್ಲ. ರಾಜಕೀಯದಲ್ಲಿ ಇದನ್ನು ಬಲೋತಾ ಪದ್ಧತಿ ಎನ್ನುತ್ತಿದ್ದರು. ಬಾರಾ ಬಲೋತಾ ಹನ್ನೆರಡು ಮಂದಿ ಆಯಗಾರರು. ಎಂದರೆ ಹನ್ನೆರಡು ಮಂದಿ ಕಸುಬುದಾರರು ಊರೂರಿನಲ್ಲಿಯೂ ನೆಲಸಿದ್ದು ಗ್ರಾಮ ಜೀವನವನ್ನು ಸಂಪನ್ನಗೊಳಿಸುತ್ತಿದ್ದರು.

ಬಡಗಿ, ಕಮ್ಮಾರ, ಪೂಜಾರಿ, ಕ್ಷೌರಿಕ, ತಳವಾರ, ತೋಟಿ ಎಲ್ಲರೂ ಆಯ ಗಾರರು. ಊರಿನ ಜೋಯಿಸರು, ಗುಡಿಯ ದೇವದಾಸಿ, ಕೆರೆಯಿದ್ದರೆ ನೀರುಗಂಟಿ ಹೀಗೆ ಇರುತ್ತಿತ್ತು ಅವರ ಗುಂಪು. ಈ ಎಲ್ಲ ಕಸುಬುದಾರರೂ ಯಾರ ಆಳುಗಳೂ ಅಲ್ಲ, ಊರೊಟ್ಟಿನ ಕೆಲಸ ಮಾಡಬೇಕು. ಒಂದು ವರ್ಷ ಒಬ್ಬರ ಕೆಲಸ ಹೆಚ್ಚು ಬೀಳಬಹುದು. ಈ ವರ್ಷ ಒಬ್ಬರ ಕೆಲಸ ಬೀಳಲಿಕ್ಕೆ ಇಲ್ಲ. ಬಿದ್ದರೂ ಬೀಳ ದಿದ್ದರೂ ಕೆಲಸ, ಅವರಿಗೆ ಆಯ ಸಲ್ಲಲೇಬೇಕು. ಕೊಡುವುದರಲ್ಲಿ ಹೆಚ್ಚು ಕಡಿಮೆ ಯಾದರೆ, ಕೆಲಸದಲ್ಲಿ ಅಸಡ್ಡೆಯಾದರೆ ಊರಿನ ಪಟೇಲನಿಗೆ ದೂರು. ಪಟೇಲ ತಾನೇ ತೀರ್ಮಾನಿಸಬಹುದು ಅಥವಾ ಹಿರಿಯರನ್ನು ಕರೆಯಿಸಿ ಅವರ ತೀರ್ಪಿಗೆ ಬಿಡಬಹುದು.

ಪ್ರತಿಯೊಂದು ಗ್ರಾಮವೂ ಒಂದು ಸ್ವಸಂಪೂರ್ಣ ಘಟಕ. ಒಂದು ಗ್ರಾಮ ಸ್ವರಾಜ್ಯ. ಒಂದು ಸಲ ನಮ್ಮ ಊರಿನ ತಲೆಹೋಕನೊಬ್ಬ ಕೆಲವು ದಿನ ಪಟ್ಟಣಕ್ಕೆ ಹೋಗಿ ಇದ್ದು ಬಂದ. ತನ್ನ ಕೂದಲನ್ನು ಕತ್ತರಿಸಿ ಕ್ರಾಪು ಮಾಡಬೇಕು ಎಂದು ಊರಿನ ನಾಯಿಂದನನ್ನು ಕೇಳಿದ. ಇದು ಸಂಪ್ರದಾಯವಲ್ಲ. ನಾನು ಹಾಗೆ ಮಾಡುವುದಿಲ್ಲ, ಅದು ಹಣ ತೆಗೆದುಕೊಂಡು ಮಾಡುವವರ ಕೆಲಸ ಎಂದ. ಆತ ನೀನೂ ದುಡ್ಡು ತೆಗೆದುಕೋ ಎಂದ ಆ ತಲೆಹೋಕ.

ಸರಿ ಅವತ್ತಿನಿಂದ ದುಡ್ಡಿನ ಜಣ ಜಣ ಪ್ರಾರಂಭವಾಯಿತು. ಊರಿನಲ್ಲಿ

ಹರಿಜನ ಅಭಿವೃದ್ಧಿಗೆ ಮೈಸೂರು ಸರ್ಕಾರ ಆ ಕಾಲದಲ್ಲಿ ಬೇಕಾದಷ್ಟು ದುಡಿಯಿತು. ಆಮೇಲೆ ಬಂದ ದಿವಾನರೂ ಅದೇ ಸಲಹೆ ಇತ್ತರು. ಮೈಸೂರಿನಲ್ಲಿ ಮೊದಮೊದಲು ಪ್ರಜಾ ಪ್ರತಿನಿಧಿ ಸಭೆ ಒಂದು ಇತ್ತಲ್ಲ. ಅದಕ್ಕೆ ನಮ್ಮ ಹಳ್ಳಿಯಿಂದ ಒಬ್ಬ ಹರಿಜನ ಸದಸ್ಯ ಆಗಿದ್ದ.

ಎಷ್ಟೋ ಜನ ಹರಿಜನರು ವಿದ್ಯಾವಂತರು ಆಗಿದಾರೆ. ಈಗ ಡಾಕ್ಟರರು, ಅಧಿಕಾರಿಗಳೂ, ಮಂತ್ರಿಗಳೂ ಆಗಿದ್ದಾರೆ. ದೊಡ್ಡ ದೊಡ್ಡ ಹುದ್ದೆಗಳಲ್ಲಿ ಇದ್ದಾರೆ. ಸಾರ್ವಜನಿಕ ಸೇವಾ ಆಯೋಗದ ಅಧ್ಯಕ್ಷರೂ ಹರಿಜನರೇ (Public Service Commission) ಇವರಲ್ಲಿ ಶ್ರೀ ಭರಣಯ್ಯನವರನ್ನು ಇಲ್ಲಿ ಹೇಳಬೇಕು. ಸಂಸ್ಕೃತವನ್ನು ಬಲ್ಲವರು. ಅಭಿಮಾನಶಾಲಿಗಳು. ಚಿತ್ರದುರ್ಗದಲ್ಲಿ ಅಧಿಕಾರಿಗಳಾಗಿದ್ದಾಗ ತಂದೆಯವರ ಪರಿಚಯ ಇತ್ತು.

ಇಷ್ಟಾದರೂ ನಮ್ಮಲ್ಲಿ ಅಸ್ಪೃಶ್ಯತೆ ಇನ್ನೂ ಹೋಗಿಲ್ಲ. ಹರಿಜನರಲ್ಲಿ ವಿದ್ಯಾವಂತರಾಗದವರೇ ಬೇರೆ ಒಂದು ವರ್ಗದವರಾಗಿದ್ದಾರೆ. ಎಲ್ಲಾ ಜಾತಿಗಳಲ್ಲೂ ಹೀಗೇ. ವಿದ್ಯಾವಂತರೇ ಒಂದು ವರ್ಗ, ಅವಿದ್ಯಾವಂತರೇ ಒಂದು ವರ್ಗ. ಬ್ರಾಹ್ಮಣರು ಉಚ್ಚವರ್ಣದವರು ಎಂದು ಹೆಸರು. ಅವರಲ್ಲಿ ಅಡಿಗೆ ಭಟ್ಟರು, ಹೆಣ ಹೊರುವವರು, ಪೂಜಾರಿಗಳು, ಪುರೋಹಿತರು ಇಲ್ಲವೇ? ಇವರು ಯಾರಿಗೂ ತಮ್ಮ ವೃತ್ತಿಯಲ್ಲಿ ಗೌರವ ಇಲ್ಲ. ಮಕ್ಕಳನ್ನು ಓದಿಸಿ ಅಧಿಕಾರಕ್ಕೆ ಕಳುಹಿಸಿದ್ದಾರೆ. ತಾವು ಮಾತ್ರ ಈ ವೃತ್ತಿಗಳನ್ನು ಬಿಟ್ಟಿಲ್ಲ.

ಜಾತಿವರ್ಣ ಎಂದು ಹಿಂದೆ ನಾನು ಹುಡುಗ ಆಗಿದ್ದಾಗ ಇತ್ತು ಬಲವಾಗಿ. ಪರಸ್ಪರ ಸೌಹಾರ್ದ ಇದ್ದರೂ, ಹೊಕ್ಕು ಬಳಕೆ, ಬೆಂಕಿ ನೀರು ಇರಲಿಲ್ಲ. ಈಗ ನಾವು ಜಾತ್ಯತೀತರು ಎಂದು ಹೆಸರು. ಅಲ್ಲೋ ಇಲ್ಲೋ ಒಬ್ಬಿಬ್ಬರು ಅಂತರ್ಜಾತೀಯ ವಿವಾಹಗಳನ್ನು ಮಾಡಿಕೊಂಡಿರಬಹುದು. ಸಾಮೂಹಿಕವಾಗಿ ಊಟ ತಿಂಡಿ ಆದಾಗ ಜಾತಿ ಭೇದವನ್ನು ಗಮನಿಸದಿರಬಹುದು. ಆದರೂ ಜಾತಿಯ ಭಾವನೆ ಬಲವಾಗಿಯೇ ಇದೆ. ಸಮಾಜ ಅದನ್ನು ಕಡಿಮೆ ಮಾಡುತ್ತಿದ್ದರೂ ಸರಕಾರ ಅದನ್ನು ಹೆಚ್ಚಿಸುತ್ತಿದೆ. ಸರಕಾರ, ಚುನಾವಣೆಗಳು, ಶಾಸನ ಸಭೆಗಳು ಇವೇ ಸಮಾಜಕ್ಕೆ ಶತ್ರು ಆಗಿವೆ ಸುಧಾರಣೆಗೆ ಅವುಗಳ ಧೋರಣೆಯೇ ಅಡ್ಡಿ ಎಂದು ಎಲ್ಲರ ಬಾಯಲ್ಲೂ ಬರುತ್ತಿದೆ.

ಸರಕಾರಕ್ಕೆ ದುಡ್ಡಿಲ್ಲ ಎಂದು ನೆಪ ಹೇಳಿ ಮತ್ತೆ ಹೆಂಡದಂಗಡಿಗಳು ಊರೂರಿನಲ್ಲೂ ಸ್ಥಾಪಿತವಾಗುವಂತೆ ಮಾಡುತ್ತಿದ್ದೇವೆ. ಸರಕಾರಕ್ಕೆ ದುಡ್ಡು ಇಲ್ಲದೇ ಹೋದರೆ, ಕಡಿಮೆ ಬಿದ್ದರೆ ಜನರಿಂದ ಆ ಹಣವನ್ನು ವಸೂಲಿ ಮಾಡಲಿಕ್ಕೆ ಇದೇ ದಾರಿ ಬೇಕೆ?

ಈ ಮದ್ಯಪಾನನಿರೋಧ ವಿಸರ್ಜನಕ್ಕೆ ಕಾರಣ ಇದಲ್ಲ. ಇದು ಮೇಲೆ

ಹೇಳುವ ಕಾರಣ. ಒಳಗಿನ ಕಾರಣ ಬೇರೆ. ಹಳ್ಳಿ ಹಳ್ಳಿಗೂ ಕಳ್ಳಭಟ್ಟಿ ಪ್ರಾರಂಭ ಆಗಿ ಇದು ಒಂದು ಗೃಹೋದ್ಯೋಗ ಆಗಿದೆ ಎಂದು ಎಲ್ಲರೂ ಆಡಿಕೊಳ್ಳುತ್ತಾರೆ. ಕೆಲವರು ಕುಡುಕರು ಕೈಗೆ ಸಿಕ್ಕಿದ್ದನ್ನು ಕುಡಿದು ಪ್ರಾಣನೀಗಿದ್ದಾರೆ. ಇದನ್ನೂ ತಪ್ಪಿಸಬೇಕು. ಈಗ ಇರುವ ಪಾನ ನಿರೋಧದ ಪದ್ಧತಿಯಿಂದ ಅಧಿಕಾರಿಗಳು, ಪೇದೆಗಳು ಕೈತುಂಬ ಲಂಚ ತಿನ್ನುತ್ತಿದ್ದಾರೆ. ತಿಂಗಳು ತಿಂಗಳೂ ಲಕ್ಷಾಂತರ ರೂಪಾಯಿ ಹೀಗೆ ದೇಶದಲ್ಲಿ ಅನ್ಯಾಯವಾಗಿ ವೆಚ್ಚ ಆಗುತ್ತಿದೆ. ಅದನ್ನು ತಪ್ಪಿಸಲು ಈ ಉಪಾಯ ಮಾಡಿದ್ದಾರೆ.

ಈ ಉಪಾಯ ಒಬ್ಬಿಬ್ಬರಿಗೆ ನಾಟಬಹುದು, ಉಳಿದವರಿಗೆ ಸಾಲುವುದಿಲ್ಲ. ಕಳ್ಳಭಟ್ಟಿಯೂ ನಿಂತಿಲ್ಲ, ಲಂಚವೂ ನಿಂತಿಲ್ಲ. ಹರಿಜನರು ಮನೆ ಮಕ್ಕಳು ಸಮೇತ ಹಾಳಾಗಿ ಹೋಗಲು ದಾರಿ ಆಯಿತು ಅಷ್ಟೇ. ಇದರಿಂದ ಹಳ್ಳಿಗಳಲ್ಲಿ ಹರಿಜನೋದ್ಧಾರವೂ ಆಗುವುದಿಲ್ಲ, ಅಸ್ಪೃಶ್ಯತಾ ನಿವಾರಣೆಯೂ ಆಗುವುದಿಲ್ಲ.

ಕದ್ದು ಕುಡಿಯುವವರು ಬಹಿರಂಗವಾಗಿಯೇ ಕುಡಿಯಲಿ ಎಂದು ಮಾಡಿತು ಇದನ್ನು ಎಂದು ಕೆಲವರು ಹೇಳುತ್ತಾರೆ. ನಾಚಿಕೆ ಇದ್ದವರು ಯಾರೂ ಬಹಿರಂಗವಾಗಿ ಕುಡಿಯುವುದಿಲ್ಲ. ಈಗಲೂ ಕದ್ದೇ ಕುಡಿಯುತ್ತಾರೆ. ಸಮಾಜ ಕುಡಿತವನ್ನು ಅನಿಷ್ಟ ಎಂದು ತಿಳಿದಿರುವವರೆಗೂ ಕದ್ದೇ ಕುಡಿಯಬೇಕು.

ಒಂದು ಸಲ ಬೆಂಗಳೂರು ಪುರಸಭಾ ಭವನದಲ್ಲಿ ಒಂದು ಸಭೆ. ಮಂತ್ರಿಗಳು ಅಧ್ಯಕ್ಷರು. ನಾನೂ ಒಬ್ಬ ಭಾಷಣಕಾರ. ಒಬ್ಬ ಶಾಸನ ಸಭಾ ಸದಸ್ಯರು ಭಾಷಣ ಮಾಡಲು ಬಂದರು. ಬಂದವರು ನನ್ನ ಪಕ್ಕದಲ್ಲಿ ಕುಳಿತರು. ಅವರ ಬಾಯಿ ನಾತ ಹೊಡೆಯುತ್ತಿತ್ತು. "ಹಿಂದಿನ ಸಾಲಿನಲ್ಲಿ ಕೂತುಕೊಳ್ಳಿ. ಇಲ್ಲದೆ ಹೋದರೆ ನಾನೇ ಎದ್ದು ಹೋಗುತ್ತೇನೆ" ಎಂದೆ. ಅವರು ಮರುಮಾತು ಆಡದೆ ಹಿಂದೆ ಹೋಗಿ ಕೂತರು. ತಪ್ಪು ಮಾಡಿದ ಮನಸ್ಸು ಹುಳ್ಳ ಹುಳ್ಳಗೆ. ಆದ್ದರಿಂದ ಹಾಗೆ.

ಇನ್ನೊಂದು ಸಲ ರೈಲಿನಲ್ಲಿ ಬರುತ್ತಿದ್ದೆ. ದೊಡ್ಡಬಳ್ಳಾಪುರಕ್ಕೆ ಬಂದಾಗ ನಮ್ಮ ಚಿಕ್ಕ ಪೆಟ್ಟಿಗೆಗೆ ಹತ್ತಾರು ಜನ ನುಗ್ಗಿದರು. ಅವರಲ್ಲಿ ಒಬ್ಬಾತ ಸೂಟು ಧರಿಸಿ ಬಂದೂ ಬಾರದ ಇಂಗ್ಲೀಷ್ ಮಾತಾಡುತ್ತಿದ್ದ. ನನ್ನ ಎದುರಿಗೇ ಬಂದು ಕುಳಿತ. ಸ್ಥಳ ಸಂಕೋಚ. "ಈ ಸ್ಟೇಷನ್ ಮಾಸ್ಟರು ಎಷ್ಟು ಸೀಟು ಇವೆಯೋ ಅಷ್ಟೇ ಟಿಕೇಟು ಕೊಡಬೇಕು" ಎಂದ. "ಮಾಸ್ಟರುಗಳಿಗೆ ಸ್ಥಳ ಇದೆಯೋ ಇಲ್ಲವೋ ಮೊದಲೇ ಗೊತ್ತಾಗುವುದಿಲ್ಲ" ಎಂದೆ ನಾನು. "ಮಾಸ್ಟರು ನಿಮಗೆ ಬಳಗ ಆಗಿರಬೇಕು" ಎಂದ ಆತ. "ಒಬ್ಬ ಸ್ಟೇಷನ್ ಮಾಸ್ಟರು ಯಾರಿಗಾದರೂ ಬಳಗ ಆಗಬಹುದು. ದೇಶದಲ್ಲಿರುವ ಲಕ್ಷಾಂತರ ಮಾಸ್ಟರುಗಳು ಒಬ್ಬನಿಗೇ ಬಳಗ ಆಗುವುದು ಸಾಧ್ಯವಿಲ್ಲ" ಎಂದೆ. ಆ ವೇಳೆಗೆ ಆತನ ಬಾಯಿ ನಾತ ಹೊಡೆಯಲಾರಂಭಿಸಿತು.

ನಾನು ಹೇಳಿದೆ: "ತಾವು ಕುಡಿದಿದ್ದೀರಿ. ತಮ್ಮ ಸಂಗಡ ಮಾತಾಡಿದ್ದು ತಪ್ಪು ನನ್ನದು. ನಿಮಗೆ ಇಲ್ಲಿ ಸ್ಥಳ ಬಿಡಿಸಿ ಕೊಟ್ಟಿದ್ದೂ ತಪ್ಪು. ಈಗ ನೀವಾದರೂ ಬಾಗಿಲ ಬಳಿ ಎದ್ದು ಹೋಗಿ. ನಾನಾದರೂ ಎದ್ದು ಹೋಗುತ್ತೇನೆ" ಎಂದೆ.

ಕೂಡಲೇ ಆ ಮನುಷ್ಯ ಎದ್ದು ಹೋಗಿ ಬಾಗಿಲ ಬಳಿ ನಿಂತ. ಏನೋ ಒಳಗೆ ಅಳುಕು. ಇಲ್ಲದೆ ಇದ್ದರೆ ನನ್ನ ಮಾತು ಏನು ಮಹಾ!

ಈಗಲೂ ಕುಡಿತಕ್ಕೆ ಮರ್ಯಾದೆ ಇಲ್ಲ. ಎಂಥ ದುಬಾರಿ ಪರದೇಶಿ ಮದ್ಯವನ್ನೇ ಕುಡಿದು ಬಂದರೂ ಮನೆಯಲ್ಲಿ ಮರ್ಯಾದೆ ಇಲ್ಲ. ದಿಲ್ಲಿಯಲ್ಲಿ, ಬೆಂಗಳೂರಿನಲ್ಲಿ ದೊಡ್ಡ ದೊಡ್ಡ ಅಧಿಕಾರಿಗಳು ಕುಡಿಯುವ ಕ್ಲಬ್ಬೇ ಒಂದು ಮಾಡಿಕೊಂಡಿರುತ್ತಾರೆ. ವಿದೇಶೀ ರಾಯಭಾರಿಗಳನ್ನು ಔತಣಕ್ಕೆ ಕರೆದಾಗ ವಿದೇಶೀ ಮದ್ಯವನ್ನು ಕೊಟ್ಟು ತೃಪ್ತಿ ಪಡಿಸುವ ರಾಜಕೀಯ ರೂಢಿಯನ್ನು ಸಾಮಾಜಿಕ ಆಗಿ ಮಾಡಲು ಎಷ್ಟು ಪ್ರಯತ್ನಿಸಿದರೂ ಆಗುತ್ತಿಲ್ಲ. ವಿದೇಶೀ ಜನರಿಗಾಗಿ ಹೋಟಲುಗಳೇ ಆಗಿವೆ. ಅಲ್ಲಿ ಕುಡಿತಕ್ಕೆ ಏರ್ಪಾಟು ಇವೆ. ಕುಡಿತದ ಜೊತೆಗೆ ಕುಣಿತ. ಕುಣಿತ ಕುಡಿತ ಬಂದಮೇಲೆ ವನಿತಾ ಇರಲೇಬೇಕು. ಹಾದರಕ್ಕೂ ಇಂಥ ಹೋಟಲುಗಳೇ ಆಗರ. ಮೊನ್ನೆ ಮೊನ್ನೆ ಹೋಟಿಲುಗಳಿಗೆ ನುಗ್ಗಿ ಪೋಲೀಸರು ನೂರಾರು ಜನರನ್ನು ದಸ್ತಗಿರಿ ಮಾಡಿದರಂತೆ. ಪತ್ರಿಕೆಗಳಲ್ಲಿ ಸುದ್ದಿ ಬಂದಿತ್ತು.

ಬೆಂಗಳೂರಿನಲ್ಲಿ ಈಚಿಗೆ ಹಾದರ ಹೆಚ್ಚು ಆಗಿದೆ. ಇದನ್ನೇ ಕಸಬಾಗಿ ಮಾಡಿಕೊಂಡ ಹೆಂಗಸರು–ಹೊರಗಿನಿಂದ ಬಂದವರೇ ಹೆಚ್ಚು. ಅವರಿಗೆ ಊರಿಗೋಲಾಗಿರುವ ಗಂಡಸು ಮುಮಾರು ಹೆಚ್ಚಾಗಿದ್ದಾರೆ. ಈಗ ಗಂಡಸರಲ್ಲಿ ಒಬ್ಬ ಒಂದು ಸಲ ನಮ್ಮ ಗಾಂಧೀ ಸಾಹಿತ್ಯ ಸಂಘದ ವಕೀಲ ಮಿತ್ರರು ಒಬ್ಬರ ಬಳಿಗೆ ಬಂದು, ಸತ್ಯವನ್ನು ಹೇಳಿ, "ಆ ಕೇಸನ್ನು ಗೆದ್ದು ಕೊಟ್ಟರೆ ಬೇರೆ ತಿಂಗಳು ತಿಂಗಳು ಕೇಸು ತರುತ್ತೇನೆ. ತಿಂಗಳಿಗೆ ಸಾವಿರ ರೂಪಾಯಿಗೆ ಕಡಿಮೆ ಇಲ್ಲದೆ ವರಮಾನ ಬರುವ ಹಾಗೆ ಮಾಡುತ್ತೇನೆ" ಎಂದು ಹೇಳಿದನಂತೆ. ಅವರು ಕೂಡಲೇ ನನ್ನ ಬಳಿಗೆ ಓಡಿಬಂದರು. ಇಂಥ ಕೇಸು ಹಿಡಿಯಬೇಕೆ ಬೇಡವೆ ಎಂದು ಕೇಳಲಿಕ್ಕೆ. ಬಡವರು ಆದರೂ ಸತ್ಯವಂತರು. ಸಂಸ್ಕೃತಿವಂತರು. ನಾನು ಅವರ ತಾಯಿಯನ್ನು ಕೇಳಲು ಹೇಳಿದೆ. "ತಾಯಿ ಒಪ್ಪಿದರೆ ಆಗಲಿ" ಎಂದೆ.

ಆ ತಾಯಿ ಒಪ್ಪಲಿಲ್ಲ. "ನಿನಗೆ ಒಂದು ತುತ್ತು ಅನ್ನ ಹಾಕಲು ನಾನು ಎಲ್ಲಾದರೂ ಹೋಗಿ ಸಾರಿನ ಪುಡಿ, ಮೆಣಸಿನ ಪುಡಿ ಕುಟ್ಟಿ ಕೂಲಿಮಾಡಿ ತರುತ್ತೇನೆ. ಇಂಥ ಪಾಪಿ ಕೇಸು ಹಿಡಿಯಬೇಡ" ಎಂದರಂತೆ. ನಮ್ಮ ಗೆಳೆಯರು ಅದನ್ನು ಹಿಡಿಯಲಿಲ್ಲ. ಅವರ ಜೇಬು ತುಂಬಲೂ ಇಲ್ಲ.

ಸಂಘದ ಗೆಳೆಯರ ಮಾತು ಬಂತು. ಪ್ರಸ್ತಾಪತ್ಯೇನ. ಆದರೆ ಅದೇ ಬೇರೆ ಪ್ರಕರಣ.

* * * *

ಊರಿನಲ್ಲಿ ನಾಟಕದ ಹುಚ್ಚು ಇದ್ದ ಜನ ಕೆಲವರು ಇದ್ದರು. ಬಯಲಾಟ ಆಡುವ ರೂಢಿ ಮೊದಲಿನಿಂದಲೂ ತ್ತು. ಇಈಚಿಗೆ ಬಂದ ಪರದೆ, ದೀಪಗಳ ವ್ಯಾಮೋಹವೂ ಬಂದು ಸೇರಿ ನಮ್ಮ ಬಯಲಾಟದ ಗುಂಪು ನಾಟಕದ ಸಂಘ ಆಯಿತು.

ಆದರೆ ನಾಟಕ ಆದರೂ ಬಯಲಾಟದ ಗಾಳಿ ತಪ್ಪಲಿಲ್ಲ. ಊರ ಮುಂದಿನ ಬಯಲಿನಲ್ಲಿ ನಾಟಕದ ಅಟ್ಟ. ಟಿಕೀಟಿಲ್ಲ. ಬಯಲಾಟದ ರೀತಿಯಲ್ಲೇ ಎಲ್ಲರೂ ಬಂದು ನೋಡಬಹುದು. ಆಗಾಗ ನಾಟಕ ಆಡುತ್ತಿದ್ದವರು, ನಮ್ಮೂರಿನ ಗೆಳೆಯರು. ಅದರಲ್ಲಿ ಸದಾರಮೆ, ಪಾಂಡವ ವಿಜಯ ಮುಖ್ಯ. ಆ ಕಾಲಕ್ಕೆ ಅವೇ ತುಂಬಾ ಚೆನ್ನಾಗಿದ್ದವು.

ಈ ಮನರಂಜನೆಯ ಸಮಾಜೀಕರಣ ಈಗ ಕಷ್ಟಸಾಧ್ಯ. ಈಗ ಟಿಕೀಟು ಇದ್ದರೇ ನಾಟಕ ನೋಡಲು ಸಿಗಬೇಕಾದರೆ. ನಾಟಕ ಆಡುವವರಿಗೂ ಈಗ ಅದೊಂದು ವೃತ್ತಿ ಆಗಿದೆ. ಮನರಂಜನೆಗೂ ದುಡ್ಡು ಕೊಡಬೇಕು.

ನಾಟಕಕ್ಕಿಂತ ಹೆಚ್ಚು ಸಿನಿಮಾಗಳ ಹಾವಳಿ. ಟೂರಿಂಗ್ ಟಾಕೀಸ್ ಎಂದು ಎಲ್ಲ ಊರಿಗೂ ಬರುತ್ತವೆ. ಡೇರೆ ಹಾಕಿ ರಾತ್ರಿಯೆಲ್ಲಾ ನಿದ್ದೆಯಿಲ್ಲದಂತೆ ಹಾವಳಿ ಮಾಡುತ್ತವೆ. ಹಳ್ಳಿಗಳ ಕಡೆ ನಾನು ಹೋದ ಹಾಗೆಲ್ಲ ಭಿತ್ತಿಚಿತ್ರಗಳನ್ನೂ ನೋಡಿದ್ದೇನೆ. ಪೌರಾಣಿಕ ಚಿತ್ರಗಳೇ ಹೆಚ್ಚು. ಆಧುನಿಕ ಸಾಮಾಜಿಕ ಚಿತ್ರಗಳನ್ನು ನೋಡಬೇಕಾದರೆ ಹಳ್ಳಿಗಳವರು ಪಟ್ಟಣಗಳಿಗೇ ಬರಬೇಕು.

ಈಗಂತೂ ಸಿನಿಮಾ ನಾಟಕ ಕಡೆಗೆ ಆಟವನ್ನು ನೋಡಬೇಕಾದರೂ ದುಡ್ಡು ಕೊಡಬೇಕು. ಕ್ರಿಕೆಟ್, ಫುಟ್‌ಬಾಲ್ ಆಟಗಳಿಗೂ ದುಡ್ಡು ಕೊಟ್ಟು ನೋಡ ಬೇಕು. ಎಲ್ಲಾ ದುಡ್ಡಿನ ಮೇಲೆ ಇದೆ. ಆದರೂ ನಾವು ಮಾತ್ರ ಸಮಾಜವಾದದ ದಾರಿ ಹಿಡಿದಿದ್ದೇವೆ–ಎಂದು ಕೊಳ್ಳುತ್ತಿದ್ದೇವೆ. ಎಂಥ ಸಮಾಜವೋ, ಎಂಥ ವಾದವೋ !

ನಮ್ಮವರಿಗೂ ಪಟ್ಟಣದ ಗಾಳಿ ತಗುಲಿದೆ. ಟಿಕೀಟು ಇಟ್ಟು ನಾಟಕ ಆಡಿದವರು ಟಿಕೀಟು ಇಟ್ಟ ಮೂರೇ ತಿಂಗಳಲ್ಲಿ ಪರದೆ, ಡೇರ, ಎಲ್ಲವನ್ನೂ ಮಾರಿಕೊಳ್ಳ ಬೇಕಾಯಿತು. ಹಣವಂತರು 'ಖುಷಿ' ಕೊಟ್ಟು ಬಡವರು ನಾಟಕ ನೋಡುತ್ತಿದ್ದ ಏರ್ಪಾಟು ಹೋಗಿ ಎಲ್ಲರೂ ದುಡ್ಡು ಕೊಡುವ ಏರ್ಪಾಟು ಬಂದಮೇಲೆ ಹೇಗೆ ನಡೆಯಬೇಕು ?

ನಮ್ಮ ವ್ಯಾಪಾರವೂ ಅಷ್ಟೇ. ಕಾಯಿಪಲ್ಯ ಕೊಳ್ಳುತ್ತಿದ್ದ ನೆನಪು ನನಗೆ ಇದೆ. ಕಾಯಿಪಲ್ಯವನ್ನು ತೆಗೆದುಕೊಳ್ಳುವಾಗ ಅದಕ್ಕೆ ಬದಲು ದುಡ್ಡು ಕೊಡುತ್ತಿರ ಲಿಲ್ಲ. ಕಾಳು ಹಾಕುತ್ತಿದ್ದೆವು. ಈಗಲೂ ಬೆಂಗಳೂರು ನಗರದಲ್ಲಿ ಈ ಬಗೆಯ

ವ್ಯಾಪಾರ ನಡೆಯುತ್ತದೆ. ರಂಗೋಲಿ ಹೊತ್ತು ತರುವವರು, ಪೊರಕೆ ತರುವವರು, ಹಳೇ ಬಟ್ಟೆ ಕೊಟ್ಟರೆ ಕೊಡುತ್ತಾರೆಯೇ ವಿನಾ ದುಡ್ಡು ಕೊಟ್ಟರೆ ಕೊಡರು. ಸ್ಟೇನ್ ಲೇಸ್ ಸ್ಟೀಲ್ ಪಾತ್ರೆಗಳಂತೂ ಹಳೆಯ ಬಟ್ಟೆಗಳಿಗೇ ಕೊಡುತ್ತಾರೆ.

ಹಳ್ಳಿಗಳಲ್ಲಿ ಮೆಟ್ಟನ್ನು ಯಾರೂ ಕೊಳ್ಳುತ್ತಿರಲಿಲ್ಲ. ಒಂದೊಂದು ಮನೆಗೆ ಒಬ್ಬ ಹರಿಜನ ಖಾಯಂ. ಕಣ ಒಣಗು ಸಾರಿಸಿ ತೂರಿ ಕಾಳು ಹಸನು ಮಾಡಿ ಕಣ ಆಗುವವರೆಗೂ ಹೊಲದಲ್ಲಿ ಕಾವಲಿದ್ದು ತನ್ನ ಪಾಲಿಗೆ ಕಾಳನ್ನು ತೆಗೆದುಕೊಂಡು ಹೋಗಬೇಕು ಅವನು. ವರ್ಷಕ್ಕೆ ಮನೆಗೆ ಬೇಕಾಗುವ ಮೆಟ್ಟುಗಳನ್ನು ಅವನೇ ಹೊಲೆದುಕೊಡಬೇಕು. ಮನೆಯಲ್ಲಿ ದನ ಸತ್ತರೆ ಅವನೇ ತೆಗೆದುಕೊಂಡು ಹೋಗಿ ಆ ದನದ ಚರ್ಮದಲ್ಲಿ ಸೀಳನ್ನು ಕೊಡಬೇಕು. ಕಪಿಲೆ ಇರುವ ತೋಟಗಾರಿಕೆ ಬಾಸಿಯನ್ನು ಅವನೇ ಹೊಲಿದು ಕೊಡಬೇಕು. ಹರಿದರೆ ಸರಿಮಾಡುವುದೂ ಅವನ ಕೆಲಸ.

ಊರಿನಲ್ಲಿ ಜನ ಹೆಚ್ಚು ಇದ್ದರೆ, ಹರಿಜನರ ಮನೆ ಕಡಮೆ ಇದ್ದರೆ, ಅವರಿಗೆ ಏಳೆಂಟು ಹತ್ತು ಮನೆಗಳು ಬರುತ್ತಿದ್ದವು. ಈ ಧಣಿ ಸೇವಕ ಸಂಬಂಧ ಆಗ ಚೆನ್ನಾಗಿಯೇ ಇತ್ತು. ಪರಸ್ಪರ ವಿಶ್ವಾಸವೂ ಚೆನ್ನಾಗಿಯೇ ಇತ್ತು. ಪ್ರಾಣಕ್ಕೆ ಪ್ರಾಣವಿಡುವ ವಿಶ್ವಾಸ.

ಬರೀ ಕಾಯಿಪಲ್ಯ ಅಲ್ಲ ವಿನಿಮಯ ಆಗುತ್ತಿದ್ದುದು. ಪಕ್ಕದ ತಾಲ್ಲೂಕಿನಲ್ಲಿ ಕೆರೆ ಆಸರೆಯಲ್ಲಿ ಭತ್ತ ಬೆಳೆಯುತ್ತಿದ್ದರು, ನಮ್ಮಲ್ಲಿ ನವಣೆ. ಈ ನವಣೆಯನ್ನು ಒಯ್ದು ಭತ್ತಕ್ಕೆ ಬದಲು ಮಾಡಿ ತರುತ್ತಿದ್ದರು ನಮ್ಮವರು. ಉಳಿದ ವಿದೇಶೀ ಸಾಮಾನು, ಯಂತ್ರದ ಸಾಮಾನು ಆಗ ಅಷ್ಟಾಗಿ ಬಳಕೆಯಲ್ಲಿ ಇರಲಿಲ್ಲ. ವಿದ್ಯುತ್ತನ್ನಂತೂ ನಾವು ಕಾಣೇ ಕಾಣವು. ನಮ್ಮ ಮನೆಯಲ್ಲಿ ಕಂದೀಲೇ ದೊಡ್ಡ ದೀಪ ಹರಳೆಣ್ಣೆಯನ್ನೂ ಮನೆಯಲ್ಲಿಯೇ ಮಾಡಿ ಅದನ್ನೇ ಹಣತೆಗೆ ಬಳಸುತ್ತಿದ್ದೆವು. ಈಗಲೂ ನಮ್ಮ ಹಳ್ಳಿಮನೆಯಲ್ಲಿ ಹಣತೆ ಇಡುತ್ತಿದ್ದ ದೀಪದ ಕಂಬ ಇದೆ.

ಗಾಂಧೀಜೀ ಸ್ವದೇಶಿ ಚಳುವಳಿಯನ್ನು ಪ್ರಾರಂಭಿಸುವ ಹೊತ್ತಿಗೆ ಇವೆಲ್ಲಾ ಒಂದೊಂದಾಗಿಯೂ ಆಗಿದ್ದವು. ಸ್ವಲ್ಪ ಅನುಕೂಲಸ್ಥರ ಮನೆಯಲ್ಲಿ ದುಡ್ಡು ಓಡಾಡುತ್ತಿತ್ತು. ಪಟ್ಟಣದ ದಿನಸೂ ಹಳ್ಳಿಗಳಿಗೆ ದುಡ್ಡಿನ ಹಿಂದೆಯೇ ಬಂತು. ಹರಳೆಣ್ಣೆ ದೀಪವೂ ಹೋಯಿತು. ಹತ್ತಿಯ ಬಟ್ಟೆಯೂ ಹೋಯಿತು. ಗಾಂಧೀಜಿಯ ಸ್ವದೇಶಿ ಚಳುವಳಿ ಬರುವವೇಳೆಗೆ ಹಳ್ಳಿಗಳಲ್ಲೂ ಗ್ರಾಮೋದ್ಯೋಗ ಮಾಯವಾಯಿತು.

ಖಾದಿ ಗಾಂಧೀಜಿಯ ಚಳುವಳಿಗೆ ಮುಖ್ಯ. ಹಳ್ಳಿಗಳಲ್ಲೇ ನೂತು ನೇದ ಈ ಬಟ್ಟೆಯನ್ನು ಖಾದಿ ಎಂದು ಈಗ ಕರೆಯುತ್ತಾರೆ. ಆಗ ಹರಿಜನರಲ್ಲಿ ಬಲಗೈಯವರು ಹೊಲೆಯರು, ಹಚ್ಚಡಗಳನ್ನು ನೇಯುತ್ತಿದ್ದರು. ಧೋತರಗಳನ್ನು ನೇಯುತ್ತಿದ್ದರು. ಹಚ್ಚಡಗಳ ಮಾತನ್ನು ಹೇಳಲು ಕಾರಣ ಇಷ್ಟೆ. 'ಹೂವಿನ ಹಚ್ಚಡ' ಎಂಬ

ವಿಶಿಷ್ಟ ರೀತಿಯ ಹಚ್ಚಡ ಅವರಿಂದ ಬಾರದೆ ಯಾರ ಮದುವೆಯೂ ಹಳ್ಳಿಗಳಲ್ಲಿ ಆಗುತ್ತಿರಲಿಲ್ಲ. ಆ ಹಚ್ಚಡವನ್ನು ಹೊದ್ದುಕೊಂಡೇ ಮದುವಣಿಗ ಮದುವಣಗಿತ್ತಿಯ ಕೈ ಹಿಡಿಯಬೇಕು. ಹೀಗೆ ಜನಜೀವನದಲ್ಲಿ ಗ್ರಾಮೋದ್ಯೋಗಕ್ಕೆ ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟಿತ್ತು ನಮ್ಮ ಸಂಪ್ರದಾಯ.

ಈ ಸಂಪ್ರದಾಯಗಳ ಮಾತು ಬಂದಾಗ ಎಷ್ಟು ಮಟ್ಟಿಗೆ ಜನ ಜೀವನಕ್ಕೆ ಅವು ಹೊಂದಿಕೊಂಡಿದ್ದವೋ ತಿಳಿಸಲು ಇನ್ನೊಂದು ಉದಾಹರಣೆ ಕೊಡುತ್ತೇನೆ.

ನಮ್ಮಲ್ಲಿ ಶುಭ ಆಗಲಿ, ಅಶುಭ ಆಗಲಿ ವಾದ್ಯ ಬೇಕೇ ಬೇಕು. ವಾದ್ಯ ಇಲ್ಲದೆ ಕರ್ಮವೇ ಇಲ್ಲ. ಯಾವ ಕರ್ಮಕ್ಕೂ ನಿಜವಾಗಿ ವಾದ್ಯ ಬೇಕಾಗಿಲ್ಲ. ಕರ್ಮ ಒಂದು ಬಗೆಯಲ್ಲಿ ವೈಯಕ್ತಿಕ. ವಾದ್ಯ ಸಾಮಾಜಿಕ. ಎರಡಕ್ಕೂ ಗಂಟು ಹಾಕಿ ಸಮನ್ವಯ ಮಾಡಿ ಐಕಮತ್ಯವನ್ನು ಸಾಧಿಸಿದರು ನಮ್ಮವರು. ಕರ್ಮವೂ ಪ್ರಶಸ್ತ ಆಯಿತು ವಾದ್ಯದಿಂದ. ವಾದ್ಯಗಾರರೂ ಬದುಕಿಕೊಂಡರು.

ಜಾತಿಮತ ಪಂಥಗಳನ್ನು ಎಷ್ಟು ಚೆನ್ನಾಗಿ ಐಕಮತ್ಯದಿಂದ ಬಾಳುವಂತೆ ಹಿರಿಯರು ಹೆಣೆದರೋ ನೆನೆದರೆ ಅಚ್ಚರಿ ಆಗುತ್ತದೆ. ಈಗ ಭಾವೈಕ್ಯಕ್ಕೆ ನಾವು ಪರದಾಡುತ್ತಿದ್ದೇವೆ. ಮತ ಪಂಥಗಳಲ್ಲಿ ಸಮನ್ವಯ ಮಾಡುವ ಸಂಪ್ರದಾಯಗಳನ್ನು ರಚಿಸಿ ಅನುಷ್ಠಾನಕ್ಕೆ ತಾರದೆ ಇದ್ದರೆ ಹೇಗೆ ಆಗುತ್ತದೆ ಭಾವೈಕ್ಯ? ರಾಜಕೀಯವಾಗಿ ಭೌಗೋಲಿಕ ಆಗಿ ಒಂದು ಆದರೆ ಸಾಲದು. ಮನಸ್ಸು ಒಂದು ಆಗಬೇಕು.

ಹೀಗೆಂದರೆ ಅಂತರ ಅಂತರ್‌ಜಾತೀಯ ವಿವಾಹ ಇದಕ್ಕೆ ಮದ್ದು ಎನ್ನುತ್ತಾರೆ ಈಗಿನ ವಿಚಾರವಂತರು. ಜಾತಿಗಳ ಭಾವನೆ ಬಹಳ ಬಲವಾಗಿದ್ದ ಕಾಲದಲ್ಲಿ ಕಾಣುತ್ತಿದ್ದ ಸಮನ್ವಯ ಈಗ ಕಾಣುತ್ತಿಲ್ಲ. ನಮ್ಮ ಊರಿನಲ್ಲಿ ಒಂದು ಮಸೀದಿಯಂಥ ಚಾವಡಿ ಇದೆ. ವರ್ಷಕ್ಕೊಮ್ಮೆ ಬಾಬಯ್ಯನ ಹಬ್ಬದಲ್ಲಿ ಅಲ್ಲಿ ಕೆಂಡ ತುಳಿಯುತ್ತಾರೆ. ಕೆಂಡ ತುಳಿಯುವವರು ಹಿಂದೂಗಳೇ. ನಮ್ಮ ಊರಿನಲ್ಲಿ ಸುತ್ತಮುತ್ತಲ ಊರುಗಳಲ್ಲಿ ಮುಸಲ್ಮಾನರ ಮನೆ ಐದೋ ಆರೋ ಇದ್ದವು ಆಗ. ಆದರೂ ಒಂದು ಮಸೀದಿ, ಕೆಂಡ ತುಳಿಯುವ ಹಬ್ಬ! ಈಗ ಏನು ಇದೆಯೋ, ನಾನು ಹಳ್ಳಿಗೆ ಹೋಗಿ ಎಷ್ಟೋ ವರ್ಷ ಆಯಿತು. ಸಾಮಾಜಿಕ ಸಂಪ್ರದಾಯಗಳು, ಆಧ್ಯಾತ್ಮಿಕ ಸಂಪ್ರದಾಯಗಳ ಪ್ರತಿಷ್ಠೆ ಆಗದೆ, ಭಾವೈಕ್ಯ ಹೇಗೆ ಆಗಬೇಕು?

ಎಷ್ಟೋ ಅಂತರ್ ಜಾತೀಯ ಮದುವೆ ಆಗಿವೆ. ಅಂತರ್ ಮತೀಯ ಮದುವೆಯೂ ಆಗಿವೆ. ಆದರೆ ಜಾತೀಯ ಭಾವನೆ ಹೋಗಿಲ್ಲ. ಇದೂ ಒಂದು ಮಿಶ್ರಜಾತಿ ಆಯಿತು, ಅಷ್ಟೆ.

* * * *

ನಮ್ಮ ತಂದೆಯವರ ಜೊತೆಯಲ್ಲಿ 'ಸಂಚಾರ'ಕ್ಕೆ ನಾನೂ ಹೋಗಿದ್ದೆ ಹುಡುಗ ಆಗಿದ್ದಾಗ. ಒಂದು ಊರಿನಲ್ಲಿ ಒಬ್ಬ ಮುಸಲ್ಮಾನ ಮುಖಂಡ ಆಗಿದ್ದ ಯಾರ ಮನೆ

ಯಲ್ಲಿ ಏನೇ ಆಗಲಿ ಆತ ಬಂದು ಊರಿನ ದೇವರ ಗುಡಿಯಲ್ಲಿ ಕುಳಿತು ಪಂಚಾಯತಿ ಮಾಡಬೇಕು. ಅದರಂತೆ ಎಲ್ಲರೂ ನಡೆಯಬೇಕು. ಊರಿನಲ್ಲಿ ಅದು ಒಂದೇ ಮುಸಲ್ಮಾನರ ಮನೆ. ಉಳಿದವರೆಲ್ಲ ಹಿಂದೂಗಳು. ಆದರೂ ಆತನ ಮಾತನ್ನು ಮೀರಿ ಪಟೀಲನೂ ನಡೆಯುತ್ತಿರಲಿಲ್ಲ.

ಇನ್ನೊಂದು ಊರಿಗೆ ಹೋಗಿದ್ದೆವು. ಅಲ್ಲಿಯ ಪಟೀಲ ಬಸಪ್ಪ. ಬಸಪ್ಪನೂ ಉಳಿದವರೂ ರೆಡ್ಡಿಗಳು. ಆ ಒಂದಿನ ಊರಿನಲ್ಲೂ ಇಲ್ಲೂ ಯಾವ ಜಗಳವೂ ಕೋರ್ಟು ಕಛೇರಿಗೆ ಹೋಗುತ್ತಿರಲಿಲ್ಲ. ಬಸಪ್ಪ ಅನುಕೂಲಸ್ಥ. ಅದೆಲ್ಲವೂ ಬಾಗಾಯಿತು ಸೀಮೆ. ಮೆಣಸಿನಕಾಯಿ ಬೆಳೆಯುತ್ತಿದ್ದರು. ಊರಿನ ಕಂದಾಯವನ್ನೆಲ್ಲ ಒಂದೇ ಕಂತಿನಲ್ಲಿ ತಾನು ಕಟ್ಟುತ್ತಿದ್ದ. ಆಮೇಲೆ ನಿಧಾನವಾಗಿ ಊರಿನವರಿಂದ ವಸೂಲು ಮಾಡಿಕೊಳ್ಳುತ್ತಿದ್ದ.

ಇನ್ನೊಂದು ಊರಿನಲ್ಲಿ ಒಬ್ಬ ಒಡ್ಡರ ಹಿರಿಯ. ಊರಿನ ಮುಂದಾಳು. ಒಡ್ಡರ ಮನೆ ಮೂರೋ ನಾಲ್ಕೋ ಊರಿನಲ್ಲಿ. ಆದರೆ ಆತನ ಮಾತಿಗೆ ಇದಿರು ಇರಲಿಲ್ಲ.

ತಂದೆಯವರು ಊರಿಗೆ ಹೋದಾಗ ಈ ಊರಿನಲ್ಲೂ ಆ ಊರಿನಲ್ಲೂ ಎಲ್ಲರ ಜೊತೆಯಲ್ಲಿ ಈ ಮುಖಂಡರೂ ಬಂದು ಪಾದಕಾಣಿಕೆ ಸಲ್ಲಿಸುತ್ತಿದ್ದರು. ಒಡ್ಡರವನ ಮಾತು ಹಾಗಿರಲಿ ಮುಸಲ್ಮಾನ ಮುಖಂಡನೂ ಬಂದು ಸಾಷ್ಟಾಂಗ ಮಾಡಿ ಕಾಣಿಕೆ ಯನ್ನು ಒಪ್ಪಿಸಿ ಹೋಗುತ್ತಿದ್ದ. ಎಲ್ಲರಂತೆ ತಾನೂ ಸ್ವಯಂಪಾಕದ ಸಾಮಗ್ರಿ ಕಳಿಸುತ್ತಿದ್ದ.

ಆತನಿಗೆ ಉರ್ದು ಭಾಷೆ ಚೆನ್ನಾಗಿ ಬರುತ್ತಲೇ ಇರಲಿಲ್ಲ. ಎಲ್ಲರಂತೆ ಸ್ವಚ್ಛ ತೆಲುಗು ಕನ್ನಡ ಮಾತನಾಡುತ್ತಿದ್ದ. ಆತನ ಗಡ್ಡ ಆತನ ಹೆಸರು ಹೇಳಬೇಕೆ ವಿನಾ ಆತ ಮುಸಲ್ಮಾನ ಎಂದು ನಮಗೆ ತಿಳಿಯುತ್ತಿರಲಿಲ್ಲ.

ಈಗ ಹೇಗಿದೆಯೋ ಆ ಹಳ್ಳಿ! ನಾನು ನೋಡಿ ನಲವತ್ತು ವರ್ಷದ ಮೇಲೆ ಆಯಿತು.

* * * *

ಪ್ರಾಥಮಿಕ ಶಿಕ್ಷಣ ಹಳ್ಳಿಯಲ್ಲೇ ಆದರೂ ನಮ್ಮ ಸೂರಪ್ಪ ಮೇಷ್ಟ್ರು ಕುಮಾರ ವ್ಯಾಸ ಭಾರತವನ್ನು ರಾಗವಾಗಿ ಟಂಕಾರ ಮಾಡುತ್ತ ಓದುತ್ತಿದ್ದರೆ ಮನಸ್ಸಿಗೆ ಆನಂದ ಆಗುತ್ತಿತ್ತು. ನಮ್ಮೂರಿಗೆ ಸೂರಪ್ಪ ಮೇಷ್ಟ್ರು. ಇನ್ನೊಂದು ಊರಿಗೆ ಬೇರೆಯವರು. ಆಗ ದಿನವೂ ಊರಿನವರನ್ನು ಕೂಡಿಸಿಕೊಂಡು ಭಾರತ ಓದುವ ರೂಢಿ ಹಳ್ಳಿ ಹಳ್ಳಿ ಯಲ್ಲೂ ಮೇಷ್ಟ್ರಿಗೆ ಇತ್ತು. ಮಳೆ ಬಾರದೆ ಹೋದರೆ ಊರ ಗುಡಿಯಲ್ಲಿ ಈ ಕಾವ್ಯ ಶ್ರವಣ.

ಮಾಧ್ಯಮಿಕ ಶಾಲೆಗೆ ಬಂದಾಗ ಆಂಗ್ಲೋ ವರ್ನಾಕ್ಯುಲರ್ ಸ್ಕೂಲ್‌ಗೆ ಸೇರಿದೆ. ಚಿತ್ರದುರ್ಗದಲ್ಲಿ. ಈಗ ಮಿಡಲ್ ಸ್ಕೂಲ್ ಎನ್ನುತ್ತೇವಲ್ಲ ಅದನ್ನೇ ಆಗ ಆಂಗ್ಲೋ

ವರ್ನಾಕ್ಯುಲರ್ ಸ್ಕೂಲ್ ಎನ್ನುತ್ತಿದ್ದರು. ಚಿತ್ರದುರ್ಗದಲ್ಲಿ ಹೈಸ್ಕೂಲೂ ಇತ್ತು. ಆದ್ದರಿಂದಲೋ ಅಥವಾ ಯಾತಕ್ಕೋ ಏನೋ ಈಗಿನ ಏಳನೇ ತರಗತಿ ಅಥವಾ ಮಿಡಲ್‌ಸ್ಕೂಲ್ ಪರೀಕ್ಷೆಯ ತರಗತಿ. ಆಗಿನ ಮಾತಿನಲ್ಲಿ ಲೋಯರ್ ಸೆಕೆಂಡರಿ ೩ನೇ ಫಾರಂ ನಮ್ಮಲ್ಲಿ ಹೈಸ್ಕೂಲಿನಲ್ಲಿ ಇತ್ತು. ಈಗ ಹೈಸ್ಕೂಲಿನಲ್ಲಿ ೧೧ನೇ ತರಗತಿ ಇಲ್ಲವೆ ? ಹಾಗೆ. ಅಥವಾ ನಮ್ಮ ಕಾಲದ ಕೊಲಜಿಯೇಟ್ ಹೈಸ್ಕೂಲುಗಳಲ್ಲಿ ಎಂಟ್ರೆನ್ಸ್ ತರಗತಿ ಇದ್ದ ಹಾಗೆ. ಅದು ಮೇಲಿನ ತರಗತಿ. ಇದು ಕೆಳಗಿನ ತರಗತಿ. ಇಷ್ಟೇ ವ್ಯತ್ಯಾಸ.

ಆಗಿನ ನನ್ನ ಸಹಪಾಠಿಗಳಲ್ಲಿ ಅನೇಕರು ಕಣ್ಮರೆಯಾಗಿದ್ದಾರೆ. ನಮ್ಮ ಕನ್ನಡ ಪಂಡಿತರು ಗರಣಿ ರಂಗಾಚಾರ್ಯರು. ಅವರಿಗೆ ಏನು ಕಾಯಿಲೆಯೋ ಸದಾ ದವಡೆಯಲ್ಲಿ ಕಲ್ಲುಸಕ್ಕರೆ ಹರಳನ್ನು ಹಾಕಿಕೊಂಡೇ ಇರುತ್ತಿದ್ದರು. ಕಲ್ಲು ಸಕ್ಕರೆ ರಂಗಾಚಾರ್ಯರು ಎಂದು ಅವರಿಗೆ ಹೆಸರು ಬಂದಿತ್ತು. ರಂಗಾಚಾರ್ಯರು, ಆ ಕಾಲದ ಪಂಡಿತ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆ ಆದವರು. ನಮ್ಮ ತಂದೆಗೆ ಅವರು ಸೋದರ ಮಾವನ ಮಗ ಆಗಬೇಕು.

ಆ ಕಾರಣದಿಂದಲೋ ಅಥವಾ ನನಗೆ ಭಾಷಾಭಿರುಚಿ ಎಂದು ಕಂಡುಕೊಂಡಿದ್ದರೋ ಅಂತೂ ವಾಕ್ಯ ರಚನೆಯ ಗಂಟೆಯಲ್ಲಿ ನನ್ನ ಪ್ರಬಂಧವನ್ನೂ ಓದಿ ಹೇಳಿ ಎಲ್ಲರಿಗೂ ಇದು ಮಾದರಿ ಎನ್ನುತ್ತಿದ್ದರು. ಹಳೆಯ ಕಾಲದ ಪಂಡಿತರು ವ್ಯಾಕರಣದಲ್ಲಿ ನಿಷ್ಣಾತರು. ಸಂಸ್ಕೃತ ಕನ್ನಡ ಎರಡನ್ನೂ ಚೆನ್ನಾಗಿ ಎಂದರೆ ಚೆನ್ನಾಗಿ ಬಲ್ಲವರು. ಅವರ ಪ್ರೋತ್ಸಾಹದಿಂದ ಕನ್ನಡದಲ್ಲಿ ನನಗೆ ರುಚಿ ಬೆಳೆಯಿತು.

ಆಮೇಲೆ ಹೈಸ್ಕೂಲಿಗೆ ಬಂದಾಗ ಇಬ್ಬರು ಮೂವರು ಕನ್ನಡ ಪಂಡಿತರು ಆದರು. ಅವರಲ್ಲಿ ಒಬ್ಬರು ಹನುಮಂತರಾಯರು. ಕನ್ನಡದಲ್ಲಿ ಕವಿಗಳು. ಅವರ ಪುಸ್ತಕಗಳೂ ಕೆಲವು ಅಚ್ಚು ಆಗಿದ್ದವು. ಅವರಿಂದ "ಯಮತಾರಾಜಭಾನಸಲಗಂ" ಎಂದು ಗಣಗಳ ಜ್ಞಾನ, ಛಂದಸ್ಸಿನ ಜ್ಞಾನ ಬಂತು.

ಮನೆಯಲ್ಲಿ ನಮ್ಮ ಚಿಕ್ಕಪ್ಪ ಒಬ್ಬರು ಅಪ್ಪರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಬಂದಿದ್ದರು. ಅವರಿಗೆ ಇಟ್ಟಿದ್ದ ಹಳೆಗನ್ನಡ ಪುಸ್ತಕಗಳನ್ನೂ ರಾಮಾಶ್ವಮೇಧ ಶ್ರೀರಾಮ ಪಟ್ಟಾಭಿಷೇಕ, ಆನಂದ ರಾಮಾಯಣ ಮುಂತಾದುವುಗಳನ್ನೂ ಓದಿದೆ. ತಿಳಿಯದ ಪದ್ಯವನ್ನು ಹೇಳಿಸಿಕೊಂಡೆ.

ಇಷ್ಟು ಹೊತ್ತಿಗೆ ಸರಿಯಾಗಿ ದೇವ ಶಿಖಾಮಣಿ ಅಳಸಿಂಗ್ರಾಚಾರ್ಯರ ರಾಮಾಯಣ, ಭಾರತ, ಭಾಗವತಗಳು ಕೈಗೆ ಬಿದ್ದುವು. ವಿಶ್ವೇಶ್ವರಯ್ಯನವರ ಕಾಲ. ಗ್ರಾಮಾಂತರಗಳಿಗೆ ಸಂಚಾರೀ ಪುಸ್ತಕ ಭಂಡಾರದ ಸೌಲಭ್ಯವೂ ಬಂದಿತ್ತು ನಮ್ಮೂರಿಗೆ ಬಂದಾಗ ಆ ಭಂಡಾರಿ, ನಾನು ಒಬ್ಬನೇ ಆ ಪುಸ್ತಕಗಳನ್ನೂ ಉಪಯೋಗಿಸುತ್ತಿದ್ದವನು. ಯಾವುದೂ ನನಗೆ ಆಗ ಚೆನ್ನಾಗಿ ಅರ್ಥ ಆಗುತ್ತಿರಲಿಲ್ಲ.

ಈಗಲೂ ಅಂತರಾರ್ಥ ತಿಳಿಯುವುದು ಅಷ್ಟರಲ್ಲೇ ಇದೆ. ಏನೋ ಹಿಂದಿಗಿಂತ ಈಗ ಮೇಲು ಎಂದುಕೊಳ್ಳುವುದರಲ್ಲೇ ನನ್ನ ಜಂಬ.

ಆಗ ನಮ್ಮ ಚಿತ್ರದುರ್ಗ ಜಿಲ್ಲೆಯಲ್ಲಿ ಮೇಲುಕೋಟೆಯ ಎಂ. ಕೆ. ತಿರುಮಲಾಚಾರ್ಯರು ಡಿ. ಇ. ಓ. ಆಗ ಈ ಹೆಸರು ಇರಲಿಲ್ಲ; ಬೇರೆ ಏನೋ ಇತ್ತು. ನಮ್ಮ ಶಿಕ್ಷಣ ಶಾಲೆಯಲ್ಲಿ ಬೇಕಾದಷ್ಟು ಬದಲಾವಣೆಗಳು ಆಗಿವೆ. ಮೊದಲು ಐ. ಜಿ. ಆಫ್ ಎಜುಕೇಷನ್ ಎನ್ನುತ್ತಿದ್ದವರು; ಈಗ ಡೈರೆಕ್ಟರ್ ಆಗಿದ್ದಾರೆ. ಮೊದಲು ಸರ್ಕಲ್ ಇನ್ಸ್‌ಪೆಕ್ಟರ್ ಇರುತ್ತಿದ್ದರು. ಈಗ ಡೆಪ್ಯುಟಿ ಡೈರೆಕ್ಟರ್ ಎನ್ನುತ್ತಾರೆ. ಶಾಲೆಗಳೂ ಹೆಚ್ಚಾಗಿವೆ. ವಿದ್ಯಾರ್ಥಿಗಳೂ ಹೆಚ್ಚು ಆಗಿದ್ದಾರೆ. ಅಧಿಕಾರಿಗಳೂ, ಹುದ್ದೆಗಳೂ ಹೆಚ್ಚಾಗಿವೆ. ಮೊದಲು ೪ ವರ್ಷ ಪ್ರಾಥಮಿಕ, ೨ ವರ್ಷ ಮಾಧ್ಯಮಿಕ, ೨ ವರ್ಷ ಹೈಸ್ಕೂಲ್ ಇತ್ತು. ಆಮೇಲೆ ೪+೪+೩ ಆಯಿತು. ಈಗ ೭+೩ ಆಗಿದೆ. ಕಾಲೇಜಿನಲ್ಲೂ ಅಷ್ಟೆ, ಮೊದಲು ೨+೨ ಇತ್ತು ನಮ್ಮ ಕಾಲಕ್ಕೆ. ಮೈಸೂರು ವಿಶ್ವವಿದ್ಯಾನಿಲಯ ಮೊದಲಾಗಿ ೧+೩ ಮಾಡಿತು. ಆ ಒಂದನ್ನು ಹೈಸ್ಕೂಲಿಗೆ ಸೇರಿಸಿತು, ಈಗಲೂ ೧+೩ ಇವೆ. ನಡುವೆ ೨+೨ ಆಗಿತ್ತು. ಆ ಒಂದು ಹೈಸ್ಕೂಲಿನಲ್ಲೂ ಇವೆ. ಕಾಲೇಜಿನಲ್ಲೂ ಇವೆ. ಆಗ ಯೂನಿವರ್ಸಿಟಿ ಎಂಟ್ರೆನ್ಸ್ ಎನ್ನುತ್ತಿದ್ದರು. ಈಗ ಪಿ. ಯು. ಸಿ. ಎನ್ನುತ್ತಾರೆ. ಕಾಲೇಜು ಮುಗಿಸಿದಮೇಲೆ ಸ್ನಾತಕೋತ್ತರ ಶಿಕ್ಷಣಕ್ಕೆ ಈಗ ವಿಶ್ವವಿದ್ಯಾನಿಲಯಗಳಲ್ಲಿ ಏರ್ಪಾಡಿದೆ.

ಎಂ. ಕೆ. ತಿರುಮಲಾಚಾರ್ಯರು ನಮ್ಮ ಜಿಲ್ಲಾಧಿಕಾರಿಗಳಾಗಿದ್ದರು. ಅವರು ಹಳ್ಳಿಗೆ ಪರೀಕ್ಷಣಕ್ಕೆ ಬಂದರೆ ಜೊತೆಯಲ್ಲಿ ಅಡಿಗೆಯವರು, ಆಳು. ನಮ್ಮ ಊರಿಗೆ ಬಂದರೆ ನಮ್ಮ ಮನೆಯಲ್ಲೇ ಅವರ ಬಿಡಾರ. ಇಲ್ಲಿ ಮೂರು ನಾಲ್ಕು ದಿನ ಇದ್ದು ಪರೀಕ್ಷೆ ನಡೆಸಿ ಮುಂದಿನ ಮಜಲಿಗೆ ಹೋಗುತ್ತಿದ್ದರು.

ಒಂದು ಸಲ ನಾನು ಊರಿನಲ್ಲಿ ಇದ್ದಾಗ ತಿರುಮಲಾಚಾರ್ಯರ ಸವಾರಿ ಬಂತು. ಶಾಲೆಯಲ್ಲಿ ಪರೀಕ್ಷೆ ನಡೆಸಿದರು. ನನಗೂ ಏನೋ ಒಂದು ಬಹುಮಾನ ಕೊಟ್ಟರು. ಅದು ಬಿ. ವೆಂಕಟಾಚಾರ್ಯರ ಕಾದಂಬರಿ ವಂಗವಿಜೇತ, ವಿಷವೃಕ್ಷ. ತಿರುಮಲಾಚಾರ್ಯರು ತುಂಬಾ ನಿಸ್ವಾರ್ಥಿ, ಭಕ್ತ ಜೀವ. ಚಿತ್ರದುರ್ಗದಲ್ಲಿ ತಮಗಾಗಿ ಒಂದು ತುಳಸೀವನವನ್ನು ಮಾಡಿಕೊಂಡಿದ್ದರು. ಚಿತ್ರದುರ್ಗದ ಸಹಕಾರಿ ಬ್ಯಾಂಕು ಇತ್ಯಾದಿಗಳನ್ನು ಸ್ಥಾಪಿಸಿದರು. ಬಹಳ ಧಾರಾಳ ಜೀವನ. ನಮ್ಮೂರಿಗೆ ಬಂದು ನಮ್ಮ ಮನೆಯಲ್ಲಿ ಬಿಡಾರ ಮಾಡಿದಾಗ, ಅರೇ ಕೈಯಾರ ಮಾವಿನ ಹಣ್ಣನ್ನು ಹೆಚ್ಚಿ ಕೊಡುತ್ತಿದ್ದರು. ಪರ ಊರಿಗೆ ಬಂದಾಗಲೂ ಅವರ ನಿತ್ಯ ಆರಾಧನೆ, ಆಹ್ನಿಕಗಳಿಗೆ ಲೋಪ ಇರಲಿಲ್ಲ.

ಹಿಂದಿನ ಕಾಲದ ಅಧಿಕಾರಿಗಳೇ ಹಾಗೇ. ಆ ಕಾಲದಲ್ಲಿ ನಮ್ಮ ಊರಿನಲ್ಲಿ ಚಿತ್ರದುರ್ಗದಲ್ಲಿ ಒಬ್ಬ ಜಿಲ್ಲಾಧಿಕಾರಿ ವೈದ್ಯ ಶಾಖೆಗೆ ಇದ್ದರು. ಅವರು ಯಾಂಗೆ

ಔಷಧ ಕೊಡಲಿ ಕೃಷ್ಣಾರ್ಪಣ ಎನ್ನುತ್ತಿದ್ದರು. ಡಿ. ಎಂ. ಓ. ಆಗಿದ್ದರೂ ಅವರು ತ್ರಿಕಾಲ ಸಂಧ್ಯಾವಂದನೆ ನಿತ್ಯ ಕೈಂಕರ್ಯಕ್ಕೆ ಲೋಪ ಇರಲಿಲ್ಲ. ಮನೆಗೆ ಬಂದವರೇ ಮಧ್ಯಾಹ್ನ ಎರಡನೇ ಸ್ನಾನ ಮಾಡುತ್ತಿದ್ದರು. ಮನೆಯೇ ಛತ್ರ. ಬರುವ ಹೋಗುವ ಅತಿಥಿಗಳ ಸಂಖ್ಯೆಗೆ ಮಿತಿಯೇ ಇರಲಿಲ್ಲ.

ತಿರುಮಲಾಚಾರ್ಯರು ವೆಂಕಟಾಚಾರ್ಯರ ಕಾದಂಬರಿಗಳನ್ನು ಕೊಟ್ಟರು ಎಂದೆನಲ್ಲ. ಅದೇ ಒಂದು ರೀತಿಯಲ್ಲಿ ಕನ್ನಡದ ಅಭಿಮಾನಕ್ಕೆ ತಳಹದಿ ಹಾಕಿತು ಎನ್ನಬಹುದು. ಅಲ್ಲಿಂದ ಮುಂದೆ ಪಂಡಿತ ರಂಗಾಚಾರ್ಯರ ಪ್ರೋತ್ಸಾಹ, ಚಿಕ್ಕಪ್ಪನ ಜೊತೆಯ ವ್ಯಾಸಂಗ ಇತ್ಯಾದಿ. ಅದು ಚಿಗುರಿ ಮರವಾಗುವ ವೇಳೆಗೆ ಒಂದೆರಡು ಕತೆಗಳನ್ನು ಬರೆದು ಒಂದು ಪತ್ರಿಕೆ ಹೊರಡಿಸುವ ಸಾಹಸವನ್ನು ಮಾಡಿದೆವು. ಅದರಲ್ಲಿ ನಮ್ಮ ಅಣ್ಣ ನನ್ನ ಜೊತೆಗಾರ. ಅದಕ್ಕೆ ವಾಣೀ ವಿಲಾಸ ಎಂದು ಹೆಸರು ಇದ್ದಿತೋ ಏನೋ. ಎರಡನೇ ಸಂಚಿಕೆಯನ್ನೇ ಕಾಣಲಿಲ್ಲ ಅದು. ಅದರ ಆ ಪ್ರಾರಂಭದ ಕತೆ ಒಂದು ಮೈಸೂರಿನ ಮಧುರವಾಣಿ ಪತ್ರಿಕೆಯಲ್ಲಿ ಪ್ರಕಟ ಆದಂತೆ ನೆನಪು. ಅದರ ಹೆಸರು ಈಗ ನೆನಪಿಲ್ಲ.

ಮುಂದೆ ಬೇಕಾದಷ್ಟು ಬರೆಯುತ್ತ ಹೋದೆ. ಬರೆದಿದ್ದನ್ನೆಲ್ಲಾ ಹರಿದು ಹಾಕುತ್ತಲೂ ಹೋದೆ. ಆಗ ನಮ್ಮೂರಿಗೆ ಚಿತ್ರದುರ್ಗಕ್ಕೆ ದೊಡ್ಡಬೆಲೆ ಗೋಪಾಲಾಚಾರ್ಯರು ಪ್ರಾಥಮಿಕ ಶಾಲೆಗೆ ಮುಖ್ಯೋಪಾಧ್ಯಾಯರಾಗಿದ್ದರು. ಅವರು ನಮ್ಮ ಬಳಗ. ನಾನು ಬರೆದದ್ದನ್ನು ನೋಡಿ ಹರಿದು ಹಾಕು ಎಂದರು. ಹರಿದು ಹಾಕಿದೆ. ಗೋಪಾಲಾಚಾರ್ಯರು ಪಂಡಿತರು, ಸರಸಿಗಳು. ಅವರ ಶಾಲೆಯನ್ನು ಗಂಟೆ ಸಿದ್ದಪ್ಪರ ಕಾಲೇಜು ಎನ್ನುತ್ತಿದ್ದೆವು. ಸಿದ್ದಪ್ಪರ ಮನೆಯಲ್ಲಿ ಇತ್ತು ಅವರ ಶಾಲೆ.

ಮುಂದೆ ಹೈಸ್ಕೂಲ್ ಮುಗಿದಾಗ ಎಂಟ್ರನ್ಸಿನಲ್ಲಿ ಕನ್ನಡ ಐಚ್ಛಿಕವಾಗಿ ಕೊಡಿ ಎಂದು ಕೇಳಿದೆ. ವಿಶ್ವವಿದ್ಯಾನಿಲಯದಿಂದ ಉತ್ತರ ಬಂತು. ಕನ್ನಡ ಬೇಕಾಗಿದ್ದರೆ ಅಪ್ಪರ್ ಸೆಕೆಂಡರಿ ಓದಿ ಅಂತ. ಅಷ್ಟು ಬೆಳೆದಿತ್ತು ಇಂಗ್ಲೀಷ್ ವ್ಯಾಮೋಹ.

ಮದರಾಸು ವಿಶ್ವವಿದ್ಯಾನಿಲಯದಲ್ಲಿ ಇಂಟರ್‌ಮೀಡಿಯಟ್‌ಗೆ ಕನ್ನಡ ಭಾಷೆ ಐಚ್ಛಿಕವಾಗಿತ್ತು. ಆಗ ಆ ಸೌಲಭ್ಯ ಮೈಸೂರಿನಲ್ಲಿ ಇರಲಿಲ್ಲ. ಅಲ್ಲಿ ಕನ್ನಡದ ಎಂ.ಎ. ಮಾಡಿ ಬಂದ ವೆಂಕಣ್ಣಯ್ಯನವರು ಕನ್ನಡದ ಪ್ರೊಫೆಸರ್ ಆದದ್ದು ಮೊಟ್ಟಮೊದಲು.

ಹೈಸ್ಕೂಲಿನಲ್ಲಿ ಓದುವಾಗ ಕನ್ನಡದ ನಾಟಕಗಳನ್ನು ಆಡಿದೆವು. ನಮಗೆ ವಿಜ್ಞಾನ ಕಲಿಸಲು ಪೂರಿ ಪಲ್ಯ ಕೃಷ್ಣರಾಯರು ಮೇಷ್ಟ್ರು. ಅವರೇ ನಾಟಕದ ಅಭ್ಯಾಸ ಮಾಡಿಸಿದವರು. ಆಗ ನಮಗೆ ಅಭ್ಯಾಸ ಮಾಡಿಸಿದ ನಾಟಕಗಳಲ್ಲಿ ಎರಡು ಚೆನ್ನಾಗಿ ನೆನಪಿವೆ. ಒಂದು ಷೇಕ್ಸ್‌ಪಿಯರನ ಕಿಂಗ್ ಜಾನ್, ಇನ್ನೊಂದು ನಂಜನ

ಗೂಡಿನ ತಿರುಮಲಾಂಬಾ ಅವರ ರಮಾನಂದ. ನನ್ನ ಎತ್ತರ, ನನ್ನ ವಯಸ್ಸು, ನೋಡಿ ಮೇಷ್ಟ್ರು ಆ ನಾಟಕಗಳನ್ನು ಆರಿಸಿದ್ದರು.

ನಾನು ಓದುತ್ತಿದ್ದುದು ಐದನೇ ಫಾರಂ. ನಾಟಕದ ಗುಂಗಿನಲ್ಲಿ ಒಂದು ವಿಷಯದಲ್ಲಿ ಫೇಲು ಆದೆ. ಆಗ ನಮ್ಮ ವಿಜ್ಞಾನದ ಮೇಷ್ಟ್ರು ನನ್ನನ್ನು ಮುಂದಕ್ಕೆ ಹಾಕಿದರು.

ಹೈಸ್ಕೂಲಿನಲ್ಲಿ ಇದ್ದಾಗ ನಮಗೆ ಒಬ್ಬರು ಡ್ರಿಲ್ ಮೇಷ್ಟ್ರು ಇದ್ದರು. ಸಾಹೇಬರು. ಏನೇನೋ ಡ್ರಿಲ್ ಮಾಡಿಸುತ್ತಿದ್ದರು. ನಮ್ಮ ಚಿತ್ರದುರ್ಗದಲ್ಲಿ ಗುಡ್ಡ ಬೆಟ್ಟಗಳು ಬೇಕಾದಷ್ಟು. ಪ್ರತಿ ವಾರವೂ ಎಲ್ಲಿಗಾದರೂ ವಿಹಾರಕ್ಕೆ ಎಂದು Picnic ಕರೆದೊಯ್ಯುತ್ತಿದ್ದರು. ಒಂದು ಸಂಗತಿ ಚೆನ್ನಾಗಿ ನೆನಪಿದೆ. ನಾನು ಹೈಸ್ಕೂಲಿಗೆ ಬಂದ ಹೊಸದರಲ್ಲಿ ನಮ್ಮ ಶಾಲೆಯ ಮೇಲಿನ ತರಗತಿಯಲ್ಲಿ ಜಗಳೂರಿನ ಮಹಮದ್ ಇಮಾಂ ಓದುತ್ತಿದ್ದರು.

ಮುಂದೆ ಅವರು ವಕೀಲರಾಗಿ ನಮ್ಮ ಜಿಲ್ಲಾಬೋರ್ಡ್ ಅಧ್ಯಕ್ಷರಾಗಿ ಆಮೇಲೆ ಮಂತ್ರಿ ಆಗಿದ್ದರು. ಎಂ. ಪಿ. ಸಹ ಆಗಿದ್ದರು. ಅವರು ಆರಡಿಗಿಂತಲೂ ಹೆಚ್ಚು ಉದ್ದ ಇರಬೇಕು. ನಾನೋ ನಾಲ್ಕಡಿ ಮನುಷ್ಯ. ಡ್ರಿಲ್‌ನಲ್ಲಿ ಅವರು ಆ ಕೊನೆ. ನಾನು ಈ ಕೊನೆ. ನಾವು ಇಬ್ಬರೂ ಭೇಟಿ ಆಗುವ ಹಾಗೆ ಎರಡು ಕೊನೆಗಳನ್ನೂ ಬಾರಿ ಬಾರಿಗೂ ಕಲೆಸುವುದು ನಮ್ಮ ಮೇಷ್ಟ್ರಿಗೆ ಒಂದು ಸಂತೋಷ. ನನಗೋ ನಾಚಿಕೆ.

ಚಿತ್ರದುರ್ಗದಲ್ಲಿ ಓದುತ್ತಿರುವಾಗಲೇ ನಮ್ಮಲ್ಲಿ "ವೃತ್ತಾಂತ ರತ್ನಾಕರ" ಎಂಬ ವಾರಪತ್ರಿಕೆ ಹೊರಟಿತು. ಅದಕ್ಕೆ ಬಸಲಿಂಗಪ್ಪನವರು ಸಂಪಾದಕರು. ಹುಲ್ಲೂರು ಶ್ರೀನಿವಾಸ ಜೋಯಿಸರು ಕಾರ್ಯನಿರ್ವಾಹಕರು. ಆಗ ಇನ್ನೂ ಜೋಯಿಸರು ಸರಕಾರಿ ನೌಕರಿಯಲ್ಲಿ ಇದ್ದರು. ಸರಕಾರಿ ನೌಕರಿಯಲ್ಲೇ ಇರುತ್ತ ವಕೀಲಿ ಪರೀಕ್ಷೆಯನ್ನು ಮುಗಿಸಿಕೊಂಡು ವಕೀಲರು ಆದರು. ಇವರ ಹಾಗೆಯೇ ನೌಕರಿ ಮಾಡುತ್ತ ವಕೀಲಿ ಪರೀಕ್ಷೆಯನ್ನು ಮುಗಿಸಿ ವಕೀಲರು ಆದ ನನ್ನ ಹಿರಿಯ ಗೆಳೆಯ ಇನ್ನೂ ಇಬ್ಬರು. ಒಬ್ಬ ಹರಿಹರದ ಗುಂಡೂರಾಯರು, ಇನ್ನೊಬ್ಬರು ತಳುಕಿನ ರಾಮಸ್ವಾಮಯ್ಯನವರು.

ಈ ಮೂವರಿಗೂ ಸಾಹಿತ್ಯ ಪ್ರೇಮ. ಜೋಯಿಸರಂತೂ ಅದರಲ್ಲೇ ಮುಳುಗಿ ತೇಲಿದರು. ಆದರೆ ಅವರ ಮುಖ್ಯ ಒಲವು ಇತಿಹಾಸ ಸಂಶೋಧನೆ. ಚಿತ್ರದುರ್ಗ ಐತಿಹಾಸಿಕ ಸ್ಥಳ. ಅಲ್ಲಿರುವ ಬಂಡೆ ಬಂಡೆಗೂ ಬಾಯಿ ಇದೆ. ಏನೋ ಕಥೆ ಹೇಳುತ್ತಾರೆ. ಎಷ್ಟೋ ಸಲ ಜೋಯಿಸರ ಜೊತೆಯಲ್ಲಿ ಬೆಟ್ಟದ ಕಡೆ ಸಂಜೆ ಗಾಳಿ ಸವಾರಿಗೆ ಹೋಗಿದ್ದೇನೆ. ಹೋದಾಗೆಲ್ಲ ಯಾವುದೋ ಬಂಡೆಯ ಮೇಲಿನ ಶಿಲಾಲೇಖನವನ್ನು ತೋರಿಸಿ ಅದರ ಕತೆ ಹೇಳುತ್ತಿದ್ದರು. ಕದಂಬರ ಮಯೂರ ಶರ್ಮ,

ಆನೆಗೊಂದಿಯ ಕುಮಾರರಾಮ, ವಿಜಯನಗರದ ವಿದ್ಯಾರಣ್ಯ, ಚಿತ್ರದುರ್ಗದ ಮೋಟುಗೈಯ ವೀರ ಮದಕರಿ ನಾಯಕ, ಕಿತ್ತೂರಿನ ಚೆನ್ನಮ್ಮ, ಒನಕೆ ಕಿಂಡಿ ಓಬವ್ವ–ಎಷ್ಟೋ ಕತೆಗಳನ್ನು ಹೇಳುತ್ತಿದ್ದರು.

ಜೋಯಿಸರೇ ಪ್ರಯತ್ನಿಸಿ ಚಿತ್ರದುರ್ಗದ ರಂಗೈಯನ ಬಾಗಿಲಿನಲ್ಲಿ ಒಂದು ಐತಿಹಾಸಿಕ ಸಂಗ್ರಹಾಲಯವನ್ನು ಏರ್ಪಡಿಸಿದರು. ಮುಂದೆ ಸ್ವರಾಜ್ಯ ಬಂದ ಹೊಸದರಲ್ಲಿ ಅವರು ನಮ್ಮ ಶಾಸನ ಸಭೆಯ ಸದಸ್ಯರು ಆಗಿದ್ದರು. ಶುದ್ಧ ಖಾದೀ ಧಾರಿ. ಅವರ ಪ್ರೋತ್ಸಾಹವೇ ಚಿತ್ರದುರ್ಗದ ಮಂಜುನಾಥನನ್ನು ಕವಿಯಾಗಿ ನಾಟಕಕಾರನಾಗಿ ಬೆಳಕಿಗೆ ತಂದದ್ದು. ಚಿತ್ರದುರ್ಗದ ಕರ್ನಾಟಕ ಸಂಘಕ್ಕೆ ಬೆಂಬಲ ಆಗಿದ್ದರು.

ಅವರೂ ಗುಂಡೂರಾಯರೂ ಸೇರಿ ತಿಲಕ್ ಸಂಘವನ್ನು ಕಟ್ಟಿದರು. ಅದರಲ್ಲಿ ಪುಸ್ತಕ ಭಂಡಾರ, ವಾಚನಾಲಯ ಮುಖ್ಯ. ನಮ್ಮ ಮನೆಯ ಪಕ್ಕದಲ್ಲೇ ಇದ್ದುದ ರಿಂದ ನನಗೆ ಅದರಲ್ಲಿ ಹೆಚ್ಚು ಆಸಕ್ತಿ. ಈಗ ಆ ಸಂಘ ಇಲ್ಲ. ಕಾಲಗರ್ಭದಲ್ಲಿ ಮುಳುಗಿಹೋಯಿತು. ಅದರಿಂದ ಒಂದು ಪರಿಣಾಮ ಆಯಿತು. ಎಲ್ಲಿ ಹೋದರೂ ಒಂದು ಪುಸ್ತಕ ಭಂಡಾರ, ಒಂದು ವಾಚನಾಲಯ ಕಟ್ಟುವ ಹುರುಪನ್ನು ನನಗೆ ಕೊಟ್ಟಿತು.

ಹೈದರಾಬಾದಿನಲ್ಲಿ ಇದ್ದೆ ಎಂದು ಎಲ್ಲರಿಗೂ ಗೊತ್ತಿದೆಯಲ್ಲ. ಅಲ್ಲಿ ಸಾಹಿತ್ಯ ಮಂದಿರವನ್ನು ಪ್ರಾರಂಭಿಸುವಂತೆ ಮಾಡಿದ್ದು ಈ ಹರುಷೇ. ಮೊದಲು ಸಾಹಿತ್ಯ ಮಂದಿರ ನಮ್ಮ ಮನೆಯ ಜಗುಲಿಯ ಮೇಲೆ ಪ್ರಾರಂಭ ಆಯಿತು. ಕೆಲವೇ ಪುಸ್ತಕ. ಒಂದೇ ಚಿಕ್ಕ ಬೀರು. ಪುಸ್ತಕ ಕೊಡಲು ತೆಗೆದುಕೊಳ್ಳಲು ನಾನು. ನಾನು ಇಲ್ಲ ದಿದ್ದರೆ ನನ್ನ ಮಗ, ನನ್ನ ಹೆಂಡತಿ. ಈಗ ಸಾಹಿತ್ಯ ಮಂದಿರಕ್ಕೆ ತನ್ನದೇ ಕಟ್ಟಡ ಇದೆ. ಕನ್ನಡದಲ್ಲಿ ಪ್ರಕಟವಾದ ಎಲ್ಲಾ ಪುಸ್ತಕಗಳೂ ಇವೆ.

ಮೊದ ಮೊದಲು ಜಗುಲಿಯ ಮೇಲೆ ಇದ್ದುದು ನಮ್ಮ ಮನೆಯ ಒಂದು ಕೋಣೆಗೆ ಬಂತು. ಚಿಕ್ಕ ಪೆಟ್ಟಿಗೆಯಲ್ಲಿ ಇದ್ದ ಪುಸ್ತಕ ನಾಲ್ಕು ಬೀರು ತುಂಬಿದವು. ಮನೆಯಲ್ಲಿ ಅದಕ್ಕೆ ಸಂಬಂಧಿಸಿದ ಹಾಗೆ ಒಂದು ವ್ಯಾಸಂಗ ಗೋಷ್ಠಿಯೂ ನಡೆ ಯಿತು. ಪ್ರತಿ ಗುರುವಾರ ರಾತ್ರಿ ಹಳೆಗನ್ನಡ ನಡುಗನ್ನಡ ಪುಸ್ತಕಗಳ ವ್ಯಾಸಂಗ, ಮನಸ್ಸಿಗೆ ಹರಟೆ ಚರ್ಚೆ ಗುರುವಾರ ರಾತ್ರಿ. ಏಕೆ ಎಂದರೆ, ಮಾರನೆ ದಿನ ಶುಕ್ರ ವಾರ ಹೈದರಾಬಾದಿನಲ್ಲಿ ಸಾರ್ವತ್ರಿಕ ಸೂಟಿ. ಗುರುವಾರ ರಾತ್ರಿ ರೊಟ್ಟಿ ಬದನೆಕಾಯಿ ಪಲ್ಯ ಆಗಬೇಕು. ಮನೆಯಲ್ಲಿ ತಿಂದು ಮಂದಿರದ ಕೋಣೆಯಲ್ಲಿ ಕೂತರೆ ಹನ್ನೊಂದೇನು ಹನ್ನೆರಡೇನು. ಮಧ್ಯರಾತ್ರಿ ಆದಮೇಲೇ ಮಲಗುತ್ತಿದ್ದುದು ಈ ಗುಂಪಿನಲ್ಲಿ ಈಗ ಇನ್ನು ಜೀವಂತ ಆಗಿರುವ ಗೆಳೆಯರು ದೊಡ್ಡ ದೊಡ್ಡ ಹುದ್ದೆಗಳಲ್ಲಿ ಇದ್ದಾರೆ.

ಒಬ್ಬರು ಹೈದರಾಬಾದು ಕಾಂಗ್ರೆಸ್ಸಿನ ಜೀವಾಳದಂತೆ ಇದ್ದ ಪ್ರಾಣೇಶಾಚಾರ್ಯರು ಮಾತ್ರ ತೀರಿಹೋಗಿದ್ದಾರೆ.

ಚಿತ್ರದುರ್ಗದ ಗುಡ್ಡಗಳ ಮಾತನ್ನೂ ಹೇಳಿದೆ. ನಮ್ಮ ಗೋಪಾಲಕೃಷ್ಣ ದೇವರ ದೇವಸ್ಥಾನದ ಮುಂದಿನ ಹೊಂಡಕ್ಕೆ ವಾರಕ್ಕೊಂದು ಸಲ ಆದರೂ ಹೋಗಿ ಬಾರದೆ ಇದ್ದರೆ ನಮಗೆ ಯಾರಿಗೂ ತೃಪ್ತಿಯಿಲ್ಲ. ಅಲ್ಲಿ ಹೋಗಬೇಕು. ಸ್ನಾನ ಮಾಡಬೇಕು. ಶಕ್ತ್ಯಾನುಸಾರ ಜಪ ಮಾಡಬೇಕು. ನಮ್ಮ ಮೋಕ್ಷಗುಂಡಂ ಶ್ರೀನಿವಾಸಾವಧಾನಿಗಳು ಇದಕ್ಕೆ ಮುಂದಾಳುಗಳು. ಗ್ರಹಣ ಸ್ನಾನ, ಉಪಾ ಕರ್ಮದ ದಿನಗಳಲ್ಲಿ ಅಲ್ಲಿಗೆ ಹೋಗದೆ ಇರುತ್ತಿರಲಿಲ್ಲ.

ಚಿತ್ರದುರ್ಗ ಬಹಳ ರಮ್ಯವಾದ ಸ್ಥಳ. ಸುತ್ತಲೂ ಬಿಸಿಲು ಸುಡುತ್ತಿದ್ದರೂ ಅಲ್ಲಿ ತಣ್ಣಗೆ ಇರುತ್ತದೆ. ಆ ಜೋಗಿ ಮಟ್ಟಿ, ಆ ಹಿಮವತ್ ಕೇದಾರ, ಆ ಧರ್ಮಪ್ಪನ ಗುಡ್ಡ, ಅಲ್ಲಿನ ಮಂಜಿನಂತೆ ಕೊರೆಯುವ ಸ್ವಚ್ಛ ಸ್ಫಟಿಕದಂಥ ನೀರು, ಅಂಕಳ್ಳಿ ಮಠ, ಎಣ್ಣೆಕೊಳ, ತುಪ್ಪದ ಕೊಳ, ಸಂಪಿಗೆ ಸಿದ್ಧೇಶ್ವರನ ಗುಡಿ ಎಲ್ಲವೂ ಬಹಳ ಚೆಂದ. ಈಗಲೂ ಅದರ ಸೆಳೆತ ಇದೆ ನನಗೆ. ಆದರೆ ದೇಹ ದುರ್ಬಲವಾಗಿ ಮೇಲೆ ಏರಲು ಆಗುವುದಿಲ್ಲ.

ಚಿತ್ರದುರ್ಗದಲ್ಲಿ ಹಿಡಿಂಬನ ಹಲ್ಲು ಎಂದು ಒಂದು ದೊಡ್ಡ ಹಲ್ಲನ್ನು ತೋರಿ ಸುತ್ತಾರೆ. ಆನೆಯ ಹಲ್ಲೋ ಏನೋ. ದಾರಿಯಲ್ಲಿ ಕುದುರೆ ಕಾಲಿನ ಗೊರಸಿನ ಹಾಗೆ ದಾರಿಗೆ ಹಾಸಿದ ಕಲ್ಲುಗಳ ಮೇಲೆ ಗುಂಡಿಗಳು ಬಿದ್ದಿವೆ. ಒಂದೇ ಸಮನೆ ಕೆಲವು ದೂರದವರೆಗೆ ಹಾಗೆ ಇರುವುದರಿಂದ ಹಿಂದಿನ ಕಾಲದಲ್ಲಿ ಕುದುರೆಗಳು ಓಡಾಡಿ ಗುರುತು ಬಿದ್ದಿವೆ ಎನ್ನುತ್ತಾರೆ.

ಚಿತ್ರದುರ್ಗಕ್ಕೆ ಕೆಲವು ದಿನ ಸಿದ್ದವನಹಳ್ಳಿಯಿಂದ ನಡೆದು ಬರುತ್ತಿದ್ದೆವು ಶಾಲೆಗೆ. ದಾರಿಯಲ್ಲಿ ಒಂದು ಕಣಿವೆ ಇದೆ. ಅಲ್ಲಿ ಕಣಿವೆ ಮಕ್ಕ ಗುಡಿ ಇದೆ. ಬೇಸಿಗೆ ಯಲ್ಲಿ ಅಲ್ಲಿ ಅರವಟ್ಟಿಗೆ ಇಡುತ್ತಿದ್ದರು. ಯಾರು ಇಡುತ್ತಿದ್ದರೋ. ಅಲ್ಲಿಗೆ ಬರುವ ವೇಳೆಗೆ ಕಣಿವೆ ಏರಿ ಬಂದು ಸಾಕುಸಾಕಾಗಿ ಗುಡಿಯ ಕಟ್ಟೆಯ ಮೇಲೆ ವಿಶ್ರಮಿಸಿ ಕೊಳ್ಳುವುದು ನಮ್ಮ ಪದ್ಧತಿ. ಆಗ ದಾರಿಗರು ಎಷ್ಟುಜನ ಆ ನೀರನ್ನು ಕುಡಿದು ಅವರನ್ನು ಹರಸುತ್ತಿದ್ದರು !

ಬರೀ ನೀರೆ ಅಲ್ಲ, ನೀರು ಮಜ್ಜಿಗೆಯನ್ನು ಕೊಡುತ್ತಿದ್ದರು. ಕೆಲವು ಕಡೆಗಳಲ್ಲಿ ಅವರು ಹೆಸರು, ಕುಲಗೋತ್ರ ಯಾವುದೂ ಯಾರಿಗೂ ನೆನಪಿಲ್ಲ. ನೆನಪು ಇರ ಬೇಕು ಎಂಬ ಚಿಂತೆಯೂ ಆ ಕಾಲದವರಿಗೆ ಇರಲಿಲ್ಲ.

ಈ ಅವರಟ್ಟಿಗೆಯ ಮಾತು ಬಂದು ನಮ್ಮ ತಾಯಿಯ ನೆನಪು ಆಗುತ್ತದೆ. ಆಕೆಯದೂ ಒಂದು ಅರವಟ್ಟಿಗೆಯಿತ್ತು. ನಮ್ಮ ಹಳ್ಳಿಯ ಜಾತ್ರೆಯ ಕಾಲದಲ್ಲಿ

ಬಂದವರಿಗೆ ಬಾಯಾರಿಕೆ ತಣಿಸಲು ಅದರಲ್ಲಿ ಸ್ವಲ್ಪ ಪಾನಕ ಕೋಸಂಬರಿಯೂ ವಿನಿಯೋಗ ಆಗುತ್ತಿತ್ತು.

ಆ ಮಹಾರಾಯತಿ ಈಗ ಯಾವ ಸ್ವರ್ಗದಲ್ಲಿ ಇದ್ದಾಳೋ! ಬದುಕಿದ್ದಾಗಂತೂ ಸುತ್ತಮುತ್ತಲಿನವರಿಗೆ ಊರಿನಲ್ಲಿ ಮನೆಗೆ ಬಂದವರಿಗೆ ಸಾಕ್ಷಾತ್ ಅನ್ನದೇವತೆ. ಸ್ವಲ್ಪ ಸ್ಥೂಲಕಾಯ, ಅಂಥ ವಿಶೇಷ ಏನೂ ಅಲ್ಲ ಆಕೆಯ ಹೇಗೆಗಳಿಗೆ. ಆದರೆ ಬಹಳ ಗಟ್ಟಿಮುಟ್ಟು. ನಾವು ಹೊರಗಡೆ ಹೋದಾಗ ಪಲ್ಲಾಗಟ್ಟಳೆ ಗೋಧಿ ಹುಗ್ಗಿ ಅನ್ನ ಸಾರು ಮಾಡಬೇಕಾಗುತ್ತಿತ್ತು. ಎಲ್ಲವನ್ನೂ ಒಬ್ಬಳೇ ಮಾಡುತ್ತಿದ್ದಳು. ಯಾರ ಸಹಾಯವೂ ಇಲ್ಲ. ದೊಡ್ಡ ದೊಡ್ಡ ಹಂಡೆ ಕೊಳಗ ತಪ್ಪಲೆಗಳಲ್ಲಿ ಮಾಡಿದ ಅಡಿಗೆಯನ್ನು ಅನಾಯಾಸವಾಗಿ ಇಳಿಸುತ್ತಿದ್ದಳು. ಆಕೆಗೆ ಓದು ಬರಹ ಇಲ್ಲ. ಆದರೆ ಎಲ್ಲ ಸ್ತೋತ್ರಗಳು ಆಕೆಗೆ ಬರುತ್ತಿದ್ದವು. ಎಲ್ಲ ಸಂಪ್ರದಾಯಗಳೂ ಗೊತ್ತು. ಬಹಳ ವಾತ್ಸಲ್ಯಮಯಿ. ಮನೆಯಲ್ಲಿ ಆಳುಕಾಳು ಎಂದರೆ ಆಕೆಗೆ ಬಲು ವಿಶ್ವಾಸ.

ಮನೆಯಲ್ಲಿ ಹತ್ತು ಹನ್ನೊಂದು ಹಸು, ಎರಡು ಮೂರು ಎಮ್ಮೆ ಇದ್ದವು, ಆಕೆಯ ಕಾಲದಲ್ಲಿ. ಬೆಳಿಗ್ಗೆ ಎದ್ದು ಆಕೆ ಗೋವು ಪೂಜೆ ಮಾಡಲು ಅವಕ್ಕೆ ಅರಿಸಿನ ಕುಂಕುಮ ಇಟ್ಟರೆ ನಮಗೆ ಏನೋ ಸೋಜಿಗ. ನಾಲ್ಕೈದು ಹಸು ಕರೆಯುತ್ತಿದ್ದವು. ಎಮ್ಮೆಗಳೂ ಕರೆಯುತ್ತಿದ್ದವು. ದಿನವೂ ಬೆಳಿಗ್ಗೆ ಆಕೆ ಮಜ್ಜಿಗೆ ಕಡೆಯಲು ಒಂದು ದೊಡ್ಡ ಕಡಗೋಲು ಇತ್ತು. ಮನೆಯ ಪಡಸಾಲೆಯಲ್ಲಿ ಒಂದು ಕಂಬಕ್ಕೆ ಮೊಳೆ ಹೊಡೆದು ಅದಕ್ಕೆ ಹಗ್ಗ ಹಾಕಿ ಆಕೆ ಮೊಸರು ಕಡೆಯುತ್ತ ಇದ್ದರೆ ಸಾಕ್ಷಾತ್ ಲಕ್ಷ್ಮಿಯೇ ಕಡೆಯುತ್ತಿದ್ದ ಹಾಗೆ ಅನಿಸುತ್ತಿತ್ತು.

ನಮ್ಮ ಮನೆಯ ಗೋಡೆ ಮೂರು ಅಡಿ ದಪ್ಪ, ಪಾಯ ಎಷ್ಟು ಇದೆಯೋ ಇಲ್ಲವೋ ಗೊತ್ತಿಲ್ಲ. ದೊಡ್ಡ ತಲೆಬಾಗಿಲು, ಕದಗಳು, ಒಂದೊಂದು ಹದಿನೈದು ಅಡಿ ಎತ್ತರ. ಒಂಬತ್ತು ಅಂಗುಲ ದಪ್ಪ. ಒಳ್ಳೆ ಕಮರದ ಮರದ್ದು. ಚಿಕ್ಕ ಮಕ್ಕಳಿಗೆ ಹಾಕಿ ತೆಗೆಯಲು ಸಾಧ್ಯವಿರಲಿಲ್ಲ.

ಒಳಗಡೆ ವಿಶಾಲವಾದ ಅಂಗಳ. ಅಲ್ಲೇ ಈ ದನ ಕಟ್ಟುತ್ತಿದ್ದೆವು. ಅಲ್ಲಿ ಸುತ್ತಲೂ ಆಳುಗಳು ಮಲಗಿ ಹಾಡು ಕೇಳುತ್ತಿದ್ದರೆ ನಡುವೆ ಹೊರಸಿನ ಮೇಲೆ ಮಲಗಿದ್ದರೆ ಎಂಥ ಸುಖ! ಈಗ ಜನಪದ ಸಾಹಿತ್ಯ ಇಂದು ರೂಢಿಗೆ ಬರುತ್ತಿದೆ. ಆಗ ನಮ್ಮ ಆಳುಗಳು ದಿನವೂ ಹೇಳುತ್ತಿದ್ದ ಲಾವಣಿಗಳನ್ನು ಕೇಳಿ ಕೇಳಿ ಏನೋ ಒಂದು ಆನಂದಾನುಭವ ಆಗುತ್ತಿತ್ತು.

ನಮ್ಮ ನಾಲ್ವರು ಆಳುಗಳಲ್ಲಿ ಒಬ್ಬನ ಹೆಸರು ಭೀಮ. ಅವನ ತಾಯಿ ಕುಂತಿ. ಪುರಾಣದ ಕುಂತಿಯ ಮಗ ಭೀಮ ಇದ್ದ ಹಾಗೇ ಇದ್ದ. ಅವನ ಆಹಾರವೂ ಹಾಗೇ. ಒಂದು ದಿನ ಉಳಿದ ಆಳುಗಳು, ಅವನನ್ನು ರೇಗಿಸಿ ಪಂದ್ಯ ಕಟ್ಟಿದರು. ಹೊಲದಲ್ಲಿ ಕೆಲಸ ಮಾಡಿ ನೆಟ್ಟಗೆ ಮನೆಗೆ ಬರಬೇಕು. ಮೈ ಮೇಲೆ ಎಲ್ಲೂ ಯಾವ ಎಲೆ-

ಸೊಪ್ಪು ಇರಕೂಡದು. ಬರೀ ಚಡ್ಡಿ ಹಾಕಿಕೊಂಡು ಊಟ ಮಾಡಬೇಕು ಎಂದು. ಆ ಪುಣ್ಯಾತ್ಮ ಅವತ್ತು ಹಾಗೆ ಮಾಡಿದ. ನಾಲ್ಕು ಸೇರು ಸಜ್ಜೆ ರೊಟ್ಟಿ, ಅಚ್ಚೇರು ಅನ್ನ, ಒಂದು ಘಡುವು ಬದನೆಕಾಯಿ ಪಲ್ಯ ಎಲ್ಲವನ್ನೂ ತಿಂದು ಒಂದು ಬಿಂದಿಗೆ ನೀರು ಕುಡಿದ. ಅವತ್ತು ಪಂದ್ಯದಲ್ಲಿ ಅವನೇ ಗೆದ್ದ. ನಮ್ಮ ತಾಯಿ ಇವನ್ನೆಲ್ಲ ಮಾಡಿ ಬಡಿಸಿದಳು.

ಒಂದು ಸಲ ಎಲ್ಲೋ ಹಳ್ಳಿಗೆ ಹೋಗಿ ಬರುತ್ತಿದ್ದೆವು. ಒಂದು ಊರಿನ ಮುಂದೆ ನಮ್ಮ ಗಾಡಿ ಬಂದಾಗ ಒಬ್ಬ ಹೆಂಗಸು ಬಂದು ನೆಲದ ಮೇಲೆ ಉರುಳಾಡಿದಳು. 'ಅಮ್ಮ, ಏನಾದರೂ ಔಷಧ ಕೊಡು, ಹೊಟ್ಟೆನೋವಿನಿಂದ ಸಾಯುತ್ತ ಇದ್ದೇನೆ' ಎಂದು ಗೋಳಾಡಿದಳು. ನಮ್ಮ ತಾಯಿಯ ಬಳಿ ಔಷಧದ ಚೀಲ ಇರಲಿಲ್ಲ. ಒಂದು ನಾಮದ ಪೆಟ್ಟಿಗೆ ಇತ್ತು. ಅದರಿಂದ ಬಿಳಿನಾಮವನ್ನು ತೆಗೆದು ತೇದುಕೊಟ್ಟಳು; ಅದನ್ನು ಕುಡಿದ ಕಾಲು ಗಂಟೆಯ ಒಳಗಾಗಿ ಆ ಹೆಂಗಸು ಶಾಂತ ಆದಳು.

ಇನ್ನೊಂದು ಸಲ ಒಬ್ಬ ಹೆಣ್ಣು ಮಗಳು ನಮ್ಮ ಊರಿಗೇ ಬಂದಿದ್ದಳು. ಆಕೆಗೆ ಎದೆ ಹುಣ್ಣು ಬಹಳ ಆಳವಾಗಿತ್ತು. ಕಡ್ಡಿಯ ಹಾಗೆ ಆಗಿದ್ದಳು. ಏನೋ ಹಿತ್ತಿಲಲ್ಲಿ ಇದ್ದ ಒಂದೆರಡು ಹಸಿರನ್ನು ತಂದು ಹಿಂಡಿ, ಅದನ್ನು ಒಂದು ತಾಮ್ರದ ತಟ್ಟೆಯಲ್ಲಿ ಹಾಕಿ, ತುಪ್ಪ ಬೆರಸಿ ತಾಮ್ರದ ತಂಬಿಗೆಯಿಂದ ಚೆನ್ನಾಗಿ ಅರೆದು ನುಣ್ಣಗೆ ಮಾಡಿ ಅದನ್ನು ಹಚ್ಚಿದಳು. ಮೂರೇ ದಿನದಲ್ಲಿ ಆ ಗಾಯ, ಆ ಹುಣ್ಣು ಗುಣ ಆಯಿತು. ಇದೂ ಒಂದು ಕಾರಣ, ಈ ವೈದ್ಯವೂ ಒಂದು ಕಾರಣ ಆಕೆಯ ಜನಪ್ರಿಯತೆಗೆ. ಆಕೆಯ ತಂದೆ, ನಮ್ಮ ಅಜ್ಜ, ಘನ ವೈದ್ಯರು.

ಹೀಗೆ ನಡೆದಿತ್ತು ಶಾಂತವಾದ ಗ್ರಾಮಜೀವನ ಆಗ.

* * * *

೧೯೨೦ನೇ ವರ್ಷ ಲೋಕಮಾನ್ಯ ತಿಲಕರು ಸತ್ತರು. ಅದಕ್ಕಾಗಿ ಮೈಸೂರಿನಲ್ಲಿ ಒಂದು ಮೆರವಣಿಗೆ ಹೊರಟಿತು. ವಿದ್ಯಾರ್ಥಿಗಳದು. ಅಲ್ಲಿ ಇಲ್ಲಿ ತಿರುಗಾಡಿ ಮೆರವಣಿಗೆ ಅಲ್ಲಿಂದ ಮಹಾರಾಜಾ ಹೈಸ್ಕೂಲ್ ಬಳಿಗೆ ಬರುವ ವೇಳೆಗೆ ಪೋಲೀಸರು ಮೆರವಣಿಗೆಗೆ ಅಡ್ಡ ಬಂದು ನಿಲ್ಲಿಸಿದರು. ಹುಡುಗರು ಸುಮ್ಮನೆ ಇರುತ್ತಾರೆಯೇ. "ನಿಲ್ಲಿಸುವುದಿಲ್ಲ" ಎಂದರು. ಪೋಲೀಸರಿಗೂ ವಿದ್ಯಾರ್ಥಿಗಳಿಗೂ ಘರ್ಷಣೆ ಆಯಿತು. ಪೋಲೀಸರು ಲಾಠಿ ಪ್ರಹಾರ ಮಾಡಿದರು. ಹುಡುಗರು ಚೆಲ್ಲಾಪಿಲ್ಲಿ. ಆ ಗಲಾಟೆಯಲ್ಲಿ ನಾನು ಹಿಡಿದಿದ್ದ ಮೈಸೂರು ಮಹಾರಾಜರ ಪಟ್ಟಕ್ಕೆ ಏಟು ಬಿದ್ದು ಕನ್ನಡಿ ಒಡೆಯಿತು. ಮೆರವಣಿಗೆ ಮುಂದಿನ ಸಾಲಿನಲ್ಲಿ ನಾನು, ಆಚಾರ್ಯ ಎಂ. ಜಿ. ಲಕ್ಷ್ಮೀನರಸು ಇದ್ದೆವು. ಅವರ ಪಂಚೆಗಳು ಹರಿಯಿತೆಂದು ನನಗೆ ನೆನಪು.

ನನ್ನ ಕೈಲಿದ್ದ ಪಟಕ್ಕೆ ಏಟು ಬಿತ್ತೊ ಇಲ್ಲವೋ ಮಹಾರಾಜರಿಗೆ ಅವಮಾನ ಆಯಿತು ಎಂದು ಕೂಗುತ್ತ ಎಲ್ಲರೂ ಸುಬ್ಬರಾಯರ ಕಡೆಗೆ ಓಡಿದೆವು. ಆಗ ಸುಬ್ಬರಾಯರ ಕರೆಯೇ ಎಲ್ಲ ಸಾರ್ವಜನಿಕ ಚಟುವಟಿಕೆಗಳಿಗೆ ಭಾಷಣಗಳಿಗೆ ಸ್ಥಾನ.

ಅಲ್ಲಿ ಸಭೆ ಮಾಡಿ ಮಹಾರಾಜರಿಗೆ ತಂತಿಕೊಟ್ಟೆವು. ಆಗ ಶ್ರೀ ನರಸಿಂಹಶಾಸ್ತ್ರಿ ಎಂತಲೋ ಏನೋ ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟ್ ಆಗಿದ್ದರು. ನಮ್ಮ ಮೆರವಣಿಗೆಯನ್ನು ಅಡ್ಡ ಪಡಿಸಲು ಕುದುರೆಯ ಮೇಲೆ ಬಂದಿದ್ದರು. ಅವರನ್ನು ಕೂಡಲೇ ಕೆಲಸದಿಂದ ತೆಗೆದುಹಾಕಲೇಬೇಕೆಂದು ತೀರ್ಮಾನಮಾಡಿ ಕಳಿಸಿಕೊಟ್ಟೆವು. ಅದರ ಪರಿಣಾಮವಾಗಿ ಒಂದು ವಿಚಾರಣೆ ನಡೆಯಿತು. ಆಮೇಲೆ ಏನಾಯಿತೋ ನೆನಪಿಲ್ಲ.

ಅದರ ಹಿಂದಿನ ವರ್ಷ ಗಾಂಧೀಜೀ ಬೆಂಗಳೂರಿಗೆ ಬಂದಿದ್ದರು. ಸೇಲಂ ಕಡೆಯಿಂದ ಬಂದರು. ಮಹಾಕಾಯ ಷೌಕತಾಲಿಯೂ ಬಂದರು. ಈ ದಗಾದಲ್ಲಿ ಸಭೆ ನಡೆಯಿತು. ಆಗ ಖಿಲಾಫಾತ್ ಚಳುವಳಿ ಬಲವಾಗಿದ್ದಿತು. ಆಲಿ ಸೋದರರನಿಗೂ ಗಾಂಧೀಜೀಗೂ ಬಲವಾದ ಗಂಟು ಬಿದ್ದಿತ್ತು. ಗಾಂಧೀಜೀಯನ್ನು ಇಲಿ ಎಂದು ಕರೆಯುತ್ತಿದ್ದ ಷೌಕತಾಲಿ. ನನ್ನ ಜೇಬಿನಲ್ಲಿ ಇದ್ದಾರೆ ಈ ಮನುಷ್ಯ ಎನ್ನುತ್ತಿದ್ದ.

ಗಾಂಧೀಜೀ ಬರುತ್ತಾರೆ ಎಂದು ಕೇಳಿ ನಾವು ಕೆಲವರು ಮೈಸೂರಿನಿಂದ ಬೆಂಗಳೂರಿಗೆ ಬಂದಿದ್ದೆವು ಅವರನ್ನು ನೋಡಲು. ಈ ದಗಾದಲ್ಲಿ ವ್ಯವಸ್ಥೆ ಚೆನ್ನಾಗಿತ್ತು. ಎಲ್ಲಾ ಖಿಲಾಫತ್ ಸ್ವಯಂಸೇವಕರು. ಕಾಂಗ್ರೆಸ್ ಸ್ವಯಂಸೇವಕರು ಆಗ ಇನ್ನೂ ಇರಲಿಲ್ಲ. ಸಭೆಗೆ ಮಹಾಕಾಯ ಷೌಕತಾಲಿ, ಗಾಂಧೀಜಿ ಇಬ್ಬರೂ ಬಂದರು. ಸಭೆ ಪ್ರಾರಂಭವಾದ ಮೇಲೆ ಮಳೆ ಜೋರಾಗಿ ಬಂತು.

ಸಭೆಗೆ ಬಂದಿದ್ದವರು ಕೆಲವರು ಛತ್ರಿ ತೆಗೆದರು. ಸ್ವಯಂಸೇವಕರು ಛತ್ರಿ ತೆರೆಯಬೇಡಿ ಎಂದು ಬಿನ್ನವಿಸಿಕೊಂಡರು. ಛತ್ರಿಗಳು ಎಲ್ಲವೂ ಮುದುಡಿಕೊಂಡವು. ಎಲ್ಲರೂ ಕುಕ್ಕರುಗಾಲಿನಲ್ಲಿ ಕುಳಿತೆವು. ಮಳೆ ನೀರು ನೆಲದಲ್ಲಿ ಹರಿಯಿತು. ರಪರಪ ಹೊಡೆದ ಮಳೆ ಆದರೂ ಯಾರೂ ಅಲ್ಲಿಂದ ಕದಲಲಿಲ್ಲ. ಕಿವಿಗೊಟ್ಟು ಗಾಂಧೀಜಿ ಹೇಳಿದುದನ್ನು ಕೇಳಿದರು.

ಮುಂದೆ ಗಾಂಧೀಜಿಗೆ ಮದರಾಸಿಗೆ ಹೋದರೊ, ಬೊಂಬಾಯಿಗೆ ಹೋದರೋ ನನಗೆ ಆಗ ಗೊತ್ತಾಗಲಿಲ್ಲ. ಅದೇ ಮೊದಲು ನನಗೆ ಗಾಂಧೀಜೀಯ ದರ್ಶನ: ಮತ್ತೆ ಮುಂದೆ ಇಪ್ಪತ್ತು ವರ್ಷ ಅವರ ದರ್ಶನ ಇಲ್ಲ. ಆದರೆ ಗಾಂಧೀಜೀಯ ಯಂಗ್ ಇಂಡಿಯಾ ಕೈಗೆ ಬಂದಾಗಿನಿಂದ ಓದುತ್ತಿದ್ದೆ. ಬೈಂಡು ಮಾಡಿಸಿದ ಸಂಪುಟಗಳು ಈಗಲೂ ಇವೆ ಗಾಂಧೀ ಸಾಹಿತ್ಯ ಸಂಘದಲ್ಲಿ.

ಮುಂದೆ ಬದುಕಿನಲ್ಲಿ ಬಹಳ ಬದಲಾವಣೆ ಆಯಿತು. ಮೈಸೂರಿನಲ್ಲಿ ಸದ್ವೈದ್ಯ

ಶಾಲೆಯ ಕಾಂಪೌಂಡಿನಲ್ಲಿ ಪರದೇಶೀ ವಸ್ತ್ರದಹನ ಸಭೆಗಳನ್ನು ನೋಡಿದೆವು. ಸಾಧಾರಣವಾಗಿ ಅದರಲ್ಲಿ ಭಾಷಣ ಮಾಡುತ್ತಿದ್ದವರು ಧಾರವಾಡದ ಜನ. ಅವರು ಯಾರೂ ಈಗ ಇಲ್ಲ. ಕಡಪಾ ರಾಘವೇಂದ್ರರಾಯರು, ಮುದವೀಡು ಕೃಷ್ಣರಾಯರು. ಇಬ್ಬರ ನೆನಪು ಚೆನ್ನಾಗಿ ಇದೆ. ಅವರ ಜೊತೆಯಲ್ಲಿ ನಲ್ಲೂರು ಶ್ರೀನಿವಾಸ ಯ್ಯಂಗಾರ್ಯರೂ ಇದ್ದರು. ಶ್ರೀನಿವಾಸಯ್ಯಂಗಾರ್ಯರು ಮೈಸೂರಿನವರಾದರೂ ಬೊಂಬಾಯಿಯಲ್ಲಿ ನೆಲಸಿ ಬೊಂಬಾಯಿಯ ಹೈಕೋರ್ಟ್ ನ್ಯಾಯಾಧೀಶರಾಗಿ ನಿವೃತ್ತರಾಗಿದ್ದರು. ಇವರ ನಡುವೆ ಆಗತಾನೇ ಕಾಲೇಜಿಗೆ ಶರಣು ಹೊಡೆದಿದ್ದ ವುಳಿಯೇ ಗೋವರ್ಧನರಾಯರೂ ಇದ್ದ ಹಾಗೆ ನೆನಪು.

ಈ ಸಂಸ್ಕಾರ ವರ್ಧಾಕ್ಕೆ ನನ್ನನ್ನು ಎಳೆದು ಒಯ್ದಿತು. ಇವು ಸುಪ್ತ ಸಂಸ್ಕಾರ.

* * * *

ಆ ಸುಮಾರಿಗೆ ನನಗೆ ನಮ್ಮ ಬಂಧು ಬಳ್ಳಾರಿ ರಾಘವಾಚಾರ್ಯರ ಪರಿಚಯ ಆಯಿತು. ಮೈಸೂರಿನಲ್ಲಿ ಲಿಟರರಿ ಅಂಡ್ ಡ್ರೆಮಾಟಿಕ್ ಅಸೋಸಿಯೇಷನ್ ಎಂಬ ಒಂದು ಸಂಘವನ್ನು ಮಾಡಿಕೊಂಡಿದ್ದೆವು. ಅದಕ್ಕೆ ದಿವಂಗತ ಮೈಸೂರು ಲಕ್ಷ್ಮೀ ನಾರಾಯಣರಾಯರು ಕಾರ್ಯದರ್ಶಿ. ದಿವಂಗತ ಎಂ. ಡಿ. ರಂಗೈಯ್ಯಂಗಾರ್ಯರು ಸಂಗೀತ ನಿರ್ದೇಶಕರು. ಬೆಂಗಳೂರಿಗೆ ಬಂದು ಕನ್ನಡದಲ್ಲಿ ನಾಟಕ ಆಡಿದೆವು. ಆಗ ರಾಘವಾಚಾರ್ಯರ ಪರಿಚಯ ಆಯಿತು.

ಈ ಪರಿಚಯ ಬೆಳೆದು ಪಂಡಿತ ತಾರಾನಾಥರಾಯರ ಪರಿಚಯ ಆಯಿತು. ಪಂಡಿತ ತಾರಾನಾಥರು ಅದ್ಭುತ ವ್ಯಕ್ತಿ. ಅವರದು ತುಂಗಾಭದ್ರಾ ತೀರದಲ್ಲಿ ರಾಮ ಪುರಕ್ಕೆ ಸೇರಿದ ಒಂದು ಹೊಲದಲ್ಲಿ 'ಪ್ರೇಮಾಯತನ' ಆಶ್ರಮ ಇತ್ತು. ಅಲ್ಲಿಯೂ ಕೆಲವು ದಿನ ಇದ್ದೆ.

ತಾರಾನಾಥರು ಶುದ್ಧ ಖಾದೀಧಾರಿಗಳು. ಕಾಂಗ್ರೆಸ್ಸಿನಲ್ಲಿ ಅಪರಿಮಿತ ಭಕ್ತಿ. ೧೯೨೪ರಲ್ಲಿ ಬೆಳಗಾವಿಯಲ್ಲಿ ಕರ್ನಾಟಕದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತಲ್ಲ. ಮಹಾತ್ಮ ಗಾಂಧಿಯೇ ಅಧ್ಯಕ್ಷರಾಗಿದ್ದರು. ಅದಕ್ಕೆ ಸ್ವಾಗತಾಧ್ಯಕ್ಷರಾಗಿ ಎಂದು ತಾರಾನಾಥರಾಯರ ಮನವೊಲಿಸಲು ಒಂದು ನಿಯೋಗವೇ ಬಂದಿತ್ತು ಬಳ್ಳಾರಿಗೆ. ಯಾರು ಯಾರು ಅದರಲ್ಲಿದ್ದವರು ಎಂಬುದು ನೆನಪಿಲ್ಲ. ತಾರಾನಾಥರಾಯರು ಗಂಭೀರವಾಗಿ, ಆದರೆ ದೃಢವಾಗಿ ಅದನ್ನು ಒಪ್ಪಲಿಲ್ಲ.

ಬೆಳಗಾವಿಯ ಕಾಂಗ್ರೆಸ್ ಬಹಳ ಚೆನ್ನಾಗಿ ನಡೆಯಿತು. ನಿರೀಕ್ಷೆಗಿಂತ ಚೆನ್ನಾಗಿ ನಡೆಯಿತು. ದೇಶಪಾಂಡೆ ಗಂಗಾಧರರಾಯರು ಸ್ವಾಗತಾಧ್ಯಕ್ಷರು. ಸ್ವಯಂ ಗಾಂಧೀಜಿಯೇ ಅಧ್ಯಕ್ಷರು. ಆದ್ದರಿಂದ ಅಖಿಲ ಭಾರತ ನಾಯಕರೂ ಎಲ್ಲರೂ ಬಂದಿದ್ದರು. ಮುಂದೆ ಅವರಲ್ಲಿ ಅನೇಕರನ್ನು ಪ್ರತ್ಯಕ್ಷವಾಗಿ ನೋಡುವುದು ಆಗಲಿಲ್ಲ. ಆಗ ಮಾತ್ರ ಕಣ್ಣು ತುಂಬಾ ನೋಡಿದೆವು.

ಮೋತಿಲಾಲ್ ನೆಹರೂ, ಚಿತ್ತರಂಜನ ದಾಸರು ಅವರೆಲ್ಲರಲ್ಲಿ ಮೇಲೆ. ಮೋತಿಲಾಲರು ಅಧಿವೇಶನದಲ್ಲಿ ಓಡಾಡಿದರೆ ಸ್ವರ್ಗದಿಂದ ಇಳಿದು ಬಂದ ಯಾವುದೋ ಒಂದು ದೇವತೆ ಓಡಾಡುತ್ತಿದೆ ಎನಿಸುತ್ತಿತ್ತು. ಅವರ ಸ್ಫುರದ್ರೂಪ ಅಷ್ಟು ಮನೋಹರ. ಅವರ ನಡಿಗೆ ಅವರ ಮಾತು ಎಲ್ಲವೂ ಗಂಭೀರ. ದೇವತೆಗಳಿಗೆ ತಕ್ಕ ಹಾಗೆ. ಅಧಿವೇಶನದ ಖಾದಿ ಪ್ರದರ್ಶನಕ್ಕೆ ಬಂದು ಮೋತಿಲಾಲರು ಒಂದು ಸಾವಿರ ರೂಪಾಯಿನ ಖಾದಿಯನ್ನು ಕೊಂಡಾಗ, ನಾವು ಬಡವರು ಮೂಗಿನ ಮೇಲೆ ಬೆರಳು ಇಟ್ಟುಕೊಂಡೆವು.

ಕಾಂಗ್ರೆಸ್ಸಿನಲ್ಲಿ ನಡೆದ ಸಂಭ್ರಮ, ನೋಡಿದ ದೃಶ್ಯಗಳನ್ನು ವರ್ಣಿಸಲು ಇದು ತಕ್ಕ ಸ್ಥಳವಲ್ಲ. ಅಲ್ಲಿ ಆದ ಸ್ವರಾಜ್ಯಪಕ್ಷದ ಗೆಲುವನ್ನು ವಿವರಿಸಲೂ ಇದು ಸ್ಥಳವಲ್ಲ. ಆದರೆ ಅಲ್ಲಿ ಬಂದಿದ್ದ ನಾಯಕರ ಹೆಸರನ್ನೂ ನೆನೆಯದೆ ಇದ್ದರೆ ಒಂದು ಯುಗದ ಅವಕಾಶವೇ ಕಳೆದುಹೋದಂತೆ. ಆಗಿನ ನಾಯಕರು ಉದಾತ್ತ ವ್ಯಕ್ತಿಗಳು, ತಾತ್ವಿಕರು, ತ್ಯಾಗಶೀಲರು, ನಿರ್ಭಯರು ಸ್ವಾಮಿ ಶ್ರದ್ಧಾನಂದರ ಆ ಉನ್ನತ ವ್ಯಕ್ತಿತ್ವ, ಲಾಲಾಲಜಪತರಾಯರ ಶಾಂತ ಗಂಭೀರ ವ್ಯಕ್ತಿತ್ವ, ಚಿತ್ತರಂಜನ ದಾಸರ ಆ ಔದಾರ್ಯ, ಮೋತಿಲಾಲರ ಆ ಶ್ರೀಮಂತ ಗಾಂಭೀರ್ಯ, ಸತ್ಯಮೂರ್ತಿಗಳ ಚಟುವಟಿಕೆ, ಕೇರಳದ ಜಾಗೃತಬುದ್ಧಿ ಎಲ್ಲವೂ ಕಣ್ಣಿಗೆ ಕಟ್ಟಿವೆ. ರಾಜೇಂದ್ರಬಾಬು ಜಮನಾಲಾಲರು, ಸರದಾರರು, ಜವಹರಲಾಲರು, ರಾಜಗೋಪಾಲಚಾರ್ಯರು ಉಳಿದವರು ಮುಂದೆ ಒಂದೆರಡು ವರ್ಷಗಳಲ್ಲಿಯೇ ಅಖಿಲ ಭಾರತ ನಾಯಕತ್ವವನ್ನು ವಹಿಸಿಕೊಂಡರು. ಆ ವೇಳೆಗೆ ಕಲ್ಕತ್ತೆಯ ಚಿತ್ತರಂಜನದಾಸರು ತೀರಿಕೊಂಡಿದ್ದರು.

ಈ ವೇಳೆಗೆ ಕನ್ನಡದಲ್ಲೂ ಕೆಲವರು ಹಿರಿಯರು ಆಗಿದ್ದರು. ಕೌಜಲಗಿ ಶ್ರೀನಿವಾಸರಾಯರು, ಹರ್ಡೀಕರ ನಾರಾಯಣರಾಯರು, ಕೌಜಲಗಿ ಹನುಮಂತ ರಾಯರು, ಮೊದಲಾದವರು ಬೆಳಗಾವಿಯಲ್ಲಿ ನಮಗೆ ಅನುಭವ ಆದರು. ಸ್ವಯಂ ಸೇವಕರ ಶಿಸ್ತು, ಊಟದ ಉತ್ತಮ ವ್ಯವಸ್ಥೆ. ದಿನವೂ ಶ್ರೀ ಖಂಡವೇ.

ಕಲೆಗೂ ಒಳ್ಳೆಸ್ಥಾನ ಕೊಟ್ಟಿದ್ದರು. ಅಧಿವೇಶನದ ಮಹಾದ್ವಾರ ವಿಜಯನಗರ ಸಾಮ್ರಾಜ್ಯವನ್ನು ನೆನಪಿಗೆ ತರುತ್ತಿತ್ತು. ಅಧಿವೇಶನದ ಕಲಾ ವಿಭಾಗ ಧಾರವಾಡದ ದಿವಂಗತ ಪೋತದಾರ ಶ್ರೀನಿವಾಸರಾಯರದು. ಸಂಗೀತಕ್ಕಂತೂ ವಿಶೇಷ ಸ್ಥಾನಕೊಟ್ಟಿದ್ದರು. ಮೈಸೂರಿನಿಂದ ವೀಣೆ ಶೇಷಣ್ಣನವರು ಬಂದಿದ್ದರು. ಅವರ ಶಿಷ್ಯೆ ತಿರುಮಲೆ ರಾಜಮ್ಮನವರೂ ಬಂದಿದ್ದರು. ಗಾಂಧೀಜಿಯ ಖಾದಿ ಕುಟೀರದಲ್ಲಿ ಶೇಷಣ್ಣನವರು ವೀಣೆ ಬಾರಿಸಿದಾಗ ಆ ರಸಾನಂದಕ್ಕೆ ಗಾಂಧೀಜಿಯೇ ಮೈಮರೆತರು.

ರಸ್ತೆಗಳೂ ಚೆನ್ನ, ವ್ಯವಸ್ಥೆಯೂ ಚೆನ್ನ, ಸಂಡಾಸಿನ ವ್ಯವಸ್ಥೆಯೂ ಸಮರ್ಪಕ. ಕರ್ನಾಟಕದ ಕೀರ್ತಿ ದುಂದುಭಿಯನ್ನೂ ಮೊಳಗಿಸಿತು ಕಾಂಗ್ರೆಸ್ ಅಧಿವೇಶನ.

1922 ರಲ್ಲಿ ಗೆಳೆಯರ ಗುಂಪಿಗೂ ನನಗೂ ಸಂಬಂಧ ಕೂಡಿತು. ಹಾಗೆನ್ನು ವುದಕ್ಕಿಂತ ನನಗೂ ಬೇಂದ್ರೆಯವರಿಗೂ ಸ್ನೇಹ ಬೆಳೆಯಿತು ಎಂಬುದು ಸರಿ. ಬೇಂದ್ರೆಯವರೇ ಗೆಳೆಯರ ಗುಂಪಿನ ಜೀವಾಳ. ಗೆಳೆಯರ ಗುಂಪು ಎಂಬ. ಸಂವಿಧಾನ ಬದ್ಧ ಸಂಸ್ಥೆ ಇರಲಿಲ್ಲ. ಸ್ನೇಹ ಸಂಬಂಧವೇ ಸಂಬಂಧ. ಗೆಳೆಯ ಗೋಕಾಕರು ಹೇಳಿ ದಂತೆ ಅದು ಒಂದು ಮಧುರ ಪರಿಮಳ. ಗುಂಪಿನಲ್ಲಿ ಒಂದೊಂದು ಹೂವಿಗೂ ತನ್ನದೇ ಆದ ಪರಿಮಳ. ಎಲ್ಲಾ ಒಟ್ಟು ಸೇರಿ ಗೆಳೆಯರ ಗುಂಪು.

ಆ ವರ್ಷ ಸಾಹಿತ್ಯ ಸಮ್ಮೇಳನ ದಾವಣಗೆರೆಯಲ್ಲಿ ನಡೆಯಿತು. ಅದಕ್ಕೆ ಧಾರವಾಡದಿಂದ ಅನೇಕರು ಬಂದಿದ್ದರು. ಗೆಳೆಯರ ಗುಂಪಿನ ಬೇಂದ್ರೆಯವರೂ ಅವರ ಗೆಳೆಯರೂ ಬಂದಿದ್ದರು. ಚಿತ್ರದುರ್ಗದಿಂದ ನಾನೂ ಗುಂಡೂರಾಯರೂ ಟಿ. ಎಸ್. ವೆಂಕಣ್ಣಯ್ಯನವರೂ ಹೋಗಿದ್ದೆವು ಆ ವೇಳೆಗೆ ದುರ್ಗಕ್ಕೆ ರೈಲು ಬಂದಿತ್ತು. ಚಿಕ್ಕಜಾಜೂರಿನ ಸ್ಟೇಷನ್ನಿನಲ್ಲಿ ಒಂದು ಚಿಕ್ಕ ಹೋಟೆಲ್. ಅದರ ಮುಂದೆ ಚಪ್ಪರದ ಬಯಲಿನಲ್ಲಿ ಮೂವರೂ ಹಾಸಿಗೆ ಹಾಸಿಕೊಂಡು ಮಲಗಿದ್ದೆವು. ಬೆಳಗಿನ ಜಾವದ ಗಾಡಿ ಬರುವವರೆಗೂ ಮಲಗಬೇಕಲ್ಲ.

ರಾತ್ರಿ ಬಹಳ ಹೊತ್ತು ವೆಂಕಣ್ಣಯ್ಯನವರು ತಮ್ಮ ಅನುಭವಗಳನ್ನು ಹೇಳು ತ್ತಿದ್ದರು. ವೆಂಕಣ್ಣಯ್ಯನವರಿಗೂ ನಮ್ಮ ತಂದೆಯವರಿಗೂ ಬಹಳ ಸ್ನೇಹ. ಅದರಿಂದ ಅವರಲ್ಲಿ ನನಗೆ ಸಲಿಗೆ.

ಸಮ್ಮೇಳನ ನಡೆದದ್ದು ಮೇ ತಿಂಗಳು. ಆಗ ಎಲ್ಲರಿಗೂ ರಜಾ. ಮೈಸೂರಿನ ವೃದ್ಧಪಿತಾಮಹ ತಾತಯ್ಯನವರು ಆ ಸಮ್ಮೇಳನಕ್ಕೆ ಅಧ್ಯಕ್ಷರು. ರಾಜಸಭಾ ಭೂಷಣ ಕರ್ಪೂರ ಶ್ರೀನಿವಾಸರಾಯರು ಉಪಾಧ್ಯಕ್ಷರು. ಆಗಿನ ಲಿಂಗರಚನೆಯ ಪ್ರಕಾರ ಉಪಾಧ್ಯಕ್ಷರೇ ಸರ್ವಸ್ವವೂ. ಅಧ್ಯಕ್ಷರು ಬರೀ ಅಲಂಕಾರಕ್ಕೆ. ಆಗ ಹಾಗಿತ್ತು, ಪರಿಷತ್ತಿನಲ್ಲಿ.

ದಾವಣಗೆರೆಯಲ್ಲಿ ಒಂದು ಸ್ವಾಗತ ಸಮಿತಿ ಏರ್ಪಾಟು ಇದ್ದಿತು. ಆವರಣದಲ್ಲಿ ಏನೋ ತಿಕ್ಕಾಟ ಆಗಿ ಸಮ್ಮೇಳನವೇ ನಡೆಯುತ್ತದೆಯೋ ಇಲ್ಲವೋ ಎನಿಸಿಬಿಟ್ಟಿತು. ಪರಿಷತ್ತಿನ ಉಪಾಧ್ಯಕ್ಷರು ಕರ್ಪೂರ ಶ್ರೀನಿವಾಸರಾಯರು, ಕಾರ್ಯದರ್ಶಿ ಪ್ರೊಫೆಸರ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು. ಸಮ್ಮೇಳನದ ಅಧ್ಯಕ್ಷ ತಾತಯ್ಯನವರು. ಪ್ರಯತ್ನ ಮಾಡಿ ಆ ತಿಕ್ಕಾಟವನ್ನು ನಿಲ್ಲಿಸಿದರು. ಸಮ್ಮೇಳನ ಯಥಾ ಪ್ರಕಾರ ನಡೆಯಿತು. ಮೂರು ದಿನದ ಸಮ್ಮೇಳನ, ಮೂರು ದಿನ ಸಮಾರಾಧನೆ ಊಟ. ಶ್ರೀನಿವಾಸರಾಯರು ಮಾಧ್ವರು. ಮಾಧ್ವರು ಯಜಮಾನರಾಗಿದ್ದ ಕಡೆ ಊಟದಲ್ಲಿ ಯಾವ ಕೊರತೆಯೂ ಇರುವುದಿಲ್ಲ. ಈಗಲೂ ಅಷ್ಟೇ.

ಆ ಸಮ್ಮೇಳನದಲ್ಲಿ ಗೆಳೆಯರ ಗುಂಪಿನವರಿಗೂ ನನಗೂ ಪರಿಚಯ ಪ್ರಾರಂಭ. ಆಗ ನಟ್ಟಿರುಳಲ್ಲಿ ಬೇಂದ್ರೆಯವರು ತಮ್ಮ ಕೃಷ್ಣಾಕುಮಾರಿಯ ಕೆಲವು ಪದ್ಯಗಳನ್ನು

ಹೇಳಿದರು. ಮುಂದೆ ಅದೇ ವರ್ಷ ಡಿಸೆಂಬರಿನಲ್ಲಿ ಧಾರವಾಡಕ್ಕೆ ಹೋದೆ ನಾನು. ಬೇಂದ್ರೆಯವರ ಮನೆ ಆಗ ಕಾಮನಕಟ್ಟೆಯಲ್ಲಿತ್ತು. ಪಕ್ಕದಲ್ಲಿ ಇತಿಹಾಸ ಸಂಶೋಧನೆಯ–ಎಂದರೆ ನಾ. ಶ್ರೀ. ರಾಜಪುರೋಹಿತರ ಕಛೇರಿ.

ಬೇಂದ್ರೆಯವರಿಗೆ ಆಗ ಸಮಹರೆಯ. ಮೊದಲೇ ಮಾತುಗಾರರು. ಊಟಕ್ಕೆ ಕೂತಾಗ ನಾವಿಬ್ಬರೂ ಮಾತಿಗೆ ಮೊದಲು ಇಟ್ಟೆವೆಂದರೆ ಅದಕ್ಕೆ ಕೊನೆ ಮೊದಲು ಇರುತ್ತಿರಲಿಲ್ಲ. ಅವರ ತಾಯಿ ಅಂಬಕ್ಕ ಬಡಿಸಲಿಕ್ಕೆ ನಿಂತು ಬೇಸತ್ತು ಮಾತು ಮುಗಿಸಿ ಎಂದು ಹೇಳುವ ತನಕ ನಮ್ಮ ಮಾತು ಮುಗಿಯುತ್ತಿರಲಿಲ್ಲ.

ಮಾತು ಗೆಳೆಯರ ಗುಂಪಿನ ಜೀವಾಳ. ಆ ಮಾತಿನಲ್ಲಿ ಹುರಿ ಇರುತ್ತಿತ್ತು, ಹೂರಣ ಇರುತ್ತಿತ್ತು. ಎಷ್ಟೋ ಸಲ ಆ ಮಾತು, ಆಳವಾದ ವಿಷಯಗಳ ಕಡೆಗೆ ಹೊರಳುತ್ತಿತ್ತು. ಅದೇ ಹೆಚ್ಚು. ಒಂದು ಬೆಳಗಿನ ಜಾವ ಧಾರವಾಡಕ್ಕೆ ಹೋದೆ. ಆಗ ರಾಯಟರ ಗಲ್ಲಿಯಲ್ಲಿ ಅಟ್ಟದ ಮೇಲೆ ಇರುತ್ತಿದ್ದರು ಬೇಂದ್ರೆ. ಅದು ಡಿಸೆಂಬರ್ ಬೆಳಗಾವಿಯ ಸಮ್ಮೇಳನಕ್ಕೆ ಹೋದ ಗೆಳೆಯರು ಎಲ್ಲರೂ ಬಂದಿದ್ದರು. ಹಲಸಂಗಿಯಿಂದ, ಬಾದಾಮಿಯಿಂದ, ಲಕ್ಷ್ಮೇಶ್ವರದಿಂದ ಗೆಳೆಯರು ಬಂದಿದ್ದರು. ರಾತ್ರಿಯಲ್ಲಿ ಬಿಡುವು ಇಲ್ಲದೆ ಮಾತು ನಡೆದಿತ್ತು. ಮಾತು ಕೇಳಿಸುತ್ತಿತ್ತು ನನಗೆ. ನಾನು ಎಷ್ಟು ಕೂಗಿದರೂ ಅವರಿಗೆ ಕೇಳಿಸಲಿಲ್ಲ.

ಪಕ್ಕದ ಮನೆಯ ಜಗುಲಿಯ ಮೇಲೆ ನನ್ನ ಹಾಸಿಗೆ ಹಾಸಿ ಮಲಗಿದೆ. ಅವತ್ತು ದ್ವಾದಶಿ ಎಂದು ಆ ಮನೆಯವರು ಬೇಗ ಎದ್ದರು. ನನ್ನನ್ನು ನೋಡಿ ಬೆಳಿಗ್ಗೆ ಬ್ರಾಹ್ಮಣ ಸಿಕ್ಕ ಎಂದು ಅವರಿಗೆ ಸಂತೋಷ ಆಯಿತು. ಸರಿ ಬೆಳಕು ಹರಿಯುವುದರೊಳಗೆ ಸ್ನಾನ ಊಟ ಮುಗಿಯಿತು. ಅವರಿಗೂ ಗೊತ್ತು ಗೆಳೆಯರ ಗುಂಪಿನ ಮಾತು ಎಂದರೆ ಏನು ಎಂಬುದು.

ಗುಂಪು ಒಂದು ಸಂಘಟನಾ ಬದ್ಧ ಸಂಘವಲ್ಲ. ಎಲ್ಲಾ ಗೆಳೆಯರೂ ಅಲ್ಲಲ್ಲಿ ಸಖ್ಯ ಯೋಗವನ್ನು ತೊಡಗಿ ಕೇಂದ್ರ ಆದ ಧಾರವಾಡಕ್ಕೆ ಸಂಬಂಧಿಸಿದಂತೆ ನಡೆಯುತ್ತಿದ್ದರು. ಹಲಸಂಗಿಯಲ್ಲಿ ಚೆನ್ನಮಲ್ಲಪ್ಪನ ಗುಂಪೇ ಒಂದು, ಧಾರವಾಡದಲ್ಲಿ ಬೇಂದ್ರೆಯವರ ಓರಗೆಯ ಗುಂಪು ಒಂದು. ಚಿದಂಬರ ನಗರ, ವಿನೀತ ರಾಮಚಂದ್ರ, ಹಬ್ಬು, ನಾನು, ಗೋಕಾಕ, ಮುಗಳಿ.

ಗೋವಿಂದ ಜೋಶಿ, ಅಭ್ಯಂಕರ ರಾಮು, ಕೃಷ್ಣ ಕಲ್ಲೂರ, ಪ್ರಹ್ಲಾದ ನರೇಗಲ್ಲ, ಸಂಗಮ ನಾರಾಯಣ, ಕುಲಕರ್ಣಿ ಶೇಷ, ಹೀಗೆ ಒಂದು ಗುಂಪು. ಇವೆಲ್ಲಕ್ಕೂ ಹೊಂದಿಕೊಂಡು ಚುಳಕಿ ಗೋವಿಂದ. ಹೀಗೆ ಚಿಕ್ಕ ಚಿಕ್ಕ ಗುಂಪುಗಳ ಒಟ್ಟು ಒಂದು ದೊಡ್ಡ ಗುಂಪು ಗೆಳೆಯರದು. ಬೇಂದ್ರೆಯವರೇ ಇದಕ್ಕೆ ಮಧ್ಯ ಬಿಂದು.

ಇವರು ಅಲ್ಲದೆ ಯಾವ ಒಳ ಗುಂಪಿಗೂ ಸೇರದೆ ಶಂಬಾ ಜೋಶಿ, ಕೃಷ್ಣ ಶರ್ಮರು ಬೆಟಗೇರಿ ಇವರೂ ಇದ್ದರು. ಗುಂಪಿನಲ್ಲಿ ಇದಕ್ಕೆ ಒಬ್ಬಿಬ್ಬರು ಹಿರಿಯರು

ಸೇರಿ–ಆಲೂರ ವೆಂಕಟರಾಯರಂಥವರು–ಶಾರದಾ ಮಂಡಲ ಎನಿಸಿತ್ತು. 1922 ರಲ್ಲಿ ಪ್ರಾರಂಭವಾದ ಜಯಕರ್ನಾಟಕಕ್ಕೆ ಈ ಶಾರದಾ ಮಂಡಲದ್ದೇ ಬೆಂಬಲ.

ಇಷ್ಟು ಚಿಕ್ಕ ಚಿಕ್ಕ ಗುಂಪುಗಳು ಇದ್ದರೂ ಎಲ್ಲೂ ತಿಕ್ಕಾಟ ಇರಲಿಲ್ಲ. ಹೇಗೆ ಇರಬೇಕು? ಎಲ್ಲರ ಗುರಿ ಒಂದೇ, ಮಂತ್ರ ಒಂದೇ. ಬಹುಶಃ ಗಾಂಧೀಜಿಯ ರಾಷ್ಟ್ರದ ಕಲ್ಪನೆ ಇಂಥದೇ ಏನೋ. ಚಿಕ್ಕ ಚಿಕ್ಕ ಚಕ್ರಗಳು ಒಂದನ್ನು ಆಧರಿಸಿ ಮತ್ತೊಂದು ದೊಡ್ಡದು, ಹೀಗೆ ಇತ್ತು ಅವರ ಕಲ್ಪನೆ.

ಗೆಳೆಯರ ಗುಂಪಿನಲ್ಲಿ ಮುಖ್ಯವಾಗಿ ಕಂಡದ್ದು ಸಾಹಿತ್ಯ ಸೇವೆ, ದೇಶಸೇವೆ. ಗುಂಪಿನ ಹಿರಿಯರು ಎಲ್ಲರೂ ಖಾದಿಧಾರಿಗಳೇ. ಗಾಂಧೀಜಿಯಲ್ಲಿ ಶ್ರದ್ಧೆ ಇದ್ದವರೇ. ಬೇಂದ್ರೆಯವರು ಸ್ಥಾನಬದ್ಧರು ಆಗಿದ್ದರು ಆ ಕಾಲದಲ್ಲಿ.

ಒಂದು ಸಲ ವಿಜಾಪುರದಲ್ಲಿ ಸಾಹಿತ್ಯ ಸಮ್ಮೇಳನ ನಡೆಯಿತು. ಮದರಾಸಿನ ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳು ಅಧ್ಯಕ್ಷರು. ಅಲ್ಲಿ ಗೆಳೆಯರು, ಕೆಲವು ನಿಬಂಧನೆಗಳನ್ನು ಓದಿದರು. ಮೊದಲು ಓದುವಾಗ ಅವರವರ ನಿಬಂಧನೆಗಳನ್ನು ಅವರೇ ಓದಿದರು. ಅಧ್ಯಕ್ಷರು, ಯಾರದು ನಿಬಂಧ ಎಂದು ಕೇಳಿದರೆ ಗೆಳೆಯರ ಗುಂಪಿನದು ಎಂದು ಹೇಳಿದೆವು. ಅವರು ಜಾಣರು, ಯಾರು ಓದುವವರು ಎಂದು ಕೇಳಿದರು. ಒಂದು ಸಲ ಹೀಗೆ ಆದ ಮೇಲೆ ನಿಬಂಧಗಳನ್ನು ಅದಲು ಬದಲು ಮಾಡಿಕೊಂಡೆವು. ಬರೆದವರು ಗುಂಪು, ಓದುವವರು ಒಬ್ಬ ಗೆಳೆಯ! ಹೀಗಾಗಿ ಅವರಿಗೆ ಯಾರು ಬರೆದದ್ದು ಯಾವುದು ಎಂಬುದು ಪತ್ತೆ ಆಗಲಿಲ್ಲ.

ಈ ರೀತಿ ಮುಂದೆ ಉಳಿಯಲಿಲ್ಲ. ಬೆಳಗಾವಿಯಲ್ಲಿ ಸಮ್ಮೇಳನ ಆದಾಗ ಎಲ್ಲರೂ ವ್ಯಕ್ತಿಗತ ಆಗಿಯೇ ಓದಿದರು. ಈ ಅನಾಮಿಕತೆ ಉಳಿಯಲಿಲ್ಲ.

* * * *

ಹೈದರಾಬಾದಿನಲ್ಲಿಯೂ ಒಂದು ಗುಂಪು ಬೆಳೆಯಿತು. ಅಲ್ಲಿ ಸಾಹಿತ್ಯಕ್ಕಿಂತ ರಾಜಕಾರಣದೇ ಹೆಚ್ಚು ಪ್ರಭಾವ. ಅಂದರೆ ಒಂದು ಕನ್ನಡದ ಕೆಲಸ ಮಾಡಬೇಕು ಎಂಬ ಬಯಕೆ ಮಾತ್ರ ಎಲ್ಲರಲ್ಲೂ ಇತ್ತು. ಹೈದರಾಬಾದಿನ ಗುಂಪಿಗೆ ನಾಯಕರು ಶ್ರೀ ಮನಸಬದಾರ ರಾಘವೇಂದ್ರರಾಯರು. ಅವರಿಗೆ ಸಾಹಿತ್ಯದ ಹುಚ್ಚು. ನಾಟಕ ಬರೆದು ಆಡಿಸುವ ಹವ್ಯಾಸ. ಉಳಿದ ಗೆಳೆಯರು ಮರಾಠಿ. ಅವರೆಲ್ಲ ಕನ್ನಡ ಮಾತನ್ನು ಬರೆದುಕೊಂಡು ಬಾಯಿಪಾಠ ಮಾಡುತ್ತಿದ್ದರು. ಅಷ್ಟು ಹುರುಪು. ನಮಗೆಲ್ಲ ಹಿರಿಯರು ಆಗಿ ಶ್ರೀ ಚಿಮ್ಮಲಗಿ ಭೀಮಾಚಾರ್ಯರು. ಅವರು ಹುಟ್ಟು ಹಾಕಿದ ನೃಪತುಂಗ ಶಾಲೆ ಈಗ ದೊಡ್ಡದಾಗಿ ವಿವಿಧೋದ್ದೇಶದ ಪ್ರೌಢಶಾಲೆ ಆಗಿದೆ. ಸ್ವಂತ ಕಟ್ಟಡ, ಒಳ್ಳೆಯ ಉಪಾಧ್ಯಾಯರು, ಹೈದರಾಬಾದಿನಲ್ಲೇ ಹೆಸರುವಾಸಿ.

ಹೈದರಾಬಾದಿನ ಗೆಳೆಯರ ಗುಂಪಿನಿಂದ ಒಂದೆರಡು ಪುಸ್ತಕಗಳನ್ನು ಪ್ರಸಿದ್ಧಿಸಿದ್ದೆವು. ನಮ್ಮ ನಾಡ ಹಬ್ಬಕ್ಕೆ ಆಚಾರ್ಯ ಶ್ರೀಕಂಠಯ್ಯನವರು 1935 ಅಥವಾ 1936ರಲ್ಲಿ ಬಂದಿದ್ದರು. ಅವರ ಇಂಗ್ಲೀಷ್ ವ್ಯಾಖ್ಯಾನಗಳಿಗೆ ಮಹಾರಾಷ್ಟ್ರರೂ ಹಿಂದೀಯರೂ ಗುಂಪು ಗುಂಪಾಗಿ ಬಂದು ಕನ್ನಡದ ಕೆಚ್ಚನ್ನು ಮೆಚ್ಚಿಕೊಂಡರು.

1939ರಲ್ಲಿ ನಿಜಾಂ ಕರ್ನಾಟಕ ಪರಿಷತ್ತು ಹೈದರಾಬಾದಿನಲ್ಲಿ ನಡೆಯಿತು. ಅದಕ್ಕೆ ಶ್ರೀಯವರು ಬಂದಿದ್ದರು. ಅವರಿಂದ ಪರಿಷತ್ತಿಗೆ ಕಳೆ ಕಟ್ಟಿತು.

ನಿಜಾಂ ಕರ್ನಾಟಕ ಪರಿಷತ್ತಿನ ಮಾತು ಬಂದು ಹೈದರಾಬಾದು ಸಂಸ್ಥಾನದಲ್ಲಿ ಪ್ರವೇಶಮಾಡಿದಂತೆ ಆಯಿತು. ಈ ಪರಿಷತ್ತು ನಡೆದ ಮೂರನೇ ವರ್ಷವೇ ಹೈದರಾಬಾದು ಕಾಂಗ್ರೆಸ್ಸಿನ ಸ್ಥಾಪನೆ. ಆ ವರ್ಷವೇ ನನಗೆ........ಗಡೀಪಾರು.

ಆ ರಾಜಕೀಯದಲ್ಲಿ ಕೋಮುವಾರು ಭಾವನೆ ಬರುತ್ತದೆ. ಅದನ್ನು ಪ್ರಸ್ತಾಪಿಸಬಾರದು ಎಂದು ಎಷ್ಟು ಯೋಚಿಸಿದರೂ ಅವರ ಪ್ರಸ್ತಾಪ ಇಲ್ಲದೆ ಬರೆಯುವುದೇ ಸಾಧ್ಯವಿಲ್ಲ ಎನ್ನಿಸುತ್ತವೆ. ಆದರೂ ವಿವಾದಾಸ್ಪದ ಆದ ಮಾತನ್ನು ಕೈಬಿಡುತ್ತೇನೆ.

ನಿಜಾಂ ಕರ್ನಾಟಕ ಪರಿಷತ್ತು ಯಶಸ್ವಿ ಆದದ್ದು ಸ್ವಾಗತಾಧ್ಯಕ್ಷರ ಪ್ರಭಾವದಿಂದ. ಗುಡಗಂಟಿ ರಾಮಾಚಾರ್ಯರು ಸ್ವಾಗತಾಧ್ಯಕ್ಷರು. ಹೈದರಾಬಾದಿನಲ್ಲಿ ಇದ್ದದ್ದು ಮೂರು ಭಾಗ. ಆಂಧ್ರ ಕರ್ನಾಟಕ ಮಹಾರಾಷ್ಟ್ರ. ಈ ಮೂರೂ ಗುಂಪಿನಲ್ಲಿ ಆಚಾರ್ಯರಿಗೆ ಪ್ರಭಾವ ಇತ್ತು. ಆಗ ಆಳುತ್ತಿದ್ದ ಪಂಗಡವಾದ ಮುಸಲ್ಮಾನರಲ್ಲಿ ಸಾಕಷ್ಟು ಪ್ರಭಾವ ಇತ್ತು.

ಈ ಪ್ರಭಾವದ ರೀತಿಯನ್ನು ಆಮೇಲೆ ಹೇಳೋಣ. ಆ ಪ್ರಭಾವದಿಂದ ಇಡೀ ಹೈದರಾಬಾದಿನ ಮುಖಂಡರು ಎಲ್ಲರೂ ಸಮ್ಮೇಳನಕ್ಕೆ ಬಂದಿದ್ದರು. ಬಹುಶಃ ಈ ಸಮ್ಮೇಳನ ಹೈದರಾಬಾದಿನ ರಾಜಕೀಯಕ್ಕೆ ನಾಂದಿ ಆಯಿತು ಎನ್ನಬಹುದು.

ಗುಡಗಂಟಿ ರಾಮಾಚಾರ್ಯರು ಅಷ್ಟು ವಿದ್ಯಾವಂತರಲ್ಲ. ಅವರ ಓದು ಉರ್ದು. ಉರ್ದು ಭಾಷೆಯ ಓದಿನಿಂದ ವಕೀಲರಾಗಿ ಹೈದರಾಬಾದಿನ ಹೈಕೋರ್ಟಿನಲ್ಲಿ ವಕಾಲತ್ತು ಮಾಡುತ್ತಿದ್ದರು. ಅವರ ವಕಾಲತ್ತು ಬಹಳ ಸ್ವಲ್ಪ ಕೇಸುಗಳದ್ದು. ಅಂತೂ ಕೈತುಂಬಾ ಗಳಿಕೆಯವರದಾಗಿತ್ತು. ಹೈದರಾಬಾದಿನ ಸಾಮಾಜಿಕ ಪರಿಸ್ಥಿತಿಯೂ ಅದಕ್ಕೆ ಅನುಕೂಲ ಆಗಿತ್ತು.

ರಾಮಾಚಾರ್ಯರ ತಂದೆ ಬಡವರು. ಹಳ್ಳಿಯ ಜೋಯಿಸರು. ಅವರ ಮಕ್ಕಳು ಮಾತ್ರ ಅದೃಷ್ಟವಂತರು. ಹೈದರಾಬಾದಿನ ರಾಜಕಾರಣದಲ್ಲಿ ಸುಪ್ರಸಿದ್ಧರಾದ ಜೋಷಿ ಕೃಷ್ಣಾಚಾರ್ಯರು ರಾಮಾಚಾರ್ಯರ ತಮ್ಮ. ಅಣ್ಣ ತಮ್ಮಂದಿರು ಇಬ್ಬರೂ ಈಗ ಇಲ್ಲ.

ಕೃಷ್ಣಾಚಾರ್ಯರು ಬಿ. ಎ. ಎಲ್. ಎಲ್. ಬಿ. ಆದರು. ರಾಮಾಚಾರ್ಯರು ಮಾತ್ರ ಉರ್ದು ವಕೀಲರಾಗಿ ವಿಜೃಂಭಿಸಿದರು. ಅವರು ಕೈಹಿಡಿದ ಯಾವ ವಿಷಯವೂ

ವ್ಯರ್ಥ ಆಗಿಲ್ಲ. ಒಂದು ಸಲ ಹೈದರಾಬಾದಿನಲ್ಲಿ ಕ್ಷಾಮ ಬಂತು. ಆಗ ಕಂಬಳಿಗಳನ್ನು ತರಿಸಿ, ಪಂಚೆಗಳನ್ನು ತಂದು ಎಲ್ಲರಿಗೂ ದಾನ ಮಾಡಿದರು. ಆ ದಾನದಲ್ಲಿ ಜಾತಿ ಭೇದ ಇರಲಿಲ್ಲ. ಮುಸಲ್ಮಾನ ಫಕೀರರು ಹಿಂದೂ ಸಾಧುಗಳು ಎಲ್ಲರೂ ಕಂಬಳಿ ಪಂಚೆಗಳನ್ನು ಪಡೆದರು. ಹೆಸರು ಬರೆಸಬೇಕು ರಿಜಿಸ್ಟರಿನಲ್ಲಿ, ಒಂದೇ ನಿಯಮ. ಸುಮಾರು ಸಾವಿರಾರು ಜನ ತೆಗೆದುಕೊಂಡರು.

ಹೈದರಾಬಾದಿನಲ್ಲಿ ರಾಜಕೀಯ ಸುಧಾರಣೆಗಳನ್ನು ಮಾಡಲು ಒಂದು ಘೋಷಣೆ ನಡೆಯಿತು. ಆಗ ಕೂಡಲೇ ಒಂದು ರಾಜಕೀಯ ಪರಿಷತ್ತನ್ನೂ ಸಮಾವೇಶ ಮಾಡಿದರು ಆಚಾರ್ಯರು. ಅದರಲ್ಲಿ ಎಲ್ಲ ವರ್ಗ, ಎಲ್ಲ ಜಾತಿಗಳ ಪ್ರತಿನಿಧಿಗಳೂ ಇದ್ದರು. ಅವರ ಕೃತಿಯ ಫಲವಾಗಿ ಹೈದ್ರಾಬಾದ್ ಕಾಂಗ್ರೆಸ್ ಹುಟ್ಟಿಕೊಂಡಿತು. ಪರಿಷತ್ತಿನ Hydrabad Political Committee ಕೆಲಸ ಕಾರ್ಯಗಳನ್ನೂ ಮಾಡಲು ಇಬ್ಬರು ಕಾರ್ಯದರ್ಶಿಗಳನ್ನೂ ಆರಿಸಿದರು. ಒಬ್ಬರು ಹೈದರಾಬಾದಿನ ಮುಖ್ಯ ಮಂತ್ರಿಗಳಾಗಿ ಕೇರಳ–ಉತ್ತರ ಪ್ರದೇಶಗಳ ರಾಜ್ಯಪಾಲರು ಆಗಿ ತೀರಿಕೊಂಡ ರಾಮ ಕೃಷ್ಣರಾಯರು. ಮತ್ತೆ ನಾನೂ ಒಬ್ಬ. ಇಬ್ಬರೂ ಎತ್ತರ ಕಡಿಮೆ, ರಾಮಕೃಷ್ಣ ರಾಯರೂ ನನ್ನ ಹಾಗೆ ಕುಳ್ಳ. ಪರಿಷತ್ತಿಗೆ ನಾನು ಕಾರ್ಯದರ್ಶಿ ಆದದ್ದು ಆಚಾರ್ಯರೇ ಆದ ಹಾಗೆ. ಅವರು ಖಜಾಂಚಿ. ಹಣ ವಸೂಲು ಮಾಡುವುದರಲ್ಲಿ ಅವರದು ಎತ್ತಿದ ಕೈ. ಪಂಡಿತ ಮದನ ಮೋಹನ ಮಾಲವೀಯರನ್ನೂ ಗಾಂಧೀಜೀ Prince of beggars ಎಂದು ಕರೆದಿದ್ದಾರೆ. ಆಚಾರ್ಯರು ವಸೂಲು ಮಾಡುತ್ತಿದ್ದ ರೀತಿ ದರ್ಪದ್ದು. ಟೆಲಿಫೋನ್ ಮಾಡಿ ಇಷ್ಟು ಕಳಿಸಬೇಕು ಎಂದು ಯಾರಿಗಾದರೂ ಹೇಳಿದರೆ ಅವತ್ತೇ ಆ ಹಣ ಬರುತ್ತಿತ್ತು.

ಆಚಾರ್ಯರ ಪ್ರಭಾವ ಹಾಗೆ. ಒಂದು ಸಂಜೆ ನಿಜಾಮು ಕಾಲೇಜಿನಲ್ಲಿ ಗಾಂಧೀಜೀಯ ಸಾವಿನ ಬಗ್ಗೆ ಸಂತಾಪ ಸೂಚಕ ಸಭೆ ನಡೆಯಿತು. ಹೈದರಾಬಾದಿನ ಮುಸಲ್ಮಾನರಲ್ಲಿ ಆ ವೇಳೆಗೆ ಎರಡು ಪಂಗಡ ಆಗಿತ್ತು. ರಾಷ್ಟ್ರೀಯ ಸ್ವಭಾವದವರು ಕೋಮುವಾರು ಅಗ್ನಿ ಭಕ್ಷಕರು. ಕೋಮುವಾರು ಅಗ್ನಿ ಭಕ್ಷಕರ ತಂಡದ ಮುಖಂಡ ಆ ಕಾಲಕ್ಕೆ ತಾಂಡೂರ ವಕೀಲ ಕಾಸೀಮರಜ್ವಿ. ಅವನು ರಜಾಕಾರರು ಎಂಬ ದಂಡು ಕಟ್ಟಿಕೊಂಡಿದ್ದ. ಅವನ ಗುರು ಲಾಯಿಕ್ ಆಲಿ ಹೈದರಾಬಾದಿನ ಮುಖ್ಯಮಂತ್ರಿ. ಆ ಮಂತ್ರಿ ಮಂಡಲದಲ್ಲಿ ವ್ಯವಸಾಯ ಮಂತ್ರಿಗಳಾಗಿ ನಲವತ್ತು ಜನ ಇದ್ದರು ಆಚಾರ್ಯರು. ಆ ವೇಳೆಗೆ ಗಾಂಧೀಜೀಯ ಮರಣದ ಸುದ್ದಿ ಬಂತು. ಅವತ್ತೇ ಆಚಾರ್ಯರು ನಿಜಾಮರ ಅರಮನೆಗೆ ಹೋಗಿ ಕಾಣಿಕೆ ಕೊಟ್ಟು ತಮ್ಮ ರಾಜೀನಾಮೆ ಯನ್ನೂ ಕೊಟ್ಟು ಬಂದರು. ಅರ್ಧ ಗಂಟೆಯ ತರುವಾಯ ಆ ಕಾಗದವನ್ನು ನೋಡಿದ ನಿಜಾಮರು ಆಚಾರ್ಯರಿಗೆ ಕೂಡಲೇ ಬರಲು ಹೇಳಿ ಕಳುಹಿಸಿದರು.

'ಗಾಂಧೀಜಿಯ ದೇಹಾಂತ ಆಗಿದೆ. ಹದಿಮೂರು ದಿನ ಆಗುವವರೆಗೆ ನಾನು

ಎಲ್ಲಿಯೂ ಬರುವುದಿಲ್ಲ ಹೇಳು' ಎಂದು ದಿಟ್ಟತನದಿಂದ ಹೇಳಿ ಕಳುಹಿಸಿದರು ಆಚಾರ್ಯರು.

ಆಮೇಲೂ ರಾಜೀನಾಮೆಯನ್ನು ಹಿಂದಕ್ಕೆ ತೆಗೆದುಕೊಳ್ಳಲಿಲ್ಲ.

ಆ ಸಂದರ್ಭ ಮಾತು ಹೇಳುತ್ತಿದ್ದೆ. ನಿಜಾಮ ಕಾಲೇಜಿನ ಮೀಟಿಂಗು. ರಾಷ್ಟ್ರೀಯ ಮುಸಲ್ಮಾನರು ಏರ್ಪಡಿಸಿದ್ದು. ಅಲ್ಲಿಗೆ ರಜಾಕಾರರು ಕೆಲವರು ಬಂದು ಅಡ್ಡಿ ಮಾಡಿದರು. ಆ ಸಭೆಯನ್ನು ಅಲ್ಲಿಗೇ ಬಿಟ್ಟು ಈಗ ಎಂ. ಪಿ. ಆಗಿರುವ ಅಕ್ಟರ್ ಆಲೀಖಾನ ಬಂದು ಆಚಾರ್ಯರಿಗೆ ನಡೆದುದನ್ನು ಎಲ್ಲವನ್ನೂ ಹೇಳಿದರು.

ಅವರು ಹೋಗುತ್ತಿದ್ದ ಹಾಗೆಯೇ ಆಚಾರ್ಯರು ಕಾಸೀಮ ರಜ್ವಿಗೆ ಟೆಲಿಫೋನ್ ಮಾಡಿದರು. "ಅರೇ ರಜ್ವೀ ಕ್ಯಾ ಲಗಾಯಾ ತುಮನೆ! ಹಮಾರಾ ಮೀಟಿಂಗ್ ತೋಡಾ ಹೈ. ತುಂ ದಂಡಾ ದಿಖಾಕೆ ದೇಖೋ, ತುಮಾರಾ ದಂಡಾ ಮೇರಾ ಸಾಮನೆ ಝುಕೆ ಜಾಯಿಗಾ ಕ್ಯಾ. ಸಮಝ್ಯಾ" ಎಂದು ಬೆದರಿಸಿದರು.

ಆಗ ಅವನು ಹೇಳಿದ 'ನೈ ಗುರುಜೀ ಐಸಾ ಕೈಸಾ ಹೋಗಾ ಬಾತ್ ಗಲತ್ ಫೆಹಲಿ ಆಯಿ ಹೈ. ಮೈ ಅಭೀ ಹಾಜರ ಹೋತಾಹು ಅಪ್ ಕಿ ದರಬಾರಮ್ಮೆ' ಹಾಗೆಂದ ಕಾಲು ಗಂಟೆಯ ಒಳಗಾಗಿ ಅಲ್ಲಿಗೆ ಬಂದು ತನ್ನವರ ಕಡೆಯಿಂದ ಕ್ಷಮಾ ಯೋಚನೆ ಮಾಡಿಸಿದ. ಎದುರಿಗೇ ಇದ್ದೆ ನಾನು.

ಆಚಾರ್ಯರ ಮನೆ ಅಬೀದ್ ರೋಡಿನಲ್ಲಿ. ಆ ಮೂಲೆಯಲ್ಲಿ ಒಂದು ದೇವಸ್ಥಾನ ಹೆದ್ದಾರಿಯಲ್ಲಿ ಇದ್ದು ವರ್ತುಲದಲ್ಲಿ ಇತ್ತು. ಅದರ ಜೀರ್ಣೋದ್ಧಾರದ ಕೆಲಸವನ್ನು ವಹಿಸಿಕೊಂಡು ಅಚ್ಚುಕಟ್ಟಾಗಿ ಮಾಡಿಸಿದರು. ಇಡೀ ಸರಕಾರವೇ ಅವರ ಮಾತಿಗೆ ಮಣಿದು ಧಾರಾಳವಾಗಿ ವೆಚ್ಚ ಮಾಡಿತು.

ಸರಕಾರದಲ್ಲಿ ಅವರ ಪ್ರಭಾವ ಬಹಳ. ಎಷ್ಟೋ ಜನ ಯುವಕರಿಗೆ ಕೆಲಸ ಮಾಡಿಸಿಕೊಟ್ಟರು. ಆ ಶಿಫಾರಸುಗಳಲ್ಲಿ ಜಾತಿ ಭೇದದ ಸೋಂಕು ಸ್ವಲ್ಪವೂ ಇರಲಿಲ್ಲ. ಕನ್ನಡಿಗರಂತೂ ಸರಿಯೋ ಸರಿ. ಉಳಿದವರೂ ಅವರ ಪ್ರಭಾವವನ್ನು ಉಪಯೋಗಿಸಿಕೊಂಡರು. ಅವರು ಯಾರಿಗೂ ಕಾಗದ ಕೊಡುತ್ತಿರಲಿಲ್ಲ. ಟೆಲಿ ಫೋನ್ ತೆಗೆದರೇನೋ ಮೇಲಧಿಕಾರಿಯ ಹತ್ತಿರ ಮಾತಾಡಿದರೇನೋ. "ನಮ್ಮ ಹುಡುಗ ಇವನು. ಕಳಿಸಿಕೊಡುತ್ತೇನೆ. ಅವನ ಕೆಲಸ ಮಾಡಿಕೊಡು" ಇಷ್ಟು ಹೇಳಿದರೆ ಸಾಕು. ಆ ಕೆಲಸ ಆಗಿಯೇ ತೀರುತ್ತಿತ್ತು.

ಎಷ್ಟೋ ಜನ ಮುಸಲ್ಮಾನರು ತಮ್ಮ ಕೆಲಸದಲ್ಲಿ ಗೊಂದಲ ಆದಾಗ, ತಮಗೆ ತಾತ್ಕಾಲಿಕ ಆಗಿ ಸಸ್ಪೆನ್ಷನ್ ಆದಾಗ ಆಚಾರ್ಯರ ಕಡೆ ಬರುತ್ತಿದ್ದರು. ತಾಲ್ಲೂಕ್ ದಾರರ ಪದವಿಯಲ್ಲಿ ಇದ್ದವರು, ಸುಭೇದಾರರು ಬರುತ್ತಿದ್ದರು. ಅವರ ಕೆಲಸವನ್ನು ಮಾಡಿಕೊಡುತ್ತಿದ್ದರು ಆಚಾರ್ಯರು. ಇಷ್ಟಾದರೂ ನೂರಾರು ಮಂದಿಗೆ ಸಹಾಯ ಮಾಡಿದರೂ ಭ್ರಷ್ಟಾಚಾರ ಅವರ ಬಳಿ ಸುಳಿಯಲಿಲ್ಲ.

ಅವರ ಮನೆ ಯಾವಾಗಲೂ ಸ್ವಚ್ಛ. ಅವರ ಉಡುಪೂ ಅಷ್ಟೇ. ಸದಾ ಶುಭ್ರ ಧೋತುರವನ್ನು ತೀಡಿ ಉಟ್ಟು, ಬಿಳಿಯ ಜುಬ್ಬ ಹಾಕಿದರೆ ಆಚಾರ್ಯರು ಅವರ ಮುಖದಲ್ಲಿ ರಾಜಕಳೆ ಸುರಿಯುತ್ತಿತ್ತು. ಅವರ ಕೈತೋಟವೂ ಅಷ್ಟೇ. ಬಹಳ ಅಚ್ಚುಕಟ್ಟು. ಬಹಳ ಸುಂದರ. ಬರೆಯುವಾಗ ಅಕ್ಷರ ಸೊಟ್ಟ. ಆದರೆ ಕಾಗದದ ಮೇಲೆ ಮಸಿ ಬಿದ್ದರೆ, ಬೇರೆ ಒಂದು ಕಾಗದ ತೆಗೆದುಕೊಂಡು ಸುಂದರವಾಗಿ ಬರೆಯಬ ಬೇಕು. ಆಚಾರ್ಯರ ಸೌಂದರ್ಯಪ್ರಿಯತೆ, ರಸಿಕತೆ, ಅವರ ಔದಾರ್ಯ, ಅವರ ಸ್ವಚ್ಛ ಸರಳತೆ ಅವರ ಅಪಾರ ಅನುಭವ ಬೇರೆ ಯಾರಿಗೂ ಬರಲಿಲ್ಲ.

ಹೈದರಾಬಾದಿನ ರಾಜಕೀಯದಲ್ಲಿ ಇಬ್ಬಣ ಇತ್ತು. ಮಂದಗಾಮಿಗಳು, ತೀವ್ರಗಾಮಿಗಳು. ಎಲ್ಲಾ ಕಡೆ ಇದ್ದ ಹಾಗೆ. ಆಚಾರ್ಯರದು ಮಂದಗಾಮಿ ಪಕ್ಷ. ಆದರೆ ಸ್ಪಷ್ಟವಾಗಿ ರಾಷ್ಟ್ರೀಯ ಭಾವನೆಯ ಪಕ್ಷ.

ಹೈದರಾಬಾದು ಕಾಂಗ್ರೆಸ್ ಸ್ಥಾಪನೆ ಆಗುವಾಗ ನಾಲ್ಕೈದು ದಿನ ಗುಪ್ತರಾಗಿ ಸಭೆ ಸೇರಿದೆವು. ಊರಿನ ಪ್ರಮುಖರು ಎಲ್ಲರೂ ಬಂದಿದ್ದರು. ಎರಡು ಸಂಸ್ಥೆ ಮಾಡ ಬೇಕು. ಒಂದು ಶುದ್ಧ ರಾಷ್ಟ್ರೀಯ. ಇನ್ನೊಂದು ಹಿಂದೂಗಳದು ಎಂಬ ಸೂಚನೆ ಆಗಲೇ ಬಂದು ಇತ್ತು. Hindu Subject Standing Committee, ಹಿಂದೂ ಪ್ರಜೆಗಳ ಸ್ಥಾಯೀ ಸಮಿತಿ ಚರ್ಚಿಸಲು ಐದು ಸಭೆ ನಡೆದವು.

ಎಲ್ಲದರಲ್ಲೂ ಆಚಾರ್ಯರದು ಒಂದೇ ಪಟ್ಟು. ರಾಷ್ಟ್ರೀಯ ಎಂದ ಮೇಲೆ ರಾಷ್ಟ್ರೀಯ ಹಿಂದೂ-ಗಿಂದೂ ಬೇಡ. ಆದರೆ ಮುಖಂಡರಲ್ಲಿ ಬಹುಸಂಖ್ಯೆ ಅವರು ಇರ ಬೇಕು ಎನ್ನುವವರು. ಕೊನೆಗೆ ಒಂದು ಒಪ್ಪಂದಕ್ಕೆ ಬಂದೆವು. ಹಿಂದೂ ಎಂದು ಈಗಾಗಲೇ ಹೆಸರು ಆಗಿರುವವರು ಇದರಲ್ಲಿ ಬೇಡ; ಸ್ವಚ್ಛ ಆಗಿರುವವರು ಇರಲಿ ಎಂದು. ಅದೇ ರೀತಿ ಮಹಾರಾಷ್ಟ್ರೀಯರಲ್ಲಿ ಮುದುಕರೂ ಧಾರ್ಮಿಕರೂ ಹೆಸ ರಾದವರೂ ಆದ ಗೋವಿಂದರಾವ್ ನಾನಲ್ ವಕೀಲರನ್ನು ಕಾಂಗ್ರೆಸ್ಸ್ ಅಧ್ಯಕ್ಷರನ್ನಾಗಿ ಮಾಡಿದೆವು.

ಕಾಂಗ್ರೆಸ್ ಅಧ್ಯಕ್ಷರು ಆಗುವುದು ಎಂದರೆ ಸತ್ಯಾಗ್ರಹ ಮಾಡಿ ಜೈಲಿಗೆ ಹೋಗುವುದೇ ಕೆಲಸ.

ಹೈದರಾಬಾದಿನ ರಾಜಕೀಯ ಎಂದರೆ ಜಾತೀಯ ರಾಜಕೀಯ ಎನಿಸಿ ಕೊಳ್ಳುತ್ತದೆ. ಆಳುವವರು ಮುಸಲ್‌ಮಾನರು, ಪ್ರಜೆಗಳು ಹಿಂದೂಗಳು. ಹಿಂದೆ ಕಳೆದ ಶತಮಾನದಲ್ಲಿ ಈ ಭೇದ ಇರಲಿಲ್ಲ. ಎಷ್ಟೋ ಜನ ಹಿಂದೂಗಳು ಮುಸಲ್ಮಾನ ದರಗಾಗಳಿಗೆ ಈ ದಗಾಗಳಿಗೆ ನಡೆದುಕೊಳ್ಳುತ್ತಿದ್ದರು. ಹಿಂದೆ ಇದ್ದ ನಿಜಾಮರು ಮಹ ಬೂಬ ಅಲೀ ಬಾದಷಹಾ, ಆತ ಬಹಳ ಧಾರ್ಮಿಕ. ಆತನ ಗೋರಿಗೆ ಈಗಲೂ ಹಿಂದೂಗಳು ಪೂಜಿಸುತ್ತಾರೆ. ಎಷ್ಟೋ ಜನ ಹಿಂದುಗಳು ಆತನ ಹೆಸರನ್ನಿಟ್ಟು ಕೊಂಡಿದ್ದಾರೆ. ಎರಡು ಉದಾಹರಣೆ ಕೊಡುತ್ತೇನೆ. ಮಹಬೂಬ್ ರೆಡ್ಡಿ. ಮಹ

ಬೂಬ್ ಖಾನ್. ಮೊದಲನೆಯವನಿಗೆ ಚಿಕ್ಕಂದಿನಲ್ಲಿ ಏನೋ ಖಾಯಿಲೆ ಆಗಿದ್ದಾಗ ಮಹಬೂಲ್ ಆಲಿ ಬಾದಶಹರ ಗೋರಿಯ ವಿಭೂತಿಯಿಂದ ಗುಣ ಆಯಿತಂತೆ. ಅದರ ಕೃತಜ್ಞತೆ ಇದು.

ಇದು—ಈ ಹಿಂದೂ ಮುಸ್ಲಿಂ ಭೇದ ಈ ಶತಮಾನದ್ದು. ಎಲ್ಲ ಭೇದವೂ ಈ ಶತಮಾನದ್ದೇ. ಈ ಶತಮಾನದ ರಾಜಕೀಯ ದುಡ್ಡಿನ ವಾಸನೆ ಹೊಡೆಯ ಲಾರಂಭಿಸಿತು. ಹಣ-ಅಧಿಕಾರ-ಭ್ರಷ್ಟಾಚಾರ. ಹಣ ಈ ವಿಷಚಕ್ರದ ಸುಳಿಗೆ ಸಿಕ್ಕಿತು. ಪ್ರಪಂಚದಲ್ಲಿ ಕ್ರಾಂತಿ ಯಾವಾಗ ಬಂತೋ ಆವಾಗಿನಿಂದ ಈ ಅಧಿಕಾರದ ಬಯಕೆ ಪ್ರಾರಂಭ.

ಎಲ್ಲ ದೇಶಗಳಲ್ಲೂ ಬಂತು. ಈ ಭೇದ ಬುದ್ಧಿ. ಅದಕ್ಕೆ ಮನದ ಸಮರ್ಥನೆ ಬೇರೆ. ಇದನ್ನು ವಾಸ್ತವ ಎನ್ನುವ ತತ್ವ ಬೇರೆ. ಯಾವುದು ವಾಸ್ತವ ಎನ್ನುವವೋ ಯಾವುದು ಅವಾಸ್ತವವೋ ದೇವರೇ ಬಲ್ಲ. ಅಂತು ತನ್ನ ಲೋಕವನ್ನು ಹರಿದು ಹೋಳು ಹೋಳು ಮಾಡಿತು ಇದು. ತರ್ಕವೋ ವಿತರ್ಕವೋ ಕುತರ್ಕವೋ !

ನಮ್ಮ ದೇಶದಲ್ಲಿ ಮುಸ್ಲಿಂ ಲೀಗು ಬ್ರಿಟಿಷರ ತಾಳಕ್ಕೆ ಸರಿಯಾಗಿ ಕುಣಿದು ಈ ಹೋಳು ಮಾಡುವ ಪುಣ್ಯ ಕಟ್ಟಿಕೊಂಡಿತು. ಇಲ್ಲದೆ ಇದ್ದರೆ ಪಾಕಿಸ್ತಾನದ ಸೊಲ್ಲೇ ಇರುತ್ತಿರಲಿಲ್ಲ. ಜಿನ್ನಾ ಸಾಹೇಬರಿಗೆ ಈ ವಿಭಜನೆಯ ಕೀರ್ತಿ ಸಲ್ಲುತ್ತದೆ. ನಿಜವಾಗಿ ಸಲ್ಲಬೇಕಾದ್ದು ಈ ಹಣದ ವಿಷಚಕ್ರಕ್ಕೆ.

ಅಂತೂ ಹೈದರಾಬಾದಿನ ಮಾತನ್ನೂ ಬರೆದು ನನ್ನ ಮನಸ್ಸಿನ ಶಾಂತಿಗೆ ಭಂಗ ತಂದುಕೊಳ್ಳಬಾರದು ಎಂದು ನಿಶ್ಚಯಿಸಿದ್ದೇನೆ. ಆದರೂ ಆಡಳಿತದಲ್ಲಿ ಇದ್ದ ಕೆಲವು ವಿಚಿತ್ರಗಳನ್ನು ನಿಷ್ಪಕ್ಷ ಆಗಿ ಹೇಳುತ್ತೇನೆ.

ಹೈದರಾಬಾದಿನ ರಾಜಕೀಯದಲ್ಲಿ ಮುಖ್ಯವಾಗಿ ಸಾಮಾಜಿಕ ಕ್ಷೇತ್ರದಲ್ಲಿ ಗಷ್ತಿ ಎರ್ಮನ್-ಐವತ್ತು ಮೂರನೆಯ ಪರಿಪತ್ರ-ಬಹಳ ದೊಡ್ಡ ಕ್ರಾಂತಿ ಮಾಡಿತು. ಜನರಲ್ಲಿ ವಾಕ್ ಸ್ವಾತಂತ್ರ್ಯಗಳ ಬಯಕೆಯ ಬೀಜವನ್ನು ಬಿತ್ತಿತು. ಆ ಸ್ವಾತಂತ್ರ್ಯ. ಸಭಾ ಸ್ವಾತಂತ್ರ್ಯಗಳ ಬಯಕೆಯ ಬೀಜವನ್ನು ಬಿತ್ತಿತ್ತು. ಆ ಸ್ವಾತಂತ್ರಗಳನ್ನು ಗಳಿಸಿಕೊಳ್ಳಲು ಅನೇಕ ಪ್ರಯತ್ನ ನಡೆದವು. ಆ ಪ್ರಯತ್ನಗಳ ಪರಿಣಾಮವೇ ಕಾಂಗ್ರೆಸ್ಸಿನ ಸ್ಥಾಪನೆ.

ಹಿಂದೂ ಸ್ಥಾನಕ್ಕೆ ಸ್ವಾತಂತ್ರ್ಯ ಬಾರದೆ ಇದ್ದರೆ ಹೈದರಾಬಾದಿಗೂ ಬರುತ್ತಿತ್ತೋ ಇಲ್ಲವೋ. ಪಾಕಿಸ್ಥಾನಕ್ಕೆ ಸೇರಬೇಕೆ ಹಿಂದುಸ್ಥಾನಕ್ಕೆ ಸೇರಬೇಕೆ ಎಂಬ ಗೊಂದಲದಲ್ಲೇ ಬೀಳುತ್ತಿದ್ದಿಲ್ಲವಲ್ಲ ನಿಜಾಮರು. ಆಗ ರಜಾಕಾರರ ಚಳುವಳಿ ತುಂಬಾ ಹರಡಿತ್ತು. ರಾಜ್ಯದಲ್ಲಿ ಅನೇಕರು ಊರು ಬಿಟ್ಟು ಹೋಗಿದ್ದರು. ಗಡಿಯಲ್ಲಿ

ನಿಂತು ಸ್ವಾತಂತ್ರ್ಯ ಸಮರವನ್ನು ನಡೆಸುತ್ತಿದ್ದರು. ಆ ಸಮರದಲ್ಲಿ ಹಿಂಸೆ-ಅಹಿಂಸೆಗಳ ಭೇದವನ್ನೂ ಜನರೂ ಪಾಲಿಸಲಿಲ್ಲ.

ಗಷಾ ಎರ್ಷನ್... ....ಮಾತು ಹೇಳುತ್ತಿದ್ದೆ. ಅದರ ಪ್ರಕಾರ ಯಾವ ಸಭೆ ನಡೆದರೂ ಮೊದಲೇ ಸರಕಾರದ ಅಪ್ಪಣೆ ಪಡೆಯಬೇಕು. ಭಾಷಣಕಾರರು ಮೊದಲೇ ತಮ್ಮ ಭಾಷಣದ ಸಾರಾಂಶವನ್ನು ಬರೆದುಕೊಡಬೇಕು. ಸ್ವಲ್ಪ ಸಾರಾಂಶದಿಂದ ಹೊರಗೆ ಕಾಲಿಟ್ಟರೋ ಆ ಸಭೆಯಲ್ಲಿ ವಿರಾಜಮಾನ ಆದ ಕುತ್ತಿಯೂ ಗುಪ್ತ ಪೋಲೀಸ್ ಅಧಿಕಾರಿ ಭಾಷಣವನ್ನು ತಡೆಯಬಹುದು. ಹೀಗಾಗಿ ಹೊರಗಿನವರು ಬರುವುದೇ ಕಷ್ಟವಾಗಿತ್ತು.

ಇದಲ್ಲದೆ ಹೊಸ-ಹಳೆಯ ಸಂಸ್ಥೆಗಳು ಎಂಬ ವರ್ಗೀಕರಣ ಬೇರೆ. ಜಲೀಪ ಅಂದರೆ ಹೊಸದಕ್ಕೆ ಸಭೆ ನಡೆಸಲು ಅಪ್ಪಣೆಯೇ ಸಿಗುತ್ತಿರಲಿಲ್ಲ. ಸಿಕ್ಕರೂ ಹಲವು ನಿರ್ಬಂಧ.

ಅವರಿಂದ ನಮ್ಮ ಸಂಸ್ಥೆಗಳು ಎಲ್ಲರೂ ಶಿಕ್ಷಣ-ಭಾಷೆ-ಧರ್ಮಗಳ ಮುಖವಾಡ ತೊಡಬೇಕಾಯಿತು. ಆ ಮುಖವಾಡವನ್ನು ಎಲ್ಲ ಸಂಸ್ಥೆಗಳೂ ಯಶಸ್ವಿಯಾಗಿ ತೊಟ್ಟವು.

ಒಂದುಸಲ ಮಹಬೂಬ್ ನಗರ ಜಿಲ್ಲೆಯಲ್ಲಿ ಒಂದು ಸಭೆ ನಡೆಯಬೇಕಾಗಿತ್ತು. ಆ ಜಿಲ್ಲೆಯವರು ಒಬ್ಬರು ವಿದೇಶ ವ್ಯಾಸಂಗ ಮಾಡಿ ಯಶಸ್ವೀ ಆಗಿ ಬಂದಿದ್ದರು. ಅವರ ಕೈಯಿಂದ ಒಂದು ಪುಸ್ತಕ ಭಂಡಾರವನ್ನು ತೆರೆಯಿಸಬೇಕಾಗಿತ್ತು. ಅದಕ್ಕೆ ಅಪ್ಪಣೆಗೆ ಬರೆಯಿತು. ಕೆಲವು ದಿನ ಆದಮೇಲೆ ಅಪ್ಪಣೆ ಬಂತು. ಅದರ ಮನ್ನಣೆ ವಿಚಿತ್ರ. ಕೇವಲ ಧನ್ಯವಾದ ಅರ್ಪಿಸಬೇಕು. ಅದಕ್ಕಾಗಿ ಚಪ್ಪಾಳೆ ಹೊಡೆದರೆ ಸಾಕು. ಭಾಷಣ ಗೀಷಣ ಕೂಡದು. ಪುಸ್ತಕ ಭಂಡಾರದ ಕಪಾಟವನ್ನು ತೆರೆದರೆ ಸಾಕು. ಇದನ್ನು ನೋಡಿ ನಮ್ಮ ಗೆಳೆಯರು ಹೌಹಾರಿದರು. ಆ ಅಪ್ಪಣೆ ಕೊಟ್ಟವರು ಅಲ್ಲಿಯ ತಾಲ್ಲೂಕದಾರ ಎಂದರೆ ಜಿಲ್ಲಾಧಿಕಾರಿ. 'ಖುಷ್ ನುಡಿ ತಾಲ್ಲೂಕದಾರ' ಎಂದು ಪತ್ರಿಕೆಗಳಲ್ಲಿ ಅವರಿಗೆ ಬಿರುದನ್ನಿಟ್ಟು ಕೊಟ್ಟರು.

ಗಸ್ತೀರ್ಜನ—ಸಮಿತಿ ಒಂದು ಆಯಿತು. ಅದರ ವಾರ್ಷಿಕವನ್ನೂ ಆಚರಿಸಿ ಪದೇ ಪದೇ ವರ್ಷ ವರ್ಷವೂ ಅದನ್ನು ಉಪಸಂಹರಿಸಬೇಕು ಎಂದು ಕೇಳುತ್ತಲೇ ಇದ್ದರು. ಅದು ಕಟ್ಟಂಚೆಗೆ ಇದು ಹೋಯಿತು.

ಹೈದರಾಬಾದ್ ಕರ್ನಾಟಕದಲ್ಲಿ ತಾವು ಮಹಾರಾಷ್ಟ್ರೀಯರಿಗಿಂತ ಕಡಿಮೆ ಎಂಬ ಭಾವನೆ ಇತ್ತು. ಹೈದರಾಬಾದೀ ಮಹಾರಾಷ್ಟ್ರೀಯರೂ ಸ್ವಲ್ಪ ಮೂಗುಮೇಲೆ ಮಾಡಿಕೊಂಡೇ ನಡೆಯುತ್ತಿದ್ದರು. ಆಚಾರ್ಯ ಬಿ. ಎಂ. ಶ್ರೀಯವರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಆಗಿದ್ದ ವಿ. ಕೃ. ಗೋಕಾಕರೂ ಹೈದರಾಬಾದಿಗೆ ಬಂದು ಭಾಷಣ ಮಾಡಿದ ಮೇಲೆ ಸ್ವಲ್ಪ ಮಹಾರಾಷ್ಟ್ರೀಯ ಪ್ರತಿಷ್ಠೆ

ಕಡಿಮೆ ಆಯಿತು. ಇದರ ಜೊತೆಗೆ ನಮ್ಮ ಗೆಳೆಯರು ಸಾಹಿತ್ಯ ಪ್ರಕಾಶನ ಮಾಡಿದರು, ನಾಟಕ ಆಡಿದರು.

1936 ರಲ್ಲಿ ರಾಯಚೂರಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ದಿವಂಗತ ಶ್ರೀ ಪಂಜೆ ಮಂಗೇಶರಾಯರು ಅಧ್ಯಕ್ಷರು. ಆ ಸಮ್ಮೇಳನದಲ್ಲಿ ಎಂದಿನಂತೆ ಕವಿಗೋಷ್ಠಿ ನಡೆಯಿತು. ಈಗ ಪದ್ಮಶ್ರೀ ಆಗಿರುವ ಶ್ರೀ ವಿ. ಕೃ. ಗೋಕಾಕರೇ ಅದರ ಅಧ್ಯಕ್ಷರು. ಅವರ ಭಾಷಣ ಕವಿ ಕಾವ್ಯ ಮಹೋನ್ನತಿ ಎಂದು. ಹೈದರಾಬಾದ್ ಗೆಳೆಯರಿಂದ ಪ್ರಕಾಶಿತ ಆಯಿತು. ಆ ಕವಿಗೋಷ್ಠಿಯಲ್ಲಿ ಕಾವ್ಯ ಗದ್ಯವೇ ಪದ್ಯವೇ ಎಂಬ ಚರ್ಚೆ ಬಂತು. ರಸಾತ್ಮಕವಾದುದೆಲ್ಲವೂ ಕಾವ್ಯ ಎಂದಿದ್ದಾರೆ ಅಲಂಕಾರರು. ಅದನ್ನೇ ಸಮರ್ಥಿಸುತ್ತ ಗೋಕಾಕರು ಪದ್ಯ ಗದ್ಯ ಯಾವುದಾದರೂ ಸರಿ ರಸಾತ್ಮಕವಾಗಿದ್ದರೆ ಅದರಲ್ಲಿ ಉಕ್ತಿ ಸೌಂದರ್ಯ ಇದ್ದರೆ ಸರಿ. ಪದ್ಯ ಗದ್ಯ ಎಂಬುದು ರಚನಾಭೇದ ಎಂದು ಹೇಳಿದರು.

ಕವಿಗೋಷ್ಠಿಯಲ್ಲಿ ಕವನಗಳನ್ನು ಓದುವುದು ವಾಡಿಕೆ. ಅದರಂತೆ ರಸಿಕ ರಂಗರು ಒಂದು ಕವನವನ್ನು ಓದಿದರು. ಅವರ ಹಾಡಿನ ಧಾಟಿ ಶ್ರುತಿಜ್ಞಾನ ಹೇಳುವ ರೀತಿ ಎಲ್ಲವೂ ಚೆನ್ನು. ಶ್ರೋತೃಗಳು ಆನಂದದಲ್ಲಿ ಮುಳುಗಿದರು. ಅದು ಮುಗಿದ ಕೂಡಲೇ ಗೋಷ್ಠಿಯ ಅಧ್ಯಕ್ಷರು ನನ್ನ ಹೆಸರನ್ನು ಕೂಗಿದರು. ನಾನು ಹೇಳಿ ಕೇಳಿ ಗದ್ಯ ಓದಿದವನು. ಮೇಲಾಗಿ ರಸಿಕ ರಂಗರದು ಆದಮೇಲೆ ದೊಡ್ಡ ಪರೀಕ್ಷೆ.

'ಕನ್ನಡ ಕಿಡಿ' ಗಳಲ್ಲಿನ ಬೇಂದ್ರೆಯವರ ವ್ಯಕ್ತಿಚಿತ್ರವನ್ನೇ ಆರಿಸಿಕೊಂಡೆ. ಸಮ್ಮೇಳನಾಧ್ಯಕ್ಷರೂ ಕುರ್ಚಿಯಲ್ಲಿ ಕೂತಿದ್ದರು. ಆ ವ್ಯಕ್ತಿಚಿತ್ರದ ಹಾಂಗೊಮ್ಮೆ ಹಿಂಗೊಮ್ಮೆ ತಕಧಿಮಿ ತಕಧಿಮಿ ಎಂದು ಓದಿದಾಗ ಕವನದಷ್ಟೇ ಆನಂದ ಹೆಚ್ಚಿತು ಕೂತಿದ್ದವರಿಗೆ. ಪಂಜೆ ಮಂಗೇಶರಾಯರು ಭಲೆ ಭಲೆ ಎಂದರು.

ಆಗ ರಸಾತ್ಮಕವಾದುದು. ಗದ್ಯ ಆಗಲಿ ಪದ್ಯ ಆಗಲಿ ಕಾವ್ಯ ಎಂಬ ನಿಯತಿಗೆ ಬಂದರೂ ಮತ್ತೆ ಪದ್ಯವೇ ಕಾವ್ಯ ಎಂಬ ರೂಢಿ ಹೋಗಿಲ್ಲ. ಕವಿಗೋಷ್ಠಿಗಳಲ್ಲಿ ಕವನಗಳೇ ವಿನಾ ಗದ್ಯವಾಚನವಾದುದು ಇಲ್ಲ. ಏನು ಕಾರಣವೋ ! ಆಧುನಿಕ ಇನ್ನಾವ ಕವಿಶ್ರೇಷ್ಠನ ಪದ್ಯ ಸೊಗಸೊ, ಮುದ್ದಣ್ಣನ ಗದ್ಯ ಸೊಗಸೊ!

* * * *

ಹೈದರಾಬಾದ್ ಎಂದರೆ ಸಾವಿರ ನೆನಪು ಬರುತ್ತದೆ. ಹರೆಯದಲ್ಲಿ ಅಲ್ಲಿ ಇದ್ದೆನಲ್ಲ. ಹರೆಯದ ಸೇವಾ ಕ್ಷೇತ್ರ ಅದು.

ನಮ್ಮ ಮಾವನವರು ಹೈದರಾಬಾದು ಪೋಲೀಸು ಅಮೀನರು ಆಗಿದ್ದರು. ಅಮೀನ ಎಂದರೆ ಸಬ್‌ಇನ್‌ಸ್ಪೆಕ್ಟರ್. ಅವರು ಇದ್ದಲ್ಲಿ ಬರೀ ಗುಡಿಸಲುಗಳೇ. ಪಕ್ಕಾ ಮನೆಗಳು ಇರಲಿಲ್ಲ. ಅಲ್ಲಾ ಅಡವಿಯ ಸೀಮೆ ಮಧ್ಯ ಪ್ರದೇಶದಂತೆ. ಅವರು

ಇದ್ದ ಊರುಗಳಿಗೆ ಹೋಗಬೇಕಾದರೆ ಕಾರಿನ ಮೂಲಕ ಹೋಗಬೇಕು, ರಸ್ತೆಗಳಿಲ್ಲ. ಎತ್ತಿನ ಗಾಡಿ ಚಕ್ರವು ಖಚಡಾ ಎನ್ನುತ್ತಿದ್ದರು ಅವನ್ನು. ನಿಜವಾಗಿಯೂ ಖಚಡಾನೇ. ಆ ಒಂಡಿಯಲ್ಲಿ ಒಂದು ಮಂಚ. ಅದರಲ್ಲಿ ಒಬ್ಬರು ವಿನಾ ಇನ್ನೊಬ್ಬರಿಗೂ ಜಾಗವಿರು ತ್ತಿರಲಿಲ್ಲ. ಆ ಗಾಡಿಗೆ ಅಕ್ಷವೂ ಮರದ್ದು. ಕಬ್ಬಿಣದ್ದಲ್ಲ. ಅದು ಮುರಿದರೆ ಇನ್ನೊಂದು ಎಂದು ಮೋಟಾರಿಗೆ ಸ್ಟೆಪ್ನಿ ಇದ್ದ ಹಾಗೆ ಬೇರೆ ಒಂದು ಕೋಲನ್ನು ಕಟ್ಟಿರುತ್ತಿದ್ದರು. ಗಾಡಿ ಎತ್ತರ ಕಡಿಮೆ ಆದ್ದರಿಂದ ಒಗ್ಗಾಲಿಯ ಭಯ ಇರಲಿಲ್ಲ ಎತ್ತನ್ನು ಹೊಡೆಯುವವನು ಕಬ್ಬಿಣದ ಅಂಕುಶವನ್ನು ಇಟ್ಟುಕೊಂಡು ತಿವಿಯುತ್ತಿದ್ದ.

ದಾರಿಯಲ್ಲಿ ನಡುರಾತ್ರಿ ಆದೀತು ಎಂದು ಸಂಜೆ ಕತ್ತಲಾಗುವ ವೇಳೆಗೆ ಯಾವ ಅಡವಿ ಹಳ್ಳಿ ಸಿಕ್ಕರೆ ಅಲ್ಲಿ ಬಿಡಾರ. ಇಂಥ ಎಲ್ಲ ವಿವರಗಳನ್ನೂ ಯಾವಾಗಲೋ ಒಮ್ಮೆ ಬರೆಯೋಣ.

ಒಂದು ಹಳ್ಳಿಯಲ್ಲಿ ಮಾವನವರು ಇದ್ದರು. ಪಕ್ಕದ ಹಳ್ಳಿಯಲ್ಲಿ ಇಬ್ಬರು ಅಣ್ಣತಮ್ಮಂದಿರು, ಮಾರ್ವಾಡಿಗಳು. ಅಣ್ಣನ ಮನೆಯ ಸಾಮಾನನ್ನೂ ಎಲ್ಲವನ್ನೂ ದೋಚಿ ಅತ್ತಿಗೆಗೆ ತಿಳಿದೋ ತಿಳಿಯದೆಯೋ ತಮ್ಮ ತನ್ನ ಮನೆಯಲ್ಲಿಟ್ಟುಕೊಂಡ. ತನ್ನ ಅಣ್ಣನ ಪರವಾಗಿ ತಾನೇ ಬಂದು ಮನೆಯಲ್ಲಿ ಕಳವು ಆಗಿದೆ ಎಂದು ದೂರು ಕೊಟ್ಟ ಪೋಲೀಸ್ ಠಾಣೆಯಲ್ಲಿ.

ಅಮೀನ್ ಸಾಹೇಬರು ಮರುದಿನ ಆ ಹಳ್ಳಿಗೆ ಹೋಗಿ ಬಂದರು. ಏನೂ ಸುಳಿವು ಸಿಗಲಿಲ್ಲ. ಆದರೂ ಅಣ್ಣತಮ್ಮಂದಿರು ಇಬ್ಬರ ಮೇಲೂ ಒಂದು ಕಣ್ಣು ಇಟ್ಟಿದ್ದರು.

ಅಮೀನರ ಬಳಿ ಒಂದು ಭಾರಿ ಕುದುರೆ, ಬಿಳೀ ಬಣ್ಣ. ಎಲ್ಲ ಅಮೀನರಲ್ಲೂ ಇಂಥ ಕುದುರೆ ಇರುತ್ತದೆಯೋ ಇಲ್ಲವೋ. ಈ ಅಮೀನರು ಅದನ್ನು ಯಾರಿಂದ ಕೊಂಡಿದ್ದರೋ ನನಗೆ ತಿಳಿಯದು. ಅಂತೂ ಭಾರಿ ಕುದುರೆ.

ಕುದುರೆ ಭಾರಿ ಎಂಬುದೊಂದೇ ಅದರ ಗುಣ ಅಲ್ಲ. ಅಂಥ ಜಾತಿ ಕುದುರೆ. ಹಿಂದಿನ ಕಾಲದಲ್ಲಿ ಬೇಕಾದಷ್ಟು ಕಡೆ ಇದ್ದವು. ಈ ಯಂತ್ರ ಯುಗಕ್ಕೆ ಮೊದಲು ಕುದುರೆಗಳೇ ಸಕಲಕ್ಕೂ. ಸಾಮಾನು ಸಾಗಿಸಲು, ವೇಗವಾಗಿ ಹೋಗಲು ಯುದ್ಧದಲ್ಲಿ ಸವಾರರನ್ನು ಗೆಲ್ಲಿಸಲು ಎಲ್ಲಕ್ಕೂ ಕುದುರೆಯೇ ಆಧಾರ. ಬಂದೂಕು ಜನಪ್ರಿಯ ಆಗುವ ಮುನ್ನ ಕತ್ತಿಯ ಯುದ್ಧವಾಗಿ ಅದರಲ್ಲಿ ಕುದುರೆಯದೇ ಚಳುಕು. ಹಳೆಯ ಚದುರಂಗದಾಟದಲ್ಲೂ ಕುದುರೆಗೆ ಹಾರುವ ಶಕ್ತಿ ಇದೆ.

ಯಂತ್ರಗಳು ಬಂದು ಒಂದೊಂದಾಗಿ ಪ್ರಾಣಿಗಳಿಗೆ ಕೊನೆ ಕೊಟ್ಟವು. ಮೋಟಾರು ಬಂದು ಕುದುರೆಯ ಕೆಲಸ ಹೋಯಿತು. ಈಗ ಕುದುರೆ ಸಾಕುವವರೂ ಇಲ್ಲ, ಕುದುರೆಗಳೂ ಇಲ್ಲ. ಈಗ ಒಳ್ಳೆ ಕುದುರೆ ನೋಡಬೇಕು ಎಂದರೆ ಕುದುರೆ

ಪಂದ್ಯಗಳೇ ಇಲ್ಲ. ಅಶ್ವಯುಗ ಹೋಯಿತು. ಮೋಟಾರು ಯುಗ ಬಂದಾರೂ ಅಶ್ವಬಲ Horse Power ಎಂಬುದು ತಪ್ಪಿಲ್ಲ.

ಏಕೆ ಮರೆವು ಬರುತ್ತವೆಯೋ ಮನುಸ್ಯನಿಗೆ. ಈ ಮರೆವೂ ವಿಚಿತ್ರ. ಯಾವುದೋ ಕ್ಷುದ್ರ ಕ್ಷುಲ್ಲಕ ಸಂಗತಿ ಮರೆತು ಹೋಗುತ್ತದೆ. ಆಯಾ ಕಾಲಕ್ಕೆ ನಮ್ಮ ಮನಸ್ಸು ಕೊಡುವ ಬೆಲೆಯ ಕಾರಣವೇನೋ ಈ ಮರೆವು–ನೆನಪುಗಳಿಗೆ. ಅಂತೂ ಎಷ್ಟೋ ಮಾತು ಕಾಲಕ್ರಮದ ರೀತಿಯಲ್ಲಿ ಪೋಣಿಸಿದಂತಿರುವುದಿಲ್ಲ. ಯಾವಾಗಲೋ ನಡುವೆ ನುಸುಳಿರುತ್ತದೆ.

ಹೈದರಾಬಾದಿನ ರಾಮಾಚಾರ್ಯರ ನೆನಪು ಆದಾಗ ಅವರ ನಲವತ್ತು ದಿನದ ಮಂತ್ರಿತ್ವದ ಮಾತು, ಆ ಪತ್ರ ವ್ಯವಹಾರ ನೆನಪಾಗುತ್ತವೆ. ರಜಾಕಾರ ಮಂತ್ರಿ ಮಂಡಲದಲ್ಲಿ ಅವರು ವ್ಯವಸಾಯ ಮಂತ್ರಿಗಳಾಗಿದ್ದರು. ಮಂತ್ರಿಗಳಾದಮೇಲೂ ಹೊಸ ಕಾರು ಕೊಳ್ಳಲಿಲ್ಲ. ಸರಕಾರೀ ಕಾರನ್ನು ತರಿಸಲಿಲ್ಲ. ಅಲ್ಲಿ ಮಂತ್ರಿಗಳ ಕಛೇರಿ ಮನೆಯಲ್ಲೇ. ಅದಕ್ಕೆ ತಕ್ಕಹಾಗೆ ವಿಶಾಲವೂ ಆಗಿತ್ತು ಅವರ ಮನೆ. ಒಂದು ಸಲ ಸರಕಾರಿ ಫಾರಂಗೆ ಪರಿಶೀಲನೆಗೆ ಹೋಗಿದ್ದರು ಆಚಾರ್ಯರು. ನಾನು ಜೊತೆಯಲ್ಲಿ ಹೋಗಿದ್ದೆ. ಅಲ್ಲಿ ಅವರು ಹಾಕಿದ ಪ್ರಶ್ನೆಗಳ ಸೂಕ್ಷ್ಮತೆಯನ್ನು ನೋಡಿ ತಜ್ಞರಾದ ನಮ್ಮವರಿಗೂ ಆಶ್ಚರ್ಯ ಆಯಿತು.

ಹೈದರಾಬಾದಿನಲ್ಲಿ ಕನ್ನಡದ ಕೆಲಸ ಎಲ್ಲವೂ ಈ ಲೇವಾದೇವಿಯ ಶ್ರೀ ಚಿಮ್ಮಲ ಭೀಮಾಚಾರ್ಯರ ಕಡೆಯಿತ್ತು. ಉಳಿದವರು ಅಷ್ಟಾಗಿ ಹಚ್ಚಿಕೊಂಡಿರಲಿಲ್ಲ. ಅಲ್ಲಿ ಕನ್ನಡಿಗರ ಸಂಸ್ಥೆ ಎಂದರೆ ಸಾಹಿತ್ಯ ಮಂದಿರ. ನೃಪತುಂಗ ವಿದ್ಯಾಲಯ, ಶಾರದಾ ವಿದ್ಯಾ ಶಾಲೆಯೂ ಕೆಲವು ದಿನ ಸ್ವತಂತ್ರವಾಗಿತ್ತು. ಆಚಾರ್ಯರು ರಾಜೀನಾಮೆ ಕೊಟ್ಟ ಮರುದಿನ ಸಾಹಿತ್ಯ ಮಂದಿರದಲ್ಲಿ ಒಂದು ಸಭೆ, ಬಹುಶಃ ವಿದ್ಯುತ್ ದೀಪದ ಆರಂಭವೋ ಏನೋ. ಆಚಾರ್ಯರು ರಾಜೀನಾಮೆ ಕೊಟ್ಟ ಸುದ್ದಿ ಯಾರಿಗೂ ಗೊತ್ತಿರಲಿಲ್ಲ. ಪತ್ರಿಕೆಗಳಲ್ಲೂ ಬಂದಿರಲಿಲ್ಲ. ಕನ್ನಡದ ತರುಣರಿಗೆ ಆಚಾರ್ಯರು ಆ ಮಂತ್ರಿ ಮಂಡಲದಲ್ಲಿ ಇದ್ದುದು ಇಷ್ಟ ಇರಲಿಲ್ಲ. ಆದ್ದರಿಂದ ಸಭೆಯಲ್ಲಿ ಗುಲ್ಲೋ ಗುಲ್ಲು ಆಯಿತು. ತರುಣರು ಉಯಿಲು ಎಬ್ಬಿಸಿದರು. ಸಭಾಪತಿ ಆಗಿದ್ದ ಶ್ರೀ ಅರವಾಮುದ ಅಯ್ಯಂಗಾರ್ಯರು ಎಷ್ಟೇ ಪ್ರಯತ್ನ ಮಾಡಿದರೂ ಸಭೆ ಶಾಂತ ಆಗಲಿಲ್ಲ. ಅದನ್ನು ಕೈಬಿಡಬೇಕಾಯಿತು.

ಮಾರನೆ ದಿನ ಬೆಳಗ್ಗೆ ಪತ್ರಿಕೆಗಳಲ್ಲಿ ಆಚಾರ್ಯರ ರಾಜೀನಾಮೆಯ ಸುದ್ದಿ ಬಂತು. ಆ ದಿನ ರಾಮಾಚಾರ್ಯರ ಮನೆಗೆ ಕನ್ನಡ ತರುಣರ ಸಾಲಿಗೆ ಸಾಲೇ ಬಂತು. ಕ್ಷಮೆ ಕೇಳಿತು. ಆಚಾರ್ಯರು ಆಗಲೂ ಈಗಲೂ ಹಸನ್ಮುಖರಾಗಿದ್ದರು.

ಆಚಾರ್ಯರು ರಾಜೀನಾಮೆ ಕೊಡಲು ನಿಜಾಮರ ಅರಮನೆಗೆ ಹೋದದ್ದು ಜನವರಿ 30, 1948. ನಿಜಾಮರ ಕೈಗೆ ಆ ಪತ್ರ ಕೊಟ್ಟು ಬಂದರು. ಮನೆಗೆ

ಬರುವ ವೇಳೆಗೆ ಗಾಂಧೀಜೀಯ ದುರಂತ ಮರಣದ ಸುದ್ದಿ ರೇಡಿಯೋದಲ್ಲಿ. ಹತ್ತು ನಿಮಿಷದೊಳಗೆ ನಿಜಾಮರ ಕಡೆಯಿಂದ ದೂತ ಒಬ್ಬ ಬಂದು 'ಬರಹೇಳುತ್ತಾರೆ' ಎಂದ. ರಾಮಾಚಾರ್ಯರು ದಿಟ್ಟತನದಿಂದ ಹೇಳಿದರು : 'ಈಗ ತಾನೆ ಗಾಂಧೀಜಿ ಸತ್ತ ಸುದ್ದಿ ಬಂದಿದೆ. ಇನ್ನು ಹದಿಮೂರು ದಿನ ಎಲ್ಲಿಗೂ ಬರುವುದಿಲ್ಲ. ಹೇಳು.'

ಆ ದೂತ ಅಪ್ರತಿಭ ಆದ. ಹೀಗೆ ಭೇಟಿಗೆ ಬರುವುದಿಲ್ಲ ಎಂದು ಹೇಳಿದವರು ಇವರು ಒಬ್ಬರೇ ಇದುವರೆಗೆ ಎಂದು ನನಗೆ ಹೇಳಿದ.

ಇದರಿಂದ ನಿಜಾಮರಿಗೂ ಆಚಾರ್ಯರ ಬಗ್ಗೆ ಗೌರವ ಹೆಚ್ಚಿತು. ಆಚಾರ್ಯರ ರಾಜೀನಾಮೆ ಪತ್ರದಲ್ಲಿ ರಜಾಕಾರರ ಹಿಂಸಾಕೃತ್ಯಗಳ ಬಗ್ಗೆ ಸರಕಾರದ ಪಕ್ಷಪಾತದ ಆರೋಪ ಇತ್ತು. ಆ ಪತ್ರವನ್ನು ವಿಶ್ವಸಂಸ್ಥೆಯಲ್ಲೂ ಓದಿದರು. ದೇಶ ವಿದೇಶಗಳಲ್ಲಿ ಅದು ಪ್ರಸಾರ ಆಯಿತು.

ಹೈದರಾಬಾದಿನ ಪ್ರಜಾಪ್ರಭುತ್ವದ ಪ್ರಥಮ ಮುಖ್ಯಮಂತ್ರಿಯೂ, ಕೇರಳದ ಉತ್ತರ ಪ್ರದೇಶದ ರಾಜ್ಯಪಾಲರೂ ಆಗಿ ಕೆಲಸ ಮಾಡಿದ ಶ್ರೀ ಬುರ್ಗುಲ ರಾಮಕೃಷ್ಣ ರಾಯರದು ಬಹಳ ಮಂದ ಸ್ವಭಾವ. ಯಾವ ನಿರ್ಧಾರಕ್ಕೆ ಬರುವುದೂ ನಿಧಾನ. ಅವರನ್ನು ಎಳೆದು ತಂದು ನಮ್ಮ ಪ್ರಜಾಪರಿಷತ್ತಿಗೆ ನನ್ನ ಜೊತೆಗೆ ಕಾರ್ಯದರ್ಶಿ ಯಾಗಿ ಮಾಡಿದರು. ಅವರೂ ನನ್ನ ಹಾಗೆ ಗಿಡ್ಡರು. ಇಬ್ಬರೂ ಗಿಡ್ಡರನ್ನು ನೊಗಕ್ಕೆ ಹೂಡಿದ್ದೇನೆ ಎಂದು ಹೇಳುತ್ತ ಆಗಾಗ ಆಚಾರ್ಯರು ಸಮಾಧಾನ ಪಟ್ಟು ಕೊಳ್ಳುತ್ತಿದ್ದರು.

ರಾಮಕೃಷ್ಣರಾಯರು ಸರಸಿ, ಬಹು ಭಾಷಾ ಕೋವಿದರು. ತೆಲುಗಿನಲ್ಲಿ ಒಳ್ಳೆಯ ಕವಿಗಳು. ಅವರು ಕವಿಗಳು ಎಂದು ಹೈದರಾಬಾದಿನಲ್ಲಿ ಒಂದು ಸಾಹಿತ್ಯ ಅಕಾಡೆಮಿ ಮೊದಲಿನಿಂದಲೂ ಕೆಲಸ ಮಾಡಿತು. ಬಲು ಸ್ನೇಹದ ಜೀವ. ಬೆಂಗಳೂರಿಗೆ ಬಂದಾಗಲೆಲ್ಲ ನಮ್ಮ ಮನೆಗಾದರೂ ಬರುತ್ತಿದ್ದರು. ಅಥವಾ ಕಾರ್ಯ ಬಂದ ಕೂಡಲೇ ಹೇಳಿ ಕಳಿಸಿ ಕರೆಸಿಕೊಳ್ಳುತ್ತಿದ್ದರು. "ನಿನಗೆ ಏನು ಮಾಡಲಿ ?" ಎಂದು ಹಗಲೆಲ್ಲ ಕೇಳುತ್ತಿದ್ದರು. ಮೊದಲನೆ ಸಲ ರಾಜ್ಯಸಭೆಗೆ ಹೈದರಾಬಾದಿನಿಂದ ಯಾರನ್ನಾದರೂ ಕಳಿಸುವಾಗ "ನೀನು ಹೋಗು" ಎಂದರು. "ನನಗೆ ಬೇಡ. ನಮ್ಮ ಜಾಗೀರುದಾರರಿಗೆ ಕೊಡಿ" ಎಂದು ಹೇಳಿದೆ. ಹಾಗೇ ಮಾಡಿದರು. ಅಲ್ಲಿಗೆ ಬಂದಾಗ "ನನಗೆ ನಿಮ್ಮ ಮನೆಗೆ ಕರೆದು ಊಟ ಹಾಕು" ಎಂದೆ. ಅದನ್ನಂತೂ ತಪ್ಪದೆ ಮಾಡಿದರು. ಆದರೆ ನನಗೆ ಏನೂ ಮಾಡಲಿಲ್ಲ ಎಂಬ ಪೇಚಾಟ ತಪ್ಪಲಿಲ್ಲ. ಕೇರಳಕ್ಕೆ ಪಿ. ಎ. ಆಗಿ ಬಾ ಎಂದರು. ಒಲ್ಲೆ ಎಂದೆ.

ಇದರ ಜೊತೆಯಲ್ಲೇ ಇಲ್ಲಿಯದೂ ಒಂದನ್ನು ಹೇಳಿಬಿಡುತ್ತೇನೆ. ಇಲ್ಲದೆ ಇದ್ದರೆ ಮರೆತುಹೋದೀತು. ಮೊದಲನೆ ಸಲ ಮೈಸೂರಿನಲ್ಲಿ ವಿಧಾನ ಪರಿಷತ್ತಿಗೆ ಯಾರನ್ನಾದರೂ ಶಿಕ್ಷಕರ ಕ್ಷೇತ್ರಕ್ಕೆ ನಿಲ್ಲಿಸಬೇಕು ಎಂದಾಗ ಇಲ್ಲಿಗೆ ವರ್ಕಿಂಗ್

ಕಮಿಟಿ ಏಕಮತದಿಂದ ನನ್ನ ಹೆಸರನ್ನು ನಿರ್ಧರಿಸಿತು. ಸಿದ್ದಯ್ಯನವರೂ ಬಾಷ್ಯಂ ಐಯ್ಯಂಗಾರ್ಯರೂ ಬದುಕಿದ್ದರು. ಇಬ್ಬರೂ "ಈ ಅವಕಾಶ ಬಿಡಬೇಡ. ನಿನ್ನ ಜೊತೆಗೆ ಇನ್ನಿಬ್ಬರನ್ನೂ ಕೊಡುತ್ತೇನೆ. ನೀನು ಇದ್ದರೆ ಅವರೂ ಅನಾಯಾಸವಾಗಿ ಬರುತ್ತಾರೆ" ಎಂದರು. ನಾನು ಒಪ್ಪಲಿಲ್ಲ. "ಚುನಾವಣೆಯೇ ಬೇಡ" ಎಂದೆ. ಇಂದಿಗೂ ಅದೇ ರೀತಿ ಇದ್ದೇನೆ.

ಚುನಾವಣೆಗಳಿಗೂ ನನಗೂ ಮೊದಲಿನಿಂದಲೂ ಸಂಬಂಧ ಇತ್ತು. ಸ್ವರಾಜ್ಯಕ್ಕೆ ಮೊದಲು ಪೌರಸಭೆಗಳಿಗೆ, ಜಿಲ್ಲಾ ಬೋರ್ಡುಗಳಿಗೆ ಕಾಂಗ್ರೆಸ್ಸನ್ನು ಆರಿಸಿ ತರಲು ಪ್ರಚಾರ ಮಾಡಿದ್ದೆ. ಸ್ವರಾಜ್ಯ ಬಂದ ಮೇಲೂ ಚುನಾವಣಾ ಪ್ರಚಾರ ಸಮಿತಿಯಲ್ಲಿ ಇದ್ದು ಸಂಸ್ಥಾನದಲ್ಲೆಲ್ಲಾ ಓಡಾಡಿದೆ. ಒಮ್ಮೆ "ನೀವು ಚುನಾವಣಾ ಸಮಿತಿಯ ಕೆಲಸವನ್ನು ಮಾಡಿ ಆಮೇಲೆ ನಿಮಗೆ ವಿಧಾನ ಪರಿಷತ್ತಿಗೆ ನಾಮಕರಣಮಾಡುತ್ತೇನೆ" ಎಂದರು, ಮೈಸೂರು ಕಾಂಗ್ರೆಸ್ ಅಧ್ಯಕ್ಷರು. ಆಗ ನಾನು ಇನ್ನೂ ಸಮಿತಿಯ ಅಧ್ಯಕ್ಷತೆಗೆ ಒಪ್ಪಿರಲಿಲ್ಲ. ಈ ಮಾತನ್ನು ಅವರು ಹೇಳಿದಾಗ ನನ್ನ ಜೊತೆಗೆ ಶ್ರೀ ದೊರೆಸ್ವಾಮಿಗಳೂ ಇದ್ದರು. ನಾನು ತಟ್ಟನೆ ಉತ್ತರ ಹೇಳಿದೆ: "ಹಾಗಾದರೆ ನನಗೆ ಈ ಜವಾಬ್ದಾರಿ ಬೇಡ, ನಾನು ಮಾಡುವುದಿಲ್ಲ." ಆಮೇಲೆ ಏನೋ ರಾಜಿ ಆಗಿ ಆ ಕೆಲಸವನ್ನು ವಹಿಸಿಕೊಂಡೆ.

ಇವೆಲ್ಲ ನೆನಪು ಬಂದರ ಜೊತೆಯಲ್ಲಿ ಒಂದು ಸಂತೋಷವನ್ನು ತರುತ್ತವೆ.

ಈಗಂತೂ ಚುನಾವಣೆಯೆಂದರೆ ದುಡ್ಡು ಇದ್ದವರ ಆಟ ಆಗಿದೆ. ವಿದ್ಯಾರ್ಥಿಗಳ ಸಂಘ, ಸಹಕಾರ ಸಂಘ,- ಎಲ್ಲೆಲ್ಲೂ ಚುನಾವಣಾ ಜೀವಿಗಳ ಹಾವಳಿ ಹೆಚ್ಚಾಗಿದೆ. ಧ್ವನಿವರ್ಧಕ ಯಂತ್ರಗಳು ಕೂಗಿದ್ದೇ. ಜನ ಜೀವನದಲ್ಲಿ ಒಂದು ಪಿಡುಗು ಆಗಿದೆ. ವಿನಾಯಕನನ್ನು ಮಾಡಲು ಹೋಗಿ ವಾನರನನ್ನು ಮಾಡಿದ ಹಾಗೆ ಆಗಿದೆ, ನಮ್ಮ ಬಾಳು. ಈ ಹಾಳು ಚುನಾವಣೆಗಳು ಎಂದಿಗೆ ಹೋಗುತ್ತವೆಯೋ, ಪ್ರಜಾಪ್ರಭುತ್ವದ ನಿಜವಾದ ಅರ್ಥ ನಮಗೆ ಯಾವಾಗ ಗೋಚರಿಸುತ್ತವೆಯೋ ತಿಳಿಯದಾಗಿದೆ. ಇದರಲ್ಲಿ ಏನೋ ಸ್ವಾರಸ್ಯ ಇದೆ ಎಂದರೆ ಇದು. ಗಣಪತಿಯ ಹೊಕ್ಕಳಲ್ಲಿ ಕೈ ಇಟ್ಟಂತೆ ಆಯಿತು. ಮೊದಲಿನವರು ತಣ್ಣಗಿದೆ ಎಂದರೆ ಹಿಂದಿನವರು ಎಲ್ಲರೂ ಆಡಬೇಕೇ ಚೇಳಿನಿಂದ ಕುಟುಕಿಸಿಕೊಳ್ಳಲು. ಬ್ರಿಟಿಷರು ಏಕೋ ಏನೋ, ಈ ಚುನಾವಣೆಯನ್ನು ತಂದರು ಎಂದು ನಾವೂ ಈ ಹೊಕ್ಕಳಿಗೇ ಕೈ ಇಡಬೇಕೇ?

ಹೈದರಾಬಾದಿನ ನೆನಪು ಬಂದಾಗ ಆಂಧ್ರ ಪಿತಾಮಹ ಶ್ರೀ ಮಾಡಪಾಟಿ ಹನುಮಂತರಾಯರನ್ನು ಮರೆಯಲಾರೆ. ಅವರ ವ್ಯಕ್ತಿಚಿತ್ರ ಒಂದು ನನ್ನ 'ಕುಲ ದೀಪಕರು' ಪುಸ್ತಕದಲ್ಲಿ ಬಂದಿದೆ. ಅದನ್ನೇ ತೆಲುಗಿಗೆ ಭಾಷಾಂತರ ಮಾಡಿ ಒಂದು ಹೈದರಾಬಾದಿನ ಪತ್ರಿಕೆ, ಒಂದು ಮದರಾಸಿನ ಪತ್ರಿಕೆ ಪ್ರಕಟಿಸಿದವು. ಅವರಲ್ಲಿ ಗೌರವಕ್ಕೆ ಇದಕ್ಕಿಂತ ಸಾಕ್ಷಿಬೇಕೆ?

ನಿಜವಾಗಿ ಸಾರ್ವಜನಿಕ ಜೀವನವನ್ನು ನಾವು ಪ್ರಾರಂಭಿಸಿಕೊಂಡದ್ದು ಹೈದರಾಬಾದಿನಲ್ಲಿ. ಶ್ರೀ ಹನುಮಂತರಾಯರು, ಶ್ರೀ ಗುಡಗುಂಟೆ ರಾಮಾಚಾರ್ಯರು. ಇಬ್ಬರೂ ನನ್ನ ನಾಯಕರು. ಅಲ್ಲಿ ಇದ್ದಾಗ ನಮ್ಮ ಗೆಳೆಯರ ಗುಂಪು ಚಿಕ್ಕದು. ಅಲ್ಲಿ ತಿಂಗಳಿಗೆ ಒಂದು ಸಲ ಎಲ್ಲ ಭಾಷೆಗಳ ಕವಿಗಳನ್ನೂ ಮರೆಯದೆ ಕರೆಸುತ್ತಿದ್ದೆವು. ಕೊನೆಯಲ್ಲಿ ಫಲಹಾರ ಎಂದರೆ ಕಾಫೀ–ತಿಂಡಿ, ನನಗೆ ಎಲ್ಲ ಭಾಷೆಗಳ ಪರಿಚಯವೂ ಇದ್ದುದರಿಂದ ಇಂಗ್ಲೀಷಿಗೆ ಅವನ್ನು ಮೊದಲೇ ಭಾಷಾಂತರಮಾಡಿ ಟೈಪು ಮಾಡಿಸಿ ಕೊಡುತ್ತಿದ್ದೆ. ಮುಂದೆ ಹೈದರಾಬಾದಿನ ರಾಜಕೀಯಕ್ಕೆ ಅವರೇ ಆಧಾರ ಆದರು.

ಹೈದರಾಬಾದಿನಲ್ಲಿ ಇದ್ದಾಗ ನನ್ನ ಕನ್ನಡದ ಕಿಡಿಗಳು ಪ್ರಕಟವಾಯಿತು. ನಮ್ಮ ಗೆಳೆಯರ ಗುಂಪಿನಿಂದ ಶ್ರೀ ಗೋಕಾಕರ ಕವಿ ಕಾವ್ಯ ಮಹೋನ್ನತಿಯನ್ನು ಪ್ರಕಟಿಸಿದೆವು. ತರುಣ ತಂಡದಿಂದ ಒಂದು ತರುಣರ ಬರೆಹದ ಸಂಚಿಕೆಯನ್ನು ಪ್ರಕಟಿಸಿದೆವು. ಅದರ ಹೆಸರು ಈಗ ಮರೆತು ಹೋಗಿದೆ. ಅದರಲ್ಲೇ ಮೊಟ್ಟಮೊದಲು ಹನುಮಂತರಾಯರ ವ್ಯಕ್ತಿಚಿತ್ರ ಬಂದದ್ದು.

ಅಲ್ಲಿನ ಆಂಧ್ರ ಮಹಾಸಭೆ, ಮಹಾರಾಷ್ಟ್ರ ಪರಿಷತ್ತು, ನಿಜಾಮ ಕರ್ನಾಟಕ ಪರಿಷತ್ತು ಮೂರರಲ್ಲೂ ನಾನು ಓಡಿಯಾಡುತ್ತಿದ್ದೆ. ಒಂದು ಸಲ ಮಹಾರಾಷ್ಟ್ರ ಪರಿಷತ್ತು ಪರಭಣಿಯಲ್ಲಿ ನಡೆಯಿತು. ಆ ಸ್ಥಳದಲ್ಲಿ ಒಂದು ಗಿರಣಿಯ ಗೋದಾಮ ವನ್ನು ನಮಗೆ ತೆರವು ಮಾಡಿಕೊಟ್ಟಿದ್ದರು. ಅದು ಮೇಲೂ ಜಿಂಕ್ ಶೀಟು. ಪರಿಷತ್ತಿನ ಗೊತ್ತುವಳಿಗಳನ್ನು ಸಿದ್ಧಪಡಿಸಲು ನಾನು ಒಂದು ವಾರ ಮೊದಲೇ ಹೋಗಿದ್ದೆ. ಹಿಂದಿರುಗಿ ಬರುವಾಗ Sun Stroke ಸೂರ್ಯನ ಝಳದ ಹೊಡೆತ ಬಿದ್ದು ಮೂರು ತಿಂಗಳು ನರಳಿದೆ.

ಚಿತ್ರದುರ್ಗದ ನೆನಪು ಬಂದಾಗ ನಮ್ಮ ಹಿರಿಯರು ಗೆಳೆಯರಾದ ವೆಂಕಟಕೃಷ್ಣ ದೀಕ್ಷಿತರ ನೆನಪು ಆಗುತ್ತದೆ. ದೀಕ್ಷಿತರು ಸ್ಮಾರ್ತರು. ನಮ್ಮ ತಂದೆ ಶ್ರೀ ವೈಷ್ಣವರು. ಇವರ ಜೊತೆಗೆ ಪೆನುಗೊಂಡೆ ಪುಟ್ಟಾಚಾರ್ಯರ ಮನೆಯ ಜಗುಲಿಯ ಮೇಲೆ ಇಲ್ಲವೇ ನಮ್ಮ ಮನೆಯ ಜಗುಲಿಯ ಮೇಲೆ ಮಾತುಕತೆ ಆಡುತ್ತ ಸಂಜೆಯ ಹೊತ್ತಿನಲ್ಲಿ ಕೂಡುತ್ತಿದ್ದರು. ಈ ತ್ರಿಮತಸ್ಥ ರತ್ರಯ ಅಲ್ಲಿಗೆ ಒಂದು ಪ್ರಾತಿನಿಧಿಕ ಆಗಿತ್ತು. ಪುಟ್ಟಾಚಾರ್ಯರು ಜಮೀನುದಾರರು. ಬಹಳ ಕರಾರುವಾಕ್ಕು. ಕಡ್ಡಿ ತುಂಡರಿಸಿದ ಹಾಗೆ ಮಾತು. ಅವರ ಮಗಳು ಒಬ್ಬಳಿಗೆ ಮದುವೆಕಾಲ ಮಿಂಚಿ ಹೋಗುತ್ತಿತ್ತು. ಆಗ ಇನ್ನೂ ಪ್ರೌಢ ವಿವಾಹ ರೂಢಿ ಬಂದಿರಲಿಲ್ಲ. ಅವರ ಹೆಂಡತಿ ರಾತ್ರಿ ಬಹಳ ಗೋಳು ಹುಯಿದುಕೊಂಡರು. ಮಗಳಿಗೆ ಮದುವೆ ಆಗಲಿಲ್ಲ ಎಂದು ಪುಟ್ಟಾಚಾರ್ಯರಿಗೆ ರೇಗಿ ಹೋಯಿತು. ನಾಳೆ ಬೆಳಗ್ಗೆ ಬಾಗಿಲು ತೆರೆದಾಗ ಯಾವ ಬ್ರಾಹ್ಮಣ ಮೊದಲು ಕಣ್ಣಿಗೆ ಬಿದ್ದರೆ ಅವರಿಗೆ ಕನ್ಯಾದಾನ ಮಾಡಿಬಿಡುತ್ತೇನೆ ಎಂದರು. ಮರುದಿನ ಅವರು ಎದ್ದು ಹೊರಬಾಗಿಲು ತೆಗೆಯುವ ವೇಳೆಗೆ ಒಬ್ಬ ಬಡ

ಬ್ರಾಹ್ಮಣ ಕಣ್ಣಿಗೆ ಬಿದ್ದ ಸರಿ. ಅವನನ್ನು ಕರೆದು ಒಪ್ಪಿಸಿ ಅವನಿಗೆ ಧಾರೆ ಎರೆದು ಬಿಟ್ಟರು ಮಗಳನ್ನು. ಸದ್ಯ ಅವನೂ ಯುವಕ, ವರ ಸಾಮ್ಯ ಸರಿಹೋಯಿತು.

ವೆಂಕಟಕೃಷ್ಣ ದೀಕ್ಷಿತರು ಇನ್ನೊಂದು ಬಗೆ. ಅವರ ಮಾತೃಭಕ್ತಿ ಅಪಾರ. ಅವರ ತಾಯಿ ಮಡಿ ಯಮುನಮ್ಮ ಎಂದು ಚಿತ್ರಮರ್ಗಕ್ಕೆ ಹೆಸರಾಗಿದ್ದರು. "ಮಡಿ ಮಡಿಯೆಂದು ಅಡಿಗಡಿಗೆ ಏಕೆ ಹಾರುತೀ" ಎಂಬ ಹಾಡನ್ನು ಆಕೆಗೋಸ್ಕರ ಪುರಂದರ ದಾಸರು ಮಾಡಿದ್ದ ಹಾಗೆ ಇತ್ತು. ಯಮುನಮ್ಮ ಮಡಿ ಬಹಳ. ಕೈಯಲ್ಲಿ ಒಂದು ತಂಬಿಗೆ ನೀರು. ಹೊರಟರೆ ನಾಟು ಆ ನೀರನ್ನೂ ಹೆಜ್ಜೆ ಹೆಜ್ಜೆಗೂ ಚೆಲ್ಲಿಕೊಂಡು ಆಕೆ ಬರಬೇಕು. ಈ ಯಮುನಮ್ಮನಿಗೆ ಒಬ್ಬ ಹೆಣ್ಣುಮಗಳು. ಆಕೆಯ ಹೆಸರು ಲಕ್ಷಮ್ಮ. ಏನು ಹೆಸರು ಇಟ್ಟರೋ ಆಕೆಗೆ! ಚಿಕ್ಕಂದಿನಿಂದಲೂ ಆಕೆಗೆ ಬುದ್ಧಿ ಕಡಮೆ. ಇಂಥ ಹುಚ್ಚು ಮಗಳು ಎಂದು ತಾಯಿಗೆ ಗೊತ್ತು. ಆಕೆ ಸಾಯು ವಾಗ ತಮ್ಮನನ್ನು ಅಂಗಲಾಚಿಕೊಂಡು 'ಕೈಬಿಡಬೇಡ. ಲಕ್ಷ್ಮಿಯನ್ನು ನೋಡಿಕೊಳ್ಳುವು ದಾಗಿ ಮಾತು ಕೊಡು' ಎಂದು ಭಾಷೆ ತೆಗೆದುಕೊಂಡು ಪ್ರಾಣಬಿಟ್ಟರು.

ಲಕ್ಷ್ಮಮ್ಮ ನಿಜವಾಗಿಯೂ ಅರೆ ಹುಚ್ಚಿ. ಪಾತ್ರೆ ತೊಳೆಯುವುದಕ್ಕೆ ಕೂತರೆ ದಿನ ವೆಲ್ಲ ಅದೇ ಕೆಲಸವೇ. ಕಸ ಗುಡಿಸಲು ಕೂತರೆ ಗುಡಿಸಿದ್ದು ಗುಡಿಸಿದ್ದೇ. ಹೀಗಿತ್ತು ಆಕೆಯ ಸ್ಥಿತಿ. ಯಾರಾದರೂ ಬಂದು ದೀಕ್ಷಿತರು ಮನೆಯಲ್ಲಿ ಇದ್ದಾರೆಯೋ ಎಂದು ಕೇಳಿದರೆ ಇಲ್ಲ, ಇದಾರೆ ಏನೋ ಉತ್ತರ ನೀಡುತ್ತಿದ್ದರು. ಆ ಉತ್ತರಕ್ಕೂ ದೀಕ್ಷಿತರಿಗೂ ಸಂಬಂಧವಿರುತ್ತಿರಲಿಲ್ಲ. ನಾನೂ ಆಕೆಯನ್ನು ನೋಡಿದ್ದೆ. ಆಕೆ ಪಾತ್ರೆ ಬೆಳಗುತ್ತ ಮನೆಯ ಮುಂದಿನ ಬಯಲಿನಲ್ಲಿ ಕೂತಿರುತ್ತಿದ್ದ ಚಿತ್ರ ಈಗಲೂ ಕಣ್ಣಿಗೆ ಕಟ್ಟಿದಂತಿದೆ.

ವೆಂಕಟಕೃಷ್ಣ ಜೋಯಿಸರಿಗೆ ಮಕ್ಕಳು ಇರಲಿಲ್ಲ. ಮಕ್ಕಳು ಹೇಗೆ ಆಗಬೇಕು. ಅವರ ಹೆಂಡತಿ ಶುದ್ಧ ನಪುಂಸಕಳೆಂದು ನನ್ನ ಭಾವನೆ. ನನ್ನ ಭಾವನೆಯೇ ಅಲ್ಲ, ಎಲ್ಲರದೂ ಭಾವನೆ. ಆದರೆ ವೆಂಕಟಕೃಷ್ಣ ದೀಕ್ಷಿತರು ಮಾತ್ರ ಒಂದು ದಿನವೂ ಹಾಗೆ ಹೇಳಲಿಲ್ಲ. ವೆಂಕಟಕೃಷ್ಣ ದೀಕ್ಷಿತರನ್ನು 'ವೆಂಕಟಪ್ಪ' ಎಂದು ಕರೆಯುತ್ತಿದ್ದರು ಆಗ.

ದೀಕ್ಷಿತರು ಅವರ ಅಕ್ಕನಿಗೆ ಕೈ ಮೇಲೆ ಕೈ ಹಾಕಿ, ಭಾಷೆ ಕೊಟ್ಟಿದ್ದರು. ಅದರಂತೆ ಯಾವಜ್ಜೀವವೂ ನಡೆದುಕೊಂಡರು. ಇಂಥ ಪ್ರಾಮಾಣಿಕತೆ ಈಗ ಎಲ್ಲಿ ಕಂಡು ಬರುತ್ತದೆ. ದಿನವೂ ಅಡಿಗೆ ಮಾಡಬೇಕು, ಹೆಂಡತಿಗೆ ಹಾಕಬೇಕು. ಇದು ಅವರ ನಿತ್ಯನಿಯಮ. ಹೀಗೆ ಎಂಬತ್ತು ವರುಷದವರೆಗೆ ಬದುಕಿದ್ದರು. ಒಂದು ದಿನವೂ ಲಕ್ಷ್ಮಮ್ಮನವರ ಬಗ್ಗೆ ದೂರಿದವರಲ್ಲ. ದೀಕ್ಷಿತರ ಮುಖದಲ್ಲಿ ಬ್ರಹ್ಮತೇಜಸ್ಸು ಹೊಳೆಯುತ್ತಿತ್ತು. ಸ್ವಲ್ಪ ಶ್ಯಾಮಲವರ್ಣ ಆದರೂ ಅವರ ಕಣ್ಣು ಹೊಳೆಯುತ್ತಿದ್ದವು.

ಈ ಬ್ರಹ್ಮತೇಜಸ್ಸಿಗೆ ಅವರ ನೈಷ್ಠಿಕ ಬ್ರಹ್ಮಚರ್ಯ ಕಾರಣವೋ ಅವರ ವೇದಾಧ್ಯಾಯನ ಕಾರಣವೋ ನನಗೆ ಗೊತ್ತಿಲ್ಲ.

ವೆಂಕಟಕೃಷ್ಣಪ್ಪನವರ ಕಾಲ 60–70 ವರ್ಷ ಹಿಂದಿನದು. ಆಗ ವರ್ಣಾಶ್ರಮ ಧರ್ಮದ ಬಗ್ಗೆ ಜನರು ಬಹಳ ನಿಷ್ಠೆಯಿಂದ ಇದ್ದರು. ವರ್ಣವೇ ಸಮಾಜದ ತಾರಕ ಎಂದು ನಂಬಿದ್ದ ಕಾಲ. ವೆಂಕಟಪ್ಪನವರು. ಒಬ್ಬ ಹುಡುಗನಿಗೆ–ಅವನಿಗೆ 22 ವರ್ಷ, ಉಪದೇಶ ಮಾಡಿದ್ದರು. "ಬೇಗ ಮದುವೆ ಮಾಡಿಕೋ. ಎಲ್ಲಾದರೂ ಅನ್ಯಕ್ಷೇತ್ರದಲ್ಲಿ ವೀರ್ಯ ಬಿಟ್ಟರೆ ಏನು ಗತಿ." ಅವರ ಭಾವನೆ. ಅವರ ನಿಷ್ಠೆ ಹಾಗಿತ್ತು.

ಎಂದಾದರೂ ಒಂದು ದಿನ ಯಾರ ಮನೆಗಾದರೂ ದೀಕ್ಷಿತರು ಊಟಕ್ಕೆ ಹೋದರೆ ಅವತ್ತು ಅವರ ಹೆಂಡತಿ ಅಡಿಗೆ ಮಾಡಿಕೊಳ್ಳಬೇಕು. ಅವತ್ತೂ ಅವರಿಗೆ ಬರೀ ಅನ್ನ-ಮಜ್ಜಿಗೆ-ಹೆಚ್ಚು ಅಡಿಗೆ ಮಾಡುವುದು ಆಕೆಗೆ ಬರುತ್ತಿರಲಿಲ್ಲ ಎಂದು ಕಾಣುತ್ತದೆ.

ನಮ್ಮ ತಂದೆಯವರಿಗೂ ದೀಕ್ಷಿತರಿಗೂ ಬಲು ಸ್ನೇಹ. ಗಳಸ್ಯ ಕಂಠಸ್ಯ ಎನ್ನಬಹುದು. ನಮ್ಮೂರಿನಲ್ಲಿ ಸೋಮವಾರ ಸಂತೆ. ಸಂತೆಯಿಂದ ಕಾಯಿ ಪಲ್ಲೆ ತನ್ನ ವಾರಕ್ಕಾಗಿ ತಂದುಕೊಳ್ಳುವ ಪದ್ಧತಿ. ಆ ಕೆಲಸವನ್ನು ಬಹಳ ಮಟ್ಟಿಗೆ ದೀಕ್ಷಿತರೇ ಮಾಡುತ್ತಿದ್ದರು. ನಮ್ಮ ಮನೆಯವರು ಇದ್ದರೆ ಹೇಗೋ ಹಾಗೆ. ಇಷ್ಟಾದರೂ ನಮ್ಮ ಮನೆಯಲ್ಲಿ ಒಂದು ದಿನವೂ ಊಟ ಮಾಡಲಿಲ್ಲ. ಬಹಳ ಆದರೆ ಏನಾದರೂ ಫರಾಳ ಮಾಡಿ ನೀರು ಕುಡಿಯುತ್ತಿದ್ದರು. ಅದು ತೈಲ ಪಕ್ವ ಆಗಿದ್ದರೆ ಮಾತ್ರ. ಇಷ್ಟು ನೇಮ ನಿತ್ಯ ಅವರದು. ಹಾಗೆ ನೇಮದಿಂದ ಬದುಕಿ ಬಾಳಿದವರು ಈಚೆಗೆ ಕಡಿಮೆ ಆಗುತ್ತಿದ್ದಾರೆ.

ಇನ್ನಿಬ್ಬರು ನೆನಪು ಆಗುತ್ತಾರೆ. ಅವರ ಹೆಸರು ಹೇಳಬೇಕಾದುದು ನನ್ನ ಧರ್ಮ. ಒಬ್ಬರು ಹುಲ್ಲೂರು ಶ್ರೀನಿವಾಸ ಜೋಯಿಸರು, ಇನ್ನೊಬ್ಬರು ಹರಿಹರದ ಗುಂಡೂರಾಯರು. ಮೊದಲನೆಯವರು ಈಗ ಇಲ್ಲ. ಆದರೆ ಅವರ ಪುಸ್ತಕಗಳು ಅವರ ಸಂಶೋಧನೆಯ ಪರಿಣಾಮವೂ ಜನರಿಗೆ ಗೊತ್ತಿವೆ. ಈಗಲೂ ರಂಗಪ್ಪನ ಬಾಗಿಲಲ್ಲಿ ಇರುವ ಚಿತ್ರದುರ್ಗದ ಐತಿಹಾಸಿಕ ವಸ್ತು ಸಂಗ್ರಹಾಲಯ ಅವರ ಪುಣ್ಯ. ಜೋಯಿಸರು ವಿಧಾನಸಭಾ ಸದಸ್ಯರು ಆಗಿದ್ದರು ಪ್ರಾರಂಭದಲ್ಲಿ.

ಮೊದಲು ಜೋಯಿಸರು ಗುಮಾಸ್ತರು ಆಗಿದ್ದರು. ಆಮೇಲೆ ಟೆಸ್ಟುಗಳನ್ನು ಪಾಸುಮಾಡಿಕೊಂಡು ವಕೀಲರಾದರು. ಅವರು ಗುಮಾಸ್ತರಾಗಿದ್ದಾಗಿನಿಂದಲೂ ನನಗೆ ಪರಿಚಯ. ಆ ಕಾಲದಲ್ಲಿ ವಿಶ್ವೇಶ್ವರಯ್ಯನವರ ದಿವಾನಗಿರಿಯ ಕಾಲದಲ್ಲಿ ಎಕ್‌ನಾಮಿಕ್ ಕಾನ್ಫರೆನ್ಸ್ ಪ್ರಬಲ ಆಗಿತ್ತು. ಚಿತ್ರದುರ್ಗದಿಂದ ಅವರ ಪರವಾಗಿ ಒಂದು ವಾರ ಪತ್ರಿಕೆ "ಪ್ರತಾಪ ರತ್ನಾಕರ" ಹೊರಡುತ್ತಿತ್ತು. ಅದಕ್ಕೆ ಸಂಪಾದಕ

ರಾಗಿ ಶ್ರೀ ಬಸಪ್ಪನವರೋ ಏನೋ ಅವರ ಹೆಸರು—ಆ ಶಾಖೆಯಲ್ಲಿ ಕೆಲಸ ಮಾಡುತ್ತಿದ್ದ ಹಿರಿಯ ಗುಮಾಸ್ತರು ಕೆಲಸ ಮಾಡುತ್ತಿದ್ದರು.

ಆಗ ನನಗೆ ಜೋಯಿಸರ ಪರಿಚಯ. "ಗಕಾರದ ಗರ್ವ ಜಕಾರದ ಜಂಬ" ಮುಂತಾದ ಶಬ್ದಾಡಂಬರದ ಲೇಖನ ಬರೆದು ನಾನೂ ಆ ಪತ್ರಿಕೆಗೆ ಕೊಟ್ಟಿದ್ದೆ.

ಜೋಯಿಸರೂ ಗುಂಡೂರಾಯರೂ—ಅವರ ಹೆಸರು ಗುಂಡೂರಾಮಚಂದ್ರ ಹರಿಹರ—ಒಂದು ತಿಲಕ ಸಂಘವನ್ನು ಸ್ಥಾಪಿಸಿ ಒಂದು ಪುಸ್ತಕ ಭಂಡಾರವನ್ನೂ ವಾಚನಾಲಯವನ್ನೂ ಒಂದೆರಡು ವರ್ಷ ನಡೆಸಿದರು. ಆಮೇಲೆ ಅದು ಎಲ್ಲ ಸಾರ್ವಜನಿಕ ಸಂಸ್ಥೆಗಳ ಗತಿಯೇ ಬಂತು. ನಮ್ಮ ಮನೆಯ ಪಕ್ಕದಲ್ಲಿದ್ದು ಕೋಣೆಯಲ್ಲಿದ್ದುದರಿಂದ ನನಗೆ ಅದರ ಮೇಲೆ ಮಮತೆ.

ನಮ್ಮ ಭೀಮದಾಸನ ಮಾತು ಹೇಳುತ್ತೇನೆ.

ಅವನೂ ನಾನೂ ಒಂದು ಸಲ ಒಂದು ಊರಿಗೆ ಹೋಗಿದ್ದೆವು. ಏಕೆ ಹೋಗಿದ್ದೆವು ಎಂಬುದು ನೆನಪಿಲ್ಲದೆ ಇದ್ದರೂ ಹೋಗಿದ್ದೆವು ಎಂಬುದು ನೆನಪಾಗುತ್ತದೆ. ಆ ಊರಿನ ಪಕ್ಕದಲ್ಲೇ ವೇದಾವತಿ ಹೊಳೆ. ಆಗ ಹೊಳೆಯಲ್ಲಿ ಸ್ವಲ್ಪ ನೀರು ಹರಿಯುತ್ತಿತ್ತು. ಊರಿನ ಹೊರಗಡೆ ದೇವಸ್ಥಾನದಲ್ಲಿ ನಾವು ಇಳಿದುಕೊಂಡಿದ್ದೆವು.

ಇಬ್ಬರಿಗೂ ಅಡಿಗೆ ಮಾಡಬೇಕು ನಾನು. ಅದುವರೆಗೆ ಎಂದೂ ಅಡಿಗೆ ಮಾಡಿರಲಿಲ್ಲ. ಆದರೂ ಭೀಮದಾಸನ ಧೈರ್ಯದಿಂದ ಬಂದಿದ್ದೆ. ಪುರುಷ ಪಾಕವೇ ಶ್ರೇಷ್ಠ ಎಂದು ಎಲ್ಲರೂ ಹೇಳುತ್ತಾರೆ. ಎಲ್ಲ ಕಡೆಗಳಲ್ಲೂ ಅಡಿಗೆಭಟ್ಟರು ಇದ್ದಾರೆಯೇ ವಿನಾ ಹೆಂಗಸರು ಯಾರು ಇಲ್ಲ. ನಮ್ಮ ಪುರಾಣಗಳಲ್ಲೂ ನಳಪಾಕ, ಭೀಮಪಾಕ ಎಂಬುದು ಬರುತ್ತದೆ. ನನ್ನಂಥ ಪುರುಷರು ಇರುವ ಕಡೆ ಈ ಮಾತು ಹೇಳಿದರೆ ಚೆನ್ನಲ್ಲ.

ಅಡಿಗೆ ಮಾಡಬೇಕು ಏನು ಮಾಡಬೇಕು ಎಂದು ಭೀಮದಾಸನನ್ನು ಕೇಳಿದೆ. ಊರಿನಿಂದ ಅಚ್ಚೇರು ತಪ್ಪಲೆ ತಂದಿದ್ದೆವು. ಅದರಲ್ಲಿ ಅಕ್ಕಿಯನ್ನು ಹಾಕಿ ಎಸರು ಇಡಬೇಕು ಎಂದ ಭೀಮದಾಸ. ನಾನು ಆ ತಪ್ಪಲೆಯ ಕಂಠದವರೆಗೆ ಅಕ್ಕಿಯನ್ನು ಹಾಕಿ ತಪ್ಪಲೆ ತುಂಬಾ ನೀರು ಹಾಕಿ ಒಲೆಯ ಮೇಲೆ ಇಟ್ಟೆ.

ಎಷ್ಟು ಹೊತ್ತಾದರೂ ಅಕ್ಕಿ ಕುದಿಯಲೇ ಇಲ್ಲ.

ಅಷ್ಟರಲ್ಲಿ ಬದನೇ ಕಾಯಿ ಚಟ್ನಿ ಮಾಡಲು ಬದನೇ ಕಾಯಿ ತಂದುಕೊಟ್ಟ ದಾಸ ಅದಕ್ಕೆ ಹಸಿರುಮೆಣಸಿನಕಾಯಿ ಸೇರಿಸಿ ಬೇಯಿಸಿ ಚೆನ್ನಾಗಿ ಕಿವಿಚಬೇಕು ಎಂದ. ಆ ಕೆಲಸವನ್ನು ಮಾಡಿದೆ. ನುಣ್ಣಗೆ ಮುದ್ದೆಯಾಗುವಂತೆ ಕಿವುಚಿದೆ. ಅರಿಯಲಿಲ್ಲ. ಆ ಹುರುಪಿನಲ್ಲಿ ಏನೂ ತೋರಲಿಲ್ಲ.

ಆಮೇಲೆ ಕೈ ಉರಿಯುವುದಕ್ಕೆ ಪ್ರಾರಂಭವಾಯಿತು. ಬಹಳ ಉರಿ. ತಡೆಯಲು ಆಗಲಿಲ್ಲ. ಭೀಮದಾಸನಿಗೆ ಹೇಳಿದೆ. 'ಅಯ್ಯೋಸ್ವಾಮಿ, ಯಾರಾದರೂ ಇಷ್ಟು ಮೆತ್ತಗೆ ಕಿವುಚುತ್ತಾರೆಯೇ? ಬನ್ನಿ ಹೊಳೆಗೆ ಹೋಗಿ ಆ ತಣ್ಣೀರಿನಲ್ಲಿ ಕೈ ಇಟ್ಟುಕೊಂಡು

ಬರುವಿರಂತೆ.” ಎಂದ. ಪಕ್ಕದಲ್ಲೇ ಹೊಳೆ. ಅಲ್ಲಿಗೆ ಹೋಗಿ ತಣ್ಣೀರಿನಲ್ಲಿ ಕೈ ಇಟ್ಟುಕೊಂಡಾಗ ಸ್ವಲ್ಪ ಶಮನವಾದಂತಾಯಿತು.

ಇಷ್ಟು ಹೊತ್ತಿಗೆ ಮಧ್ಯಾಹ್ನ ಮೂರುಗಂಟೆ, ನನಗೆ ವಿಪರೀತ ಹಸಿವು. ಗುಡಿಗೆ ಬಂದು ನೋಡಿದರೆ ಅಕ್ಕಿ ಬೆಂದೇ ಇಲ್ಲ. ಒಲೆಯೇನೋ ಉರಿಯುತ್ತಿದೆ. ಭೀಮದಾಸ ನನ್ನ ಕೇಳಿದೆ. ಅವರು ‘ಅಕ್ಕಿ ಅಷ್ಟು ಪೂರಾ ಹಾಕುತ್ತಾರೆಯೇ? ಸ್ವಲ್ಪ ಅಕ್ಕಿ ತೆಗೆದು ಅರ್ಧಕ್ಕೆ ಹಾಕಿ’, ಎಂದ. ‘ನನಗೆ ಬಹಳ ಹಸಿವಾಗಿದೆ. ಅಂಗಡಿಗೆ ಹೋಗಿ ಮಂಡಾಳ. ತೆಗೆದುಕೊಂಡು ಬಾ. ಈ ಅಕ್ಕಿಯನ್ನು ನೀನೇ ಏನಾದರೂ ಮಾಡಿಕೋ’ ಎಂದೆ. ಅವರು ಅಂಗಡಿಗೆ ಹೋಗಿ ಮಂಡಾಳು (ಕಾಳ್ಳಿಪುರಿ) ತಂದ. ಅವತ್ತು ಇಬ್ಬರಿಗೂ ಅದೇ ಆಹಾರ. ಅವನೂ ಆ ಅಕ್ಕಿಯನ್ನು ಮುಟ್ಟಲಿಲ್ಲ. ಅಡಿಗೇನೂ ಮಾಡಿಕೊಳ್ಳಲಿಲ್ಲ.

ಆ ವೇಳೆಗೆ ಕೈಯುರಿ ಹೆಚ್ಚಾಯಿತು. ಮತ್ತೆ ಹೊಳೆಗೆ ಹೋದೆ. ಊರಿನಲ್ಲಿ ಅಲ್ಲಿಯೇ ಬಂದು ಹೊಂಸನ್ನು ಸಂಪಾದಿಸಿಕೊಂಡು ಬಂದ ಭೀಮ. ಆಮೇಲೆ ಅಲ್ಲೇ ಹಾಸಿಗೆ ಹಾಕಿ ಅದರಿಂದ ಕೈ ಇಳಿಯ ಬಿಟ್ಟು ನೀರಿನೊಳಗೆ ಅದ್ದಿ ಮಲಗಿಕೊಂಡೆ. ರಾತ್ರಿ 12 ಗಂಟೆಯ ಮೇಲೆ ಅಲ್ಲಿಂದ ಮತ್ತೆ ಗುಡಿಗೆ ಹೋದದ್ದು. ಬೇಸಗೆಯ ಕಾಲ ಆದ್ದರಿಂದ ಅಲ್ಲಿ ಮಲಗಿದರೂ ಶೀತ ಆಗಲಿಲ್ಲ.

ಬೆಳಿಗ್ಗೆ ಸ್ವಲ್ಪ ಉರಿ ಕಡಿಮೆಯಾಗಿತ್ತು. ಬಂದ ಕೆಲಸ ಆಗದಿದ್ದರೂ ಚಿಂತೆಯಿಲ್ಲ. ಹೀಗೆ ನೆನೆದು ಊರಿಗೆ ಹಿಂದಿರುಗಲು ಗಾಡಿ ಕಟ್ಟಿ ಬಿಟ್ಟೆ. ಭೀಮದಾಸನಿಗೆ ಜೋಲು ಮೋರೆ, ಬಂದ ಕೆಲಸ ಆಗಲಿಲ್ಲವಲ್ಲ ಎಂದು. ನನಗೂ ಸದ್ಯ ಊರಿಗೆ ತಲುಪಿ ಯಾವಾಗ ತಾಯಿ ಮುಖ ಕಂಡೇನು ಎಂಬ ಆತುರ. ಕೊನೆಗೆ ನನ್ನ ಹಟವೇ ಗೆದ್ದಿತು.

ಊರಿಗೆ ಹಿಂದಿರುಗಿದೆವು. ಅಲ್ಲಿ ನಮ್ಮ ತಾಯಿಗೆ ದಾಸ ಹೇಳಿ ನನ್ನ ಅವಿವೇಕವನ್ನು ವಿವರಿಸಿ ನಕ್ಕ. ೨–೩ ದಿನ ಇವೇ ಸುದ್ದಿ.

* * * *

ಹಿಂದಿನ ನೆನಪುಗಳಲ್ಲಿ ನಮ್ಮ ಸಿದ್ದಪ್ಪನಹಳ್ಳಿಯ ಪಲ್ಲಕ್ಕಿ ದಾಸಯ್ಯನ ಪವಾಡವನ್ನು ಬರೆಯದಿದ್ದರೆ ಅದು ಅಪೂರ್ಣವೆಂದು ನನ್ನ ಭಾವನೆ. ಎಲ್ಲ ವೈಷ್ಣವ ದೇವಾಲಯಗಳಲ್ಲಿ ಇಂಥ ಪವಾಡಗಳು ನಡೆಯುತ್ತವೆಯೋ ಇಲ್ಲವೋ ಈ ಸೀಮೆಯಲ್ಲಿ ಅಂತೂ ನಡೆಯುತ್ತವೆ. ನಮ್ಮೂರಿನವರ ಜೊತೆಗೆ ಹೊರಕೇರ ದೇವರಪುರದ ಮಹೋತ್ಸವ ಕಾಲದಲ್ಲಿ ದಾಸಯ್ಯ ಎದೆಯಮೇಲೆ ಭಾರವಾದ ಗುಂಡನ್ನು ಇಟ್ಟುಕೊಂಡು ಒಡೆಸಿಕೊಳ್ಳುತ್ತಾನೆಂದು ಕೇಳಿದ್ದೇನೆ. ಇದೆಲ್ಲವೂ ಭಕ್ತಿಯಿಂದ ಆಗುವ ಕೆಲಸವೇ ವಿನಾ ಕಸರತ್ತಿನಿಂದಲ್ಲ. ಎಷ್ಟೋ ಸಲ ಈ ಪವಾಡ ಮೆರೆಯುವ ದಾಸಯ್ಯಗಳು ನೀರಸಿಪ್ಪಡಿಯಾಗಿ ನರಪೇತಲ ನಾರಾಯಣರಾಗಿ ಇರುವುದೂ ಉಂಟು.

ನಮ್ಮೂರಿನ ತೇರು ವೈಶಾಖ ಮಾಸದಲ್ಲಿ ನಡೆಯುತ್ತದೆ. ಸುಮಾರಾಗಿ ಉಗಾದಿಯ ದಿನ ಪಂಚಾಂಗ ಶ್ರವಣ ಆಗಬೇಕು. ಶಾಸ್ತ್ರವತ್ತಾಗಿ ಆಮೇಲೆ ಹಂಪಿ

ಹುಣ್ಣಿಮೆಯ ಕಾಲಕ್ಕೆ ಎಲ್ಲವೂ ಸಿದ್ಧ ಆಗುತ್ತದೆ. ಒಂದು ದಿನ ಉತ್ಸವ, ಒಂದು ದಿನ ತೇರು. ಸಂಜೆಗೆ ಆ ಸಂಭ್ರಮ ಹೇಳತೀರದು. ಸುತ್ತಲೂ ಊರಿನವರಿಗೆಲ್ಲ ಇದೊಂದೇ ರಥೋತ್ಸವ. ಅದಕ್ಕಾಗಿ ಇಲ್ಲಿ ಜನಸಂದಣಿ ಅವತ್ತು ಹೆಚ್ಚು. ರಥದ ಮೇಲೆ ಬಾಳೆಯ ಹಣ್ಣು ತೂರುವವರೇನು, ಚೂರು ಬೆಲ್ಲ, ಮೆಣಸು ತೂರುವವರೇನು, ಕರ್ಪೂರ ಹಚ್ಚುವವರೇನು. ಈ ಗದ್ದಲ ಗೊಂದಲ ದೇವರ ಉತ್ಸವಮೂರ್ತಿ ಬಂದು ರಥವನ್ನು ಏರಬೇಕಾದರೆ ಅರ್ಚಕರು ಜೋಯಿಸರು ಬರಬೇಕು. ಅದಕ್ಕೆ ಮೊದಲು ನಮ್ಮ ತಂದೆಯವರ ಸವಾರಿ ಚಿತ್ತೈಸಬೇಕು, ಜೊತೆಯಲ್ಲಿ ಕೊಂಪಿಕಾರ.

ಇಷ್ಟಾದಮೇಲೆ ರಥವನ್ನು ಮೀಟಿಸೊನ್ನೆ ಹಾಕಿ ಕದಲಿಸಬೇಕು. ನಮ್ಮೂರ ದೇವರು ಆಂಜನೇಯ. ಆದ್ದರಿಂದ ರಥದಲ್ಲಿ ಸೀತಾರಾಮರು ಆ ದೇವರ ರಥಕ್ಕೆ ಬರ ಮಾಡಿಸಿದ ಮೇಲೆ ತೇರಿನ ಗಾಲಿಗಳಿಗೆ ತೆಂಗಿನಕಾಯಿ ಒಡೆಯುವವರಿಗೆ ಲೆಕ್ಕವೇ ಇಲ್ಲ. ಕೆಳಗೆ ಬಿದ್ದ ಚೂರನ್ನು ಆರಿಸಿಕೊಳ್ಳುವವರೂ ಲೆಕ್ಕವಿಲ್ಲ. ಆ ಕೊಬ್ಬರಿಯ ಚೂರುಗಳಿಗಾಗಿ ನಾಸು ಮುಂದು ತಾನು ಮುಂದು ಎಂದು ಪರದಾಟ. ಎಲ್ಲವೂ ಮನಸ್ಸಿಗೆ ಸಂತೋಷವನ್ನು ಕೊಡುತ್ತವೆ. ಇವರ ಜೊತೆಗೆ ಹೊಸ ಸೀರೆಗಳನ್ನು ಉಟ್ಟು ಕುಪ್ಪಸ ತೊಟ್ಟು ತೇರನ್ನು ನೋಡಲು ಬಂದ ಹೆಂಗಸರು.

ರಾತ್ರಿ ಒಂದು ಚಕ್ರಕ್ಕೆ ಭೂತಸೇವೆ ಎಂದರೆ ಬಾಳೆಹಣ್ಣು ಬೆಲ್ಲ ಕೊಬ್ಬರಿಗಳ ರಸಾಯನದ ಎಡೆ. ಈ ವೇಳೆಗೆ ಪಲ್ಲಕ್ಕಿ ದಾಸಯ್ಯ ಎಚ್ಚರವಾಗಿರುತ್ತಾನೆ. ಆಮೇಲೆ ದೇವರು ಮೂರು ಸಲ ಪ್ರದಕ್ಷಿಣೆ ಮಾಡಿದನೋ ಇಲ್ಲವೋ ಅವನಿಗೆ ಎಚ್ಚರತಪ್ಪುತ್ತದೆ. ಆಗ ಅವನನ್ನು ಪೂರಾ ಎತ್ತಿ ಮುಳ್ಳು ಪಲ್ಲಕ್ಕಿಯಲ್ಲಿ ಮಲಗಿಸುತ್ತಾರೆ. ಅವನಿಗೆ ತಲೆಯ ಕೆಳಗೆ ಕಾಲವೆಸೆಗೆ ಚೂಪಾದ ಬಗ್ಗಿದ ಬಿಲ್ಲಿನ ತರಹ ಕಬ್ಬಿಣದ ಆಯುಧ, ಪಲ್ಲಕ್ಕಿಯ ತುಂಬಾ ಉಕ್ಕಿನ ಮುಳ್ಳು, ಮೊಳೆ ಮೇಲುಗಡೆಯ ಅವು ಚೂಪು ಅಂಗುಲಕ್ಕೊಂದರಂತೆ ಈ ಜಪ್ಪ ಬಳ್ಳಿ. ಇವೇ ಅವತ್ತೆಲ್ಲ ಹಾಸಿಗೆ ಪಲ್ಲಕ್ಕಿ ದಾಸಯ್ಯನಿಗೆ. ರಾತ್ರಿ ಭಕ್ತಾದಿಗಳು ಮನೆಗಳಿಗೂ ಹೊತ್ತು ತಿರುಗಬೇಕು. ಆ ಪಲ್ಲಕ್ಕಿಯೇ ಭಾರ. ಅದರಲ್ಲಿ ದಾಸಯ್ಯನ ನಿದ್ದೆ ಬೇರೆ.

ಈ ಪಲ್ಲಕ್ಕಿ ಭಕ್ತಾದಿಗಳ ಮನೆಗಳಿಗೆ ಬರುವುದಕ್ಕೂ ಒಂದು ಕ್ರಮ ಇದೆ. ಒಂದು ಮನೆಯವರು ಅವತ್ತು ಉಪವಾಸ ಎಂದರೆ ಒಪ್ಪತ್ತು. ಮೊದಲು ಅವರ ಮನೆಗೆ ಹೋಗಿ ನೈವೇದ್ಯ ತೆಗೆದುಕೊಂಡು ಬರಬೇಕು. ಆಮೇಲೆ ಅವರಿಗೆ ಊಟ. ಉಳಿದ ಮನೆಗಳು ಆಮೇಲೆ ಸರದಿಯ ಪ್ರಕಾರ. ರಾತ್ರಿಯಲ್ಲಿಯೂ ಈ ಪಲ್ಲಕ್ಕಿಯಲ್ಲಿಯೇ ಮಲಗಿರಬೇಕು ದಾಸಯ್ಯ. ಅವನು ಮಿಸುಕಾಡಿದರೆ ಊರಿಗೇ ಕೇಡು ಎಂದು ನಂಬಿಕೆ.

ಈ ಪಲ್ಲಕ್ಕಿ ದಾಸಯ್ಯ ತೇರಿನ ದಿನ ಎದ್ದು ಬೆಳಿಗ್ಗೆ ಗುರುಗಳ ಮನೆಗೆ ಬರುತ್ತಾನೆ. ಆ ವೇಳೆಗೆ ಅವನಿಗೆ ಕಚ್ಚೆ ಕಟ್ಟಿ ಪಟ್ಟೆ ಬಿಗಿದು ವೀರಾಂಜನೇಯ ವೇಷ

ತೊಡಿಸುತ್ತಾರೆ, ಉಳಿದ ದಾಸಯ್ಯಗಳು. ಒಟ್ಟಿನ ಗುರುವಾರ ಅರಸ್ಮನೆಯಂಗಳಿ ಏನೋ ಆ ಊರಿನಲ್ಲಿ ದಾಸಯ್ಯಗಳ ಸಂಖ್ಯೆ ಹೆಚ್ಚು.

ದಾಸಯ್ಯ ಬರುವುದಾದರೂ ಹೇಗೆ? ನಮ್ಮ ಮನೆಯಲ್ಲಿ ನಮ್ಮ ಹಿರಿಯರು ಕುಳಿತುಕೊಳ್ಳುತ್ತಿದ್ದ ಸ್ಥಳಕ್ಕೂ ತಲೆಬಾಗಿಲಿಗೂ ಸುಮಾರು 40 50 ಮೊಳ ಇರಬಹುದು. ಅದಿಷ್ಟನ್ನು ಮೂರೇ ಹೆಜ್ಜೆ ಇಟ್ಟು ಬರುತ್ತಿದ್ದ ದಾಸಯ್ಯ. ಅವನ ಠೀವಿಯೇನು ? ಅವನ ಗಾಂಭೀರ್ಯವೇನು ? ಎಲ್ಲಾ ದಾಸಯ್ಯಗಳು ಅವನನ್ನು ಹಿಡಿದಿರಬೇಕು.

ಬಂದವನೇ ಗುರುಗಳ ಮುಂದೆ ದಂಡಿಯೂರಿ ವೀರನಂತೆ ಕೂತು, ನಾಮ ಇಡಿಸಿಕೊಂಡು ತೀರ್ಥ ತೆಗೆದುಕೊಂಡು ಹಿಂತಿರುಗಬೇಕು, ಹಿಂದಕ್ಕೆ ಹೋಗುವಾಗಲೂ ಅದೇ ನಡಿಗೆಯೇ.

ನಾನು ನೋಡಿದ ಪಲ್ಲಕ್ಕಿ ದಾಸಯ್ಯ ಚಿನ್ನದಾಸ. ಈಗ ಅವನು ಇದ್ದಾನೆಯೋ ಇಲ್ಲವೋ, ಅವನು ಇಲ್ಲದೆ ಇದ್ದರೆ ಅವನ ಮಗ. ಅಂತೂ ಸಂಪ್ರದಾಯ ನಡೆಯುತ್ತಲೇ ಇದೆ. ಚಿನ್ನದಾಸ ಪಟ್ಟಕ್ಕೆ ಬಂದಾಗ ನನಗೆ ಚೆನ್ನಾಗಿ ನೆನಪಿದೆ. ಅವನ ತಂದೆ ಭೀಮದಾಸಯ್ಯ ಪಲ್ಲಕ್ಕಿ ದಾಸಯ್ಯ ಆಗಿದ್ದಾಗ ನೋಡಿದ್ದೇನೆ.

ಈ ದಾಸಯ್ಯನಿಗೆ ತೇರಿನ ಹಿಂದಿನ ಮೂರು ದಿನದಿಂದ ಸಾತ್ವಿಕ ಆಹಾರ ಒಪ್ಪತ್ತು. ಹಿಂದಿನ ದಿನ ಉಪವಾಸ. ಅವನಿಗೆ ವರ್ಷ ವರ್ಷವೂ ಈ ತೇರು ಬರುವ ಹೊತ್ತಿಗೆ ಪ್ರಾಣ ದಂಡವೇ. ಅವನ ಹೆಂಡತಿಗೆ ಹಿಂದಿನ ದಿನ ಕೈ ಬಳೆ ಒಡೆದು ಬಿಡುತ್ತಾರೆ. ತೇರಾದ ಮೂರನೇ ದಿನ ಬೆಳಿಗ್ಗೆ ಅವನು ಸುಖವಾಗಿ ಎದ್ದರೆ ಅವಳಿಗೆ ಬಳೆ ತೊಡಿಸಿ ಸೀರೆ-ಕುಪ್ಪಸ-ಹೊಸದು-ಉಡಿಸಿ ತೊಡಿಸುತ್ತಾರೆ. ಅವನಿಗೂ ಹೊಸ ಬಟ್ಟೆ. ಸ್ನಾನ ಎಲ್ಲವೂ ದೇವಸ್ಥಾನದವರೇ ಮಾಡುತ್ತಾರೆ.

ಇದರಲ್ಲಿ ಏನೋ ತಂತ್ರ ಇರಬೇಕು ಎಂದು ನನಗೆ ಅನಿಸಿತು. ಪರಿಶೀಲನೆ ಮಾಡಿದೆ.

ಏನೂ ಇರಲಿಲ್ಲ. ಬರಿ ಭಕ್ತಿ. ಮೂಕ ಭಕ್ತಿ ಎಂದರೂ ಎನ್ನಬಹುದು. ಇದು, ಅಂತೂ ಭಕ್ತಿ.

ನಮ್ಮ ತಂದೆ ತಾಯಿಯವರು ಗಟ್ಟಿಮುಟ್ಟಾಗಿದ್ದ ಕಾಲದಲ್ಲಿ ನಮ್ಮ ಮನೆಯಲ್ಲಿ ಸ್ವಂತ ಬೇಸಾಯ ಭರಾಟೆಯಿಂದ ನಡೆದಿತ್ತು. ನಾನು ಇನ್ನೂ ಹುಡುಗ. ಆದರೂ ಚೆನ್ನಾಗಿ ನೆನಪಿದೆ.

ಮನೆಯಲ್ಲಿ ಆರು ಜೊತೆ ಎತ್ತು ಇತ್ತು. ಒಂದು ಜೊತೆಯಂತೂ ಸುತ್ತ ಮುತ್ತಲಿನ ಗದ್ದೆಗೆಲ್ಲ ಮೇಟಿ. ಹಳ್ಳದ ಮರಳಿನಲ್ಲಿ ಏಳು ಪಲ್ಲಾ ಅಕ್ಕಿಯ ಚೀಲಾ ತುಂಬಿದ ಗಾಡಿಯನ್ನು ಸರಾಗವಾಗಿ ಎಳೆದು ಒಯ್ಯುತ್ತಿದ್ದವು.

ಅದರಲ್ಲಿ ಬಲಗಡೆ ಎತ್ತಿನ ಹೆಸರು ದೇವೇಂದ್ರ. ಸಣ್ಣ ಆನೆ ಮರಿ ಹಾಗಿತ್ತು. ಅದೇ ದೇಹ ಸೌಷ್ಠವ, ಅದೇ ಗಾಂಭೀರ್ಯ. ಅದೇ ತರದ ಬಲ ಎಡದ ಎತ್ತು ಲಚ್ಚ ಸ್ವಲ್ಪ ಎಡ ಆದರೂ ಇದಕ್ಕೆ ಜೋಡಿ.

ವೇಗದಲ್ಲೂ ಅಷ್ಟೇ, ಉಳಿದ ಎತ್ತು ಓಡಿದರೂ ಇದರ ಚುರುಕು ಕಾಲಿಗೆ ಸಾಟಿಯಿಲ್ಲ. ನಿಧಾನವಾಗಿ ಸಾಗಬೇಕಾದ ಸಂದರ್ಭ ಬಂದರೆ ಅತಿ ನಿಧಾನ. ಕಣಿವೆಗಳಲ್ಲಿ ಜಾರಿಕೆಯನ್ನು ಇಳಿಯುವಾಗ ಅದು ನಿಧಾನವಾಗಿ ಹೆಜ್ಜೆ ಇಡುತ್ತ ತೂಕ ಹಿಡಿದು ಸಾಗುತ್ತಿದ್ದುದನ್ನು ನೋಡಿದ ಆ ಮನೆಸೆಳವ ನೋಟ ಇನ್ನೂ ನೆನಪಿದೆ.

ಹೈನವೂ ಇತ್ತು. 8–10 ಹಸು ಬಹಳ ಸಾಧು ಪ್ರಾಣಿಗಳು. ನಮ್ಮ ತಾಯಿಯನ್ನು ಹಾಲು ಕರೆದುಕೊಳ್ಳಲು ಬಿಡುತ್ತಿದ್ದವು. ಅಷ್ಟು ಸೌಮ್ಯ. ಯಾವಾಗಲೂ 2–3 ಕರೆಯುತ್ತಿದ್ದವು.

ಒಂದು ಬೂದು ಬಣ್ಣದ ಮುದಿ ಹಸು ಇತ್ತು–ಮಂಗಮ್ಮ. ಅದರ ಅಜ್ಜಿ ನಮ್ಮ ಅಜ್ಜನ ಕಾಲಕ್ಕೆ ನಮ್ಮ ಮನೆಗೆ ಬಂದಿತ್ತಂತೆ. ಅವರ ವಂಶ ಮನೆಗೆ ಕೂಡಿ ಬಂತು. ಮಂಗಮ್ಮನ ಸಂತಾನವೇ ಮೂರು ಹಸು ಇದ್ದುವು.

ಒಳ್ಳೆ ಹಳ್ಳಿ ರಾಸು. ಒಂದು ಸಣ್ಣ ತಪ್ಪಲೆ ಹಾಲು ಕೊಟ್ಟರೂ ಎಷ್ಟು ರುಚಿ. ಬಹಳ ಸಿಹಿ. ಹೋರಿ ಕರುವನ್ನು ಹಾಕಿದರೆ ಮನೆಗೆ ಭೀಮಬಲದ ದುಡಿಯುವ ಮಗ ಬಂದ ಹಾಗೆ. ಎತ್ತುಗಳಲ್ಲೂ ಒಂದೆರಡು ಜೊತೆ ಮಂಗಮ್ಮನ ಸಂತಾನವೇ.

ನಮ್ಮ ತಾಯಿಯವರು ಮೊಸರು ಕಡೆಯುತ್ತಿದ್ದುದು ಒಂದು ವಿಶೇಷ. ನಿಂತೇ ಕಡೆಯುತ್ತಿದ್ದರು. ಪಡಸಾಲೆಯಲ್ಲಿ ಕಂಬಕ್ಕೆ ಒಂದು ಮೊಳೆ. ಆ ಮೊಳೆಗೆ ಕಡೆಗೋಲನ್ನು ಹಗ್ಗವನ್ನು ನೇತು ಹಾಕಿರುತ್ತಿದ್ದರು. ಆ ಕಡೆ ಗೋಲು ಎಂದರೆ ಎಷ್ಟು ದಪ್ಪ ಎಷ್ಟು ಎತ್ತರ. ಒಂದು ಆಳು ಉದ್ದದ ಕಡೆಗೋಲು. ಅದು ಕೆಳಗೆ ಬಂದು ಕೊಳದಪ್ಪಲೆ. ಅದೂ ದೊಡ್ಡದು. ಅದರಲ್ಲಿ ಮಜ್ಜಿಗೆ ಮಾಡಿ ಬೆಣ್ಣೆ ತೆಗೆದು ನೆರೆಹೊರೆಯವರಿಗೆಲ್ಲಾ ಮಜ್ಜಿಗೆ ಬೆಣ್ಣೆ ದಾನ ಮಾಡುತ್ತಿದ್ದರು. ನಮ್ಮ ಊರಿನಲ್ಲಿ ಆ ಕಾಲಕ್ಕೆ ಮಜ್ಜಿಗೆ ಕೊಂಡವರು ಯಾರೂ ಇಲ್ಲ. ಈಗೇನೋ ನೆರೆಮನೆಯವರಿಗೆ ಹಳ್ಳಿಗಳಲ್ಲಿ ಮಜ್ಜಿಗೆ ಮಾರುತ್ತಾರಂತೆ.

ನಮ್ಮ ತಾಯಿಯವರ ಜೊತೆಯಲ್ಲಿ ನಾನು ಕೆಲವು ಕಾಲ ಚಳ್ಳಕೆರೆ ತಾಲ್ಲೂಕಿನ ಕಡೆಗೆ ಹೋಗಿದ್ದೆ. ಇನ್ನೂ ನನಗೆ ಹುಡುಗು. ಆದರೂ ಆ ಹಳ್ಳಿಗಳಲ್ಲಿ ಊರಿನ ಹೊರಗಡೆ ತಮ್ಮ ಬೆಣ್ಣೆ ಮೊಸರು ಮಜ್ಜಿಗೆ ಹಾಲು ಸಾಗುವುದನ್ನು ಅವರು ನಿಷೇಧಿಸಿದ್ದರು. ಆ ನಿಷೇಧ ಬಹಳ ಪ್ರಾಚೀನವಾದದ್ದು. ಈಗ ಅದರಂತೆ ಯಾರೂ ನಡೆಯುವುದಿಲ್ಲ.

ಇಲ್ಲಿ ನಮ್ಮ ತಾಯಿಯ ಪ್ರಸ್ತಾಪ ಪದೇ ಪದೇ ಬರುತ್ತದೆ. ಕಾರಣ ಅವರು

ಆ ಕಾಲದ ಕಷ್ಟ ಜೀವನದ ಪ್ರತೀಕ. ನಾನು ಎಂಬುದು ಬಂದಾಗ ಕಷ್ಟಗಳಿದ್ದವು ನಾನು, ಬರೀ ನಿಮಿತ್ತ, ಮಣ್ಣಿನ ಗೊಂಬೆ. ನನ್ನ ಅಹಂಕಾರ ಮಮಕಾರಗಳು ಪ್ರೀತಿ ಭೀತಿಗಳು ನನ್ನನ್ನು ಸರಿ ಹಿಡಿದಿವೆ. ಮಣ್ಣಿನ ಗೊಂಬೆ ಎಂದು ಹೇಳುವುದು ಎಷ್ಟು ಸುಲಭವೋ ಅದನ್ನು ಅನುಷ್ಠಾನದಲ್ಲಿಟ್ಟುಕೊಳ್ಳುವುದು ಅಷ್ಟೇ ಕಷ್ಟ. ನಿಮಿತ್ತ ಮಾತ್ರಂ ಭವ ಸವ್ಯಸಾಚಿ ಎಂದು ಗೀತೆಯಲ್ಲಿ ಹೇಳುತ್ತಾನೆ ಶ್ರೀಕೃಷ್ಣ. ನಾಹಂಕರ್ತಾ ಹರಿಃಕರ್ತಾ ಎಂಬುದು ಒಂದು ಹೆಮ್ಮಾತು. ಆದರೆ ನಿಮಿತ್ತವಾಗುವುದು ಇದ್ದರೂ ಕರ್ತಾರನ ಕರ್ಮಟವೆಂದು ತಿಳಿಯುವುದು ಅಷ್ಟು ಸುಲಭವಲ್ಲ. ಹಲವು ಸರ್ತಿ ಪ್ರಯತ್ನ ಮಾಡಿಯೂ ನಾನೂ ವಿಫಲಗೊಂಡಿದ್ದೇನೆ. ಆದಕ್ಕೆ ನಮ್ಮವರೇ ಪರೋಪದೇಶ ಪಾಂಡಿತ್ಯ ಇತರರಿಗೆ ಉಪದೇಶ ಮಾಡುವುದರಲ್ಲಿ ನಮ್ಮ ನಮ್ಮ ಪಾಂಡಿತ್ಯ ಬೆಳಗುತ್ತದೆ ಎನ್ನುತ್ತಾರೆ. ಅಹಿಂಸೆ ಮಾತಿನಲ್ಲಿ ಈ ಅನುಭವ ವಿಶೇಷವಾಗಿ ಗೋಚರಿಸಿತು. ಗಾಂಧೀಜಿಯ ತೀಕ್ಷ್ಣ ಪ್ರಶ್ನೆಗಳಿಗೆ ಉತ್ತರ ಕೊಡುವಾಗ ಮನಸ್ಸು ನಡುಗಿಹೋಯಿತು. ಗಾಂಧೀಜಿ ಪಾಟೀ ಸವಾಲಿನಲ್ಲಿ ಬಹಳ ನಿಷ್ಠುರಾದರು.

ಆ ಕಾಲವೇ ಹಾಗೆ, ಏನು ಮಾಡಿದರೂ ಹಿರಿದು. ಜನವೂ ಅಷ್ಟೇ ಹಿರಿ ಜನ. ನಮ್ಮ ತಾಯಿ ಅಕ್ಷರಸ್ಥಳಲ್ಲ. ಆದರೆ ನೃಪತುಂಗನ "ಕುರಿತು ಓದದೇ ಪರಿಣತ ಮತಿಗಳ್" ನಮ್ಮ ಜನ ಎಂದಿದಕ್ಕೆ ನಮ್ಮ ತಾಯಿ ಸಾಕ್ಷಿ. ಆಕೆ ಏನೂ ಓದಿರದಿದ್ದರೂ ಎಲ್ಲ ಸೂತ್ರಗಳು ಆಕೆಗೆ ಬಾಯಲ್ಲೇ ಬರುತ್ತಿದ್ದವು. ವ್ಯವಹಾರದಲ್ಲಿ ತುಂಬ ಕುಶಲಮತಿ, ದಕ್ಷಳು. ಒಂದು ಭಾರಿ ಕುಟುಂಬವನ್ನೇ ನಡೆಸಿಕೊಂಡು ಬರುತ್ತಿದ್ದಳು. 5-6 ಜನ ಆಳುಕಾಳುಗಳು, ನೂರಾರು ಜನ ರೈತರು, ಸಾವಿರಾರು ಜನ ಶಿಷ್ಯಕೋಟಿ. ಎಲ್ಲರನ್ನು ತಕ್ಕ ಬಂದೋಬಸ್ತಿನಲ್ಲಿ ಇಟ್ಟುಕೊಂಡು ಲಕ್ಷ್ಮಿಯಾಗಿ ಕಾಲ ಹಾಕಿದಳು. ಒಂದು ಸಲ ನಮ್ಮ ತಾಯಿಯ ಜೊತೆಗೆ ಹೊನ್ನೂರು ಜಾಜೂರುಗಳಿಗೆ ಹೋಗಿದ್ದೆ. ನಮ್ಮ ತಂದೆಯವರು ಬಂದಿರಲಿಲ್ಲ. ಆ ಊರುಗಳಲ್ಲಿ ಇಬ್ಬರು ಗೌಡರಿಗೆ ಮಕ್ಕಳಿರಲಿಲ್ಲ. ಆ ಕಾರಣದಿಂದ ಅವರಿಗೆ ಎರಡು ಮೂರು ಮದುವೆಯಾಗಿದ್ದರೂ ಮಕ್ಕಳಾಗಿರಲಿಲ್ಲ. ಅವರಿಗೆ ಮಂತ್ರ ಬರೆಸಿ ಕಟ್ಟಿಕೊಳ್ಳಿ. ಮಕ್ಕಳಾಗುತ್ತವೆ ಎಂದು ಹೇಳಿ ಭರವಸೆ ನೀಡಿದರು. ನನಗೆ ಮಂತ್ರ ಬರೆಯುವ ಕೆಲಸ ಬಿತ್ತು. ಅದಕ್ಕೆ ಪೂಜೆ ಮಾಡುವ ವಿಧಾನವೂ ಗೊತ್ತಿಲ್ಲ, ಬರೆಯುವ ಕ್ರಮವೂ ಗೊತ್ತಿಲ್ಲ. ನಮ್ಮ ತಾಯಿ "ನಿನ್ನ ಮನಸ್ಸಿಗೆ ಬಂದಿದ್ದನ್ನು ಬರಿ. ನಿನ್ನ ಯಂತ್ರದಲ್ಲಿ ಇಲ್ಲ ಮಹಿಮೆ. ಅವರ ಭಕ್ತಿಯಲ್ಲಿದೆ" ಎಂದು ನನ್ನ ಕೈಯಲ್ಲಿ ಬರೆಸಿದಳು. ನಾನು ಅವರಿಗೆ ಯಂತ್ರ ಬರೆದು ಕೊಟ್ಟೆ. ನಮ್ಮ ಭೀಮದಾಸ ಜೊತೆಯಲ್ಲಿದ್ದನಲ್ಲ. ಅವನು ಶಾಸ್ತ್ರೋಕ್ತವಾಗಿ ಕಟ್ಟಿದ ನಾಲ್ಕೈದು ತಿಂಗಳಲ್ಲೇ ಆ ಗೌಡರ ಹೆಂಡಿರು ಬಸಿರಿಯರೆಂಬ ವರ್ತಮಾನ ಬಂತು. ಇಬ್ಬರಿಗೂ ಗಂಡು ಮಕ್ಕಳಾದವು. ಗುರುಮನೆಗೆ ಕಾಣಿಕೆ ಬಂತು.

ಆ ಕಾಲದವರ ಶ್ರದ್ಧೆ ಹಾಗೆ. ಅವರ ಶ್ರದ್ಧೆಯ ಫಲ ಬಹಳ. ಹೆಚ್ಚಾಗಿ ಅವರ

ಮನಸ್ಸಿನಂತೆ ಅವರು ನಡೆಯುತ್ತಿರಲಿಲ್ಲ. ಹಿರಿಯರು ಹೇಳಿದ ಹಾಗೆ ನಡೆಯುತ್ತಿದ್ದರು. ಮನೆಯಲ್ಲಿ ತಂದೆಯದೇ ಯಜಮಾನ್ಯ. ಅದು ಪಿತೃ ಪ್ರಧಾನ ಕಾಲ. ಶ್ರೀರಾಮ ಚಂದ್ರನ ಕಥೆ ಕೇಳಿ ಎಷ್ಟೋ ಜನ ಕಣ್ಣೀರು ಬಿಡುತ್ತಿದ್ದರೇ ವಿನಾ ದಶರಥನ ವಿಷಯ ವಾಗಿ ಮೂರ್ಖ ಎಂದು ಬೈದವರು ಯಾರೂ ಇಲ್ಲ. ರಾಮಾಯಣದಲ್ಲೇ ಲಕ್ಷ್ಮಣ ದಶರಥನ ವಿರುದ್ಧ ಧ್ವಜ ಎತ್ತುತ್ತಾನೆ. ಆದರೆ ರಾಮನ ಇದಿರಿಗೆ ಸುಮ್ಮನೆ ಹತವೀರ್ಯ ಆಗುತ್ತಾನೆ.

ಶ್ರೀರಾಮ ಲಕ್ಷ್ಮಣ ಸೀತೆ ಧರ್ಮರಾಯ ಭೀಮ ಅರ್ಜುನ ಆದಿಗಳು ನಮ್ಮ ಜೀವನದಲ್ಲಿ ಹಾಸು ಹೊಕ್ಕಾಗಿ ಬೆರೆತು ಹೋಗಿದ್ದಾರೆ. ಸಾಹಿತ್ಯ ಗ್ರಂಥವೂ ನಮ್ಮ ಜನಜೀವನದಲ್ಲಿ ತಾನು ಸೃಷ್ಟಿಸಿದ ಪಾತ್ರಗಳನ್ನು ಇಷ್ಟು ಗಾಢವಾಗಿ ಬೆರೆಸಿಲ್ಲ.

* * * *

ಇದೆಲ್ಲವನ್ನೂ ಈಚೆಗೆ ನೆನಪು ಮಾಡಿಕೊಂಡು ಬರೆಸುತ್ತಿದ್ದೇನೆ. ಈಗಲೂ ಚಿಕ್ಕಂದಿನಲ್ಲಿ ನಮ್ಮ ಅಂಗಳದಲ್ಲಿ ಒಂದು ಹೊರಸಿನ ಮೇಲೆ ಮಲಗಿಸುತ್ತಲೂ ಆಳು ಗಳು ಮಲಗಿದ್ದರೆ ಅವರ ಪದಗಳನ್ನು ಕೇಳುತ್ತಾ ನಿತ್ಯವೂ ನಿದ್ದೆ ಹೋಗುತ್ತಿದ್ದ ದಿನ ಗಳು ನೆನಪಿವೆ. ಚಿತ್ರದುರ್ಗದಲ್ಲಿ ನಾವು ಓದುವ ಕಾಲಕ್ಕೆ ನಮ್ಮ ಇದಿರಿನಲ್ಲಿ ಸ್ವರ್ಗಸ್ಥ ರಾದ ಬೇಟರಾಯರು ಅವರ ಹೆಂಡತಿ ಶ್ರೀಮತಿ ಸುಬ್ಬಮ್ಮ ಬೇಟರಾಯರು, ತಾರುಣ್ಯ ದಲ್ಲಿಯೇ ತೀರಿಕೊಂಡರು. ಮನೆ ತುಂಬಾ ಚಿಕ್ಕ ಚಿಕ್ಕ ಮಕ್ಕಳು. ಅವರನ್ನು ಕಾಪಾಡಿ ಸಂಸಾರವನ್ನು ನಡೆಸುವ ಭಾರ ಆಕೆಯ ಪಾಲಿಗೆ ಬಿತ್ತು. ಬೇಟರಾಯರಿಗೆ ಬರುತ್ತಿದ್ದುದು 15 ರೂ ಸಂಬಳ. ಸುಬ್ಬಮ್ಮನಿಗೆ ಆ ಆಶ್ರಯ ತಪ್ಪಿಹೋಯಿತು. ನಮ್ಮ ತಾಯಿ ಆಕೆಗೆ ಆಸರೆಯಾಗದಿದ್ದರೆ ಆಕೆಗೆ ಬಹಳ ದುಃಖವಾಗುತ್ತಿತ್ತು. ಮುಂದೆ ಆಕೆಯ ಮಕ್ಕಳು ಓದು ಇಲ್ಲದೇ ಹೋದರೂ ಕೆಲಸ ಕಾರ್ಯದಲ್ಲಿ ಗಟ್ಟಿಗ ರೆನ್ನಿಸಿಕೊಂಡವು. ಹಿರಿಯ ಮಗ ಟಿ. ಬಿ. ಶಾಮರಾಯ ಸ್ವಲ್ಪ ಪ್ರಬುದ್ಧನಾದಮೇಲೆ ತಾಯಿಯನ್ನು ಎಲ್ಲಿಗೂ ಅವಲಕ್ಕಿ ಮೆಣಸಿನಪುಡಿ ಕುಟ್ಟಿ ಕೆಲಸ ಮಾಡಲು ಕಳಿಸುತ್ತಿರಲಿಲ್ಲ. ತಾನೇ ಸ್ವಯಂ ಕೂಲಿ ಮಾಡಿದ, ಮೇಸ್ತ್ರಿಯಾದ, ಕಂಟ್ರಾಕ್ಟರ್ ಆದ. ಗಣ್ಯನಾದ. ಮುಂದೆ ಚಿತ್ರದುರ್ಗದ ಪುರಸಭೆಗೆ ಅಧ್ಯಕ್ಷನಾದ.

ವಿಶ್ವಕರ್ನಾಟಕ— ಒಂದು ವಾರಪತ್ರಿಕೆ ನಡೆಸುತ್ತಿದ್ದೇನೆ. ಬಹುಶಃ ವಾರ ಪತ್ರಿಕೆ ಮೊದಲು ಆಮೇಲೆ ದಿನಪತ್ರಿಕೆ ಬಂತು. ಒಂದು ದಿನ ನಮ್ಮ ವಾರಪತ್ರಿಕೆ ಸಂಪಾದಕರಾದ ಸೀತಾರಾಮಶಾಸ್ತ್ರಿಗಳು ಒಂದು ಕಥೆಯನ್ನು ನನಗೆ ಕೊಟ್ಟರು. ಒಬ್ಬ ಹುಡುಗ ಒಂದು ಕಥೆಯನ್ನು ಬರೆದಿದ್ದ. ಅದರಲ್ಲಿ ಒಬ್ಬ ಹೆಂಗಸು ಗಂಡನನ್ನು ಕಳೆದುಕೊಂಡಮೇಲೆ ಮಗುವಿನ ಹಾದಿಗಾಗಿ ತನ್ನ ಮೈಯನ್ನು ಮಾರಿಕೊಂಡಳು ಎಂಬುದು ಕಥಾವಸ್ತು.

ಆತನನ್ನು ಕರೆದು ಸುಬ್ಬಮ್ಮನ ಕಥೆಯನ್ನು ಹೇಳಿದೆ. ಸುಬ್ಬಮ್ಮನಂತಹ ಹೆಂಗಸರ ಲಾಲನೆಯಲ್ಲಿ ಬೆಳೆದ ನನಗೆ ಬೇರೆ ರೀತಿ ಅರ್ಥವಾಗುವುದಿಲ್ಲ. ಅಂಥ ಸೀತೆ ವಂತರು. ಹಿಂದೆ ನಮ್ಮೂರಿನಲ್ಲಿ ತರುಣ ಮಿತ್ರ ಒಬ್ಬ ನಮ್ಮಲ್ಲಿ War Stories ಯುದ್ಧಗಳ ಕಥೆಗಳು ಇಲ್ಲ ಎಂದಿದ್ದ. ನೀನೇ ಒಂದು ಬರೆ ಎಂದೆ.

ಜರ್ಮನ್ನರು ಪ್ಯಾರಿಸ್‌ಗೆ ನುಗ್ಗಿ ಬಂದಾಗ ಎಷ್ಟೋ ಮಂದಿ ಮಹಿಳೆಯರ ಮೇಲೆ ಅತ್ಯಾಚಾರ ಮಾಡಿದರು ಎಂಬುದು ಅವನ ಕಥಾವಸ್ತು. ನಿನ್ನ ಅಕ್ಕ ತಂಗಿಯರು ಆ ಪರಿಸ್ಥಿತಿಗೆ ಗುರಿಯಾಗಿದ್ದರೆ ಏನು ಮಾಡುತ್ತಿದ್ದೆ ? ನಮ್ಮ ಸುಬ್ಬಮ್ಮ ನಂತವರನ್ನು ನೋಡಬಾರದೆ ಎಂದು ಹೇಳಿದೆ. ಅದು ಅವನಿಗೆ ಹಿಡಿಸಿತೋ ಇಲ್ಲವೋ.

* * * *

ಇದೆಲ್ಲವೂ ಹಿಂದಿನ ನೆನಪಿನ ಚಿತ್ರಗಳು. ಆ ಕಾಲದ ಆ ಜನ ಜೀವನವನ್ನು ಸೆರೆಹಿಡಿಯಲು ಪ್ರಯತ್ನ ಮಾಡಿದ್ದೇನೆ. ಇದರಲ್ಲಿ ಬರುವ ಪಾತ್ರಗಳು ಮುಖ್ಯವಲ್ಲ. ಆಗಿನ ಕಾಲದ ಎಂದರೆ 50-60 ವರ್ಷಗಳ ಹಿಂದಿನ ಜನ ಜೀವನ ಚಿತ್ರಿಸುವುದು ನನ್ನ ಉದ್ದೇಶ. ಅಷ್ಟೇ ವಿನಾ ನನ್ನ ಕಥೆಯಾಗಲೀ ನಮ್ಮ ಮನೆಯ ಕಥೆಯಾಗಲೀ ಇದರಲ್ಲಿ ಮುಖ್ಯವಿಲ್ಲ.

# ಮಂಗಳಾಶಾಸನ

ರಾಳ್ಲಪಲ್ಲಿ ಅನಂತಕೃಷ್ಣಶರ್ಮ

ಚಿರಂಜೀವಿ ಶ್ರೀ ಸಿದ್ದಪ್ಪನಹಳ್ಳಿ ಕೃಷ್ಣಶರ್ಮನ ಸಂಭಾವನಾ ರೂಪವಾದ ಈ ಗ್ರಂಥಕ್ಕೆ ನನ್ನ ಸಣ್ಣ ಕೈಂಕರ್ಯ ಮುಖ್ಯವಾಗಿ ಇಷ್ಟೆ: ನಮ್ಮ ಮನೆತನದ ಉಪಾಸ್ಯ ವರದೇವತೆಗಳು ಶ್ರೀ ಶ್ರೀನಿವಾಸರು. ಆತನಿಗೆ ದೀರ್ಘಾಯುರಾರೋಗ್ಯಾದಿ ಸಮಸ್ತ ಕಲ್ಯಾಣಗಳನ್ನೂ ದಯಪಾಲಿಸಲಿ ಎಂಬ ಹಾರ್ದವಾದ ಮಂಗಳಾಶಾಸನ. ನಮ್ಮಿಬ್ಬರ ವಯಸ್ಸಿನಿಂದ, ಹಲವು ವಿಧವಾದ ಬಂಧುತ್ವದಿಂದ, ವ್ಯಕ್ತಿಗತವಾದ ಅಸಾಧಾರಣ ಸ್ನೇಹ ವಿಶ್ವಾಸಗಳಿಂದ–ನನಗಾ ಅಧಿಕಾರವುಂಟು. ಅಂತರಂಗವಾಗಿ ನಿತ್ಯಮಾಡುವ ಆ ಧರ್ಮ–ಸಂತೋಷ ಕಾರ್ಯವನ್ನು ಬಹಿರಂಗವಾಗಿ ಮಾಡುವ ಈ ಅವಕಾಶವನ್ನೊದಗಿಸಿದ ಸಂಭಾವನಾ ಗ್ರಂಥ ಸಂಪಾದಕ ಮಿತ್ರ ಮಹಾಶಯರಿಗೆ ನನ್ನ ಧನ್ಯವಾದಗಳು.

ಹೃದಯಗಳ ದಾರಿ ಎಷ್ಟು ಹತ್ತಿರವೋ ಅಷ್ಟು ದೂರವಾದವು ನಮ್ಮಿಬ್ಬರ ಅಭಿಮಾನದ ನೆಲ ನಿಲುವುಗಳು. ಸಾಹಿತ್ಯ ಸಂಗೀತಗಳ ನೆಮ್ಮದಿಯ ವಾತಾವರಣದಲ್ಲಿನ ಚಾಪಲ್ಯದಿಂದ ನನ್ನ ವಲಯ ಕುರುಚಲಾಗಿದೆ; ನಡೆ ಮಂದವಾಗಿದೆ. ಚಿರಾಯು 'ಕಿಟ್ಟಯ್ಯ'ನ ಪ್ರಕೃತಿ ಹಾಗಲ್ಲ. ಅದು ಪಾದರಸದಂತೆ. ಎಲ್ಲೂ ನಿಲುಗಡೆಯಿಲ್ಲದೆ ಹಾರಾಡುವದದು. ಎಲ್ಲೂ ಅಂಟಿಕೊಳ್ಳುವದಲ್ಲ. ಅದನ್ನು ಹಿಡಿದು ಕಟ್ಟಿ ಕೆಲಸ ಮಾಡಿಸಲು ಗಾಂಧಿ ಮಹಾತ್ಮರಂಥಾ ಸರ್ವಂಕಷಮೂರ್ತಿಯೇ ಬೇಕಾಯ್ತು.

ಚಿಕ್ಕ ವಯಸ್ಸಿನಿಂದಲೂ ಚಿ. ಕಿಟ್ಟಯ್ಯನನ್ನು ಮುಂದಕ್ಕೆ ತಳ್ಳಿ ನಡೆಸುತ್ತಿರುವ ಮನೋಧರ್ಮ 'ಅಭಯಂ'. ದೈವಸಂಪತ್ತಿನಲ್ಲಿ ಅದು ಮೊದಲನೆಯದಾಗಿ ಶ್ರೀಗೀತೆಯ ಕೃಷ್ಣ ನಿರ್ದೇಶ ಮಾಡಿದ್ದಾನಷ್ಟೆ. ಯಾರಿಗೂ ಹೆದರಿ ತಲೆ ಬಾಗದೆ ತೋರಿದ ಹಾಗೆ ನುಗ್ಗುವ ಅಸಾಧಾರಣ ಶಕ್ತಿ ಅದು; ಜತೆಗೆ ಲೋಕಕಲ್ಯಾಣಕ್ಕಾಗಿ ದುಡಿಯಬೇಕು, ದುಡಿಯಬಲ್ಲೆ ಅನ್ನುವ 'ಸತ್ವ ಸಂಶುದ್ಧಿ'; ಇದು ಎರಡನೇ ದೈವಸಂಪತ್ತು. ಈ ಎರಡರ ಪ್ರಭಾವದಿಂದ ಕಿಟ್ಟಯ್ಯನ ವಿದ್ಯಾಭ್ಯಾಸಕ್ಕೆ ಮುಟ್ಟುಗೋಲು ಬಿತ್ತು. ಕಾಲೇಜಿನ ವಾತಾವರಣದಲ್ಲಿ ಕಾಲೂರಲಿಲ್ಲ. ನಮ್ಮ ದೇಶದ ಪ್ರಜೆಯ ಸ್ವತಂತ್ರ ಸಂಪಾದನೆಗೆ, ಬಿಳಿಯ ಜನಾಂಗದ ಕಪಿಮುಷ್ಟಿಯಿಂದ ನಮ್ಮ ಭಾರತೀಯ ಧರ್ಮಾರ್ಥ ಕಾಮಗಳನ್ನು ಬಿಡಿಸಿ ಬೆಳಗುವುದಕ್ಕೆ ಸಾರ್ವತ್ರಿಕವಾದ

ದೊಡ್ಡ ಚಳುವಳಿ ಕೂಡಿಕೊಂಡು ಬಲಗೊಳ್ಳುತ್ತಿದ್ದ ಕಾಲ ಅದು. ಈತನನ್ನು ಆ ಗಾಳಿ ಹಲವು ಕಡೆಗೆ ಎಳೆದು ಸುತ್ತಿಸಿತು. ಪಂಡಿತ ತಾರಾನಾಥರ ಕಸುಸೀಯ ರಸಿಕ ಪ್ರಪಂಚದಲ್ಲಿ ಕೆಲ ಕಾಲ ಕಳೆಯಿತು. ಆಗಲೇ ಬಳ್ಳಾರಿ ರಾಘವರಂಥಾ ಮಹಾನಟರ ಸ್ನೇಹ, ನಾಟ್ಯಕಲೆಯಲ್ಲಿ ಆಸಕ್ತಿ ಎಳೆದವು. ಆದರೆ ಅವು ಬೆಳೆಯಲಿಲ್ಲ; ಸರಿಬೀಳಲಿಲ್ಲ. ಮದುವೆಯ ಮೂಲಕ ಹೈದರಾಬಾದಿನಲ್ಲಿ ಪ್ರವೇಶಿಸಬೇಕಾಯಿತು. ಅಲ್ಲಿನ ಮೊಗಲಾಯ ದರ್ಬಾರಿನ ವಿಚಿತ್ರ ಅವ್ಯವಸ್ಥೆ, ಹರಿಜನರಾದಿಯಾಗಿ ಹಿಂದುಗಳನ್ನು ಇಸ್ಲಾಮಿಗೆ ಬಹಿರಂಗವಾಗಿ ಅಂತರಂಗವಾಗಿ ಆಸೆ–ನಿರಾಶೆಗಳ ಬಲದಿಂದ ಬದಲಾಯಿಸುವ ವ್ಯವಹಾರ, ಕಿಟ್ಟಯ್ಯನ ಕಣ್ಣು ತೆರೆದವು. ಅಲ್ಲೇ ನೆಲಸಿ ಅವುಗಳನ್ನು ಬಲವಾಗಿ ಎದುರಿಸುವ ಚಳುವಳಿ ಹೂಡಿದ. ಅದರ ಫಲವಾಗಿ ರಾಷ್ಟ್ರಬಹಿಷ್ಕಾರವನ್ನನುಭವಿಸಬೇಕಾಯಿತು. ಕಡೆಗೆ ಶ್ರೀ ಗಾಂಧಿಯವರ ಧೀರಶಾಂತ ಪ್ರಬೋಧಗಳ ಪ್ರಭಾವಕ್ಕೆ ಒಳಗಾಗಿ, ಅವರ ಆಶ್ರಮದಲ್ಲೇ ಶಿಷ್ಯನಾಗಿದ್ದು, ಈಗ ಬಹು ವರ್ಷಗಳಿಂದ ಬೆಂಗಳೂರಿನಲ್ಲಿ ಸ್ಥಿರವಾಗಿ ನೆಲೆಸಿ, ಕನ್ನಡದಲ್ಲಿ ಸ್ವತಂತ್ರವಾದ ಅನುಕರಿಸಲಾಗದ ಗದ್ಯಶೈಲಿಯನ್ನು ಬೆಳೆಸಿ ಆ ಮೂಲಕ ಅವಿಚ್ಛಿನ್ನವಾಗಿ ಆ ಪ್ರಬೋಧಗಳನ್ನು ಹರಡುತ್ತಿದ್ದಾನೆ. ಕನ್ನಡ ದೇಶದಲ್ಲಿ ಆ ಮೂಲಕ ಇತರ ಜನಾಂಗಗಳಲ್ಲಿ ಚಿ. ಕೃಷ್ಣಶರ್ಮನ ಸೇವೆ, ಪ್ರಚೋದನೆ, ಬೆಳೆಯುತ್ತಿದೆ. ಇನ್ನೂ ಬೆಳೆಯಬೇಕು. ಶ್ರೀ ಶ್ರೀನಿವಾಸರು ಹಾಗೆ ಸಂಕಲ್ಪಿಸಲಿ!

# ಗೆಳೆಯ ಸಿದ್ದವನಹಳ್ಳಿ ಕೃಷ್ಣಶರ್ಮ

ದ. ರಾ. ಬೇಂದ್ರೆ

ಗೆಳೆಯ ಕಿಟ್ಟೂನ ಸತ್ಕಾರ ಸಂಧಿ ನನಗೂ ಇಷ್ಟ. ಇ. ಸ. ೧೯೨೪ರಲ್ಲೇ ಅವನಿಗೆ ಹರಕೆ ಕೊಟ್ಟ ನಾನು, ಹೆಚ್ಚಿಗೇನೂ ಸೇರಿಸುವಂತಿಲ್ಲ. ಗೆ. ಕೃಷ್ಣಶರ್ಮ ನಿಗೆ ಜೀವನವೇ ಗುರುಸ್ಥಾನದಲ್ಲಿತ್ತು. ಹಿರಿಯರಾದ ಅನಂತಕೃಷ್ಣಶರ್ಮರ ರಸಿಕ ಪಾಂಡಿತ್ಯ, ದಿ. ರಾಘವಾಚಾರ್ಯರ ನಟನ ಪ್ರತಿಭೆ, ಪಂಡಿತ ತಾರಾನಾಥರ ಅಸಾಮಾನ್ಯ ವ್ಯಕ್ತಿತ್ವ, ಗಾಂಧೀಜಿಯವರ ಮಹಿಮೆ, ವಿನೋಬಾಜಿಯವರ ಕಸವನ್ನೆ ರಸ ಮಾಡುವ ಕಸಬು–ಒಂದೊಂದೂ, ಒಂದೊಂದೂ ಕಾಲಕ್ಕೆ ಶರ್ಮನಿಗೆ ಪೂಜ ನೀಯವಾಗಿತ್ತು. ಸ್ನೇಹ–ಮಮತೆಗಳ ಸ್ವಾದ–ಮೋದ ಅವನು ಬಲ್ಲ. ಹೈದರಾ ಬಾದ್, ಮುಂಬಯಿ, ಧಾರವಾಡ, ಬೆಂಗಳೂರು, ಚಿತ್ರದುರ್ಗ ಎಲ್ಲ ಕಡೆಗೂ ಅವನ ಕೈ ಆಡಿತ್ತು. ಅನೇಕ ತರುಣರ ಮಧ್ಯೆ ತನ್ನದೊಂದು ಸ್ಥಾನ ನಿರ್ಮಿಸಿಕೊಂಡಿದ್ದ, ಕೊಂಡಿದ್ದರು ಸಿದ್ದವನಹಳ್ಳಿ ಕೃಷ್ಣಶರ್ಮರು.

ಅವರು ನನ್ನ ಬಾಲ್ಯ ಸ್ನೇಹಿತರಾಗಿದ್ದರೂ, ನನ್ನೊಡನೆ ಆತ್ಮೀಯತೆಯ ಏಕವಚನ ಬಳಸುತ್ತಿದ್ದರು. ಒಮ್ಮೆ ಹೀಗಿತ್ತು ಸಹವಾಸ; ಈಗಲೂ ಅದರಲ್ಲಿ ವಿರಸವು ಹಣಿಕಿ ಹಾಕಿಲ್ಲ. ಅವರಿಗೆ, ಮೈ ತುಂಬ ಕೆಲಸವಿರಬೇಕೆಂಬ ರಣೋತ್ಸಾಹ. ನಾನು ವಿರಾಮದ ವಿಹಾರಿ. ಕೃಷ್ಣಶರ್ಮರಿಗೆ 'ಶಬ್ದ' ಎಂದರೆ ಪ್ರಾಣ, ಅಪ್ರೀತಿಯ ದಲ್ಲವೇ ಅಲ್ಲ. ಧ್ವನಿಯ ಗುಹೆಯಲ್ಲಿ ನಾದದ ಕಳ್ಳ ಹೆಜ್ಜೆ ಪತ್ತೆ ಮಾಡುವುದೆ ನನ್ನ ಜೀವನ ವಿನೋದ. ಅವರಿಗೆ ಅದರ ಜಿಹಾಸೆ ಇರಲಿಲ್ಲ. ಇದು ನಮ್ಮ ಮೈತ್ರಿಯ ಬ್ರಹ್ಮ ಸೂತ್ರ. ಅದು ತಾಳಿಕೊಂಡಿದೆ. ಅದು ನನ್ನ ಸಂತೋಷ.

# ನಾನು ಕಂಡಂತೆ ಸಿ. ಕೃ.

**ಸಿ. ನಿಜಲಿಂಗಪ್ಪ**

ಸಿದ್ದಪ್ಪನಹಳ್ಳಿ ಕೃಷ್ಣಶರ್ಮರ ಪರಿಚಯ ನನಗೆ ಸುಮಾರು 57 ವರ್ಷಗಳ ಹಿಂದಿನಿಂದ ಬಂದದ್ದು. ಬಹುಶಃ ನನಗಿಂತಲೂ ಒಂದೆರಡು ವರ್ಷ ಚಿಕ್ಕವರಿರಬೇಕು. ಚಿತ್ರದುರ್ಗದ ಹೈಸ್ಕೂಲಿನಲ್ಲಿ 1915 ನೇ ವರ್ಷ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ನಂತರ ವಿದ್ಯಾರ್ಥಿಗಳಾಗಿ ಫೋರ್ತ್ ಫಾರಂಗೆ ಸೇರಿ (ಹೈಸ್ಕೂಲಿನ ಮೊದಲನೇ ವರ್ಷ) ಇದ್ದೆವು. ಅವರು ಚಿತ್ರದುರ್ಗಕ್ಕೆ 5 ಮೈಲಿ ದೂರದಲ್ಲಿರುವ ದೊಡ್ಡ ಸಿದ್ದಪ್ಪನಹಳ್ಳಿಯಲ್ಲಿ ಹುಟ್ಟಿ ಬೆಳೆದವರು. ಅವರಿಗೆ ಸಿದ್ದಪ್ಪನಹಳ್ಳಿ ಹುಟ್ಟಿದಂದಿನಿಂದ ಅಂಟಿಕೊಂಡ ಹುಟ್ಟೂರಿನ ಅಡ್ಡಹೆಸರು. ನನಗೆ ಕಾರಣಾಂತರದಿಂದ ಬಂದು ಮಧ್ಯೆ ಅಂಟಿಕೊಂಡ ಹೆಸರು. ಕೃಷ್ಣಶರ್ಮರ ಮನೆತನದವರು ಈಗಲೂ ಅಲ್ಲಿ ಇದ್ದಾರೆ. ರೆಡ್ಡಿ ಮುಂತಾದವರಿಗೆ ಗುರು ಮನೆತನ ಅವರದು. ಸಹಸ್ರಾರು ಭಕ್ತರು. ಅವರ ತಂದೆ–ತಾಯಿಗಳನ್ನೂ ಬಲ್ಲೆ. ಅತ್ಯಂತ ಪರಿಶುದ್ಧ ಜೀವನ ನಡೆಸಿಕೊಂಡು ಬಂದವರಾಗಿದ್ದರು. ಆ ಊರಿನ ಮತ್ತು ಸುತ್ತಮುತ್ತಲಿನ ಪ್ರದೇಶದ ಎಲ್ಲಾ ಪಂಗಡದ ಜನರು ಅವರಲ್ಲಿ ಅತ್ಯಂತ ವಿಶ್ವಾಸ ಭಕ್ತಿ ನಂಬಿಕೆಯನ್ನಿಟ್ಟಿದ್ದರು. ಎಲ್ಲರ ಗೌರವಕ್ಕೆ ಪಾತ್ರರಾಗಿದ್ದವರು. ಸಾಕಷ್ಟು ವೇಳೆ ಕೃಷ್ಣಶರ್ಮರ ತಂದೆಯವರನ್ನೂ ಒಂದೆರಡು ಸಲ ಅವರ ತಾಯಿಯವರನ್ನೂ ನೋಡಿದ್ದೆ. ಮಾತನಾಡಿಸಿದ್ದೆ. ಅವರ ನಡೆ, ನುಡಿ, ನಮ್ರತೆ ಮತ್ತು ಮಡಿ ನನ್ನ ಮೇಲೆ ಸಾಕಷ್ಟು ಪರಿಣಾಮವನ್ನುಂಟುಮಾಡಿದವು.

ಕೃಷ್ಣಶರ್ಮರು 1915 ರ ನಂತರ ಮುಂದಿನ ವರ್ಷ ಹೈಸ್ಕೂಲಿಗೆ ಬರಲಿಲ್ಲ. ಹೈದರಾಬಾದಿಗೆ ಹೋದರೆಂದು ಹೇಳಿದರು. ಅವರ ಹಿರಿಯ ಅಣ್ಣಂದಿರು ನನ್ನ ಜೊತೆಯಲ್ಲಿ 2 ವರ್ಷ ಸಹಪಾಠಿಗಳಾಗಿದ್ದರು. ಒಳ್ಳೆಯ ಮನುಷ್ಯ, ಮುಗ್ಧ. ನಾನು ಹೈಸ್ಕೂಲು ಬಿಟ್ಟು ಬಂದಾಗ್ಗೆ ಇನ್ನೂ ಅಲ್ಲಿಯೇ ಇದ್ದರು. ನಂತರ ಚಿತ್ರದುರ್ಗದ ತಾಲ್ಲೂಕು ಕಚೇರಿಯಲ್ಲಿ ಗುಮಾಸ್ತರಾಗಿದ್ದರು. ಒಂದೇ ರೀತಿ ಇದ್ದರು. ಕೃಷ್ಣಶರ್ಮರ ಮತ್ತೊಬ್ಬ ಅಣ್ಣನೂ ನನ್ನ ಸಹಪಾಠಿಯಾಗಿದ್ದರು. ಬ್ಯಾಂಕಿನಲ್ಲಿ ನಂತರ ಕೆಲಸ ಮಾಡಿ ನಿವೃತ್ತರಾದರು.

1915–16 ರಲ್ಲಿ ಚಿತ್ರದುರ್ಗದಲ್ಲಿ ನೋಡಿದ ಕೃಷ್ಣಶರ್ಮರನ್ನು ನಂತರ

ನೋಡಿದ್ದು ಸುಮಾರು 30 ವರ್ಷಗಳ ನಂತರ. ಆದರೆ ಅದಕ್ಕೆ ಮುಂಚೆ ಹೈದರಾಬಾದು ರಾಜಕೀಯ ಚಳುವಳಿಯಲ್ಲಿ ಭಾಗವಹಿಸುತ್ತಿದ್ದಾರೆಂದೂ ಒಳ್ಳೆಯ ಸಾಹಿತಿಗಳೆಂದು ಹೆಸರುವಾಸಿಯಾಗಿದ್ದಾರೆಂದೂ ಅವರ ಅಣ್ಣಂದಿರಿಂದ ವಿಚಾರಿಸಿದಾಗ ತಿಳಿಯುತ್ತಿತ್ತು. ಸತ್ಯಾಗ್ರಹ ವಗೈರೆ ಎಲ್ಲಾ ಕಡೆಯಲ್ಲಿಯೂ ಪ್ರಾರಂಭವಾಗಿ ಒಂದು ಮಟ್ಟಕ್ಕೆ ಬಂದಾಗ ನಿಜಾಮ ಸರ್ಕಾರಕ್ಕೆ ಕೃಷ್ಣಶರ್ಮರ ಚಟುವಟಿಕೆಗಳು ಸಹನೀಯವಾಗಲಿಲ್ಲ. ಅವರನಿಟ್ಟುಕೊಳ್ಳುವದು ಆ ಸರ್ಕಾರಕ್ಕೆ ಸಾಧ್ಯವಾಗಲಿಲ್ಲವೆಂದು ಕಾಣುತ್ತೆ, ಶರ್ಮರ ಬಿಸಿ ತಟ್ಟಿ ಹೈದರಾಬಾದು ಸಂಸ್ಥಾನದಿಂದ ಹೊರಗೆ ಹಾಕಿದರು.

ಸುಮ್ಮನಿರುವ ಸ್ವಭಾವ ಕೃಷ್ಣಶರ್ಮರದಲ್ಲವೆನ್ನುವುದು ಎಲ್ಲರಿಗೂ ತಿಳಿದ ವಿಷಯ. ಬೆಂಗಳೂರಿಗೆ ಸುಮಾರು 30 ವರ್ಷಗಳ ಹಿಂದೆ ಬಂದವರು ಸಾಹಿತ್ಯ ರಂಗದಲ್ಲಿ ಕೈ ಹಾಕಿ ಸಾಕಷ್ಟು ಕೆಲಸ ಮಾಡಿದ್ದಾರೆ. ಗಾಂಧಿ ಸಾಹಿತ್ಯದಲ್ಲಿ ಅವರದೇ ಒಂದು ವ್ಯಕ್ತಿತ್ವ. ಅನೇಕ ಗ್ರಂಥಗಳನ್ನು ಭಾಷಾಂತರ ಮಾಡಿದ್ದಾರೆ. ಬಹುಶಃ ಭಾಷಾಂತರ ಮಾಡುವುದರಲ್ಲಿ ಕೃಷ್ಣಶರ್ಮರಿಗೆ ಇರುವ ನೈಪುಣ್ಯತೆ ಹೊಂದಿದವರು ಕನ್ನಡದಲ್ಲಿ ಸಿಕ್ಕುವವರು ಅತಿ ವಿರಳ. ಅನೇಕ ಲೇಖನ, ಪ್ರಬಂಧ, ವಿಮರ್ಶೆಗಳನ್ನು ಬರೆದಿದ್ದಾರೆ. ಅವರದೇ ಆದ ಒಂದು ವೈಶಿಷ್ಟ್ಯ ಅವರ ಕೈಯಲ್ಲಿದೆ. ಅದನ್ನು ಹಾಗೆ ಹೀಗೆ ಎಂದು ವರ್ಣಿಸುವುದು ಕಷ್ಟ. ಓದಿ ನೋಡಿಯೇ ಅನುಭವಿಸಬೇಕು. ಮಾವಿನ ಹಣ್ಣನ್ನು ಎಷ್ಟು ಹೊಗಳಿದರೂ ತಿಂದು ಬಾಯಿ ಚಪ್ಪರಿಸದ ಹೊರತು ಅದರ ರುಚಿ ತಿಳಿಯುವುದು ಹೇಗೆ ?

ಶರ್ಮರ ಸಾಹಿತ್ಯ ಎಷ್ಟು ಸೊಗಸೋ ಶೈಲಿ ಎಷ್ಟು ವೈಶಿಷ್ಟ್ಯಪೂರ್ಣವಾದುದೋ ಅಷ್ಟೇ ಅವರ ಮಾತುಗಾರಿಕೆ, ಗತ್ತುಗಾರಿಕೆ. ಕೇಳುವವರ ಮನಸ್ಸನ್ನೂ ಆಕರ್ಷಿಸುವ ಶಕ್ತಿ ಇದೆ. ಜನ ತಲೆ ತೂಗಿಸುತ್ತಾ ಅವರ ಮಾತು ಕೇಳುತ್ತಾರೆ. ಅತ್ಯಂತ ಪರಿಣಾಮಕಾರಿಯಾದ ಭಾಷಣಗಳು ಅವು. ರಾಜಕೀಯ ಭಾಷಣಗಳಿಗೇನೂ ಕಡಿಮೆ ಇಲ್ಲ. ಇವುಗಳಿಂದಾಗಿ ಸೆರೆಮನೆಯನ್ನೂ ಕಂಡರು. ಅದರ ಅನುಭವವೂ ಸಾಕಷ್ಟಿದೆ.

ಅವರ ಸಹಕಾರವನ್ನು ಕಾಂಗ್ರೆಸ್ಸಿನವರಾದ ನಾವು ಸಾಕಷ್ಟು ಪಡೆದಿದ್ದೇವೆ. ಮಾತನಾಡುತ್ತಲೆ ಕೆಲವು ಕತೆಗಳನ್ನು ಸೃಷ್ಟಿಸಿ ಜನತೆಯನ್ನು ನಗಿಸಿ, ಅಳಿಸಿ, ಕುಣಿಸಿ ಮನಸ್ಸು ತೃಪ್ತಿ ಪಡಿಸಿ ಕಾಂಗ್ರೆಸ್ಸಿಗೆ ಓಟು ಕೊಡಿಸಿದ್ದಾರೆ. ಅವರನ್ನು ನಾವು ಮರೆಯುವಂತಿಲ್ಲ. ರಾಷ್ಟ್ರಪ್ರೇಮ ಅವರಲ್ಲಿ ತುಂಬಿ ತುಳುಕುತ್ತದೆ.

ಕೃಷ್ಣಶರ್ಮರೂ ನಾನೂ ಒಂದೇ ಅಡ್ಡ ಹೆಸರುಳ್ಳವರು, ಒಂದೇ ಶಾಲೆಯಲ್ಲಿ ಕೆಲವೇ ದಿನ ಸಹಪಾಟಿಗಳಿದ್ದಂತೆಯೇ ಇಬ್ಬರೂ ಸಂಸಾರದಲ್ಲಿ ಸಂಪೂರ್ಣತೆಯನ್ನು ಅನುಭವಿಸಿದ್ದೇವೆ. ಅವರ ಸಂಸಾರ ಸುಖಮಯವಾದದ್ದು. ಸ್ವಲ್ಪ ಹೆಚ್ಚಾಗಿಯೇ ಮಕ್ಕಳು. ಇಬ್ಬರಿಗೂ ಅಷ್ಟೇ ಗಂಡು ಅಷ್ಟೇ ಹೆಣ್ಣು ಎಂದು ಕಾಣುತ್ತೆ.

ತುಂಬು ಜೀವನ ಅವರದು. ಸಾಕಷ್ಟು ಸಮಾಜ, ದೇಶ, ಭಾಷೆಯ ಸೇವೆ ಮಾಡಿದ್ದಾರೆ.

ಶಾಶ್ವತವಾಗಿ ಕೃಷ್ಣಶರ್ಮರ ಹೆಸರು ಉಳಿಯುವುದು ಅವರು ಕನ್ನಡ ಸಾಹಿತ್ಯಕ್ಕೆ ಮಾಡಿರುವ ಅಪಾರ ಸೇವೆಯಿಂದ. ಸಾಹಿತ್ಯದ ನಾನಾ ಮುಖಗಳಲ್ಲಿ ಅವರ ವ್ಯಕ್ತಿತ್ವ ಇತ್ತೀಚೆಗೆ ಅಂದರೆ ಸುಮಾರು 30 ವರ್ಷಗಳಿಂದ ಬೆಳೆದು ಬಂದಿರುವ ಕನ್ನಡ ಸಾಹಿತ್ಯದಲ್ಲಿ ಎದ್ದು ಕಾಣುತ್ತದೆ. ಸಾಹಿತ್ಯದ ಬೆಳವಣಿಗೆಗೆ ಅವರ ಸಾಧನೆ ಸಾಹಸಗಳು ಸಾಕಷ್ಟು ದೊರೆತಿವೆ. ಅದಕ್ಕಾಗಿಯೇ ಅವರ ಅನೇಕ ಸ್ನೇಹಿತರು ಅವರಿಗೆ ಸಂಭಾವನಾ ಗ್ರಂಥವನ್ನು ಸಮರ್ಪಿಸುವ ಯೋಗ್ಯ ತೀರ್ಮಾನ ಮಾಡಿದ್ದಾರೆ. ಈ ಒಳ್ಳೆಯ ಕೆಲಸ ನೆರವೇರಲಿ. ಕೃಷ್ಣಶರ್ಮರ ಆರೋಗ್ಯ ಅಷ್ಟು ಚೆನ್ನಾಗಿಲ್ಲ. ಅವರಿಗೆ ಜಾಗ್ರತೆ ಆರೋಗ್ಯಭಾಗ್ಯ ಉಂಟಾಗಲಿ. ಅವರ ಹೆಸರು ಚಿರಾಯುವಾಗಲಿ!

# ನೆಚ್ಚಿನ ಗೆಳೆಯ ಹಾಗೂ ಮಾರ್ಗದರ್ಶಿ

**ಕೆ. ಸಿ. ರೆಡ್ಡಿ**

ಶರ್ಮರ ಈ ಹಲವು ವರ್ಷಗಳ ವಿವಿಧ ಚಟುವಟಿಕೆಗಳಲ್ಲಿ ಅವರೊಡನೆ ಸಂಪರ್ಕ ಉಂಟಾಗಿದ್ದು ನನ್ನ ಭಾಗ್ಯವೆನ್ನಬೇಕು. ನನಗೆ ಅವರು ಪ್ರಾಮಾಣಿಕ ಸ್ನೇಹಿತರೂ ಮಾರ್ಗದರ್ಶಿಗಳೂ ಆಗಿದ್ದರು. ಸ್ವಾತಂತ್ರ್ಯ ಚಳುವಳಿಯ ಕಾಲ. ಹೈದರಾಬಾದಿನಲ್ಲಿ ಮೊದಲು ಸಂಧಿಸಿದ ನೆನಪು ನನಗೆ. ಭಾರತದ ಉಳಿದ ಪ್ರದೇಶಗಳಿಗಿಂತ ಭಾರತದ ಸಂಸ್ಥಾನಗಳಲ್ಲಿ ಚಳುವಳಿ, ಹೋರಾಟ ಬಹು ಕಷ್ಟಕರವಾಗಿತ್ತೆಂಬುದು ತಿಳಿದ ಸಂಗತಿಯೇ ಆಗಿದೆ. ನಾವು ಇಲ್ಲಿ ಮೈಸೂರಿನಲ್ಲಿ ಹೋರಾಟ ನಡೆಸಿದಂತೆ, ಹೈದರಾಬಾದಿನಲ್ಲೂ ಅದೇ ರೀತಿ ನಡೆಯಿತು. ಅದೂ ಇನ್ನೂ ಕಠಿಣವೂ ದುರ್ಗಮವೂ ಆದ ಪರಿಸ್ಥಿತಿಯಲ್ಲಿ ನಡೆಯಿತು ಎನ್ನಬಹುದು. ಅಲ್ಲದೆ ಸ್ವಾತಂತ್ರ್ಯ ಹೋರಾಟಗಾರರ ಪೈಕಿ ಕೃಷ್ಣಶರ್ಮರು ಮುಂಚೂಣಿಯಲ್ಲಿದ್ದರು. ಆ ರಾಜ್ಯದಲ್ಲಿ ಅವರು ಇತರರೊಡನೆ ಜೊತೆಗೂಡಿ ಸ್ವಾತಂತ್ರ್ಯ ಹೋರಾಟಕ್ಕೆ ಅಸ್ತಿಭಾರ ಹಾಕಿದರು. ಯಶಸ್ವಿ ಹೋರಾಟ ನಡೆಯಿತು.

ಮುಂದೆ, ಮೈಸೂರಿನ ಅದೃಷ್ಟ, ಶರ್ಮರು ಬೆಂಗಳೂರಿನಲ್ಲಿ ನೆಲಸಿದರು. ನನಗೆ ಆಗ ಅವರೊಡನೆ ಓಡಾಡಲು, ಕೆಲಸ ಮಾಡಲು ಅನೇಕ ಅವಕಾಶಗಳು ದೊರಕಿದವು ಮೈಸೂರು ರಾಜ್ಯ ಕಾಂಗ್ರೆಸ್ಸಿನ ಜವಾಬ್ದಾರಿಯ ಹಲವು ಸ್ಥಾನಗಳಲ್ಲಿದ್ದ ಸದವಕಾಶ ನನಗೆ ದೊರೆತಾಗ ಶರ್ಮರ ಮಾರ್ಗದರ್ಶನ ದೊರೆಯಿತು. ಮೈಸೂರು ಕಾಂಗ್ರೆಸ್ಸಿನ ಯಾವುದೇ ವಿಷಮ ಸನ್ನಿವೇಶದಲ್ಲಿ, ದೈನಂದಿನ ವ್ಯವಹಾರದಲ್ಲಿ ಅವರ ಸಹಕಾರ ಮತ್ತು ಬುದ್ಧಿವಾದ ಸದಾ ಸಿದ್ಧವಾಗಿರುತ್ತಿತ್ತು. ನಮಗೆ ಸ್ವಾತಂತ್ರ್ಯ ದೊರೆತು ಜವಾಬ್ದಾರಿ ಸರ್ಕಾರ ರಚನೆಯಾದಮೇಲೂ ಸಾರ್ವಜನಿಕರ ಜೀವನ ವಿಚಾರಗಳಲ್ಲಿ ಅವರ ಪಾತ್ರ ಅತ್ಯಂತ ಹಿರಿದಾದುದು.

ಅವರ ಸಾಹಿತ್ಯ ಶಕ್ತಿಯ ಬಗ್ಗೆ ಹೇಳಲು ನಾನು ಸಮರ್ಥನಲ್ಲ. ಆ ಕ್ಷೇತ್ರದಲ್ಲಿ ಅವರು ತಮ್ಮದೇ ಆದ ಒಂದು ವಿಶಿಷ್ಟ ಸ್ಥಾನ ಪಡೆದಿರುವುದು ಎಲ್ಲರಿಗೂ ತಿಳಿದಿದೆ. ಇನ್ನು ಅವರ ಬರಹಗಳಲ್ಲಿ ತಮ್ಮದೇ ಆದ ಒಂದು ಸೊಬಗು, ಒಂದು ಸೊಗಡು ಇದೆ. ನಡುವೆ ಹಾಸ್ಯದ ಕಿಡಿಗಳು, ಸರಳ ಶೈಲಿ, ಕೆಲವೊಮ್ಮೆ ಆರೋಗ್ಯಕರ ವಿಡಂಬನ ಇವುಗಳಲ್ಲಿ ಇವರನ್ನು ಮೀರಿಸುವವರು ಅಪರೂಪ. ಆದರೆ ಮೊದಲೇ ಹೇಳಿದಂತೆ ಸಾಹಿತ್ಯ

ಕ್ಷೇತ್ರದ ಅದರಲ್ಲೂ ಕನ್ನಡ ಸಾಹಿತ್ಯಗಳ ಬಗ್ಗೆ ವಿಮರ್ಶೆ ಮಾಡುವ ಅರ್ಹತೆ ನಾನು ಪಡೆದಿಲ್ಲ. ಆದರೂ ಇಷ್ಟು ಮಾತ್ರ ಹೇಳಬಲ್ಲೆ. ಅವರ ಪುಸ್ತಕರೂಪದ ಬರವಣಿಗೆಗಳಿಂದ ಮತ್ತು ಪತ್ರಿಕೆಗಳಲ್ಲಿ ಬರೆದ ಬರಹಗಳಿಂದ ನಾನು ಸಂತೋಷ ಲಾಭಗಳೆರಡನ್ನೂ ಪಡೆದಿದ್ದೇನೆ.

ಅವರ ಸಾಹಿತ್ಯಸೇವೆ, ಪತ್ರಿಕೋದ್ಯಮ, ಸಾರ್ವಜನಿಕ ಚಟುವಟಿಕೆಗಳೆಲ್ಲಕ್ಕಿಂತ ಹೆಚ್ಚಾಗಿ ಅವರು ನನಗೆ ನೆಚ್ಚಿನ ಹಾಗೂ ನಿಷ್ಠೆಯ ಮಿತ್ರರಾಗಿ ಗೌರವಾರ್ಹರು. ಅವರ ಬಗ್ಗೆ ನನಗೆ ಸದಾ ಮಮತೆ, ಹೆಮ್ಮೆ.

ಅವರು ಸಿರಿವಂತರಲ್ಲ. ತಮ್ಮ ಇಡೀ ಜೀವಮಾನವನ್ನು ಗಾಂಧೀ ತತ್ವಗಳಿಗಾಗಿ ಮುಡುಪಿಟ್ಟರು. ಗಾಂಧಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಕೆಲಸವನ್ನು ಪೂರೈಸಲು ಪಣತೊಟ್ಟವರು. ಅವರು ಬೆಂಗಳೂರಿನಲ್ಲಿ ಕಟ್ಟಿರುವ "ಗಾಂಧಿ ಸಾಹಿತ್ಯ ಸಂಘ" ಅದರ ಏಳಿಗೆಗಾಗಿ ಅವರು ಪಟ್ಟ ಶ್ರಮ, ತನ್ನ ಬಹು ವಿಧ ಚಟುವಟಿಕೆಗಳಿಂದ, ನಾಡಿನಲ್ಲೆಲ್ಲ ಹೆಸರುವಾಸಿಯಾಗಿ, ಮಹಾ ವ್ಯಕ್ತಿತ್ವದ ಬಹುಮುಖತೆಯನ್ನು ಪ್ರತಿಬಿಂಬಿಸುತ್ತದೆ.

ಅವರು ಈ ಇಳಿ ವಯಸ್ಸಿನಲ್ಲಿ ಕಾಯಿಲೆಯಿಂದ ಹಾಸಿಗೆ ಹಿಡಿದಿರುವುದು ನನಗೆ ಬಹು ದುಃಖದ ಸಂಗತಿಯಾಗಿದೆ. ಆದಾಗ್ಯೂ ಅವರು ತಾವು ಕಟ್ಟಿದ ಸಂಸ್ಥೆಯ ವಿಷಯದಲ್ಲಿ ಬಹು ಆಸ್ಥೆ ವಹಿಸಿ ತಮ್ಮ ಕಾರ್ಯಕರ್ತರಿಗೆ ಬೆಳಕು ನೀಡುತ್ತಿದ್ದಾರೆ. ಅವರಿಗೆ ನನ್ನ ಅಲ್ಪ ಗೌರವವನ್ನು ಅರ್ಪಿಸಿ, ಭಗವಂತನು ಅವರಿಗೆ ಸಂಪೂರ್ಣ ಆರೋಗ್ಯವನ್ನು ಕರುಣಿಸಿ ತಮ್ಮ ಸೇವಾವೈಭವವನ್ನು ಮುಂದುವರಿಸಲು ಸಾಧ್ಯಮಾಡಿಕೊಡಲೆಂದು ಪ್ರಾರ್ಥಿಸುತ್ತೇನೆ.

# ಶರ್ಮಾಜಿಯವರ ಬಾಳ 'ಆರಾಧನೆ'

'ರಾಶಿ'

ಮಹಾತ್ಮಾ ಗಾಂಧೀಜೀಯವರು ಸ್ವಾತಂತ್ರ್ಯಕ್ಕಾಗಿ ನಾಡಿನಲ್ಲಿ ಅಹಿಂಸಾ ಚಳುವಳಿಯನ್ನು ಪ್ರಾರಂಭಿಸಿದಾಗ ಲಕ್ಷಾಂತರ ಮಂದಿ ಅವರ ಪ್ರಭಾವಕ್ಕೆ ಸಿಲುಕಿದರು. ಅವರು ಆಣತಿಯಿತ್ತಂತೆ ಕಾಯಾ ವಾಚಾ ಮನಸಾ ನಡೆದುಕೊಂಡರು ಸ್ವಾತಂತ್ರ್ಯ ಸಿಗುವತನಕ. ಆ ನಂತರ ಗಾಂಧೀಟೋಪಿಯೊಂದೇ ಉಳಿಯಿತು. ಗಾಂಧೀ ತತ್ವಗಳು ಪುಸ್ತಕಗಳಲ್ಲಿ ಹುದುಗಿಕೊಂಡವು. ಆದರೆ ಅಪರೂಪವೆಂದರೂ ಕೆಲವರು ಗಾಂಧೀ ತತ್ವಗಳನ್ನು ತಮ್ಮ ಬಾಳ ಆರಾಧನೆಯನ್ನಾಗಿ ನಿಯಮಿಸಿಕೊಂಡರು. ನಿಯಮದಂತೆ ನಡೆದುಕೊಳ್ಳುತ್ತಾ ಬಂದರು. ಇಂತಹ ಅಪರೂಪ ವ್ಯಕ್ತಿಗಳಲ್ಲಿ ನಮ್ಮ• ಬಡಾವಣೆಯಲ್ಲಿದ್ದುಕೊಂಡು ಪ್ರತ್ಯಕ್ಷ ನಿದರ್ಶನವನ್ನು ಕೊಡುತ್ತಿರುವವರಲ್ಲಿ ಶ್ರೀ ಸಿ. ಕೃ. ಶರ್ಮಾಜೀಯವರು ಒಬ್ಬರು.

ಗಾಂಧೀಟೋಪಿಯನ್ನು ಗರಿಗರಿಯಾಗಿರಿಸಿಕೊಂಡವರು ಏನಕೇನ ಪ್ರಕಾರೇಣ ಶ್ರೀಮಂತರಾದರು. ಗುಟ್ಟಿನಲ್ಲಿ ಗಾಂಧೀ ತತ್ವಗಳನ್ನು ನಡೆನುಡಿಗಳಲ್ಲಿ ಅನುಸರಿಸ ಹೊರಟವರು, ತುತ್ತಿನ ಚೀಲಗಳಿಗೆ ತತ್ವಗಳನ್ನು ತುಂಬಬೇಕಾಗಿ ಬಂತು. ತತ್ವಾನ್ವೇಷಿಗಳಿಗೆ ತತ್ವಾರಾಧಕರಿಗೆ, ಇದಕ್ಕಿಂತ ಮಿಗಿಲಾಗಿ ಹೊಟ್ಟೆಗೆ ತಂಪೆರೆಯುವುದು ಬೇರೆ ಯಾವುದು ತಾನೇ ಇರಲು ಸಾಧ್ಯ! ಈ ಗುಂಪಿಗೆ ಸೇರಿದವರು ಶರ್ಮಾಜೀಯವರು.

* * * *

**ಮಾತಿನ ಮಂಟಪಕ್ಕೆ ಆತುಮದ ಕಲಶ**

ಮಂದಿರ ಒಂದರಲ್ಲಿ ಯಾರೋ ಭಾಷಣವನ್ನು ಬಿಗಿಯುತ್ತಿದ್ದರು. ಧ್ವನಿವರ್ಧಕದ ಒಂದು ಬಾಯಿ ಮಂದಿರದಾಚೆಗೆ ಚಾಚಿಕೊಂಡಿತ್ತು. ಆ ಸಂಜೆ ರಸ್ತೆಯಲ್ಲಿ ಹೋಗುವವರಿಗೆ ಇದರ ಕಾಟ ತಪ್ಪದು. ಅಂತಹ ರಸ್ತೆಗಳಲ್ಲಿ ಹೋಗುವುದನ್ನು ಆದಷ್ಟು ತಪ್ಪಿಸಿಕೊಳ್ಳುತ್ತೇನೆ. ಆದರೆ ಆ ಸಂಜೆ ಮಂದಿರದ ಪಕ್ಕದಲ್ಲಿರುವ ಮನೆಗೆ ಹೋಗಬೇಕಾಗಿತ್ತು. ಧ್ವನಿವರ್ಧಕದ ಬೊಬ್ಬರಿತವನ್ನು ತಪ್ಪಿಸಿಕೊಳ್ಳುವ ಮಾರ್ಗವೇ ಇಲ್ಲ.

ಕೇಳಿ ಕೇಳಿಸಿತು, ಭಾಷಣ. ಆದರೆ ಅದೆಂತಹ ಮನಸ್ಸು ರಮಿಸಿ ಸೆರೆಹಿಡಿಯು ವಂತಹ ಭಾಷಣ! ಕಡಲೆ ಹುರಿದ ಹಾಗೆ ಕನ್ನಡದ ನುಡಿಗಳು ಜಲಪಾತದಂತೆ ವಾಗ್ಝರಿ. ವೇಂ, ಆಂ, ಆಂ ಆಂ ಇತ್ಯಾದಿ ಅಡೆತಡೆಗಳೇ ಇಲ್ಲ. ನುಡಿದ ರೀತಿಯು ರಸಮಯ ವಾಗಿತ್ತು. ನುಡಿದ ಅರ್ಥಕ್ಕೆ ಮೆರಗು ಕೊಡುತ್ತಿತ್ತು.

ಇದ್ಯಾರು ಇಂತಹ ಅಪರೂಪ ವ್ಯಕ್ತಿ. ಸ್ವಾನುಭವದ ಪರಿಪಕ್ವತೆಯಿಂದ ಮಾತ ನಾಡುವ. ನಮ್ಮ ನಾಡಿನವ ? ಎಂದು ಕುತೂಹಲವಾಯಿತು. ಕಾರಣ ಮಂದಿರದ ಹೆಬ್ಬಾಗಿಲಿನಲ್ಲಿ ತಲೆ ತೂರಿಸಿ ನೋಡಿದೆ.

ಎತ್ತರವಲ್ಲದ, ಮಗು ಮುಖದ, ಆಸಾಮಿಯು ಭಾಷಣ ಮಾಡುತ್ತಿದ್ದುದು. ಅರೆ ! ಈ ಒಡಲಿನಿಂದಲೇ ಅಂತಹ ಗುಡುಗು ನುಡಿಗಳು ಹೊರಹೊಮ್ಮುತ್ತಿರುವುದು? ಎಂದನಿಸಿತು. ಒಡಲ ಶ್ರೀಮಂತಿಕೆಗಿಂತ ಕಂಠ ಶ್ರೀಮಂತಿಕೆಯು ಅದಕ್ಕಿಂತಲೂ ಮಿಗಿಲಾಗಿ ಮನದ ಧೀಮಂತತೆಯು ಮನುಷ್ಯನನ್ನು ಆಕರ್ಷಿಸುತ್ತದೆ. ಈ ಸೌಭಾ ಗ್ಯವನ್ನು ಪಡೆದಿದ್ದ ಅಂದಿನ ಭಾಷಣಕಾರ ಶ್ರೀ ಸಿ. ಕೃ. ಶರ್ಮಾಜೀ. ಮಾತುಗಳನ್ನು ಸ್ವಾಧೀನಪಡಿಸಿಕೊಂಡ ಧ್ಯೇಯವಾದಿ.

ಪೇಟೆಯಲ್ಲಿರುವ ಅನಾಥಾಲಯವೊಂದರ ಸೂತ್ರಗಳನ್ನು ಶರ್ಮಾಜೀ ಕೆಲವು ಕಾಲ ವಹಿಸಿಕೊಂಡಿದ್ದರು. ಅಲ್ಲಿನ ಕೆಲಸಗಳನ್ನು ಮುಗಿಸಿಕೊಂಡು ಮನೆಗೆ ಹಿಂತಿರು ಗುವಾಗ ನನ್ನ ದವಾಖಾನೆಯ ಮುಂದೇ ಹೋಗಬೇಕು. ನನ್ನ ಕೆಲಸವು ಮುಗಿದಿದ್ದರೆ ನನ್ನ ಜತೆಗೆ ಬರುವ ವಾಡಿಕೆ. ವಾಚಾಳಿಗಳು ನಾವಿಬ್ಬರೂ, ಅಂದಮೇಲೆ ಕೇಳಬೇಕೆ ? ಎತ್ತದ ಸುದ್ದಿ ಇರಲಿಲ್ಲ. ಟೀಗಗಳಿಗನಕ ಬಿರಿದ ಬಾಯಿಗಳು.

ಒಮ್ಮೆ ಅಂದರು :–"ನಿಮ್ಮ ಕೊರವಂಜಿಯಿಂದ ಕನ್ನಡ ಹಾಳಾಗಿ ಹೋಯಿತು ವ್ಯಾಕರಣದ ಗಂಧವೇ ಕೊರವಂಜಿಯ ಲೇಖನಗಳಿಗೆ ಇದ್ದಂತಿಲ್ಲ." ಒಪ್ಪಿದೆ. ಆದರೆ "ಶರ್ಮಾಜೀ, ಅಲ್ಲಿ ಪ್ರಕಟವಾದ ಲೇಖನಗಳು ಅರ್ಥವಾಗುತ್ತೆ ಅಲ್ಲವೇ?" ಎಂದೆ. "ಸುಲಭವಾಗಿ ಆಗುತ್ತೆ". "ಮತ್ತೆ ವ್ಯಾಕರಣಕ್ಕೆ ಬೆಂಕಿ ಬಿದ್ದುಹೋಗಲಿ." "ಛೇ, ಛೇ ಹಾಗಲ್ಲ. ಅರ್ಥವಾಗುತ್ತೆ ದಿಟ, ಆದರೆ ವ್ಯಾಕರಣಬದ್ಧವಾಗಿದ್ದರೆ, ನಿಜವಾಗಿ ಸಾಹಿತ್ಯ ಆಗಬಹುದಲ್ಲ" ಎಂದರು. ನುಡಿಗಳು ಅಚ್ಚುಕಟ್ಟಾಗಿರಬೇಕು. ಅವುಗಳ ರಚನೆ ಯಲ್ಲಿ ವ್ಯಾಕರಣದ ಶಿಸ್ತು ಇರಬೇಕು. ಆಗಲೇ ಅವುಗಳಿಗೆ ಮೆರಗು ಬರುತ್ತದೆ ಎಂದವರು ಒತ್ತಿ ಹೇಳಿದರು. ಬಾಳಿನಲ್ಲಿ ಶಿಸ್ತನ್ನು ರೂಪಿಸಿಕೊಂಡವರು, ನುಡಿಯಲ್ಲೂ ಶಿಸ್ತನ್ನು ಅಪೇಕ್ಷಿಸುವುದು ಅನಿವಾರ್ಯವಾಗಿತ್ತು. ಶಿಸ್ತಿಲ್ಲದ ಬಾಳನ್ನು ನಡಸಿದವರು ನನಗೆ ಅನ್ನದಾತರು. ಅವರುಗಳ ಸಂಪರ್ಕವು ಅಗತ್ಯ ನನ್ನ ಕಸುಬಿಗೆ. ಹಾಗಾಗಿ ಶಿಸ್ತು ಎನ್ನುವುದು ಒಂದು ರೀತಿಯಲ್ಲಿ ಗಗನಕುಸುಮ ನನಗೆ. ಅವರಿಗೆ ಅದು ಕರತಲಾಮಲಕ.

* * * *

ಮದ್ರಾಸಿನಲ್ಲಿ ಸುಮಾರು ೨ ದಶಕಗಳ ಹಿಂದೆ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಕೀರ್ತಿಶೇಷ ಕೈಲಾಸಂ ಅವರು ಆಯ್ಕೆಯಾಗಿದ್ದರು. ಅಧ್ಯಕ್ಷ ಭಾಷಣವನ್ನು ಅವರು ಬರೆದು ಅಚ್ಚೊತ್ತಿಸಬೇಕಾಗಿತ್ತು, ಅಧಿವೇಶನಕ್ಕೆ ಮುಂಚೆಯೇ. ಈ ಕೆಲಸ ಕೈಲಾಸಂ ಅವರ ಸ್ವಭಾವಕ್ಕೆ ಒಗ್ಗುತ್ತಿರಲಿಲ್ಲ. ಶರ್ಮಾಜೀಯವರನ್ನು ಕಂಡರೆ ಕೈಲಾಸಂಇಗೆ ತುಂಬಾ ಗೌರವ ಮತ್ತು ಒಲವು. ಈ ಭಾವನೆ ಇಬ್ಬರಲ್ಲೂ ಪರಸ್ಪರವಾಗಿತ್ತು. "ಅಧ್ಯಕ್ಷ ಭಾಷಣಕ್ಕೆ ಸಾಮಗ್ರಿಯನ್ನು ಕೊಡುತ್ತೇನೆ, ಭಾಷಣವನ್ನು ನೀನು ಬರೆದುಕೊಡಬೇಕು" ಎಂದು ಶರ್ಮಾಜೀಯವರನ್ನು ಒಪ್ಪಿಸಿದರು. ಸಾಮಗ್ರಿಯನ್ನು ಸಂಗ್ರಹಿಸಲು ಶರ್ಮಾಜೀ ನಮ್ಮನೆಗೆ ಆಗಿಂದಾಗ್ಗೆ ಬಂದು ಕೈಲಾಸಂ ಅವರೊಡನೆ ಮಾತುಕತೆ ಮಾಡಬೇಕಾಗಿತ್ತು. ಬರುತ್ತಲೂ ಇದ್ದರು. ಶಿಸ್ತು ಶರ್ಮಾಜಿಯವರ ಇನ್ನೊಂದು ಹೆಸರು. ಅದರ ಬಂಧನವೇ ಇಲ್ಲ ನಮ್ಮ ಕೈಲಾಸಂಗೆ. "ಒಂದು ಸಂಕಲ್ಪವನ್ನು ಧೃಡವಾಗಿ ಮಾಡಬೇಕು. ಅನಂತರ ಸಂಯಮದಿಂದ ನಡೆದುಕೊಳ್ಳಬೇಕು. ಅನಂತರ ಸಿದ್ಧಿಯು ದೊರಕುತ್ತದೆ" ಎಂದು ಶರ್ಮಾಜೀಯವರು ಪುನಃ ಪುನಃ ಹೇಳುತ್ತಿದ್ದರು. ಹೀಗೆ ಹೇಳಿದರೆ ಕೈಲಾಸಂ ಭಾಷಣದ ವಿಷಯಕ್ಕೆ ಸಂಬಂಧಿಸಿದಂತೆ ಮಾತನಾಡಬಹುದು ಎಂದು ಆಸೆ. ಆದರೆ ಕೈಲಾಸಂಗೆ ಸಂಕಲ್ಪವು ಇಲ್ಲ, ಸಂಯಮವು ಆತನಿಗೆ ಒಲ್ಲದುದು. ಯಾವುದೋ "ಒಂದು" ಸಂಕಲ್ಪ ಮಾಡಿದೆ. ಅದು ನನ್ನ ನಡಸುತ್ತಿದೆ. "ಅದಕ್ಕೆ" ಸಂಯಮವಿದ್ದರೆ ನಾನು ಬಚಾವಾಗ್ತೀನಿ; ಇಲ್ಲದೆ ಇದ್ದರೆ "ಅದಕ್ಕೇ" ಕೆಟ್ಟ ಹೆಸರು; ಎನ್ನುವುದು ಕೈಲಾಸಂನ ಅನುಕೂಲಸಿಂಧು.

ಇವರುಗಳ ಮಾತುಗಳನ್ನು ಕೇಳುವುದೇ ಒಂದು ಮೋಜಾಗಿತ್ತು. ಪರಸ್ಪರವಾಗಿ ಯಾಕೆಒಬ್ಬರನ್ನೊಬ್ಬರು ಗೌರವದಿಂದ ಮೆಚ್ಚಿಕೊಂಡರು ಎನ್ನುವುದು ಅರ್ಥವಾಯಿತು. ಶಿಸ್ತಿನಿಂದ ಪ್ರಪತ್ತಿ' ಎಂದು ಶರ್ಮಾಜೀ; ಶಿಸ್ತಿಲ್ಲದೇ ಪ್ರಪತ್ತಿ ಎನ್ನುವ ಕೈಲಾಸಂ. ಶರಣಾಗತರೇ ಇಬ್ಬರೂ ಮನದಾಳದಲ್ಲಿ. ಸಾರೂಪ್ಯರೂ ಅಹುದು. ಸಾಲೋಕ್ಯರು, ಹಾಗೂ ಸಾಮಿಪ್ಯರು ಕೂಡ, ಮನದ ಆಳಪದರಗಳಲ್ಲಿ.

ಅಧ್ಯಕ್ಷ ಭಾಷಣವನ್ನು ಅಚ್ಚುಕಟ್ಟಾಗಿ ಅಚ್ಚೊತ್ತಿ ಪ್ರತಿಗಳನ್ನು ಸಭೆಯಲ್ಲಿ ಹಂಚಿದರು. ತನಗೆ ಆ ಕ್ಷಣದಲ್ಲಿ ತೋಚಿದ್ದನ್ನು ಕೈಲಾಸಂ ನುಡಿದು ಅಧ್ಯಕ್ಷ ಭಾಷಣವನ್ನು ಮುಗಿಸಿದರು. ಶಿಸ್ತಿನ ಭಾಷಣ ಅಚ್ಚಾಗಿ ಶಾಶ್ವತವಾಯಿತು. ಶಿಸ್ತಿರದ ಭಾಷಣ ರುಚಿಯಾಯಿತು.

ಮಹಾತ್ಮಾ ಗಾಂಧೀಯವರ ಪ್ರಭಾವದಿಂದ ಶರ್ಮಾಜೀ ಎಷ್ಟರಮಟ್ಟಿಗೆ ತಮ್ಮ ಬಾಳನ್ನು ರೂಪಿಸಿಕೊಂಡರು ಎನ್ನುವುದು ಆಗ ಸ್ಪಷ್ಟವಾಗಹತ್ತಿತು ನನಗೆ.

* * * *

ತಾವು ಆಸ್ಥೆಯಿಂದ ಕಲಿತುದನ್ನು ಆಸಕ್ತಿ ಇರುವ ಚಿರಂಜೀವಿಗಳಿಗೆ ಕಲಿಸುವಾಗ ಆಗುವ ಆನಂದವು ಬ್ರಹ್ಮಾನಂದಕ್ಕೆ ಸರಿಸರಿಯಾಗಬಹುದು ಎಂಬ ಅರ್ಥ ಬರುವ

ಮಾತುಗಳನ್ನು ಜೂಲಿಯಸ್ ಸೀಸರ್ ನುಡಿದಿದ್ದಾನೆ. ಇದರ ಸತ್ಯತೆಯನ್ನು ಶರ್ಮಾ ಜೀಯವರ ನಡವಳಿಕೆಯೊಂದರಿಂದ ತಿಳಿಯಬಹುದು. "ಮಹಾತ್ಮಾಜೀಯವರ ಆಧ್ಯಾತ್ಮಿಕ ಶಕುತಿಯಿಂದ ನಾನು ಪ್ರಭಾವಿತನಾದೆ. ಇದೊಂದು ಋಣ. ಈ ಋಣವನ್ನು ತೀರಿಸಬೇಕು. ಹೇಗೆ ? ಹತ್ತೂ ಚಿರಂಜೀವಿಗಳಿಗೆ, ನನ್ನ ಮಟ್ಟದಲ್ಲಿರುವ ಆಧ್ಯಾತ್ಮಿಕ ಆಸಕ್ತಿಯಿಂದ, ಕಲಿಸಬೇಕು. ಅದಕ್ಕಾಗಿ ಸಂಘವೊಂದನ್ನು ಕಟ್ಟಬೇಕು." ಹೀಗಾಗಿರಬೇಕು, ಗಾಂಧೀ ಸಾಹಿತ್ಯ ಸಂಘದ ಸ್ಥಾಪನೆ ಮತ್ತು ಅಭಿವೃದ್ಧಿ. ಈ ಸಂಘದ ಭದ್ರವಾದ ಅಸ್ಥಿ ಭಾರವು ಶರ್ಮಾಜೀಯವರ ಆಧ್ಯಾತ್ಮಿಕ ಅಂತಃಕರಣ ಮತ್ತು ಸಾರಸ್ವತ ಶ್ರೀಮಂತಿಕೆ. ವಿಪುಲವಾಗಿ ಅವರು ಬರೆದ, ನುಡಿದ ಮಾತಿನ ಮಂಟಪಕ್ಕೆ ಅವರಿಗೆ ಸಾಕ್ಷಾತ್ಕಾರವಾಗಿರಬೇಕಾದ ಆತುಮದ ಕಲಶವಿದೆ. ಅದರಿಂದಲೇ ಬರವಣಿಗೆಯು ಸತ್ವವುಳ್ಳದ್ದು. ಮಾತುಗಳಿಗೆ ತೂಕವು ಬಂದಿರುವುದು.

ತಮ್ಮ ಬಾಳನ್ನೆ "ಆರಾಧನೆ" ಎಂದನ್ನುವಂತೆ ಶರ್ಮಾಜೀ ನುಡಿದಿದ್ದಾರೆ; ನಡೆದುಕೊಂಡಿದ್ದಾರೆ. ಅವರ ಬಾಳಗುಡಿಯು ಚಿಕ್ಕದಾದರೂ ಚೊಕ್ಕವಾದದ್ದು. ಸ್ಪಷ್ಟವಾದ ಹಾಗೂ ಪುಟ್ಟದಾದ ವಾಕ್ಯರಚನೆಗಳೇ ಮಂತ್ರಗಳು. ಅಚ್ಚುಕಟ್ಟಿನ ಶಿಸ್ತಿನ ಬಾಳು, ಸಂಯಮದ ಜೀವನ, ಇವೇ ಪೂಜಾ ಪುಷ್ಪಗಳು. ವ್ಯಾಸಂಗ ಮತ್ತು ಮನನದಿಂದುಂಟಾದ ಆಲೋಚನೆಗಳೇ, ಅಭಿಷೇಕ. ಆ ಗುಡಿಗೆ ಆತುಮವೇ ಕಳಶ.

ಹಿರಿಯ ಶರ್ಮಾಜೀಯವರ ಬಾಳ ಆರಾಧನೆಯು ಕಂಡು ಕೇಳಿದ ಉತ್ಸಾಹೀ ಚಿರಂಜೀವಿಗಳಿಗೆಲ್ಲಾ ಸಮ ಸಮನಾಗಿ ಸಮಾರಾಧನೆಯಾಗಬೇಕು.

# ಯುವಕ ವೃಂದಕ್ಕೆ ಸೂಜಿಗಲ್ಲಾದ ಶ್ರೀ ಕೃಷ್ಣ ಶರ್ಮರು

ಪು. ತಿ. ನರಸಿಂಹಾಚಾರ್ಯ

ಶ್ರೀ ಕೃಷ್ಣಶರ್ಮರು ತಮ್ಮ "ಪರ್ಣಕುಟಿ"ಯಿಂದ ಪ್ರಖ್ಯಾತರಾದವರು. ಆ ಗದ್ಯದ ಶೈಲಿ ಅಪೂರ್ವವಾದ ಶೈಲಿ. ವ್ಯಕ್ತಿಯಂತೆ ಶೈಲಿ ಎಂಬ ನುಡಿಯುಂಟು. ಹೃದಯದಿಂದ ಹೊರಟ ಮಾತು ಆ ವ್ಯಕ್ತಿಯ ಇಡೀ ವಿವರವನ್ನೇ ಬಿಂಬಿಸುತ್ತದೆ. ಹಸ್ತಾಕ್ಷರವನ್ನು ನೋಡಿ ವ್ಯಕ್ತಿಯ ಗುಣಗಳನ್ನು ಕಂಡುಕೊಳ್ಳುವಂತೆ ಶೈಲಿಯ ವಿಮರ್ಶೆಯಿಂದಲೂ ವ್ಯಕ್ತಿತ್ವದ ಅರಿವು ಮೂಡುತ್ತದೆ. ಹಿತ–ಮಿತ–ಮೊನಚು ಅವರ ಶೈಲಿಯ ಗುಣ. ಅಪರೂಪ ಸಾರಗ್ರಾಹಿಯಾದ ಬುದ್ಧಿ. ಅವರೊಂದಿಗೆ ವಾದಮಾಡಿ ಜಯಿಸುವುದು ಕಷ್ಟ. ಅಷ್ಟು ಹರಿತ ಅವರ ಮತಿ. ಮಹಾತ್ಮ ಗಾಂಧೀ, ವಿನೋಬ ಮುಂತಾದ ನಾಡ ಹಿರಿಯರು ಇಂಗ್ಲೀಷಿನಲ್ಲಿ ಭಾಷಣ ಮಾಡುವಾಗ ಕೃಷ್ಣಶರ್ಮರ ಆಶು ಭಾಷಾಂತರವನ್ನು ಕೇಳಿ ಇಂಗ್ಲೀಷಿಗಿಂತ ಕನ್ನಡ ಚೆನ್ನ ಎನ್ನದವರಾರು? ಎಷ್ಟು ಚೆನ್ನವೊ ಅಷ್ಟೇ ಖಚಿತವಾದದ್ದು ಅವರ ಅನುವಾದ. ಮಾತಿನೊಡನೆ ಮಾತು, ವಾಕ್ಯಕ್ಕೆ ವಾಕ್ಯ–ಈಡಿಯಮ್ಮಿಗೆ ಪ್ರತಿ ಈಡಿಯಮ್ಮು. ಹಾಳತವಾದ ಕನ್ನಡ ಈ ಅನುವಾದದೊಂದಿಗೆ ಸಮಸ್ಪರ್ಧಿಯಾಗಿ ನಿಲ್ಲುವುದು ಮತ್ತೊಂದು ಶರ್ಮರ ಭಾಷಾಂತರ. ಆ ಸೊಗಸು ಬೇರೆ ಗಜಗಾಂಭೀರ್ಯದ್ದು. ಈ ಸೊಗಸು ಬೇರೆ ಜಾತ್ಯಶ್ವದ ನಡೆಯ ಬೆಡಗಿನದು

ಕೃಷ್ಣಶರ್ಮರದು ಬಹಳ ಸುಸಂಸ್ಕೃತವಾದ ಮನೆತನ. ಇವರ ಹಿರಿಯರು ಊರಿಗೇ ಗುರುಗಳೆನಿಸಿ ಪಲ್ಲಕ್ಕಿಯಲ್ಲಿ ಮೆರೆದವರು. ಶರ್ಮರು ಆ ಸಂಸ್ಕೃತಿಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಸೆರೆಮನೆಗೆ ಹೋದರು. ಜೀವ ವೈರಿಗೆ ಬಿಟ್ಟರು. ಆದರೆ ಧ್ಯೇಯ ಪ್ರೀತಿಯನ್ನೂ ನಿಷ್ಠೆಯನ್ನೂ ಬಿಡಲಿಲ್ಲ. ಇವೆರಡೂ ಮನೆತನದ ಕೊಡುಗೆ. ಅಂತಃಕರಣವನ್ನು ಆದಷ್ಟು ಶುಚಿಯಾಗಿರಿಸಿಕೊಳ್ಳಬೇಕೆಂಬ ಶ್ರದ್ಧೆಗೆ ಈತ ಪಕ್ಕಾದರು. ರಾಜಕಾರಣಿಯಾಗಲಿಲ್ಲ ಶರ್ಮರು. ಆಂಧ್ರದೇಶದಲ್ಲಿ ಈತ ಮಂತ್ರಿಯಾಗುವುದು ಅಷ್ಟೇನೂ ದೊಡ್ಡ ಮಾತಾಗಿರಲಿಲ್ಲ. ಆ ಪ್ರಲೋಭನಕ್ಕೆ ಈತ ಒಳಗಾಗದಿದ್ದದ್ದೂ ಇವರ ಮನೋದಾರ್ಢ್ಯವನ್ನೂ ಹಿರಿಮೆಯನ್ನೂ ತೋರಿಸುತ್ತದೆ. ಇಲ್ಲಿನ ನಾಯಕರ ಅಪ್ತ

ರಾಗಿಯೂ ಇವರು ಆ ಸಲಿಗೆಯನ್ನು ತಮ್ಮ ಯಾವ ಪ್ರಯೋಜನಕ್ಕೂ ಬಳಸಿ ಕೊಳ್ಳಲಿಲ್ಲ. ಸಮಸ್ಯೆಯನ್ನು ತಂದರೆ ತಕ್ಕ ಪರಿಹಾರ ಹೇಳಿ ಸುಮ್ಮನಾಗುವುದು. ಇಷ್ಟಕ್ಕೆ ನಿಂತಿತು ಇವರ ರಾಜಕೀಯಕಾಂಕ್ಷೆ. ಮೊದಲು ಗಾಂಧಿ ಈಗ ವಿನೋಬ ಇವರ ಹಿಡಿತಕ್ಕೆ ಸಿಕ್ಕಿದವರಿಗೆ ಸೇವಾದೀಕ್ಷೆ ಹೊರತು ಮತ್ತೇನು ಕಾದಿದೆ ? ಶರ್ಮರು ಈ ದೀಕ್ಷೆಯನ್ನು ಸ್ವಂತ ಇಚ್ಛೆ ಸಂತೋಷವಾಗಿ ಸ್ವೀಕರಿಸಿದರು. ಕಾರಣ ಈ ಅಂತಃ ಶುಚಿತಾ ಶ್ರದ್ಧೆ. ಅದು ಮಲ್ಲೇಶ್ವರಕ್ಕೆ ಒಂದು ಗಾಂಧೀ ಸಾಹಿತ್ಯ ಸಂಘವನ್ನು ನಿರ್ಮಿಸಿಕೊಟ್ಟಿತು. ಸರ್ವೋದಯ ಧ್ಯೇಯಕ್ಕೆ ಅದೊಂದು ಆಕರವಾಯಿತು. ಅನೇಕ ಯುವಕರು ಈ ಸಂಘಕ್ಕೆ ಬೆಂಬಲವಾಗಿ ನಿಂತಿದ್ದಾರೆ. ಯುವಕರು ಯಾವಾಗಲೂ ಅನ್ಯಾಯಕ್ಕೆ ಹೇಸುವವರು, ಮೌಲ್ಯಕ್ಕೆ ಒಲಿಯುವವರು, ಧ್ಯೇಯಕ್ಕೆ ಮಣಿಯುವವರು. ಅವರಿಗೆ ಹೃದಯವಂತಿಕೆ ಹೆಚ್ಚು, ಧ್ಯೇಯಪರರಿಂದ ಅವರು ಸಹಜವಾಗಿ ಆಕರ್ಷಿತರಾಗುತ್ತಾರೆ. ಕೃಷ್ಣಶರ್ಮರು ಈ ಯುವಕ ವೃಂದಕ್ಕೆ ಸೂಜಿಗಲ್ಲಾದರು. ಅವರ ಪ್ರಭಾವಕ್ಕೆ ಸಿಕ್ಕಿದ ತರುಣರಲ್ಲಿ ದೇಶಪ್ರೇಮ, ನಿಷ್ಕಾಮ ಸೇವಾಕಾಂಕ್ಷೆ, ಶುಚಿತೆ, ಕಾರ್ಯಶ್ರದ್ಧೆ ಮೊದಲಾದ ಸದ್ಗುಣಗಳು ಸ್ವಭಾವಸಿದ್ಧವೋ ಎಂಬಂತೆ ಕಾಣಿಸಿಕೊಳ್ಳುತ್ತವೆ. ಇವರಿಗೆ ಡಂಭವಿಲ್ಲ, ಜಂಬವಿಲ್ಲ, ಫ್ಯಾಷನ್ನಿಗೂ ಇವರಿಗೂ ತುಂಬ ದೂರ. ಇದೊಂದು ವಿಲಕ್ಷಣವಾದ ತರುಣರ ದಂಡು. ಸಿನಿಮಾ ನಟರು ಹರಡುವ ಕೆನ್ನೆಮೀಸೆ ತುಂಡುಮೀಸೆ, ಪರಚಲು ತಲೆ, ಬಿಗಿ ಷರಾಯಿ, ರಂಗಿನ ಷರಟು ಯಾವುದೂ ಇವರನ್ನು ಸೋಕವು. ಶರ್ಮರ ಪ್ರಭಾವ ನಿಜವಾಗಿ ಬಲಯುತ ವಾದದ್ದು. ಬೆಂಗಳೂರಿನಲ್ಲಿ ಗಾಂಧಿ ಸ್ಮರಣೆ ಜೀವಂತವಾಗಿರುವುದು ಈ ಸಾಹಿತ್ಯ ಸಂಘದಲ್ಲಿ. ಈ ತರುಣ ವೃಂದದಲ್ಲಿ ಶರ್ಮರ ಈ ಸಂಘ ಸ್ಥಾಪನೆ ಮತ್ತು ಈ ತರುಣರ ತರಪೇತಿ ಇದನ್ನು ಎಷ್ಟು ಪ್ರಶಂಸಿದರೂ ಸ್ವಲ್ಪವೇ ಎನಿಸುತ್ತದೆ.

ಶರ್ಮರು ನನ್ನಲ್ಲಿ ವಿಶೇಷವಾದ ಮಮತೆಯನ್ನು ತೋರಿಸಿದ್ದಾರೆ. ಈ ಮಮತೆ ಬಹು ಬೆಲೆಯುಳ್ಳದ್ದು. ಇದರಿಂದ ಅವರ ಸಹೃದಯತೆ ಎದ್ದು ಕಾಣುತ್ತದೆ. ಈಚೀಚೆಗೆ ಅವರ ದೇಹಪ್ರಕೃತಿ ದುರ್ಬಲಗೊಳ್ಳುತ್ತಿದೆ. ಗಾಂಧಿ ಮೊದಲಾದ ಹಿರಿಯರು ನೆನೆದ ನಿಟ್ಟಿನಲ್ಲಿ ನಾಡು ಓಡುತ್ತಿಲ್ಲ. ಆ ಹಿರಿಯರದಷ್ಟು ಸ್ಪಷ್ಟ ದೃಷ್ಟಿ ಈಗ ನಾಡ ಮುಖಂಡರಲ್ಲಿ ಕಾಣುತ್ತಿಲ್ಲ. ಎಲ್ಲ ನಾಡುಗಳಂತೆ ಭಾರತವೂ ಅರ್ಥ-ಕಾಮೈಕ ದೃಷ್ಟಿಯಾಗಿ ನಡೆಯಹತ್ತಿದೆ. ಧರ್ಮದ ಹತೋಟಿಗೆ ಇದು ಸಿಕ್ಕುವಂತೆ ರಾಜಕೀಯ ಆರ್ಥಿಕ ನೀತಿಗಳು ನಿಯೋಜಿತವಾಗುತ್ತಿಲ್ಲ. ಇಂಥ ಆಲೋಚನೆಗಳಿಂದ ಕೃಷ್ಣಶರ್ಮರ ಮನಸ್ಸು ಅಧೀರವಾಗಿದೆಯೋ ಏನೋ. ಆದರೆ ಜಗನ್ನಿಯಮಕ ನೊಬ್ಬನಿದ್ದಾನೆ, ಆತನ ಇಚ್ಛೆಯಂತೆ ಸಕಲವೂ ಜರಗುತ್ತಿದೆ. ಅದರ ಪರಿವೆ-ಆದಿ ಅಂತ್ಯಗಳು ನಮಗೆ ಅಗೋಚರ. ಈ ತೆರದ ಒಂದು ಸಮಾಧಾನಕರವಾದ ಪ್ರಜ್ಞೆಯಲ್ಲಿ ನಾವು ಸ್ವಲ್ಪ ಧೈರ್ಯತಾಳಬಹುದು.

ಮುಖ್ಯ ಸಕಲಕ್ಕೂ ಔಷಧಿ ಪ್ರೇಮ. ತಮ್ಮ ನಾಡವರ ಪ್ರೇಮ ತಮಗೆ ವಿಪುಲವಾಗಿ ಉಂಟು ಎಂಬ ತಿಳಿವಳಿಕೆ ಈ ಉತ್ಸವದಿಂದ ಈ ಒಲುಮೆಯ ಕೊಡುಗೆಯಿಂದ ಶರ್ಮರಿಗೆ ಮುಟ್ಟೀತು. ಈ ಸಂಜೀವಿನಿಯಿಂದ ಅವರು ಪುನಃ ನಮ್ಮ ನಡುವೆ ಓಡಾಡಿಕೊಂಡು ಅನೇಕ ಮಂಗಳ ಕಾರ್ಯಗಳಿಗೆ ಸ್ಫೂರ್ತಿ ಕೊಟ್ಟಾರು ಎಂದು ನಾವೆಲ್ಲ ಹಾರೈಸುತ್ತೇವೆ. ಭಗವಂತ ಶ್ರೀ ಶರ್ಮರಿಗೆ ಸಂಪೂರ್ಣ ಆರೋಗ್ಯವನ್ನು ಕರುಣಿಸಿ ಸಂತೋಷವಾಗಿ ಬಹಳ ಕಾಲ ಇಟ್ಟಿರಲಿ ಎಂದು ಪ್ರಾರ್ಥಿಸುತ್ತೇನೆ.

# ಪ್ರತಿಭಾಶಾಲಿ

ಶ್ರೀನಿವಾಸ ತೋಳಪ್ಪಾಚಾರ್ಯ

ಶ್ರೀಮಾನ್ ಸಿದ್ದಪ್ಪನಹಳ್ಳಿ ಕೃಷ್ಣಶರ್ಮರು ಕರ್ಣಾಟಕದಲ್ಲಿ ಪ್ರಸಿದ್ಧ ಪುರುಷರು. ಇವರ ವ್ಯಕ್ತಿತ್ವ ಅಸಾಧಾರಣ. ಯೋಧರು, ವಾಗ್ಮಿಗಳು, ಸಾಹಿತಿಗಳು, ವಿಮರ್ಶಕರು. ರಾಜಕಾರಣರಂಗದಲ್ಲೂ ಸಾಹಿತ್ಯ ರಂಗದಲ್ಲೂ ಸವ್ಯಸಾಚಿತ್ವವನ್ನು ಮಾಡಿದವರು. ಒಟ್ಟಿನಲ್ಲಿ ಬಹುಮುಖ ಪ್ರಜ್ಞಾಶಾಲಿಗಳೆಂದರೆ ತಪ್ಪಾಗಲಾರದು.

ಗಾಂಧೀ ಶಕದಲ್ಲಿ ಅನೇಕರು ಚಳುವಳಿಯಲ್ಲಿ ಭಾಗವಹಿಸಿದರು. ಈ ರಂಗದಲ್ಲಿ. ಶ್ರೀ ಕೃಷ್ಣಶರ್ಮರೂ ಭಾಗವಹಿಸಿದ್ದರೆಂಬುದನ್ನು ನಾವು ಮರೆಯಲಾಗದ್ದು ಉದ್ದಾಮ ಜಟ್ಟಿಗಳೆಷ್ಟೋ ಜನರು ತೆರೆಯಮರೆಗೆ ಹೋದರು. ಅವರ ಹೆಸರುಗಳನ್ನೂ ಜ್ಞಾಪಕದಲ್ಲಿಡುವ ತಾಳ್ಮೆ ಶ್ರದ್ಧೆ ನಮಗೆ ಈಗ ಇಲ್ಲ. ಅಧಿಕಾರಕ್ಕೆ ಮುನ್ನುಗು ವವರನ್ನು ಮಾತ್ರ ಅಗ್ರಗಣ್ಯರಾಗಿ ಈಗ ಭಾವಿಸುತ್ತಿದ್ದೇವೆ.

ರಾಜಕಾರಣ ರಂಗದಲ್ಲಿ ಶ್ರೀ ಕೃಷ್ಣಶರ್ಮರ ಸೇವೆ ಗಣನೀಯವಾದದು. ಹೈದರಾಬಾದು ಸಂಸ್ಥಾನವಾಗಿರುವಾಗ ಅಲ್ಲಿ ಚಳುವಳಿಯನ್ನು ಪ್ರಾರಂಭಿಸಿದವರಲ್ಲಿ ಇವರೇ ಮುಖ್ಯರು. ಕೊನೆಗೆ ಆ ಸಂಸ್ಥಾನದಿಂದ ಬಹಿಷ್ಕೃತವಾಗಿ ಹೊರಗೆ ಬಂದರು. ಅಂದಿನಿಂದ ಗಾಂಧೀಜಿ ಮತ್ತು ಜವಹರಲಾಲರೊಂದಿಗೆ ಸನ್ನಿಹಿತವಾಗಿ States Reorganising Committee ಯಲ್ಲಿ ಕೆಲವು ಕಾಲ ಸೇವೆ ಸಲ್ಲಿಸಿದರು. ಕೆಲವು ಕಾಲದ ನಂತರ ಮೈಸೂರು ಸಂಸ್ಥಾನದ ಚಳುವಳಿಯಲ್ಲಿ ಭಾಗವಹಿಸಿ ಜೈಲಿಗೂ ಹೋದರು.

ಇವರ ಕರ್ತವ್ಯ ನಿಷ್ಕಾಮಕರ್ಮವಾಗಿತ್ತು. ಇವರ ತ್ಯಾಗಬುದ್ಧಿ ಗಣನೀಯ. ಇವರು ಅಪೇಕ್ಷಿಸಿದ್ದರೆ ಮೊದಲನೇ ಕಾಂಗ್ರೆಸು ಮಂತ್ರಿ ಮಂಡಲದಲ್ಲೇ ಮೈಸೂರಿಗೆ ಮಂತ್ರಿಯಾಗಬಹುದಾಗಿತ್ತು–ಇವರಿಗೆ ಕರೆ ಬಂದರೂ ಅತ್ತ ಕಡೆ ಗಮನ ಕೊಡದೆ ಸಾಮಾಜಿಕ ಕಾರ್ಯಕ್ರಮದಲ್ಲಿ ತೊಡಗಿ ಸಾಹಿತ್ಯ ಸೇವೆಯನ್ನೂ ಮಾಡಿದರು.

ಇವರ ಭಾಷಣಗಳು ಹುರುತಾಗಿರುತ್ತವೆ. ಆಯಾ ಪ್ರಾಂತೀಯ ಭಾಷೆಯ ಬಳಿಕೆ ಮಾತುಗಳನ್ನು ಉಪಯೋಗಿಸಿ ಸಮಯ ಸಂದರ್ಭಕ್ಕೆ ತಕ್ಕಂತೆ ಮಾತನಾಡು

ತ್ತಾರೆ. ಇವರ ಭಾಷೆ ಬಹಳ ಸರಳ–ಚಿಕ್ಕ ಚಿಕ್ಕ ವಾಕ್ಯಗಳು ಮನಸ್ಸಿಗೆ ಬೇಗ ನಾಟುತ್ತವೆ.

ಇವರ ವಿಮರ್ಶೆ ಬಹಳ ಸೂಕ್ಷ್ಮ. ಆಳವಾದ ಪರಿಶೋಧನೆಯಿಂದ ಸಾಧಕ ಬಾಧಕಗಳನ್ನು ಚರ್ಚಿಸಿ ವಿಷಯವನ್ನು ಸ್ಪಷ್ಟವಾಗಿಯೂ ಧೈರ್ಯವಾಗಿಯೂ ಹೇಳುವ ಸ್ವಭಾವ ಇವರದು. ಕಟುವಾಗಿ ಟೀಕೆಮಾಡದಿದ್ದರೂ ಗಂಭೀರವಾಗಿ ಹೇಳುವ ರೀತಿ ಗಮನಾರ್ಹ. ಇವರೊಂದಿಗೆ ಮಾತನಾಡುವುದೇ ಒಂದು 'Education'. ಅವರ ಸ್ಥಿರವಾದ ಅಭಿಪ್ರಾಯಗಳು ಸತ್ಯ ಸಿದ್ಧಾಂತದ ಮೇಲೆ ಅಳವಡಿಸಿಕೊಂಡಿದ್ದಾರೆ; ಕಾಲ ಬದಲಾದರೂ ಅವರ ಅಭಿಪ್ರಾಯಗಳು ಬದಲಾಗುವಂತಿಲ್ಲ, ಕಾರಣ ಸತ್ಯ ಯಾವಾಗಲೂ ಒಂದೇ.

ಇವರ ವಾಕ್ಯರಚನೆಯಲ್ಲಿ ಒಂದು ಪ್ರತ್ಯೇಕತೆಯುಂಟು. ಸರಳವಾದ ಚಿಕ್ಕ ಚಿಕ್ಕ ವಾಕ್ಯಗಳಿಂದ ದೊಡ್ಡ ವಿಷಯಗಳನ್ನು ಅತಿ ಸುಲಭವಾಗಿ ವ್ಯಕ್ತಪಡಿಸುವ ಶೈಲಿ ಇವರ ವಿಶಿಷ್ಟತೆ. ಒಂದು ವಾಕ್ಯವನ್ನು ಓದುವಾಗಲೇ ಇದು ಕೃಷ್ಣಶರ್ಮರ ಶೈಲಿ ಎನ್ನಬಹುದು. ಗಾಂಧೀ ಸಾಹಿತ್ಯವನ್ನು ಆಮೂಲಾಗ್ರವಾಗಿ ಇವರು ಕನ್ನಡದಲ್ಲಿ ಬರೆದಿದ್ದಾರೆ. ಇವರ ದೀಪಮಾಲೆ–ಪರ್ಣಕುಟಿ ಎಷ್ಟು ಸಲ ಓದಿದರೂ ತೃಪ್ತಿ ಇರಲಾರದು. ಈಚೆಗೆ ಅವರ ಕೃಷ್ಣಾವತಾರ–ರಾಮಾವತಾರ ಕನ್ನಡದಲ್ಲಿ ಬರೆದು ಭಾಗವತ–ರಾಮಾಯಣಗಳನ್ನು ಆಬಾಲವೃದ್ಧರೂ ಓದಲು ಒದಗಿಸಿಕೊಟ್ಟಿದ್ದಾರೆ.

ವಿನೋಬಾಜಿಯವರ ಪ್ರಭಾವಕ್ಕೆ ಒಳಗೊಂಡು ಸರ್ವೋದಯ ಪತ್ರಿಕೆಯನ್ನು ಕನ್ನಡದಲ್ಲಿ ಪ್ರಕಟಿಸಿ ಸಮಾಜಜೀವನವನ್ನು ಆಧ್ಯಾತ್ಮಿಕ ದೃಷ್ಟಿಯಿಂದ ನೋಡಬೇಕೆಂದು ಸಾರಿದ ಬಹುಮುಖ ಪ್ರತಿಭಾಶಾಲಿ.

# 'ಪ್ರಬುದ್ಧ ಲಿಪಿಗಾರ'

ಕೆ. ಪಟ್ಟಾಭಿರಾಮನ್

'ಸಿದ್ಧವನಹಳ್ಳಿ'ಯವರೆಂದು ಹೆಸರಾಂತ ಶ್ರೀಯುತರು ಬಹು ಜನಪ್ರಿಯರಾದ ಸಂಗಡಿಗರು. ಮಾತಿನ ಮಂಟಪದ ಪೂಜಾರಿಗಳನ್ನು ಯಾರು ತಾನೇ ಮರೆಯಲಾದೀತು.

ನಿಜಾಮರ ಆಘಾತವನ್ನು ಇದಿರಿಸಿ ಕಾದಾಡುವ ಸವಿಯನ್ನು ಕಂಡುಕೊಂಡರಿನ್ನ ಬಹುದೇನೋ. ಅನಂತರ ಇಮ್ಮಡಿಯಾದ ಸಿದ್ಧತೆಗಳಿಂದ ರಾಷ್ಟ್ರ ಜಾಗ್ರತಾ ಕಾರ್ಯದಲ್ಲಿ ಸಕ್ರಿಯ ಪಾತ್ರ ವಹಿಸಿ ಕೀರ್ತಿ ಗಳಿಸಿದ್ದಾರೆ. ಜನಸೇವೆಯಲ್ಲಿ ಜೀವವನ್ನು ಗಂಧದಂತೆ ತೆಯ್ದಿದ್ದಾರೆ. ಬಡವರಾಗಿ ಹುಟ್ಟಿ ಬಡತನದಲ್ಲೇ ಬೆಳೆದು ಬಡವರಾಗಿಯೇ ಮೆರೆಯುತ್ತಿರುವ ಶ್ರೀಯುತರ ತಪಸ್ವೀ ಜೀವನ ಆದರ್ಶನೀಯವಾಗಿದೆ.

ಗಾಂಧೀ ನಿರ್ಮಿತ ಕರ್ಮಕ್ಷೇತ್ರದಲ್ಲಿ ವಿಚಾರ ಕ್ರಾಂತಿಯ ಪ್ರಬುದ್ಧ 'ಲಿಪಿಗಾರ' ರೆಂದು ಅನಿಸಿಕೊಂಡಿದ್ದಾರೆ.

ಅವರ ವಿಚಾರ ಸರಣಿಯಲ್ಲಿ ಬುದ್ಧಿ ಭಾವಗಳ ಸಮ್ಮಿಲನ, ಅನುಭವ ಆಳದಿಂದ ಹೊರಹೊಮ್ಮುವ ರಸಕಿಡಿಗಳ ಪ್ರಕಾಶನ, ಮನಮೋಹಕ ಮಾತಿನ ಕೌಶಲ್ಯ ಇವೆಲ್ಲವೂ ಎದ್ದು ಕಾಣುತ್ತವೆ.

ಆನಂದ ಮಠದ ಸನ್ಯಾಸಿ ಬಾಯಿಂದ 'ವಂದೇ ಮಾತರಂ' ಸಮರ ಗೀತೆಯನ್ನು ಹೇಳಿಸಿದ ಬಂಕಿಂಚಂದ್ರ ಚಟರ್ಜಿ ಅಥವಾ ಪುದುಚೇರಿ ಮರೆಯಿಂದ 'ವಿಡುದಲೈ' ಜಯಗೀತೆಯನ್ನು ಹಾಡಿದ ಸುಬ್ರಮಣ್ಯ ಭಾರತಿ ಇವರುಗಳ ನೆನಪನ್ನು ಶರ್ಮರು ನಮಗೆ ತಂದುಕೊಡುತ್ತಿದ್ದಾರೆ ತಮ್ಮ ಶಬ್ದವ್ಯೂಹದಿಂದ.

ಶ್ರೀಯುತರು ಚಿರಾಯುವಾಗಿ ಬಾಳಲಿ.

# ಕೃಷ್ಣಶರ್ಮರ ಸಾಹಿತ್ಯ ಸಿದ್ಧಿ

ವಿನಾಯಕ ಕೃಷ್ಣ ಗೋಕಾಕ್

ಸ್ವಾತಂತ್ರ್ಯದ ಚಳವಳಿಯಲ್ಲಿ ಜೀವನಕ್ಕೆ ಹೊಸ ತಿರುವು ಬಂದಿರುವದನ್ನು ಸ್ವಾಗತಿಸಿ ನಿಯಾಮ್ ಕರ್ನಾಟಕದ ಸ್ವಾತಂತ್ರ್ಯಕ್ಕಾಗಿ' ಎಷ್ಟೋ ಯಾತನೆ ಗಳನ್ನು ಸಹಿಸಿ ಸರಕಾರದಿಂದ ಗಡಿಯಾಚೆ ದೂಡಿಸಿಕೊಂಡು ಬೆಂಗಳೂರಿಗೆ ಬಂದು ಮಲ್ಲೇಶ್ವರಂದಲ್ಲಿ ಶರ್ಮರು ಸ್ನೇಹಿತರೊಡನೆ ಸಹಕರಿಸಿ ಗಾಂಧೀ ವಾಚನಾಲಯವನು ಕಟ್ಟಿದರು. ಆ ಸಂಸ್ಥೆಯ ಅಭಿಮಾನಿಗಳೆಲ್ಲ ಶರ್ಮರ ಬಗ್ಗೆ ಅಪೂರ್ವ ಆದರವನ್ನು ತಾಳಿದ್ದಾರೆ.

ಶರ್ಮರು ಆಧುನಿಕ ಗದ್ಯ ಸಾಹಿತ್ಯದಲ್ಲಿ ಒಂದು ಹೊಸ ಚಿತ್ರವನ್ನೇ ಸಾಧಿಸಿದ್ದಾರೆ. ವರ್ಧಾಯಾತ್ರೆ, ನಿರ್ಭಾಗ್ಯ ಬೋರೆಗೌಡ ಹಾಗೂ ಅನೇಕ ವ್ಯಕ್ತಿಚಿತ್ರ ಗಳಲ್ಲಿ ಅವರು ಸಾಧಿಸಿದ ಸಾಹಿತ್ಯ ಸಿದ್ಧಿ ಅದ್ಭುತವಾಗಿದೆ. ಸಂಕ್ಷಿಪ್ತತೆ ಅವರ ಗದ್ಯ ಶೈಲಿಯ ವಿಶಿಷ್ಟ ಲಕ್ಷಣವಾಗಿದೆ. ಅತಿ ನಿಖರವಾದ ಮೊನೆ ಅದಕ್ಕಿದೆ. ಕರ್ನಾಟಕ, ಭಾರತ, ಯಾವ ವಿಶಾಲ ವಸ್ತುವನ್ನೂ ಆ ಶೈಲಿ ಪಚನಮಾಡಿಕೊಳ್ಳಬಹುದು.

ಶರ್ಮರ ಆಯುಷ್ಯದ ಉದ್ದಕ್ಕೆಲ್ಲ ಭಗವಂತ ಅವರಿಗೆ ಆರೋಗ್ಯ-ಸುಖ-ಶಾಂತಿ ಗಳನ್ನು ಕರುಣಿಸಲಿ.

# ಅನುಕರಣೀಯ ವ್ಯಕ್ತಿ

ಟೀಕೂರು ಸುಬ್ರಹ್ಮಣ್ಯಂ

ಕರ್ನಾಟಕದ ಹಿರಿಯ ಸಾಹಿತಿಗಳೂ ಮತ್ತು ಗಾಂಧಿ ಸ್ಮಾರಕ ನಿಧಿಯ ಸದಸ್ಯರೂ, ರಚನಾತ್ಮಕ ಸೇವಾ ಕ್ಷೇತ್ರಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ, ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ, ಅವರ ವ್ಯಕ್ತಿತ್ವ ಅನುಕರಣೀಯ.

ಅವರ ಆರೋಗ್ಯವು ಇತ್ತೀಚೆಗೆ ಚನ್ನಾಗಿಲ್ಲ. ಆರೋಗ್ಯ ಚನ್ನಾಗಿದ್ದ ಕಾಲಕ್ಕೆ ಗಾಂಧಿ ಸ್ಮಾರಕ ನಿಧಿಯ ಕಾರ್ಯ ಕಲಾಪಗಳಲ್ಲಿ, ಸಮ್ಮೇಳನಗಳಲ್ಲಿ ಮತ್ತು ಸಭೆಗಳಲ್ಲಿ ಮುಖ್ಯ ಪಾತ್ರ ವಹಿಸಿ, ರಚನಾತ್ಮಕ ದೃಷ್ಟಿಯಿಂದ ಕಾರ್ಯಗಳನ್ನು ನಡೆಸುತ್ತಿದ್ದರು. ತೀರ್ಮಾನಗಳನ್ನು ಶ್ರದ್ಧೆ ಮತ್ತು ಜಾಗರೂಕತೆಯಿಂದ ಪ್ರತಿ ಅಕ್ಷರ ಮತ್ತು ಶಬ್ದವನ್ನು ತುಲನ ಮಾಡುತ್ತಿದ್ದರು. ಕರ್ನಾಟಕದಲ್ಲಿ ನಮ್ಮ ಸಂಸ್ಕೃತಿಯ ಹಿನ್ನೆಲೆಯನ್ನು ಮರೆಯದೆ, ಆಧುನಿಕ ಪ್ರಗತಿಪರ ವಿಚಾರಗಳನ್ನು ಸಮನ್ವಯ ಮಾಡಿ ವ್ಯಕ್ತಮಾಡುತ್ತಿದ್ದರು.

ಸರಳ ಜೀವನ, ಮತ್ತು ರಚನಾತ್ಮಕ ದೃಷ್ಟಿ, ಅವರ ಕಾರ್ಯಕಲಾಪಗಳಲ್ಲಿ ಎತ್ತಿ ಕಂಡುಬರುವುವು. ಈ ಪೀಳಿಗೆಯ ಯುವಕರಿಗೆ ಮತ್ತು ಮುಂದಿನ ಪೀಳಿಗೆಯ ಜನರಿಗೆ, ಶ್ರೀ ಕೃಷ್ಣಶರ್ಮರ ಸಾಹಿತ್ಯ ಅತಿಶಯ ಉಪಯೋಗಕಾರಿಯಾಗುವುದು. ಮುಖ್ಯವಾಗಿ, ಮಹಾತ್ಮಗಾಂಧಿ ತತ್ವ ವಿಚಾರಗಳನ್ನು ರಚನಾತ್ಮಕ ಕಾರ್ಯಕ್ರಮಗಳ ತಿರುಳನ್ನು ಅಭ್ಯಾಸ ಮಾಡಲು ಮಾರ್ಗದರ್ಶಕವಾಗುತ್ತದೆ.

ಸಭೆಗಳ ಚರ್ಚೆಗಳಲ್ಲಿ ಅವರ ಸೂಕ್ಷ್ಮದರ್ಶಕತ್ವವು, ನಿಷ್ಪಕ್ಷಪಾತವಾದ, ನಿರ್ಭಯವಾದ ಧೋರಣೆ, ಸಮನ್ವಯ ದೃಷ್ಟಿ, ಅನುಕರಣೀಯವಾದುವುಗಳು.

# ಸಮತೂಕದ ಸಾಹಿತ್ಯ–ವ್ಯಕ್ತಿತ್ವ

ನಿರಂಜನ

೧೯೪೩ರ ನಡುವಿನಲ್ಲಿ ಅಖಿಲ ಭಾರತ ಪ್ರಗತಿಶೀಲ ಲೇಖಕರ ಸಮ್ಮೇಳನ ಮುಂಬಯಿಯಲ್ಲಿ ಜರಗಿತು. ಮಂಗಳೂರಿನಿಂದ ಸ್ವಯಂಪ್ರೇರಿತ ಪ್ರತಿನಿಧಿಯಾಗಿ ಆ ಸಮ್ಮೇಳನಕ್ಕೆ ನಾನು ಹೋಗಿದ್ದೆ. (ಆಗಿನ್ನೂ ೨೦ನ್ನು ಸಮೀಪಿಸುತ್ತಿದ್ದ ಹುಚ್ಚು ಹರೆಯ.)

'ಪ್ರಗತಿಶೀಲ ಲೇಖಕ' ಎಂಬ ಗುರುತು ಚೀಟಿಯೊಡನೆ ಮುಂಬಯಿಯಿಂದ ಹೊರಟವನು ಬೆಂಗಳೂರು ತಲಪಿದೆ.

ಕನ್ನಡದ ಖ್ಯಾತ ಸಾಹಿತಿ ಅ.ನ.ಕೃ.ರ ಭೇಟಿ ಆ ಪಯಣದ ಮುಖ್ಯ ಗುರಿ. ಅಲ್ಲದೆ, ಬಹಳ ದಿನಗಳಿಂದ ನೋಡಬೇಕು ನೋಡಬೇಕು ಎಂದು ನಾನು ಬಯಸುತ್ತಿದ್ದ ಇನ್ನೊಬ್ಬರು ಬೆಂಗಳೂರಿನಲ್ಲಿದ್ದರು ಪಡಗೇನಹಳ್ಳಿ ಅಶ್ವತ್ಥನಾರಾಯಣರಾಯರು ; 'ಬಿಡುಗಡೆಯ ಬೆಲೆ' ಗ್ರಂಥದ ಕರ್ತೃ.

ಅದು ನಾನು ಬಹಳವಾಗಿ ಮೆಚ್ಚಿಕೊಂಡಿದ್ದ ಪುಸ್ತಕ. ಎರಡು ವರ್ಷಗಳಿಗೆ ಹಿಂದೆ 'ಮನೋಹರ ಗ್ರಂಥಮಾಲೆಯಲ್ಲಿ ನನಗೆ ಮೆಚ್ಚುಗೆಯಾದ ಗ್ರಂಥ' ಎಂಬ ಒಂದು ಪ್ರಬಂಧವನ್ನು ಬರೆದಿದ್ದೆ–ಮನೋಹರ ಗ್ರಂಥಮಾಲೆಯ ಪ್ರಬಂಧ ಸ್ಪರ್ಧೆಗಾಗಿ. 'ಇಜ್ಜೋಡು' ಕಾದಂಬರಿಯನ್ನು ಕುರಿತ ಪ್ರಬಂಧಕ್ಕೆ ಪ್ರಥಮ ಸ್ಥಾನ ದೊರೆಯಿತು. ಆ ಪ್ರಬಂಧವೂ ನನ್ನದೂ ೧೯೪೨ರಲ್ಲಿ 'ಜೀವನ' ಪತ್ರಿಕೆಯಲ್ಲಿ ಪ್ರಕಟವಾದುವು.

ಅಶ್ವತ್ಥನಾರಾಯಣರಾಯರು ಸ್ನೇಹಪರರು. ಬಹಳ ದಿನಗಳಿಂದ ಬಲ್ಲವರ ಹಾಗೆ ಆತ್ಮೀಯವಾಗಿ ಮಾತನಾಡಿದರು. ಸಂಜೆಯ ಹೊತ್ತು ಅವರ ಸ್ವದೇಶೀ ಭಂಡಾರದಿಂದ ಹೊರಬಿದ್ದು, ಇಂಡಿಯಾ ಕಾಫಿ ಬೋರ್ಡಿನವರ ಬಸ್ಸಿನ ಬಳಿ ಸಾರಿದೆವು.

ಕಾಫಿ ಕುಡಿಯುತ್ತಿದ್ದಾಗ (ಆ ವರ್ಷವಷ್ಟೇ ನಾನು ಕಾಫಿ ಸೇವನೆ ಆರಂಭಿಸಿದ್ದೆ) "ನನ್ನ ಶೈಲಿ ಸಿದ್ದವನಹಳ್ಳಿ ಕೃಷ್ಣಶರ್ಮರ ಶೈಲಿಯಹಾಗಿದೆ ಎಂದು ಬರೆದಿದ್ದಿರಿ," ಎಂದರು. "ಅವರನ್ನು ಕಂಡಿದ್ದೀರಾ ?" ಎಂದು ಕೇಳಿದರು.

"ಇಲ್ಲ," ಎಂದೆ.

"ನೀವು ಅವರನ್ನು ಕಾಣಬೇಕು"

"ಹುಂ."

ಅಶ್ವತ್ಥನಾರಾಯಣರಾಯರು ನಸುನಕ್ಕು ಅಂದರು :

"ಬಿಡುಗಡೆಯ ಬೆಲೆ ನಾನು ಬರೆದದ್ದು ಇಂಗ್ಲಿಷಿನಲ್ಲಿ. ಅದಕ್ಕೆ ಶರ್ಮರೇ ಕನ್ನಡ ರೂಪ ನೀಡಿದ್ದು."

ಶೈಲಿಯನ್ನು ಸರಿಯಾಗಿ ಗುರುತಿಸಿದೆ ಎಂದು ನನಗೆ ಹೆಮ್ಮೆ ಎನಿಸಿರಬೇಕು.

* * * *

ಮೂರನೆಯ ದಿನ ನಾನು 'ವಿಶ್ವಕರ್ಣಾಟಕ' ಕಾರ್ಯಾಲಯಕ್ಕೆ ಹೋದೆ. ಆ ಪತ್ರಿಕೆ ತನ್ನ ಉಜ್ವಲ ಇತಿಹಾಸದ ಕೊನೆಯ ಅಧ್ಯಾಯಗಳನ್ನು ಬರೆಯುತ್ತಿದ್ದ ಕಾಲ ಅದು. ಮಹಾದಂಡನಾಯಕ ತಿರುಮಲೆ ತಾತಾಚಾರ್ಯ ಶರ್ಮನ್ ಪೀಠದಲ್ಲಿ ಇರಲಿಲ್ಲ. ಕೆಲವೇ ನಿಮಿಷಗಳಲ್ಲಿ ಸಿದ್ಧವನಹಳ್ಳಿ ಕೃಷ್ಣಶರ್ಮರು ಬಂದರು. ಚುರುಕು ನಡಿಗೆ, ಚುರುಕು ಮಾತು. 'ಬಿಡುಗಡೆಯ ಬೆಲೆ'ಯಿಂದ ಸಂವಾದ ಸಂಪರ್ಕ ಆರಂಭವಾಯಿತು.

ನನ್ನ ದೃಷ್ಟಿಯಲ್ಲಿ ಕೃಷ್ಣಶರ್ಮರು 'ಪ್ರಗತಿಶೀಲರ ಪ್ರಗತಿಶೀಲರು.' ಅವರಿಲ್ಲದೆ ಅದೆಂಥ ಪ್ರಗತಿಶೀಲ ಸಾಹಿತ್ಯ? ಶರ್ಮರಾದರೋ ನೋಯುತ್ತಿದ್ದ ಜಾಗವನ್ನೇ ಬೆರಳಿನಿಂದ ಮುಟ್ಟಿದರು.

"ಇದು ಕಮ್ಯೂನಿಸ್ಟ್ ರಾಜಕೀಯ ಅಲ್ಲವೆ ಶಿವರಾಯರೆ?"

ಮಾತುಗಾರಿಕೆಯಲ್ಲಿ ನನಗೆ ಯಾವಾಗಲೂ ಕಡಮೆ ಅಂಕಗಳು. ಆ ಮಲ್ಲನಿಗೆ ನಾನು ಸಾಟಿಯೆ?

ಮತಾಂತರ ಕಾರ್ಯದಲ್ಲಿ ಸೋತು, ಸುಮ್ಮನಾದೆ.

"ನಾಲ್ಕು ದಿವಸ ಇರ್‍ತೀರೋ?"

"ಇಲ್ಲ, ರಾತ್ರಿ ಹೊರಡ್ತೇನೆ. ಮೈಸೂರಿಗೆ ಹೋಗಿಅಲ್ಲಿಂದ...."

"ಸರಿ, ಸರಿ."

ಕೇಳುವುದೋ ಬೇಡವೋ ಎಂದು ಅನುಮಾನಿಸಿ ಕಡೆಗೂ ಉಗುಳು ನುಂಗಿ ಧ್ವನಿ ಹೊರಡಿಸಿದೆ :

"ಇರುವ ದುಡ್ಡು ಪ್ರಯಾಣದ ಖರ್ಚಿಗೆ ಸಾಲದು. ಐದು ರೂಪಾಯಿ ಕೊಡಬಹುದೇ?"

ಆ ಸಾಲದ ಅನುಭವ ನನಗೆ ಮೊದಲಿನದು.

ಅವರ ಪಾಲಿಗೆ ಮಾತ್ರ ಅದೆಷ್ಟನೆಯ ಪ್ರಸಂಗವೊ?

ಚೀಟಿ ಬರೆದು ಕಳುಹಿಸಿದರು. ನೋಟು ಬಂತು. ಪರಿಚಯಕ್ಕೆ ಬಂದು, ಋಣಿಯಾಗಿ ಹೊರಟುನಿಂತೆ.

* * * *

ಗರಿಗೆದರಿದ ನನ್ನ ಬದುಕು ಪಶ್ಚಿಮ ಘಟ್ಟದ ಎತ್ತರವನ್ನು ದಾಟಿ ಬೆಂಗಳೂರು ಮುಟ್ಟಿತು. ಅದು 1945 ರ ಆರಂಭ.

ನಾನು ಬಂದದ್ದು 'ವಾಣಿ' ಎಂಬ ಮಾಸಪತ್ರಿಕೆಯ ಸಹ ಸಂಪಾದಕನಾಗಿ. ಆರ್ಥಿಕ ಅನುಕೂಲ ಇರದಿದ್ದ ಬಡ-ನಿಯತಕಾಲಿಕ ಅದು. ತೊಳಲಾಟ ಅನಿವಾರ್ಯವಾಯಿತು. ಇರಲು ವಾಸಕ್ಕೆ ಮನೆ ಹುಡುಕುವ ಪ್ರಮೇಯ. ಆಗ ನಾನಿದ್ದುದು ಮಲ್ಲೇಶ್ವರದಲ್ಲಿ.

ಶರ್ಮರ ಬಳಿಗೆ ಹೋಗಿ ಅಳಲನ್ನು ತೋಡಿಕೊಂಡೆ.

ಶ್ರೀನಿವಾಸಯ್ಯ ಅವರ ನೆಚ್ಚಿನ ಶಿಷ್ಯ. ಕರೆದು ಪರಿಚಯ ಮಾಡಿಕೊಟ್ಟರು.

ಶ್ರೀನಿವಾಸಯ್ಯನವರ ವಠಾರದಲ್ಲಿ ಪುಟ್ಟ ಮನೆಗಳಿದ್ದವು. ಒಂದರಲ್ಲಿ ನಾನು ನೆಲೆ ನಿಂತೆ. ಎಂಟು ರೂಪಾಯಿ ಬಾಡಿಗೆ. ಅವು, ಬದುಕನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದ, ಆದರ್ಶವೇ ಆಹಾರವಾಗಿದ್ದ ದಿನಗಳು. (ನನ್ನ ಪಾಲಿಗೆ ಅದು ಈಗಲೂ ನೆಮ್ಮದಿ ನೀಡುವ ನೆನಪು.)

ನಾನು ನಿರೀಕ್ಷಿಸಿದಷ್ಟು ಸುಲಭವಾಗಿರಲಿಲ್ಲ ಬರೆದು ಜೀವಿಸುವುದು. ನಾನಂತೂ ತೆರೆದ ಪುಸ್ತಕದ ಹಾಗೆ. ಪರಿಸ್ಥಿತಿಯನ್ನು ಶರ್ಮರು ಅರ್ಥಮಾಡಿಕೊಂಡರು.

ಹಣ ನೀಡಿದರು. ಋಣಭಾರ ಹೆಚ್ಚಾಯಿತೆನಿಸಿತು. ಬಹಾಉಲ್ಲಾ ಮತಕ್ಕೆ ಸಂಬಂಧಿಸಿದ ಒಂದು ಪುಟ್ಟ ಪುಸ್ತಕ ಕೊಟ್ಟು, "ಭಾಷಾಂತರಿಸಿ ಕೊಡಿ" ಎಂದರು. ಆ ಕೆಲಸ ಮುಗಿಸಿದಾಗ ಹೃದಯ ಹಗುರವಾಯಿತು.

[ಎಷ್ಟೋ ವರ್ಷಗಳಾದ ಮೇಲೆ ಒಬ್ಬರು ಕೇಳಿದರು :

"ಬಹಾಉಲ್ಲಾ ಧರ್ಮದಲ್ಲಿ ನಿಮಗೆ ಶ್ರದ್ಧೆ ಅಂತ ಗೊತ್ತಿರಲಿಲ್ಲ."

ಯಾವುದೋ ನೆನಪನ್ನು ಕೆದಕಿದಂತಾಗಿ ಅವರನ್ನೇ ನೋಡಿದೆ.

"ನೀವು ಭಾಷಾಂತರ ಮಾಡಿದ ಒಂದು ಪುಸ್ತಕವನ್ನ ರೈಲು ನಿಲ್ದಾಣದಲ್ಲಿ ನೋಡಿದೆ, ಎಂದರು.

"ಹೌದು, ಬಹಳ ಹಿಂದೆ ಮಾಡಿದ್ದು," ಎಂದೆ.

* * * *

ಧಾರವಾಡದ 'ದ. ಬಾ.' ತೀರಿಕೊಂಡಾಗ, ಅವರ ಕುಟುಂಬಕ್ಕೆ ನೆರವಾಗಲು ಒಂದಿಷ್ಟು ಹಣ ಕೂಡಿಸಬೇಕೆಂದು ಬೃಂದಾವನ ಪ್ರೆಸ್ಸಿನ ಎಂ. ಎಚ್. ಕೌಜಲಗಿ

ತಮ್ಮ ಪ್ರೆಸ್ಸಿನಲ್ಲಿ ಒಂದು ಸಭೆ ಕರೆದರು. ಸಭೆಗೆ ಬಂದವರು ಶರ್ಮಾಜಿ, ಸುರೇಂದ್ರ ದಾನಿ ಮತ್ತು ನಾನು.

ಇಂಥವೆಲ್ಲ ಸಾಮಾನ್ಯವಾಗಿ ಕೈಲಾಗದವರ ಸಭೆಗಳೇ. ಅಲ್ಲಿ ಹಣಕ್ಕಿಂತಲೂ ಹೇರಳವಾಗಿ ದೊರೆಯುವುದು ಸದ್ಭಾವನೆ. ತಮ್ಮ ವಾತ್ಸಲ್ಯಕ್ಕೆ ಪಾತ್ರನಾದ ಒಬ್ಬ ಗಾರ ಕೈ ಸೋತು ಬದುಕಿನ ಪ್ರವಾಹದ ಪಾಲಾಗಿದ್ದ. ಆ ಹೆಪ್ಪುಗಟ್ಟಿದ ಯಾತನೆಯನ್ನು ಹೊತ್ತೇ ಶರ್ಮರು ಅಲ್ಲಿಗೆ ಬಂದಿದ್ದರು.

* * * *

....ಇದನ್ನು ಬರೆಯುತ್ತ ನನ್ನಲ್ಲಿ ಒಂದು ಪ್ರಶ್ನೆ ರೂಪುಗೊಂಡಿದೆ.

'ಪರ್ಣಕುಟಿ' ಯಂಥ ಸಾವಿಲ್ಲದ ಸಾಹಿತ್ಯ ಒತ್ತಟ್ಟಿಗೆ, ಭವ್ಯ ಸೌಧದಂತಿರುವ ಶರ್ಮರ ವ್ಯಕ್ತಿತ್ವ ಇನ್ನೊತ್ತಟ್ಟಿಗೆ—ಇವೆರಡರಲ್ಲಿ ಯಾವುದರ ತೂಕ ಹೆಚ್ಚು ?

ತಕ್ಕಡಿ ತಡೆಯುವ ಭಾರವೆ ಇದು ? ತೂಗಿ ನೋಡುವ ಪ್ರಯತ್ನವನ್ನೆ ಕೈ ಬಿಡುವುದು ಮೇಲು.

ಸಾಹಿತ್ಯ ವ್ಯಕ್ತಿತ್ವಗಳೆರಡೂ ಸಮಸಮನಾಗಿ ಘನೀಭವಿಸಿರುವುದಕ್ಕೆ ಶ್ರೇಷ್ಠ ನಿದರ್ಶನ : ಶರ್ಮಾಜಿಯ ಗುಣಗಳು ಹಾಗೂ ಅವರ ಕೃತಿಗಳು.

ನನ್ನಂಥವನ ಪಾಲಿಗೆ ಶರ್ಮರ ಸಾಹಿತ್ಯ ಸಾಮಿಪ್ಯಗಳೆರಡರ ನೆನಪು, ಮುಗಿಯದ ಬುತ್ತಿ.

# ನುಡಿದಂತೆ ನಡೆದ ವ್ಯಕ್ತಿ

ಬಸವರಾಜ ಕಟ್ಟೀಮನಿ

"ರಾಯರ ಮನೆಯಿದ್ದುದು ಮಲ್ಲೇಶ್ವರದಲ್ಲಿ. ಮಲ್ಲೇಶ್ವರಕ್ಕಂತೂ ಸರಿಯೆ ; ಇಡಿಯ ಬೆಂಗಳೂರಿಗೆಲ್ಲ ಅವರ ಪರಿಚಿತರು. ಬೆಂಗಳೂರು ಮಾತ್ರವಲ್ಲ, ಕನ್ನಡ ನಾಡಿಗೆಲ್ಲ–ಅದೇಕೆ–ಹೊರನಾಡುಗಳಲ್ಲಿ ಸಹ ಅವರು ಪ್ರಸಿದ್ಧ ವ್ಯಕ್ತಿ. ರಾಯರು ಹೆಸರಾಂತ ಲೇಖಕರು, ನುರಿತ ವಾಗ್ಮಿ, ರಾಜಕಾರಣಪಟು, ಹಲವಾರು ಚಳವಳಿಗಳಲ್ಲಿ ಭಾಗವಹಿಸಿ ಅನೇಕಸಲ ಕಾರಾಗಾರ ಕಂಡವರು. ಕನ್ನಡ, ತೆಲುಗು, ಉರ್ದು, ಇಂಗ್ಲೀಷು, ತಮಿಳು ಇತ್ಯಾದಿ ಅನೇಕ ಭಾಷೆಗಳಲ್ಲಿ ಪ್ರಭುತ್ವವುಳ್ಳವರು. ಕರ್ನಾಟಕದ ಎಲ್ಲ ಕಡೆಗೂ ಸುತ್ತಿದ್ದಾರೆ, ಭಾಷಣ ಮಾಡಿದ್ದಾರೆ. ಭಾಷಣ ಎಂದರೆ ಅವರಿಗೆ ಸಂಭಾಷಣೆ ಇದ್ದ ಹಾಗೆ. ನಾಲ್ಕು ಜನರ ಕೂಟದಲ್ಲಿ ಮಾತನಾಡುವ ಹಾಗೆಯೆ ನಾಲ್ಕು ಸಾವಿರ ಜನರ ಸಮೂಹದಲ್ಲಿ ಮಾತನಾಡುವರು. ಎಲ್ಲ ಕಡೆಗೂ ಅದೇ ಸರಳತೆಯ, ಸಲುಗೆಯ, ಹಾಸ್ಯಪೂರ್ಣ ಮಾತುಗಾರಿಕೆ. ಮಾತನಾಡುವುದೂ ಒಂದು ಕಲೆಯೆಂದು ಹೇಳುವವರು ರಾಯರೊಡನೆ ಒಂದು ದಿನ ಇದ್ದು ನೋಡಬೇಕು; ತಮ್ಮ ಅಭಿಪ್ರಾಯ ತಪ್ಪಾದುದೆಂದು ಅವರಿಗೆ ಮನವರಿಕೆಯಾಗದಿರದು ; ಕಲೆ ಯಾವಾಗಲೂ ಕೃತ್ರಿಮತೆಯ ಕೂಸು. ರಾಯರ ಮಾತಿನಲ್ಲಾದರೋ ಕೃತ್ರಿಮತೆಯು ಒಂದು ಕಣವೂ ಕಾಣಸಿಗದು. ಝರಿಯಿಂದ ಹರಿಯುವ ನೀರಿನ ಹಾಗೆ ಒಂದೇ ಸಮನೆ ಗಂಟೆ ಗಂಟೆಗಳ ಕಾಲ ಮಾತು ಹೊರಡುತ್ತಿರುತ್ತದೆ ಅವರ ಮುಖದಿಂದ.

ರಾಯರ ತಾಯಿನುಡಿ ತೆಲುಗು. ಆದರೆ ನಾಲ್ಕಾರು ತಲೆಮಾರುಗಳಿಂದ ಅವರ ಮನೆತನ ಕರ್ನಾಟಕದಲ್ಲೇ ನೆಲೆಸಿದೆಯಾದುದರಿಂದ ಅವರು ಅಚ್ಚ ಕನ್ನಡಿಗರೇ ಆಗಿದಾರೆ. ಅವರ ಮನೆಯಲ್ಲೇನೋ ಈಗಲೂ ತೆಲುಗು ಮಾತೇ. ಆದರೂ ರಾಯರು ಹದಿನಾರಾಣೆ ಕನ್ನಡಿಗರು. ಇಂಗ್ಲೀಷಿನ ಮೋಹದ ಬಲೆಗೆ ಬಿದ್ದು 'ಸಾಹೇಬ'ರಾಗುತ್ತಿದ್ದ ಮೈಸೂರಿನ ಕನ್ನಡಿಗರಿಗೆ ಹಲವು ಸಲ ಛೀಮಾರಿ ಹಾಕಿ ಅವರನ್ನು ಕನ್ನಡದ ಕಡೆಗೆ ತಿರುಗಿಸಿದವರು ರಾಯರೇ.

ಯಾವಾಗಲೂ ಕನ್ನಡದಲ್ಲೇ ಮಾತನಾಡಬೇಕೆಂಬ ಹಟವಾದಿಗಳೇನೂ ಅವರಲ್ಲ. ಕನ್ನಡ ಮಾತನಾಡುವಷ್ಟೇ ಚೆನ್ನಾಗಿಯೆ ಅವರು ತೆಲುಗು, ತಮಿಳು, ಇಂಗ್ಲೀಷು, ಉರ್ದು ಮಾತನಾಡುತ್ತಾರೆ. ಆದರೆ, ಯಾವುದನ್ನೂ ಅನವಶ್ಯಕವಾಗಿ ಉಪ

ಯೋಗಿಸುವುದಿಲ್ಲ. ಕನ್ನಡ ಅರಿಯದ ಜನರ ಹತ್ತಿರ ಮಾತ್ರ ಅವರಿಗೆ ತಿಳಿಯುವ ಭಾಷೆ ಉಪಯೋಗಿಸುತ್ತಾರೆ.

"ರಾಯರು ಪ್ರಸಿದ್ಧ ಲೇಖಕರು ಎಂದು ಹೇಳಿತಲ್ಲ. ಅವರ ಶೈಲಿ ಬಲು ಮೋಹಕವಾದುದು. ವಿಷಯವನ್ನು ಹೇಳುವ ರೀತಿಯೂ ಅಷ್ಟೆ, ಬಲು ಸೊಗಸಾದುದು. ಅಂತೆಯೆ, ಅವರ ಒಂದೊಂದು ಪುಸ್ತಕ ಎಂಟು ಹತ್ತು ಮುದ್ರಣ ಕಂಡಿದೆ. ಮಕ್ಕಳು, ಯುವಕರು, ಪ್ರೌಢರು, ಮುದುಕರು ಎಲ್ಲರಿಗೂ ಅವರ ಪುಸ್ತಕಗಳೆಂದರೆ ಪ್ರೀತಿ.

"ಸುಪ್ರಸಿದ್ಧ ಲೇಖಕರಾದರೂ ರಾಯರಿಗೆ ಜಂಬ ಎನ್ನುವುದು ಕೊಂಚವೂ ಇಲ್ಲ. ಅವರ ಮುಖವೇ ಅದನ್ನು ಸೂಚಿಸುತ್ತದೆ. ನಲವತ್ತೈದು ವರ್ಷ ವಯಸ್ಸಾಗಿದ್ದರೂ ಹಾಲುಗಲ್ಲದ ಹಸುಳೆಯಂತಿರುವ ಮುಖವನ್ನು ಕಂಡವರು ಅವರ ಸರಳ ಹೃದಯವನ್ನು ಅರಿಯಬಲ್ಲರು. ಮೊದಲಿನಿಂದಲೂ ಸಾದಾ ಜೀವನ ನಡೆಸಿಕೊಂಡು ಬಂದುದರ ಪರಿಣಾಮವಾಗಿ ಅವರ ದೇಹ ಪ್ರಕೃತಿಯೂ ಚೆನ್ನಾಗಿದೆ. ಐದಡಿ ಎತ್ತರದ ಗಿಡ್ಡ ಆಕೃತಿ. ಆಚರೆ ಕೆಂಪಗೆ ಟ್ಯೊಮ್ಯಾಟೊ ಹಣ್ಣಿನಂತಿರುವ ಮೈ ಬಣ್ಣ. ಉಡುಗೆ ತೊಡುಗೆ ತೀರ ಸಾದಾ. ಒಂದು ಖಾದೀ ಬನೀನು, ಒಂದು ಖಾದೀ ಲುಂಗಿ, ಕಾಲುಗಳಲ್ಲಿ ಚಪ್ಪಲಿ ಸಹ ಇರುವುದಿಲ್ಲ. ಭುಜದ ಮೇಲೊಂದು ಚಿಕ್ಕ ಅಂಗವಸ್ತ್ರ. ಅದೂ ಒಮ್ಮೊಮ್ಮೆ ಇರುತ್ತದೆ, ಒಮ್ಮೊಮ್ಮೆ ಇರುವುದಿಲ್ಲ. ಕೈಯಲ್ಲಿ ಮಾತ್ರ ಯಾವಾಗಲೂ ಒಂದು ಚರ್ಮದ ಚೀಲ ಇದ್ದೇ ಇರುತ್ತದೆ. ಅದರಲ್ಲಿ ಅವರ ಇಡೀ ಪ್ರಪಂಚ : ಎಂದರೆ ಪುಸ್ತಕ ಪ್ರಪಂಚ!

"ರಾಯರ ದಿನಚರಿಯೂ ವಿಲಕ್ಷಣವಾದುದೇ. ಅವರ ಮನೆಯಿರುವುದೇನೊ ಮಲ್ಲೇಶ್ವರದಲ್ಲಿ. ರಾಯರು ಮಾತ್ರ ಅಲ್ಲಿ ಸಿಕ್ಕಲಾರರು. ಅವರನ್ನು ಕಾಣಲೆಂದು ಅವರ ಮನೆಗೆ ಹೋದವರೆಲ್ಲ ನಿರಾಶರಾಗುತ್ತಾರೆ. ಬೆಳಗಿನ ಏಳುಗಂಟೆಯೊಳಗಾಗಿ ಹೋದರೆ ಮಾತ್ರ ಮನೆಯಲ್ಲಿ ಅವರ ದರ್ಶನವಾದೀತು. ಏಳು ಗಂಟೆಯ ಅನಂತರ ಬೆಂಗಳೂರಿನಲ್ಲಿ ಎಲ್ಲಾದರೂ ಅವರನ್ನು ಕಾಣಬಹುದು. ಆರು ಗಂಟೆಗೆ ಹಾಸುಗೆಯಿಂದೆದ್ದು, ಸ್ನಾನ ತೀರಿಸಿಕೊಂಡು, ಒಂದು ಲೋಟ ಕಾಫಿ ಕುಡಿದು, ಕೈಯಲ್ಲಿ ಚರ್ಮದ ಚೀಲ ಹಿಡಿದು ಹೊರಟರೆಂದರೆ ಮುಗಿಯಿತು. ಮತ್ತೆ ಮನೆಯ ಮುಖ ನೋಡುವುದು ರಾತ್ರಿ ಹತ್ತಕ್ಕೊ, ಹನ್ನೆರಡಕ್ಕೊ! ಮಧ್ಯಾಹ್ನದೂಟ ಎಲ್ಲಾದರೂ ಆಗುತ್ತದೆ. ಆಗದಿದ್ದರೂ ಇಲ್ಲ. ಅವರಿಗಂತೂ ಊಟದ ನೆನಪೇ ಇರುವುದಿಲ್ಲ.

"ಏಳು ಗಂಟೆಯ ಹೊತ್ತಿಗೆ ರಾಯರು ಮನೆ ಬಿಟ್ಟು ಹೊರಟರೆಂದರೆ ಬಸ್ ಸ್ಟ್ಯಾಂಡಿಗೆ ಬರುವುದರೊಳಗಾಗಿ ಎಂಟು ಹತ್ತು ಜನ ಅವರನ್ನು ಸುತ್ತುವರೆಯುತ್ತಾರೆ. 'ನಮಸ್ಕಾರ ಸಾರ್', 'ನಮಸ್ತೆ', 'ಮಾರ್ನಿಂಗ್', 'ಸಲಾಂಸಾಬ್,' 'ನಮೋನಮಃ', 'ಶರಣು ಶರಣಾರ್ಥಿ,' ಇತ್ಯಾದಿ ಹಲ ಬಗೆಯ ಉದ್ಗಾರ ಕೇಳಿ ಬರುತ್ತವೆ. ಹನುಮಂತನ ಗುಡಿಯ ಪೂಜಾರಿಯಿಂದ ಹಿಡಿದು ತರಕಾರಿ ಮಾರುವ ಇಮಾಂ

ಸಾಹೇಬನವರೆಗೂ ಅವರ ಪರಿಚಯ. ಆ ಜಾತಿ ಈ ಜಾತಿ ಎಂಬ ಭೇದಭಾವ ರಾಯರ ಮಟ್ಟಿಗಂತೂ ಇಲ್ಲವೇ ಇಲ್ಲ. ಎಲ್ಲ ಜಾತಿಯವರೂ ತುಂಬಾ ಆತ್ಮೀಯತೆ ಯಿಂದ ಅವರ ಹತ್ತಿರ ಸುಖದುಃಖ ಹೇಳಿಕೊಳ್ಳುತ್ತಾರೆ. ರಾಯರು ಅವರೆಲ್ಲರನ್ನೂ ಗೌರವದಿಂದ ಮಮತೆಯಿಂದ ಕಾಣುತ್ತಾರೆ. ಅವರ ಮಕ್ಕಳು ಮರಿಗಳ ವಿಚಾರ ಕೇಳುತ್ತಾರೆ. 'ನಿಮ್ಮ ಗೋಪಿಗೆ ಈಗ ಆರೋಗ್ಯವೆ?', 'ನಿಮ್ಮ ರುಸ್ತುಂ ಓಡಾಡು ತ್ತಿರುವನೇ?', 'ಸರೋಜಳ ಮದುವೆ ವಿಚಾರ ಎಲ್ಲಿಗೆ ಬಂತು?' 'ನಿಮ್ಮ ಸಿದ್ದಯ್ಯ ಶಾಲೆಗೆ ಹೋಗುತ್ತಿರುವನೇ?' ಇತ್ಯಾದಿ ಪ್ರಶ್ನೆ ಹಾಕುತ್ತಾರೆ. ಅವರು ಹೇಳುವು ದನ್ನು ಸಮಾಧಾನದಿಂದ ಕೇಳಿಕೊಂಡು ಅಗತ್ಯವಿದ್ದಲ್ಲಿ ಸಲಹೆ ಕೊಡುತ್ತಾರೆ. ಈ ಮಾತುಕತೆಗಳಲ್ಲಿ ತಮ್ಮ ವೇಳೆ ಹಾಳಾಗುವುದಲ್ಲಾ—ಎಂಬ ವ್ಯಸನ ಅವರಿಗಿಲ್ಲ. ಇದೆಲ್ಲವೂ ವ್ಯರ್ಥವೆಂದು ಅವರಿಗನಿಸುವುದೇ ಇಲ್ಲ. ಅವರ ಮನೆಯಿಂದ ಬಸ್ ಸ್ಟ್ಯಾಂಡಿಗೆ ಒಂದು ಫರ್ಲಾಂಗ್ ದೂರ ಅಷ್ಟೆ. ಆದರೂ, ಒಂದೊಂದು ದಿನ ಅವರು ಬಸ್ ಸ್ಟ್ಯಾಂಡಿಗೆ ಬರುವುದಕ್ಕೇ ಹನ್ನೆರಡು ಗಂಟೆಯಾಗಿರುವುದೂ ಉಂಟು. ನಾಲ್ಕು ಗಂಟೆಗಳ ಕಾಲ ದಾರಿಯಲ್ಲಿಯೇ ಮಾತುಕತೆ!"

'ಜ್ವಾಲಾಮುಖಿಯ ಮೇಲೆ' ಎಂಬ ನನ್ನ ಕಾದಂಬರಿಯಲ್ಲಿ ಈ ರಾಯರ ದೊಂದು ಪ್ರಮುಖ ಪಾತ್ರ. ಈ ಪಾತ್ರರಚನೆಯ ಕಾಲಕ್ಕೆ ನನ್ನ ಕಣ್ಣೆದುರಿಗಿದ್ದವರು ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು. 'ಶರ್ಮ' ಎಂಬುದನ್ನು ಬಿಟ್ಟು 'ರಾಯರು' ಎಂದು ಕರೆದಿದೇನೆ ಅಷ್ಟೆ. ವರ್ಣನೆಯೆಲ್ಲವೂ ಶ್ರೀ ಕೃಷ್ಣಶರ್ಮರವರನ್ನೇ ಕುರಿತದ್ದು.

೧೯೪೦ ರಿಂದ ೧೯೫೦ ವರೆಗಿನ ಹತ್ತು ವರ್ಷಗಳಲ್ಲಿ ಬೆಂಗಳೂರಿನಲ್ಲಿ 'ಆಚಾರ್ಯ ಲೇಖಕ'ರಾಗಿದ್ದವರು ಇಬ್ಬರು ಶರ್ಮರು. 'ವಿಶ್ವಕರ್ನಾಟಕ'ದ ತಿರುಮಲೆ ತಾತಾ ಚಾರ್ಯ ಶರ್ಮ ಒಬ್ಬರು. 'ವಿಶ್ವಕರ್ನಾಟಕ'ದಲ್ಲಿದ್ದೂ ಇಲ್ಲದಂತಿದ್ದ ಸಿದ್ದವನಹಳ್ಳಿ ಕೃಷ್ಣಶರ್ಮರು ಇನ್ನೊಬ್ಬರು.

ಇಂದು, ಖ್ಯಾತ ಪತ್ರಕರ್ತರೂ ಕಾದಂಬರಿಕಾರರೂ ಬರಹಗಾರರೂ ಆಗಿರುವವ ರಲ್ಲಿ ಮುಕ್ಕಾಲು ಪಾಲು ಜನರಾದರೂ ಈ ಇಬ್ಬರು ಆಚಾರ್ಯ ಲೇಖಕರಿಗೆ ಒಂದಿಲ್ಲೊಂದು ರೀತಿಯಿಂದ 'ಶಿಷ್ಯ'ರಾಗಿದ್ದವರು. ಮುವತ್ತು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಲೇಖನ ವೃತ್ತಿಯಲ್ಲಿ ಮುಂದುವರಿಯಲು ಹೋರಾಡುತ್ತಿದ್ದವರಾರೂ ಈ ಆಚಾರ್ಯ ಲೇಖಕರ ಪ್ರಭಾವದಿಂದ ತಪ್ಪಿಸಿಕೊಳ್ಳಲು ಶಕ್ಯವಾಗಲಿಲ್ಲ. ಅದೊಂದು ದ್ರೋಣಾಚಾರ್ಯರ ಗರಡಿಯಿದ್ದಂತೆ ಇತ್ತು. ಲೇಖನಿಯ ಬಂಟರೆಲ್ಲರನ್ನೂ ಆ ಇಬ್ಬರು ಆಚಾರ್ಯರೂ ಪ್ರೀತಿ-ವಾತ್ಸಲ್ಯಗಳಿಂದ ಆಕರ್ಷಿಸುತ್ತಿದ್ದರು; ದೇಶಭಕ್ತಿ, ನಿರ್ಭೀತ-ನಿರ್ದಾಕ್ಷಿಣ್ಯ ಪ್ರವೃತ್ತಿ, ಸರಳತೆ, ಸಾದಾತನ, ಸ್ವತಂತ್ರ ಮನೋವೃತ್ತಿ- ಇಂಥ ಅಮೂಲ್ಯ ಗುಣ ವಿಶೇಷಗಳನ್ನು ಪುರಸ್ಕರಿಸಿ ಪೋಷಿಸಿ, ತೀಕ್ಷ್ಣ ಲೇಖನಿಯ ಸೈನಿಕರದೊಂದು ಪಡೆಯನ್ನೇ ಅವರು ಕಟ್ಟಿದರು.

೧೯೪೭ ರಿಂದ ೫೨ರವರೆಗೆ, ಐದು ವರ್ಷಗಳ ಕಾಲ ಶ್ರೀ ಸಿದ್ದವನಹಳ್ಳಿ ಕೃಷ್ಣ

ಶರ್ಮರ ಪ್ರಭಾವವಲಯದಲ್ಲಿದ್ದುಕೊಂಡು ಅವರಿಂದ ಸಾಕಷ್ಟು ಪ್ರೋತ್ಸಾಹವನ್ನೂ ಮಾರ್ಗದರ್ಶನವನ್ನೂ ಸ್ಫೂರ್ತಿಯನ್ನೂ ಪಡೆದ ಪುಣ್ಯ ನನ್ನದು.

ಕಥೆ–ಕಾದಂಬರಿ–ಕವಿತೆ ಇತ್ಯಾದಿ ಲಲಿತ ಸಾಹಿತ್ಯ ರಚಿಸುತ್ತಿದ್ದವರಿಗೆಲ್ಲ 'ಗುರು'ವಾಗಿ ಪ್ರೇರಿಸುತ್ತಿದ್ದ ಇನ್ನೊಂದು ವ್ಯಕ್ತಿ ಅದೇ ಕಾಲಕ್ಕೆ ಬೆಂಗಳೂರಿನಲ್ಲಿದ್ದಿತು. ಅವರ ವಿಚಾರಗಳು ಕೃಷ್ಣಶರ್ಮರಿಗಿಂತ ಹೆಚ್ಚು ಕ್ರಾಂತಿಕಾರಕವಾಗಿದ್ದರೂ ಆಚಾರ ಮಾತ್ರ ಸಮ್ಯಂಥವರಿಗೆ ಹಿಡಿಸುವಂಥದಾಗಿರಲಿಲ್ಲ. ನುಡಿ ಬೇರೆ, ನಡೆ ಬೇರೆ— ಆಗಿದ್ದಂಥ ಜನರನ್ನು ನಾನೆಂದೂ ಮೆಚ್ಚಿಕೊಂಡಿರಲಿಲ್ಲ. ಎಂತಲೇ, 'ಯುವಕ ಲೇಖಕ'ರ ಗುರುವೂ ಮಿತ್ರನೂ ಆಗಿದ್ದ ಆ ವ್ಯಕ್ತಿಯ ಜೊತೆಗೆ ನಾನು ವಿಶೇಷವಾಗಿ ಬೆರೆಯಲಿಲ್ಲ.

ಪಂಪನ ಬನವಾಸಿಯನ್ನು ನೆನಪಿಗೆ ತಂದುಕೊಡುವ ಸುಂದರ ಗಿಡಮರಗಳಿಂದ ತುಂಬಿದ ಮಲ್ಲೇಶ್ವರದ ಬಾಡಿಗೆ ಮನೆಯೊಂದರಲ್ಲಿ ಆಗ ನೆಲಸಿದ್ದರು ಕೃಷ್ಣಶರ್ಮರು. ಅಂಗಳದಲ್ಲಿ ಚಾಪೆಯೊಂದರ ಮೇಲೆ ಕುಳಿತು ಬಂದವರೊಡನೆ ಸರಸಸಲ್ಲಾಪದಲ್ಲಿ ತೊಡಗಿರುತ್ತಿದ್ದ ಅಂದಿನ ಅವರ ಹಸನ್ಮುಖ ಇಂದಿಗೂ ನನ್ನ ನೆನಪಿನಲ್ಲಿದೆ. ಅವರು ಶ್ರೇಷ್ಠ ದರ್ಜೆಯ ಲೇಖಕರಾಗಿದ್ದಂತೆಯೇ ಕುಶಲ ಸಂಘಟಕರೂ ಆಗಿದ್ದರು. 'ಗಾಂಧೀ ಸಾಹಿತ್ಯ ಸಂಘ'ವನ್ನು ಕಟ್ಟಿ, ನೂರಾರು ಜನ ಆದರ್ಶವಾದಿ ಯುವಕರನ್ನು ರಾಷ್ಟ್ರ ಸೇವೆಗೆ ಅಣಿಗೊಳಿಸಿದ ಕೀರ್ತಿ ಕೃಷ್ಣಶರ್ಮರದು.

ಬೆಂಗಳೂರಿನಲ್ಲಿ ಕನ್ನಡ ಚಳುವಳಿ ಕೇವಲ ಇತ್ತೀಚೆಗೆ ಆರಂಭವಾಯಿತೆಂಬ ತಪ್ಪು ತಿಳುವಳಿಕೆಯೊಂದು ಜನರಲ್ಲಿದೆ. ಆದರೆ ಮೂವತ್ತು ವರ್ಷಗಳಷ್ಟು ಹಿಂದೆಯೇ ಕನ್ನಡಿಗರಲ್ಲಿ ಕನ್ನಡದ ಬಗೆಗೆ ಅಭಿಮಾನವನ್ನುಂಟುಮಾಡಿ, ಇಂಗ್ಲೀಷಿನ ಬಗೆಗಿದ್ದ ಮೋಹವನ್ನು ಅಳಿಸಿ ಹಾಕಲು ತಮ್ಮ ಲೇಖನಗಳ ಮೂಲಕ, ಭಾಷಣಗಳ ಮೂಲಕ ಕೃಷ್ಣಶರ್ಮರು ಪ್ರಯತ್ನಪಟ್ಟಿದ್ದು ಐತಿಹಾಸಿಕ ಸತ್ಯ. ಅಂದಿನ ಅವರ ಲೇಖನ ಗಳನ್ನೋದಿದರೆ ಈ ಅಂಶ ಮನದಟ್ಟಾಗುತ್ತದೆ. ಕರ್ನಾಟಕದ ಏಕೀಕರಣಕ್ಕಾಗಿ ಹಳೆಯ ಮೈಸೂರಿನ ಜನತೆಯನ್ನು ಸಿದ್ಧಗೊಳಿಸುವ ಮಹತ್ಕಾರ್ಯದಲ್ಲಿ ಅವರು ಸಲ್ಲಿಸಿದ ಸೇವೆ ದೊಡ್ಡದು.

ಗಾಂಧೀಜಿಯವರ ತತ್ವಗಳನ್ನು ಶಕ್ಯವಿರುವ ಮಟ್ಟಿಗೂ ಆಚರಣೆಯಲ್ಲಿ ತರಲು ಕೃಷ್ಣಶರ್ಮರು ಪ್ರಾಮಾಣಿಕವಾದ ರೀತಿಯಲ್ಲಿ ಪ್ರಯತ್ನಿಸಿದರು. ಕಾಗದದ ತುಂಡೊಂದನ್ನು ಸಹ ಅವರು ವ್ಯರ್ಥಗೊಳಿಸುತ್ತಿರಲಿಲ್ಲ. ಅದರ ಮೇಲೂ ಏನನ್ನಾದರೂ ಬರೆಯುವ ಪದ್ಧತಿಯನ್ನಿಟ್ಟುಕೊಂಡರು. ಕಾರ್ಡಿನಮೇಲೆ ಬರೆದ ರಾಗುವ ವಿಷಯಕ್ಕಾಗಿ ಕಾಗಡ-ಕವರು ಉಪಯೋಗಿಸುವವರಲ್ಲ. ಕಾರ್ಡಿನಲ್ಲೂ ಸಹ ಎಷ್ಟು ಬೇಕೋ ಅಷ್ಟೇ ಮಾತು. ಅವರದೇ ಆದ ಇನ್ನೊಂದು ವಿಶೇಷದಂತಿದ್ದ ಸಣ್ಣ ಸಣ್ಣ ಆದರೆ ದುಂಡಗಿನ ಅಕ್ಷರಗಳು.

"ಸಣ್ಣ ಸಣ್ಣ ಅಕ್ಷರ ಬರೆದು ಬರೆದು, ಓದಿ, ಓದಿ ಕಣ್ಣು ಕೆಟ್ಟದೆ!" ಎಂದು ಅವರೇ ಹೇಳಿದರು, ನಾಲ್ಕು ವರ್ಷಗಳ ಹಿಂದೆ.

ಕೆಲವು ವರ್ಷಗಳಿಂದ ಅವರ ದೇಹಸ್ಥಿತಿ ಸರಿಯಾಗಿಲ್ಲ. ನಾಲ್ಕೈದು ದಶಕಗಳ ಕಾಲ ಅಷ್ಟೊಂದು ಚಟುವಟಿಕೆಯಿಂದ ಓಡಿಯಾಡಿದ ಅವರಿಗೆ ಇತ್ತೀಚೆಗೆ ಮನೆಯಲ್ಲಿಯೇ ಕುಳಿತುಕೊಂಡಿರಬೇಕಾದ ಸ್ಥಿತಿ ಬಂದದು ಎಷ್ಟೊಂದು ಸಂಕಟವನ್ನುಂಟು ಮಾಡಿದ್ದೀತು. ಹಾಗೆಂದು, ಆ ಸಂಕಟವನ್ನು ಬಂದವರೆಲ್ಲರೆದುರಿಗೂ ಹೇಳಿಕೊಳ್ಳುವಂಥ ಸ್ವಭಾವವೂ ಅವರದಲ್ಲ. "ಕಷ್ಟ ನುಂಗಿ ನಗುವ" ಗಟ್ಟಿತನ ಅವರದು. "ಆರೋಗ್ಯ ಸರಿಯಾಗಿದ್ದರೆ ಇನ್ನೂ ಹೆಚ್ಚಿನ ಕೆಲಸ ಮಾಡಬಹುದಾಗಿತ್ತು. ಈಗ ಉಪಾಯವಿಲ್ಲವಲ್ಲ?" ಎಂಬ ವ್ಯಸನ ಅಷ್ಟೆ. ಮೂವತ್ತು ವರ್ಷಗಳ ಹಿಂದೆ ಅವರ ಮುಖದಮೇಲೆ ಬೆಳಗುತ್ತಿದ್ದ ಪ್ರಸನ್ನತೆ ಈಗಲೂ ಕಾಣಿಸುತ್ತದೆ. ತುಟಿಗಳ ಮೇಲೆ ಆಗ ಅರಳಿಕೊಂಡಿದ್ದ ನಗೆಹೂವು ಈಗಲೂ ಮಾಸದಂತಿದೆ. ಗೀತೆಯಲ್ಲಿ ಹೇಳಿದ 'ಸ್ಥಿತಪ್ರಜ್ಞತೆ' ಅವರ ವ್ಯಕ್ತಿತ್ವದಲ್ಲಿ ತಾನೆ ತಾನಾಗಿ ತುಂಬಿಕೊಂಡಂತೆ ತೋರುತ್ತದೆ.

# ಗಾಂಧೀ ಪಂಥದ ಪಾದ್ರಿ

ನ. ಮು. ಕೊ. ಸೋಗಿ

ರಾಷ್ಟ್ರಪಿತ ಗಾಂಧೀಜಿಯನು, ಗಾಂಧಿ ತತ್ತ್ವವನು
ಕನ್ನಡದ ಬಣ್ಣದಲಿ, ಸಾಹಿತ್ಯ ಕುಂಚದಲಿ
ರಾಷ್ಟ್ರೀಯ ಉಜ್ವಲಭಿಮಾನ ಭಿತ್ತಿಯ ಮೇಲೆ
ಚಿತ್ರಿಸಿದ ಸರಸ ಕನ್ನಡ ನುಡಿಯ ಗುಡಿಕಾರ.
ಕನ್ನಡದ ದರ್ಪಣದಿ ಗಾಂಧಿ ಪ್ರತಿಬಿಂಬವನು
ಪಜ್ವಳಿಸಿ ತೋರಿಸಿದ ಅಚಲ ಗಾಂಧೀವಾದಿ.
ಗಾಂಧಿ ಸಾಹಿತ್ಯವನು ಕನ್ನಡದ ಜನಮನಕೆ
ಸುಲಭದಲಿ ದೊರಕಿಸಿದ ಗಾಂಧಿ ಪಂಥದ ಪಾದ್ರಿ.

ಗಾಂಧಿ ರಸದಲಿ ಸಿದ್ಧವಾದ ಪಾಕವೆ ಆಗಿ
ಶ್ವಾಸ ಉಚ್ಛ್ವಾಸದಲಿ ಗಾಂಧಿಗಾಳಿಯೆ ತುಂಬಿ
ಎಲ್ಲ ಕಾಲದಲಿ ಗಾಂಧೀ ತತ್ತ್ವವನೆ ನಂಬಿ
ಮೈಯಲ್ಲಿ, ಮನದಲ್ಲಿ, ನಡೆಯಲ್ಲಿ, ನುಡಿಯಲ್ಲಿ,
ಓದಿನಲಿ, ಬರೆಹದಲಿ, ಭಾವ, ಅನುಭಾವದಲಿ
ಗಾಂಧಿ ಆದರ್ಶವನೆ ಎತ್ತಿ ತೋರಿದ ಶರಣ.
ಕಲ್ಲು ಗುಂಡಿನ ತೆರದಿ ನಿನ್ನ ದೇಹದ ಮಾಟ
ಪುಟವ ಚೆಂಡಿನ ತೆರದಿ ನಿನ್ನ ಚೇತನದಾಟ.

ಕಡಲೆ ಹುರಿದಂತೆ 'ಮಾತಿನ ಮಂಟಪ'ದಿ ಜಗದ
ಜನವ ಚಿನ್ನದ ಚಾಟಿ ಏಟಿನಿಂದೆಚ್ಚರಿಸಿ
ನುಡಿಯ ಗುಂಡೇಟಿನಿಂ ವಕ್ರತೆಯ ಖಂಡಿಸಿದೆ
ನೇರ ನುಡಿಯಿಂದ ನೇರತೆಯ ಪ್ರೇರೇಪಿಸಿದೆ.
ಸರಳತೆಯ ಸುಭಗತೆಯ ಮಧುರ ಮಾತಿನ ಮೋಡಿ
ಮಿಡಿಯುತಿದೆ ಓದುಗರ ಮತಿ ವಿಚಾರವ ತೋಡಿ.
ನಿನ್ನ 'ಸೇವಾಗ್ರಾಮ' 'ಪರ್ಣಕುಟಿ' ಗ್ರಂಥಗಳು
ಗಾಂಧೀಜಿ ಜೀವನದ ಜೀವಂತ ಚಿತ್ರಗಳು.

'ರಾಮಾವತಾರ'ವನು ಕನ್ನಡದ ನೆಲಕಿಳಿಸಿ
ತೋರಿಸಿದ ಭಕ್ತ ಸಂಸ್ಕೃತಿಯ ಸೇವಾಸಕ್ತ.

ಗಾಂಧಿ ಗರಡಿಯಲಿ ಸಾಧನೆ ಮಾಡಿ ಹದಗೊಂಡು
ಗಾಂಧಿ ತೋರಿದ ದಾರಿಯಲಿ, ರಾಷ್ಟ್ರಸೇವೆಯಲಿ
ಜೀವನವ ತೇಯುತ್ತ ಗಾಂಧಿಗಂಧವ ಬೀರಿ
ಒಲಿದೊಲಿಸಿಕೊಳುವ ಸನ್ಮನಸಿನ ಸುಗಂಧದಿಂ
ಕನ್ನಡಿಗರೊಲವು ಸದ್ಭಾವಗಳ ಗೆದ್ದಿರುವ
'ಸಿದ್ದವನಹಳ್ಳಿ ಶ್ರೀ ಕೃಷ್ಣಶರ್ಮರೆ' ನಿಮಗೆ
ನುಡಿ, ನಾಡಪ್ರೇಮಿಗಳ ಒಲವು ತುಂಬಿದ ನಮನ
ಪರಿಶುದ್ಧ ನಿಷ್ಠೆಯೇ ನಿನ್ನ ಜೀವನ ಕವನ.
ಕಿರಿಯರಿಗೆ ದಾರಿ ತೋರುವ ಹಿರಿಯ ಬೆಳಕಾಗಿ
ಬಾಳು ನೀ ಬಹುಕಾಲ ಎಲ್ಲರಿಗು ಬೇಕಾಗಿ.

# 'ಸಿದ್ಧಹಸ್ತ' ಸಿದ್ಧವನಹಳ್ಳಿ ಶರ್ಮರು

ಎನ್ಕೆ

ನಾನು ಮೊದಲ ಬಾರಿಗೆ ಮೆಚ್ಚಿಕೊಂಡು ಆಸಕ್ತಿ ತಾಳಿದುದು 'ಹರಟೆಯ ಮಲ್ಲ'ರನ್ನು. 'ಕನ್ನಡದ ಕಿಡಿಗಳು' ಕನ್ನಡ ಶೈಲಿಯಲ್ಲಿ ಎಂತಹ ಸತ್ವವಿದೆಯೆಂಬುದನ್ನು ನನಗೆ ತೋರಿಸಿಕೊಟ್ಟಿತು. ಪೂಜ್ಯ ಬೇಂದ್ರೆ ಅವರ ಬಗ್ಗೆ ಹರಟೆಯ ಮಲ್ಲರು ಬರೆದ ಒಂದು ಸಾಲು ಇನ್ನೂ ಅಚ್ಚಳಿಯದೆ ಅಚ್ಚು ಮೆಚ್ಚಾಗಿ ನನ್ನ ಅಂತಃಕರಣದಲ್ಲಿ ಇಳಿದಿದೆ, ಉಳಿದಿದೆ. 'ಬೇಂದ್ರೆಯವರು ಹೊಸಬರಲ್ಲಿ ಹಳಬರು. ಹಳಬರಲ್ಲಿ ಹೊಸಬರು. ಹೊಸಬರ ಸುಧಾರಣೆಯ ಸೀಮೆಯಲ್ಲಿ ಇವರ ಗಾಡಿ ಹಾಯುವುದೇ ಇಲ್ಲ. ಸಂಪ್ರದಾಯವಂತ ಹಳಬರ ಮುಂದೆ ಇವರು ಒಳ್ಳೇ ಸುಧಾರಕರೆನಿಸುತ್ತಾರೆ'–ಇತ್ಯಾದಿ. (ಅವತರಣಿಕೆಯ ಚಿಹ್ನೆಗಳನ್ನು ಹಾಕಿದ್ದರೂ ವಾಕ್ಯಗಳ ಸಾರ ಮಾತ್ರ ಶರ್ಮರದು. ವಾಕ್ಯಗಳ ಶಿಥಿಲ ಶೈಲಿ ಮಾತ್ರ ನನ್ನದೇ.) ಅದೇ ರೀತಿ ಕುಲ ಪುರೋಹಿತ ಆಲೂರ ವೆಂಕಟರಾಯರ ಬಗ್ಗೆ, ಪಂಡಿತ ತಾರಾನಾಥರ ಬಗ್ಗೆ ಹರಟೆ ಮಲ್ಲರು ಬರೆದ, ಅಲ್ಲಲ್ಲಿ ಚಿತ್ರಿಸಿದ ವ್ಯಕ್ತಿಚಿತ್ರಗಳು ನನ್ನ ಸ್ಮೃತಿಪಟಲದಲ್ಲಿ ಪಟ್ಟಾಗಿ ನಿಂತಿವೆ.

ನಾನು ಶಿಕ್ಷಕನಾಗಿದ್ದ ಕಾಲವೊಂದಿತ್ತು. ವಿದ್ಯಾರ್ಥಿಗಳಿಗೆ ಪ್ರಬಂಧ ಶೈಲಿಯೆಂದರೇನು, ಗದ್ಯದ ಬರವಣಿಗೆಯೆಂದರೇನು ಎಂಬುದರ ಬಗ್ಗೆ ಲೆಕ್ಚರ್ ಕೊಡುವುದಕ್ಕಿಂತ ಶ್ರೀ ಕೃಷ್ಣಶರ್ಮರ ಗದ್ಯವನ್ನು ಓದಿ ತೋರಿಸುವುದು ಸೂಕ್ತವೆಂದರಿತು ಕನ್ನಡ 'ಹರಿಜನ' ಪತ್ರಿಕೆಯಲ್ಲಿ ಬರುತ್ತಿದ್ದ ಶರ್ಮರ ಲೇಖನಗಳನ್ನು ಓದಿ ತೋರಿಸುತ್ತಿದ್ದೆ. ಇಂದಿನ ವಿಜ್ಞಾನ ಯುಗದ ಬಗ್ಗೆ ಶರ್ಮರು ಒಂದೆಡೆಗೆ ಒಂದ ವಾಕ್ಯ ಬರೆದಿದ್ದರು. ವೈಜ್ಞಾನಿಕ ಬೆಳವಣಿಗೆಯಿಂದಾಗಿ ಪ್ರಪಂಚ ಕಿರಿದಾಗಿದೆ ಎಂಬ ಭಾವವನ್ನು ಅವರು ತಿಳಿಯಪಡಿಸಿದ್ದರು. 'ವಿಜ್ಞಾನ ಪುರುಷನು ಪ್ರಪಂಚವನ್ನೇ ಕೃಷ್ಣಾಜಿನದಂತೆ ಸುರುಳಿ ಸುತ್ತಿ ತನ್ನ ಬಗಲೊಳಗಿಟ್ಟುಕೊಂಡಿದ್ದಾನೆ' ಎಂದು. (ಇಲ್ಲಿಯೂ ಪ್ರತಿಮೆ ಮಾತ್ರ ಶರ್ಮರದು. ಶಬ್ದಗಳು ನನ್ನವು.) ಕುಮಾರವ್ಯಾಸನಂತೆ ಕನ್ನಡದಲ್ಲಿ ಹೊಸ ಹೊಸ ಶಬ್ದಗಳನ್ನು ಟಂಕಿಸಿ ಅವನ್ನು ಬರವಣಿಗೆಯಲ್ಲಿ ತಂದ ಶ್ರೇಯಸ್ಸು ಅವರದು.

ಶರ್ಮರು ಇತರ ಪ್ರಾದೇಶಿಕ ಕಥೆಗಳನ್ನು ಕನ್ನಡ ವಾಚಕರಿಗಾಗಿ ಅನುವಾದಿಸಿ, ಸಂಪಾದಿಸಿ ಕನ್ನಡ ಕಥಾ ಸಂಪತ್ತನ್ನು ಶ್ರೀಮಂತಗೊಳಿಸಿದರು. ಅವರು ಅನುವಾದಿಸಿದ

'ರೂಂ ಟುಲೆಟ್' ಎಂಬ ಒಂದು ತಮಿಳು ಕಥೆಯ ಕನ್ನಡ ಅನುವಾದವನ್ನು ಓದಿದಾಗ ಅದರ ಮಾದಕತೆ ಬಹಳ ದಿನಗಳವರೆಗೂ ನನಗೆ ಗುಂಗು ಹಿಡಿಸಿಬಿಟ್ಟಿತ್ತು.

ಶರ್ಮರ ಗಾಂಧೀ ಸಾಹಿತ್ಯವಂತೂ ಕನ್ನಡಕ್ಕೆ ಶರ್ಮರು ಸಲ್ಲಿಸಿರುವ ಕಿರೀಟ ಕಾಣಿಕೆ. 'ಪರ್ಣಕುಟಿ', 'ಬಾಪೂ' ಗಳಿಂದ ಮೊದಲಾದ ಅವರ ಗಾಂಧೀ ಸಾಹಿತ್ಯ ಅನುವಾದಗಳನ್ನೂ ಒಳಗೊಂಡು ಒಂದು ಘಟ್ಟಿ ಬಂಗಾರದಂತೆ ತಮ್ಮ ರಸಪತ್ರಾದ ಹರಿತವಾದ (ಕನ್ನಡ ಹರಿತವೂ ಹೌದು, ಸಂಸ್ಕೃತ ಹರಿತವೂ ಹೌದು.) ಲೇಖನಿಯಿಂದ ತಮ್ಮದೇ ಆದ ವಿಶಿಷ್ಟ ಸಾಹಿತ್ಯವನ್ನು ಒದಗಿಸಿದ ವೈಶಿಷ್ಟ್ಯ ಅವರದಾಗಿದೆ. ವಿನೋಬಾಜಿಯವರ 'ಗೀತಾ ಪ್ರವಚನ'ವನ್ನೂ ಕನ್ನಡಕ್ಕೆ ನೀಡಿದ್ದಾರೆ.

ಒಂದು ಅಂಗೈಯಗಲದ ಹ್ಯಾಂಡ್ ಬಿಲ್ಲಿನ ಬೆನ್ನ ಮೇಲೂ ಆ ಜಿನುಗಾದ ಅಕ್ಷರಗಳು, ಆ ಅಕ್ಷರಗಳಲ್ಲಿ ಅಡಕವಾದ ಅಕ್ಷರ ಸತ್ಯದಿಂದ, ಶರ್ಮರ ಹರಿತವಾದ ಲೇಖನಿಯಿಂದ ಹೊಸ ಮೌಲ್ಯವನ್ನು ತಾಳುತ್ತಿತ್ತು—Worth its weight in gold ಅಲ್ಲ, ಏಕೆಂದರೆ ಅಂಗೈಯಗಲದ ಹ್ಯಾಂಡ್ ಬಿಲ್‌ನ ತೂಕ ಎಷ್ಟು ಅಂಶದ ಗುಂಜಿಯಾದೀತು !

ಶರ್ಮರ ಹೃದ್ಯವಾದ ಗಂಡು ಶೈಲಿಯ ಗದ್ಯವನ್ನೋದಿ ಶರ್ಮರ ವ್ಯಕ್ತಿ ಪರಿಚಯದ ಆಸಕ್ತಿ ನನ್ನಲ್ಲಿ ಹೆಚ್ಚಾಗತೊಡಗಿತು. ಹೈದರಾಬಾದಿನ ಆಡಳಿತದ ಬೇಲಿ ದಾಟಿ ಧಾರವಾಡಕ್ಕೆ ಬಂದಿದ್ದರು. ಕುಲಕರ್ಣಿ ಶೇಷಗಿರಿರಾಯರ ಅಟ್ಟದ ಮೇಲೆ ಉಳಿದುಕೊಂಡಿದ್ದರು. ನಾನು ಪ್ರಥಮ ಬಾರಿ ಕಂಡಾಗ, ಆ ಆಳವಾದ ಎರಡೂ ಕಣ್ಣು ಕೆಂಡದಂತೆ ಕಂಡಿದ್ದವು. ಮೂಗಿಗೆ ನೀಲಗಿರಿ ಎಣ್ಣೆಯ ಬಾಟಲಿ ಹಿಡಿದಿದ್ದರು. ನೆಗಡಿಯಿಂದಾಗಿ ಕಣ್ಣು ಇನ್ನೂ ಕೆಂಪೇರಿರಬೇಕು. ವಾಮನಮೂರ್ತಿ ಎಂದರೆ ನಿಜವಾಗಿಯೂ ವಾಮನ ಮೂರ್ತಿ! ಈ ವಾಮನಮೂರ್ತಿಯ ಕಾರ್ಯಕ್ಷೇತ್ರ (ಅಥವ ಕುರುಕ್ಷೇತ್ರ) ವಿರಾಟ ರೂಪದ್ದು ! ಸ್ವತಂತ್ರ ವಿಚಾರಧಾರೆ, ಹರಿತವಾದ ಲೇಖನಿ ಇಷ್ಟಿದ್ದ ಮೇಲೆ ಕೇಳಬೇಕೆ ? ಒಂದು ಸಂಸ್ಥಾನದಲ್ಲಿ 'ಜೀಯಾ ಹಸಾದ' ಎಂದು ಬಾಯ್ಯಂಬಲಕ್ಕೆ ಕೈಯಾನುವುದಕ್ಕೆ ಜೀವ ಒಪ್ಪೀತೆ ? ಕಿಡಿನುಡಿಗಳ ಪರಿಣಾಮವಾಗಿ ಗಡಿಯಾಚೆ ಬಂತು ವ್ಯಕ್ತಿ. ಮುಂದೆ ? ಗಾಂಧಿ ಸಾಹಿತ್ಯಕ್ಕೆ ಪೀಠಿಕೆ.

ಶರ್ಮರ ಪರಿಚಯ ಸಮೀಪವಾಯಿತು. ಒಮ್ಮೆ ಕೈಲಾಸಂ ಬಗ್ಗೆ ಮಾತನಾಡುತ್ತಿದ್ದರು. ಇನ್ನೊಮ್ಮೆ ನಾಟಕ ತಂತ್ರದ ಬಗ್ಗೆ. ನಾನೊಂದು ಏಕಾಂಕ ಬರೆದಿದ್ದೆ. ನನಗೇಕೋ ಆ ನಾಟಕ ಉದ್ದಕ್ಕೂ ಸಂಭಾಷಣೆಗಳ ಎರಚಲ್ಪಟ್ಟ ಸನ್ನಿವೇಶಗಳಿಂದ ಶೂನ್ಯವೆನಿಸಿದಂತಾಗಿತ್ತು. ನಾಟಕ ನೋಡಿ ಶರ್ಮರು, 'ಬರೀ ಸಂಭಾಷಣೆ ಅಂದರೂನೂ ಅದರ ನಿರೂಪಣೆಯ ಮುಖಾಂತರ ಸನ್ನಿವೇಶದಿಂದ ಸನ್ನಿವೇಶಕ್ಕೆ ಮಾನಸಿಕವಾಗಿ ಸ್ಥಾನಾಂತರ ಆಗೇ ಆಗತದ' ಎಂದಾಗ ನನಗೆ ಒಂದು ಅಪೂರ್ವ ವೈಚಾರಿಕ ಪ್ರಕಾಶ ಬಿದ್ದಂತಾಗಿತ್ತು. ಲಲಿತ ಸಾಹಿತ್ಯದ ಬಗ್ಗೆ ಶರ್ಮರು ಆಳವಾಗಿ ಅಪೂರ್ವವಾಗಿ ವಿಚಾರ ಮಾಡಿದವರು ಎಂದು ನನಗೆನಿಸಿತ್ತು.

ಆದರೆ ಹರಟೆ ಮಲ್ಲರು ಗಾಂಧಿ ಸಾಹಿತ್ಯದ ಶರ್ಮರಲ್ಲಿ ಕರಗಿ ಹೋದರೇನೋ ಎಂದು ಚಡಪಡಿಸಬೇಕಾಗಲಿಲ್ಲ. ಅವರ 'ಕುಲದೀಪಕರು' ನವೀನವಾದ ವ್ಯಕ್ತಿ ಚಿತ್ರ ಸಾಹಿತ್ಯವನ್ನು ಕನ್ನಡಿಗರಿಗೆ ಒದಗಿಸಿತು. ಕೆಚ್ಚೆದೆಯ ಸರದಾರ ಪಟೇಲರ ವ್ಯಕ್ತಿಚಿತ್ರ ಎಂತಹ ಅಪರೂಪವಾದ ಉಕ್ಕಿನ ಶಿಲ್ಪ! ಕನ್ನಡ ಸಾಹಿತ್ಯಕ್ಕೆ ಇದೊಂದು Stainless Steelನ ಪ್ರತಿಮೆ.

ಶ್ರೀ ಕೃಷ್ಣಶರ್ಮರು ಕನ್ನಡ ಸಾಹಿತ್ಯ ಸೌಧದಲ್ಲಿ ತಮ್ಮದೇ ಒಂದು ಶರು ಮಾಡವನ್ನು ಕಟ್ಟಿಕೊಂಡಿದ್ದಾರೆ. ಇವರು ರಚಿಸಿರುವುದು ಕೇವಲ ಸಾಹಿತ್ಯವಷ್ಟೆ ಅಲ್ಲ. ಕನ್ನಡ ಜನಮನವನ್ನು ಇವರು ಕಟ್ಟಿದ್ದಾರೆ. ಬೆಂಗಳೂರಿನಲ್ಲಿ 'ಗಾಂಧೀ ಸಾಹಿತ್ಯ ಸಂಘ'ದ ಮೂಲಕ ನವಜನಾಂಗದ ವಿಚಾರಧಾರೆಯನ್ನೂ ರೂಪಿಸಿದ್ದಾರೆ. ಹೊಸ ಪೀಳಿಗೆಯ ಜೀವನಯಾತ್ರೆಗೆ ದಾರಿದೀಪ ನಿಲ್ಲಿಸಿದ್ದಾರೆ. 'ಗಾಂಧೀ ಸಾಹಿತ್ಯ ಸಂಘ'ದಲ್ಲಿ ಜರುಗುವ ವ್ಯಾಖ್ಯಾನಗಳು ಬರಿ ಗಾಂಧೀ ವಿಚಾರಧಾರೆಗೇ ಸೀಮಿತ ವಾಗಿರುವುದಿಲ್ಲ. ಡಾ. ಶಿವರಾಮರ ವೈದ್ಯಕೀಯ ವಿಜ್ಞಾನವೂ ಆಗಬಹುದು; ಎನ್ಕೆನ 'ಇದು ಬೆಂಗಳೂರೂ' ಆಗಬಹುದು. ಶ್ರೀ ಜಿ. ಪಿ. ರಾಜರತ್ನಂ ಅವರ 'ಬುದ್ಧ ದರ್ಶನ'ವೂ ಆಗಬಹುದು. ಗಾಂಧೀ ಸಾಹಿತ್ಯ ಸಂಘವು ಹೊಸ ಹೊಸ ವಿಚಾರಗಳಿಗೆ ವೇದಿಕೆಯಾಗಿದೆ. ಸಮಾಜ ಕಾರ್ಯಕರ್ತರಿಗೆ ಹೊಸ ಗರುಡಿಯಾಗಿದೆ. ತರುಣ ಲೇಖಕರಿಗೆ ತರಬೇತಿ ಕೇಂದ್ರವಾಗಿದೆ. ಉತ್ತರ ಕರ್ನಾಟಕ, ಮೈಸೂರು ಕರ್ನಾಟಕಗಳ ಭಾವೈಕ್ಯ ಸಾಧನೆಯ ಸೇತುವೆಯಾಗಿದೆ.

ನಾನು ಬೆಂಗಳೂರು ಆಕಾಶವಾಣಿಯಲ್ಲಿದ್ದಾಗ ಶ್ರೀ ಕೃಷ್ಣಶರ್ಮರು Multi-purpose ಭಾಷಣಕಾರರಾಗಿದ್ದರು ನಮಗೆ. ಅವರ ಸಾಸಿವೆಯಂತಹ ಅಕ್ಷರಗಳಲ್ಲಿ ನಾನು ಯಾವಾಗಲೂ ಅಣುಶಕ್ತಿಯ ಸಾಮರ್ಥ್ಯವನ್ನು ಕಂಡುಕೊಳ್ಳುತ್ತಿದ್ದೆ. ಅವರು ಅಂತಹ ಸಮರ್ಥ ಸಾಹಿತಿ, ಸಮರ್ಥ ಕಾರ್ಯಕರ್ತರಾಗಿದ್ದರೆಂದೆ ಇಂತಹ ಒಂದು ಆದರ್ಶ ಸಂಸ್ಥೆಯನ್ನು ಕಟ್ಟಿದರು. ಗಾಂಧಿ ಸಾಹಿತ್ಯ ಸಂಘದ ಚಟುವಟಿಕೆಗಳು ಚೇತನದಾಯಕವಾಗಿದ್ದಷ್ಟೆ ವೈವಿಧ್ಯಪೂರ್ಣ. 'ಶ್ರೀ'ಯವರ 'ಅಶ್ವತ್ಥಾಮನ್' ಪ್ರಯೋಗ, ಕುಮಾರವ್ಯಾಸನ ಗಮಕ ರೂಪಕಗಳು, ಭಾರತ ವಾಚನ–ವಿವರಣೆ, ಸಂಸ್ಕೃತ ನಾಟಕಾಭಿನಯ—ಒಂದೆ, ಎರಡೆ ಹತ್ತಾರು ಬಗೆಯ ಕಾರ್ಯಕಲಾಪಗಳ ಹಂದರ ಅದು. ಸರ್ವಶ್ರೀ ಮತ್ತೂರು ಕೃಷ್ಣಮೂರ್ತಿ, ನೀ. ಕಸ್ತೂರಿ, ಕೆ. ಎನ್. ಶ್ರೀಹರಿ, ಎಚ್. ಎಂ. ರಾಮಾರಾಧ್ಯ, ಚಕ್ರವರ್ತಿ, ಮೊದಲಾದ ಪ್ರತಿಭೆಗಳು ಗಾಂಧೀ ಸಾಹಿತ್ಯ ಸಂಘ ದ್ವಾರಾ ಬೆಳಗಿವೆಯೆಂದೆ ನನ್ನ ಭಾವನೆ.

ಶ್ರೀ ಕೃಷ್ಣಶರ್ಮರೆಂದರೆ ಗದ್ಯ ರೂಪೀ ಬೇಂದ್ರೆ ಎಂದು ನನ್ನ ಭಾವನೆ. ತಮ್ಮ ವಿಚಾರಗಳನ್ನು ಗದ್ಯದಿಂದ ಮಿಂಚಿಸಿ, ಕಾರ್ಯತಃ ಆಚಾರದಲ್ಲಿ ತಂದಿರಿಸಿದ ಶ್ರೀ ಶರ್ಮರು ಶತಾಯುಷಿಯಾಗಲಿ ಎಂಬುದು ಮೂರು ಕೋಟಿ ಕನ್ನಡಿಗರ ಪ್ರಾರ್ಥನೆ.

# 'ಸಿದ್ಧಿಪುರುಷ' ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ

ನಿಂ. ನೀ. ಸಣ್ಣಕ್ಕಿ

ಸಾಮಾನ್ಯವಾಗಿ ಭಾರತೀಯ ಸಾಹಿತ್ಯಕಾರನ ದೃಷ್ಟಿ, ಇತಿಹಾಸಕಾರನ ದೃಷ್ಟಿ, ಚರಿತ್ರಕಾರನ ದೃಷ್ಟಿ ಈ ಪುಣ್ಯಭೂಮಿಯಲ್ಲಿ ಎಲ್ಲವೂ ಒಳ್ಳೆಯದೇ ಆಗಬೇಕು, ತನಗೆ ಕಷ್ಟವಿರಬೇಕು, ಅನ್ಯರಿಗೆ ಸುಖ ಬೇಕೆಂದು ಬಯಸಿ ಮುನ್ನಡೆದ ಜೀವನ ಚರಿತ್ರೆಗಳನ್ನು ಗತಿಸಿದ ಕಾಲದಲ್ಲೂ ಕಾಣುತ್ತೇವೆ. ಸದ್ಯ ಇದ್ದಾರೆ ಎಂದು ಸ್ಪಷ್ಟ ಮನಸ್ಸಿನಿಂದ ಹೇಳಿದರೆ ಆಶ್ಚರ್ಯವೇನೂ ಅಲ್ಲ. ಗಾಂಧೀಜಿಯವರು ಅಂತಹ ಪುಣ್ಯ ಪುರುಷರಲ್ಲಿ ಭಾರತದ ರಾಷ್ಟ್ರ ಪಿತಾಮಹರಾಗಿದ್ದಾರೆ. ಅವರ ಮಾಲಿಕೆಯಲ್ಲಿ ಕರ್ನಾಟಕದ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರೊಬ್ಬರು. ಗಾಂಧೀಜಿಯವರ ಪೂರ್ಣದೃಷ್ಟಿಗೆ ಅವರು ರಾಜಕೀಯವಾಗಿ, ತಾತ್ವಿಕವಾಗಿ, ಚಾರಿತ್ರಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಆತ್ಮಶ್ರೀಯಿಂದ ತೇಜಸ್ಸಿನ ಆತ್ಮಶ್ರೀಗೆ ನಡೆದು ಬಂದವರು. ಬದುಕಿ ಬಂದವರು. ಬರೆಯುತ್ತ ಬಂದವರು. ಓದಿದವರು. ಓದಿಸಿದವರು.

ಸಿದ್ದವನಹಳ್ಳಿ ಕೃಷ್ಣಶರ್ಮರ ವ್ಯಕ್ತಿತ್ವ ಅತ್ಯಂತ ಮೋಹಕ. ಅವರ ಬರವಣಿಗೆಯಲ್ಲಿ ವೈವಿಧ್ಯತೆ ಇದೆ. ಗಾಂಧೀಜಿಯವರ ಜೀವನದಂತೆ ಇವರ ಜೀವನವೂ ಬಹುಮುಖತೆ. ಇವುಗಳನ್ನು ವರ್ಣಿಸಲಿಕ್ಕಾಗುವುದಿಲ್ಲ. ಸಾದಾ ಇರುವು–ಮಹಾನ್ ವ್ಯಕ್ತಿತ್ವ. ವಾಮನ ಮೂರ್ತಿಯಂತೆ ರೂಪದರ್ಶನ. ಶಾಂತಿ ಸಾಗರದಂತೆ ಇದ್ದು; ಭಾವವನ್ನು ಹೊರ ಹೊಮ್ಮಿಸುವ ಸಾಹಿತ್ಯ ಸೇವಕರು. ರಸಿಕರು. ನಿರ್ಮಾತೃರು.

ಮಹಾತ್ಮಾಜಿಯವರೇ ತಮ್ಮ ಜೀವನದ ಮಹಾಕರ್ತರು. ತಮ್ಮ ಪ್ರತಿಭಾ ದೃಷ್ಟಿಯಿಂದ ಶ್ರೇಷ್ಠತೆಯಿಂದ ಜೀವನದ ವಿವಿಧ ಮುಖಗಳನ್ನು ತಾವೇ ತೆರೆದಿಟ್ಟು ಮಹದುಪಕಾರವನ್ನು ಮಾನವತೆಗೆ ಮಾಡಿದಂತೆ, ಗಾಂಧೀಜಿಯವರ ಸಮೀಪ ಸಮೀಪವಾಗಿ ಅಹರ್ನಿಶಿ ದುಡಿದವರು ಕೃಷ್ಣಶರ್ಮರು.

ಭಾರತೀಯ ಭಾಷೆಗಳಲ್ಲಿ ಮಹಾತ್ಮಾ ಗಾಂಧೀಜಿಯವರ ಬಗೆಗೆ ಸಾಹಿತ್ಯ ರೂಪಕವಾಗಿ, ರಾಜಕೀಯವಾಗಿ, ಆಧ್ಯಾತ್ಮಿಕವಾಗಿ ಮಹಾನ್ ಸಾಹಿತ್ಯ ಸೃಷ್ಟಿಯೇ ಬೆಳೆಯತೊಡಗಿದೆ. ಇನ್ನೂ ಸಾಹಿತ್ಯ ನಿರ್ಮಾಣವಾಗುತ್ತಿದೆ. ಇದಕ್ಕೆಲ್ಲ ಕಾರಣರಾದವರು ಮಹಾತ್ಮಾ ಗಾಂಧೀಜಿಯವರೊಬ್ಬರಲ್ಲ, ಅವರ ಗರುಡಿಯಲ್ಲಿ ಬೆಳೆದು ಬಂದ

ಬಂಧುಗಳು. ಅವರು ಭಾರತದವರೂ ಹೌದು. ಪರದೇಶದವರೂ ಹೌದು. ಇದಕ್ಕೆಲ್ಲ ಸಾಕ್ಷಿ ಮಹಾತ್ಮಾ ಗಾಂಧೀಜಿಯವರ ಆತ್ಮಚರಿತ್ರೆ. ಆದರೆ ಕನ್ನಡದವರಾದ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಅವರ ಸಮೀಪವಿದ್ದು, ವಾಸಮಾಡಿ, ಗಾಂಧೀಜಿಯ ಆಳವನ್ನು ಕಂಡು, ಎತ್ತರವನ್ನೇರಿ ಅನುಭವಿಸಿದವರು. ಅವರು ಸ್ವಯಂ ಸ್ಫೂರ್ತಿ ಅಕ್ಷರ, ಶಬ್ದ, ವಾಕ್ಯ ವೈಖರಿಗಳಲ್ಲಿ ಶುದ್ಧ ಸಾಹಿತ್ಯ ಶೈಲಿಯಲ್ಲಿ ಗಾಂಧೀಜಿಯವರನ್ನೂ ಗಾಂಧೀಜಿಯವರ ತತ್ವಗಳನ್ನೂ ಪ್ರಯೋಗಗಳನ್ನೂ ಮನೋಭೂಮಿಕೆಯನ್ನೂ, ಸಾಧನ ಸಿದ್ಧಾಂತಗಳನ್ನೂ ಕನ್ನಡದಲ್ಲಿ ನೀಡಿದ್ದಾರೆ.

ಶ್ರೀ ಕೃಷ್ಣಶರ್ಮರು ಶ್ರೀ ರಾಮಾವತಾರವನ್ನೂ ಶ್ರೀ ಕೃಷ್ಣಾವತಾರವನ್ನೂ ಕನ್ನಡದಲ್ಲಿ ಮೂಡಿಸಿದವರು. ಶ್ರೀ ಕೃಷ್ಣಾವತಾರವನ್ನು ಕನ್ಹಯ್ಯಾಲಾಲ ಮುನಸಿಯವರು ಆಂಗ್ಲ ಭಾಷೆಯಲ್ಲಿ ರಚಿಸಿದ್ದರು. ಶ್ರೀ ಕೃಷ್ಣಶರ್ಮರು ಭಾಷಾಂತರಿಸಿದ ಕೃಷ್ಣಾವತಾರ ಭಾಗ ನಾಲ್ಕರಲ್ಲಿ ಬಿನ್ನಹ ಬರೆಯುತ್ತ ಹೀಗೆ ಹೇಳಿದ್ದಾರೆ: "ಈ ಗ್ರಂಥವನ್ನು ಕನ್ನಡಕ್ಕೆ ರೂಪಾಂತರಿಸಲು ಯಾವಾಗ ಕೈ ಹಾಕಿದೆನೋ ಇದರಿಂದ ಸ್ಫೂರ್ತಿಗೊಂಡು ರಾಮಾವತಾರ ಬಂತು. ರಾಮಾವತಾರ ಕೃಷ್ಣಾವತಾರ ಎರಡೂ ಜನಪ್ರಿಯ ಆಗಿವೆ. ಪುಣ್ಯಫಲ." ಭಾಷಾಂತರವು ಚನ್ನಾಗಿರುತ್ತದೆ; ತತ್ವಶಾಲಿಯಾಗಿರುತ್ತದೆ. ಕನ್ನಡಕ್ಕೆ ನೂರಕ್ಕೆ ನೂರು ಒಪ್ಪಿ ನಿಲ್ಲುತ್ತದೆ; ತಿಳಿಯುತ್ತದೆ; ತಿಳಿಸುತ್ತದೆ. ಓದುವಂತೆ ಆಕರ್ಷಿಸುತ್ತದೆ; ಓದಿಸುತ್ತದೆ. ಶ್ರೀ ರಾಮಾವತಾರವನ್ನೂ ಕನ್ನಡದಲ್ಲಿ ಮೂಡಿಸುವ ವೇಳೆಗೆ 'ಸಂಯುಕ್ತ ಕರ್ನಾಟಕದ' ಹಾದಿಯನ್ನೂ ಜನ ಕಾಯುತ್ತಿತ್ತು. ಅವಿರತವಾಗಿ ಬರುವ ಅವರ ಬರವಣಿಗೆಗಾಗಿ ಜನ ಕಾಯ್ದು ಕುಳಿತು, ಓದಿ ಸಂತೋಷಪಡುತ್ತಿತ್ತು. ಶ್ರೀರಾಮನ ಬರುವನ್ನು ಶಬರಿ ಕಾಯುವಂತೆ ಜನರು ಶ್ರೀ ರಾಮಾವತಾರದ ಭಾಷಾಂತರ ಪತ್ರಿಕೆಯ ಬರಹಕ್ಕಾಗಿ ಕಾದು ಕುಳಿತುಕೊಳ್ಳುತ್ತಿತ್ತು. ಗ್ರಂಥರೂಪಕ್ಕೆ ಬರಬೇಕೆಂದು ಆಶೆ ಇಟ್ಟಾಗ, ತೀವ್ರವಾಗಿ ರಾಮಾಯಣದ ಮೂರು ಭಾಗಗಳು, ಕೃಷ್ಣಾವತಾರದ ಐದು ಭಾಗಗಳೂ ಕನ್ನಡಿಗರ ಕೈ ಸೇರಿದಾಗ ಎಲ್ಲರೂ ಪುನೀತಗೊಂಡು ಅಮೃತವನ್ನುಂಡು ಸುಖಿಯಾದಂತಹ ಆನಂದವನ್ನು ಅನುಭವಿಸಿದರು.

ಭಾಷಾಂತರದ ಸಿದ್ಧಿ ಪಡೆದವರು ಶ್ರೀ ಕೃಷ್ಣಶರ್ಮರು. ಅವರು ಯಾವದನ್ನೇ ಕನ್ನಡಿಸುವುದರಲ್ಲಿ ಅದು ಕನ್ನಡಿಗರ ಭಾಗ್ಯವಾಗಿ, ಭಾಗ್ಯೋದಯದ ಬೆಳಕಾಗಿ ಬರುತ್ತದೆ. ಅದು ಅವರವೇ ಆದ ಗಡುಸಾದ ನೀರಸವಿರದ ಮೂರನೆಯದೊಂದು ಶೈಲಿ. ಅದೇ ಅವರ ಮುರಾರಿ ಶೈಲಿಯೆಂದೂ ಸರಳ ಆಕರ್ಷಕ ಶೈಲಿ ಎಂದೂ ಅಪ್ರತಿಮ ಸುಂದರ ಶೈಲಿ ಎಂದೂ, ಸಿದ್ಧಹಸ್ತರ ಶೈಲಿ ಎಂದೂ ಕರೆಯಬಹುದು.

ಅವರ ಲೇಖನಿಗೆ ಯಾವಾಗಲೂ ಸಾಣೆ ಹಿಡಿದಿರುತ್ತದೆ. ಹರಿತವಾಗಿರುತ್ತದೆ. ಶಕ್ತಿಯುತವಾಗಿರುತ್ತದೆ. ಕನ್ನಡ ಜನತೆಯ ಚಿರಪರಿಚಿತವಾಗಿರುತ್ತದೆ. ಇಷ್ಟೆಲ್ಲದಕ್ಕೂ ಕಾರಣವಿಲ್ಲದೇ ಇಲ್ಲ. ಅವರು ನುರಿತ ಅನುಭಾವಿ. ನುರಿತ ಸತ್ಯವಂತರು.

ಕಟು ಸತ್ಯದ ಶೀಲವಂತರು. ಸರಳ ಸಮರದ ಸಾಹಿತಿಗಳು. ದೊಡ್ಡ ದೊಡ್ಡ ವಿಚಾರಗಳನ್ನು ಸಣ್ಣ ಸಣ್ಣ ಮಾತುಗಳಲ್ಲಿ ಬರೆದು ತಿಳಿಸುವ ತಿಳಿ ಭಾವಜೀವಿ.

'ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ'ಯನ್ನೂ ಭಾರತೀಯರು ತಿಳಿದು ಕೊಳ್ಳುತ್ತಿದ್ದಾರೆ. ಕನ್ನಡದಲ್ಲಿ ಗಾಂಧೀಜಿಯವರನ್ನು ಕುರಿತು ಬರೆದವರಲ್ಲಿ ಪ್ರಭುತ್ವ ವುಳ್ಳವರು ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು. ಅವರಿಗೆ ಕನ್ನಡಿಗರು ಕೃತಜ್ಞ ರಾಗಿದ್ದಾರೆ. ಇವರು ಗಾಂಧೀಜಿಯವರ ಜೀವಿತೋದ್ದೇಶಗಳನ್ನು ಈಡೇರಿಸುವುದರಲ್ಲಿ ಜೊತೆಗಾರರು. ಸ್ವಾತಂತ್ರ್ಯ ಹೋರಾಟದ ಹಿರಿಯರು. ತೇಜಸ್ವಿ ಪುರುಷರು. ಗಾಂಧೀಜಿಯವರ ಜೀವನ ರಾಜಕೀಯತ್ವವೂ ಕೃಷ್ಣಶರ್ಮರದೂ ರಾಜಕೀಯತ್ವ ಬರೆಹ ; ಗಾಂಧೀಜಿಯವರದು ಆಶ್ರಮ ಜೀವನ–ಕೃಷ್ಣಶರ್ಮರದೂ ಋಷಿತ್ವ-ಜೀವನ. ಗಾಂಧೀಜಿಯವರು ಎಲ್ಲವನ್ನೂ ಮೀರಿದ ಸ್ಥಿತಪ್ರಜ್ಞಾವಸ್ಥೆಗೆ ಮುಟ್ಟಿದವರು. ಕೃಷ್ಣ ಶರ್ಮರೂ ಹಾಗೆಯೇ ಇದ್ದರು. ಇದ್ದಾರೆ. ಗಾಂಧೀಜಿಯವರು ರಾಷ್ಟ್ರಪಿತಾಮಹರು, ರಾಷ್ಟ್ರಭಕ್ತರು–ಕೃಷ್ಣಶರ್ಮರೂ ರಾಷ್ಟ್ರಭಕ್ತರಾಗಿದ್ದಾರೆ. ಗಾಂಧೀಜಿಯವರು ಎಷ್ಟು ಹೋರಾಟ ನಡೆಯಿಸಿದರೋ ಅಷ್ಟೇ ಹೋರಾಟ ಕೃಷ್ಣಶರ್ಮರೂ ನಡೆಯಿಸಿದರು. ಧಾರ್ಮಿಕ ಕ್ಷೇತ್ರದಲ್ಲೂ ಅಷ್ಟೇ. ಆರ್ಥಿಕ ಕ್ಷೇತ್ರದಲ್ಲೂ ಅಷ್ಟೇ. ಅದನ್ನು ಸಾಹಿತ್ಯಕ ವಾಗಿ ಮೂಡಿಸಿದ್ದಾರೆ. ಮೂಡಿಸುತ್ತಿದ್ದಾರೆ.

ಗಾಂಧೀಜಿಯವರು ಅರಿವೆ-ಅರವುಗಳಲ್ಲಿ ಬಾಳಿ ಬೆಳಗಿದ ಭಾರತೀಯ ಸೂರ್ಯ ನಾರಾಯಣ. ಕೃಷ್ಣಶರ್ಮರೂ ಸೂರ್ಯನಾರಾಯಣ ಪ್ರಭುವಿನ ಪುಂಜ.

ಮಹಾತ್ಮಾಜಿಯ ಸಾಹಿತ್ಯ ಕೃಷಿಯ ಬಹುದೊಡ್ಡ ಬರಹಗಾರರ ಬಳಗ ಪಂಕ್ತಿ ಯಲ್ಲಿ ಅದರಲ್ಲೂ ಕನ್ನಡದಲ್ಲಿ ಮೊದಲಿಗೆ ಸಿಲ್ಲುವ ಹೆಸರು ಸಿದ್ದವನಹಳ್ಳಿ ಕೃಷ್ಣ ಶರ್ಮರದು. ಅವರ 'ಪರ್ಣಕುಟಿ' ಮತ್ತು 'ವರ್ಧಾಯಾತ್ರೆ' ಗಾಂಧೀಜಯವರ ಪರಿಸರದ ಸ್ವತಂತ್ರ ಕೃತಿಗಳು. 'ನನ್ನ ಜೊತೆಗಾರರು' ಮತ್ತು 'ಗಾಂಧೀಜಿಯವರ ರಾಜಕೀಯ ಪತ್ರಗಳು' ಇವರಿಂದ ಭಾಷಾಂತರಗೊಂಡರೂ ಸ್ವರಚಿತವುಗಳಂತೆ ತೋರುತ್ತವೆ. ಜೊತೆಗೆ 'ದಕ್ಷಿಣ ಆಫ್ರಿಕಾ ಸತ್ಯಾಗ್ರಹ'ವನ್ನೂ ಕೃಷ್ಣಶರ್ಮರು ಭಾಷಾಂತರಿಸಿದ್ದಾರೆ. ಎಂ. ಜಿ. ಪೋಲಕ್ ಅವರ 'ಗಾಂಧೀಜಿ'ಯನ್ನು ಗಾಂಧೀಜಿ ಯವರ 'ಮಾತಾಗಾಂಧಿ' ಮತ್ತು ಜಗತ್‌ರಾಮದವೆ ಅವರ 'ಗಾಂಧಿಜಿ' ಎಂಬ ಗ್ರಂಥಗಳನ್ನೂ ಕನ್ನಡಿಸಿದ್ದಾರೆ. ಶ್ರೀಮಾನ್ ನಾರಾಯಣ ಅಗರವಾಲರ 'ಗಾಂಧಿ ಯೋಜನೆ' ಕೃಷ್ಣಶರ್ಮರು ತರ್ಜುಮೆಗೊಳಿಸಿದ ಇನ್ನೊಂದು ಗ್ರಂಥ. ರೋಮನ್ ರೋಲಾ ಅವರ 'Mahatma Gandhi'ಯನ್ನು ಕನ್ನಡಿಗರಿಗೆ ನಿವೇದಿಸಿದವರು ಕೃಷ್ಣಶರ್ಮರೆ. 'ಗಾಂಧೀಜಿಯ ಪ್ರಮಾಣ ವಚನಗಳು' ಎಂಬ ಪುಸ್ತಕವು ಕೃಷ್ಣಶರ್ಮರ ಮಾತಿನ ಮಂಟಪದ ಹರವು ಬಳ್ಳಿಯ ಆಕಾಶವಾಣಿ ಭಾಷಣಗಳಿಂದ ಹೊರಬಂದಿದೆ.

ಜೀವನವನ್ನೇ ಮಂಟಪವಾಗಿ ಹಮ್ಮಿಕೊಂಡ ಕೃಷ್ಣಶರ್ಮರು ಕನ್ನಡದಲ್ಲಿ ಎರಡು ಮಾತಿನ ಮಂಟಪವನ್ನು ಸೃಜಿಸಿ ಕನ್ನಡ ಗದ್ಯ ಅದರಲ್ಲೂ ವೈಚಾರಿಕ ಬರವಣಿಗೆ

ಗಾರರಿಗೆ ಮಾರ್ಗದರ್ಶಿಗಳಾಗಿ ನಿಂತಿದ್ದಾರೆ. ಗಾಂಧೀಜಿಯ ಜೀವನದ ವಿಚಾರ ಹಂದರವನ್ನು ಬೆಳೆಯಿಸಿದ ಗದ್ಯಕೃತಿಗಳಾದ ಮಾತಿನ ಸಂಚಿಕೆಗಳು ಸರಳ ಗದ್ಯಕ್ಕೆ ನಾಂದಿರೂಪ. ಜೀವನವೇ ಸಾಹಿತ್ಯವೆಂದೂ, ಸಾಹಿತ್ಯವೇ ಜೀವನ ದರ್ಪಣವೆಂದೂ ನಾವೆಲ್ಲ ಕಂಡುಂಡ ಅನುಭವವೇ ಸರಿ. ಗಾಂಧೀಜಿ ಜೀವನ ಸಾಹಿತ್ಯ ರೂಪವಾಗಿ ಹರಿಸಿದ ಶಕ್ತಿ–ಸಾಮರ್ಥ್ಯವು ಕೃಷ್ಣಶರ್ಮರೆಂಬ ದರ್ಪಣವೇ ಸರಿ.

ನವ ಸಮಾಜ ನಿರ್ಮಾಣ, ಜ್ಞಾನ–ವಿಜ್ಞಾನ–ಶಾಂತಿಯಿಂದ ತುಂಬಿಕೊಳ್ಳುವಂತೆ ನವ ಸಾಹಿತ್ಯವಾದರೂ ಜ್ಞಾನ–ವಿಜ್ಞಾನ ಶಾಂತಿಯಿಂದ ತುಂಬಬೇಕು. ಶಾಂತಿಗಾಗಿ ಮಾನವಲೋಕ ಸದಾ ಹಂಬಲಿಸುತ್ತಿರಬೇಕು. ಇವೆಲ್ಲ ವಿಚಾರಗಳು ಕೃಷ್ಣಶರ್ಮರವೆ.

ಶ್ರೀರಾಮ ಪಟ್ಟಾಭಿಷೇಕದಲ್ಲಿ ಸೀತಾದೇವಿ, ಹನುಮಂತನಿಗೆ ಕಂಠೀಹಾರವನ್ನು ಕೊಟ್ಟಳಂತೆ; ಹನುಮಂತ ಪ್ರತಿ ಮುತ್ತುಗಳನ್ನು ಒಡೆದು ಅದರಲ್ಲಿ ಶ್ರೀರಾಮನಾಮವಿದೆಯೋ ಇಲ್ಲವೋ ಎಂಬುದನ್ನು ತಿಳಿದುಕೊಂಡನಂತೆ. ಅದರಂತೆ ಶ್ರೀ ಕೃಷ್ಣಶರ್ಮರು ತಮ್ಮ ಬರವಣಿಗೆಯಲ್ಲಿ ಆ ಶಕ್ತಿ ಇದೆಯೋ ಇಲ್ಲವೋ ಎಂಬುದನ್ನು ಕಾಣಿಕೆಯಾಗಿ ಬಂದ ಮುತ್ತುಗಳನ್ನು ಪರೀಕ್ಷಿಸಿದ್ದಾರೆ. ಹನುಮಂತ ತನ್ನ ಹೃದಯವನ್ನೇ ಬಿಚ್ಚಿ ಶ್ರೀರಾಮನನ್ನು ತೋರಿಸಿದಂತೆ ಸಾಹಿತ್ಯವನ್ನು ರಚಿಸಿ, ಕನ್ನಡ ಜನಕೋಟಿಗೆ ತೋರಿಸಿದ್ದಾರೆ. ಗಾಂಧೀಜಿ ಶ್ರೀರಾಮ ಪಟ್ಟದಲ್ಲಿದ್ದಾರೆ. ಶ್ರೀ ಕೃಷ್ಣಶರ್ಮರು ಆಂಜನೇಯನ ಪಟ್ಟದಲ್ಲಿದ್ದಾರೆ. ಸ್ವಾತಂತ್ರ್ಯವೆಂಬ ಸೀತಾಮಾತೆ ರಾರಾಜಿಸುತ್ತಿದ್ದಾಳೆ. ಗಾಂಧೀಜಿಯ ಜೊತೆ ಅನೇಕ ನವಭಾರತ ನಿರ್ಮಾಣದ ತ್ಯಾಗಿಗಳು ಸೇನಾನಿಗಳು ದುಡಿದಿದ್ದಾರೆ. ಅವರಲ್ಲಿ ಕೃಷ್ಣಶರ್ಮರು ಗಾಂಧೀಜಿಯ ಸಮೀಪದಲ್ಲಿಯ ಅಗ್ರಗಣ್ಯರು.

ಮಾನವನು ಮಾನವನಾಗಿ ಉಳಿಯಬೇಕಾದಲ್ಲಿ ಕಲಿಯಬೇಕಾದದ್ದು ಬಹಳವಿದೆ. ಆಕಾಶ ತಿರುಗಿ ಬಂದರೂ ಅವನು ಕೇವಲ ಹಕ್ಕಿಗುಣದವನಾಗಿದ್ದಾನೆ. ಸಮುದ್ರ ಈಜಿ ಬಂದರೂ ಜಲಚರ ಕ್ರೂರ ಪ್ರಾಣಿಯಾಗಿದ್ದಾನೆ. ಆದರೆ ಭೂಮಿಯ ಮೇಲೆ ಬದುಕೊಂಡು ಬರಬೇಕಲ್ಲ! ಆ ಬದುಕು ಬರಲು ಭಾರತ ಭೂಮಿಯಲ್ಲಿ ಅನೇಕ ಧೀಮಂತ ಶಕ್ತಿಗಳು ಕಾರ್ಯ ಮಾಡಿವೆ, ಮಾಡುತ್ತಿವೆ. ಇದು ಹೆಚ್ಚಾಗಿ ಗಾಂಧೀಜಿಯವರ ಪಂಥದವರಿಂದ ನಡೆಯಿತು. ಅದರಲ್ಲಿ ಕೃಷ್ಣಶರ್ಮರು ಕನ್ನಡತನಕ್ಕೆ ತಿಳಿಯಾಗಿ ಹೇಳಿದ್ದಾರೆ. ಮಾನವ ಜಾತಿ ಉಳಿಯಬೇಕು; ಸುಖವಾಗಿರಬೇಕು. ವಿವೇಕ ಮೂಡಬೇಕು; ಮಾನವ ಜಾತಿ ಒಂದು. ಲೋಕ ಕಲ್ಯಾಣ ಭಾರತೀಯ ಗಣ್ಯರಿಂದಾಗಬೇಕು; ಲೋಕ ಕಲ್ಯಾಣ ಭಾರತೀಯರಿಂದಾಗುವಂತೆ ಪ್ರಯತ್ನಗಳು ನಡೆದಿವೆ. ಅವರು ಲೋಕ ಗುರುಗಳ ಶ್ರೇಣಿಯಲ್ಲಿದ್ದಾರೆ. ಅಂತಹ ವಿಭೂತಿ ಪುರುಷರ ಪರಿಚಯವನ್ನು ಮಾಡುವವರೂ ವಿಭೂತಿಗಳೇ ಸರಿ. ಇಂತಹ ವಿಭೂತಿ ಪುರುಷರಾದ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರಿಗೆ ನನ್ನ ನಮನ.

# ಸರ್ವತೋಮುಖ ಪ್ರತಿಭೆಯ ಕೃಷ್ಣಸ್ವಾಮಿ—ಕೃಷ್ಣಶರ್ಮ

ಸ. ನಾರಾಯಣ

ಸುಮಾರು ಎಂಟು ಹತ್ತು ವರ್ಷಗಳ ಹಿಂದಿನ ಮಾತು. ಒಂದು ಸಂಜೆ ಗೆಳೆಯರೊಂದಿಗೆ ಹರಟೆ ಹೊಡೆಯುತ್ತಾ ನಿಂತಿದ್ದೆ. ಕೈಯಲ್ಲಿ ಒಂದೆರಡು ಪುಸ್ತಕ ಹಾಗೂ ಪತ್ರಿಕೆಯನ್ನು ಹಿಡಿದು ಓರ್ವ ಖಾದಿಧಾರಿ ಹಿರಿಯ ವ್ಯಕ್ತಿ ತಮ್ಮ ಗೆಳೆಯರೊಂದಿಗೆ ರಸ್ತೆಯಲ್ಲಿ ಮಾತನಾಡುತ್ತಾ ಬರುತ್ತಿದ್ದರು. ನನ್ನ ಮಿತ್ರರೊಬ್ಬರು ಅವರತ್ತ ನೋಡಿ "ಅವರು ಯಾರು ಗೊತ್ತೇ" ಎಂದರು.

"ನನಗೆ ಗೊತ್ತಿಲ್ಲದೆ ಏನು" ಎಂದೆ.

"ಅವರು ಯಾರು ಹೇಳಿ"

"ಗಾಂಧಿ ಭಕ್ತರು"

"ಅವರ ಹೆಸರು ಹೇಳಿ"

"ಅವರ ಹೆಸರು ಏನಾದರೂ ಇರಲಿ ಅವರು ಗಾಂಧಿ ಭಕ್ತರು—ದೇಶಭಕ್ತರು."

"ನಿಮಗೆ ಅವರ ಪರಿಚಯವಿದೆಯೆ ?"

"ಸುತ್ತಿ ಬಳಸಿ ಮಾತನಾಡುವುದೇಕೆ ನನಗೆ ಅವರ ಪರಿಚಯವಿಲ್ಲ. ಅವರು ಯಾರು ಅನ್ನುವುದು ಗೊತ್ತಿಲ್ಲ. ಯಾರು ಹೇಳಿ" ಎಂದೆ.

"ಪರ್ಣಕುಟಿ, ವಾರ್ಧಾಯಾತ್ರೆ ಓದಿದ್ದೀರಿ ತಾನೆ ?"

"ಹೌದು"

"ಅವುಗಳ ಲೇಖಕರು ಯಾರು"

"ಸಿದ್ದವನಹಳ್ಳಿ ಕೃಷ್ಣಶರ್ಮರು"

"ಈಗ ಅವರು ಯಾರು ಅಂತ ಗೊತ್ತಾಯ್ತು ತಾನೆ"

"ಹಾಗಾದರೆ ಅವರು ಸಿದ್ದವನಹಳ್ಳಿ ಕೃಷ್ಣಶರ್ಮರು"

"ನಿಜ" ಎಂದರು ನನ್ನ ಮಿತ್ರರು.

ನಾನು ಮೊದಲ ಬಾರಿಗೆ ಕೃಷ್ಣಶರ್ಮರನ್ನು ಕಂಡದ್ದು ಹೀಗೆ. ವೈಯಕ್ತಿಕವಾಗಿ ವಿಶೇಷ ನನಗೆ ಅವರ ಪರಿಚಯ ಬಹಳ ಕಡಿಮೆ. ಆದರೆ ಅವರ ಪ್ರತಿಭೆ, ಬಹುಮುಖ ವ್ಯಕ್ತಿತ್ವದ ಪರಿಚಯ ವಿಶೇಷವಾಗಿದೆ.

ಸಿದ್ದವನಹಳ್ಳಿ ಕೃಷ್ಣಶರ್ಮರು ಸಾಹಿತ್ಯ ಕ್ಷೇತ್ರದಲ್ಲಿ, ರಾಜಕೀಯ ಕ್ಷೇತ್ರದಲ್ಲಿ ಚಿರಪರಿಚಿತರು. ನೂರರಲ್ಲಿ ಒಬ್ಬರಾಗಿ ಬದುಕಿದ ವ್ಯಕ್ತಿಯಾಗದೆ ನೂರಕ್ಕೆ ಒಬ್ಬ ವ್ಯಕ್ತಿ ಎನ್ನುವ ರೀತಿಯಲ್ಲಿ ತಮ್ಮದೇ ಆದ ಮಾರ್ಗದಲ್ಲಿ ಮುನ್ನಡೆದ ಓರಿಯುವ ಶರ್ಮರು.

ಸಿದ್ದವನಹಳ್ಳಿ ಚಿತ್ರದುರ್ಗದಿಂದ ಸುಮಾರು ಆರು ಮೈಲಿ ದೂರದಲ್ಲಿರುವ ಒಂದು ದೊಡ್ಡ ಗ್ರಾಮ. ಕೃಷ್ಣಶರ್ಮರ ಪೂರ್ವಿಕರು ಇದೇ ಊರಿನವರು. ಶರ್ಮರು ಹುಟ್ಟಿದುದೂ ಇಲ್ಲೇ. ಅವರ ಹಿರಿಯರು ಸ್ವಾತಿಕರು. ಸದ್ಗುಣ ಸಂಪನ್ನರು. ಇಂದಿಗೂ ಶರ್ಮರಾದಿಯಾಗಿ ಅವರ ಬಂಧುಗಳು, ಸಹೋದರರು ಇಲ್ಲಿಯ ಜನರಿಗೆ ಚಿರಪರಿಚಿತರು. ಶರ್ಮರು ಹುಟ್ಟಿ ಬೆಳೆದ ಮನೆಯನ್ನು ಇಂದಿಗೂ ಕಾಣಬಹುದು.

ಸಿದ್ದವನಹಳ್ಳಿ ರಂಗಾಚಾರ್ ಮತ್ತು ಶೇಷಮ್ಮ ಕೃಷ್ಣಶರ್ಮರ ತಂದೆ ತಾಯಿಯರು. ಶರ್ಮರು ಹುಟ್ಟಿದುದು ಸಿದ್ದವನಹಳ್ಳಿಯಲ್ಲಾದರೂ ಅವರ ಶಿಕ್ಷಣ ನಡೆದದ್ದು ಮೈಸೂರು ನಗರದಲ್ಲಿ. ಹುಟ್ಟಿನೊಂದಿಗೇ ಸಾಹಿತ್ಯದ ಒಲವು ಅವರಿಗೆ ಮೈಗೂಡಿ ಬಂದಿತ್ತೆಂದು ತೋರುತ್ತದೆ. ಬಾಲ್ಯದಿಂದಲೂ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಅವರಿಗೆ ವಿಶೇಷ ಆಸಕ್ತಿ. ರಾಳ್ಳಪಲ್ಲಿ ಅನಂತ ಕೃಷ್ಣಶರ್ಮರ ಗರುಡಿಯಲ್ಲಿ ಪಳಗಿ ಗಟ್ಟಿತನ–ಜಟ್ಟಿತನವನ್ನೂ ಪಡೆದದ್ದು ಶರ್ಮರ ಹಿರಿಯತನ.

* * * *

ಕೃಷ್ಣಶರ್ಮರು ವಿದ್ಯಾರ್ಥಿಯಾಗಿದ್ದ ದಿನಗಳಲ್ಲಿಯೇ ಲೇಖಕರೂ ಆಗಿದ್ದರು. "ಹರಟೆಮಲ್ಲ" ಎಂಬ ಕಾವ್ಯನಾಮದಿಂದ ವಿಡಂಬನಾತ್ಮಕ ಲೇಖನಗಳನ್ನು ಬರೆದು ಪ್ರಕಟಿಸುತ್ತಿದ್ದರು. "ಹರಟೆ ಮಲ್ಲ" ಎಂಬ ಹೆಸರಿನ ಪತ್ರಿಕೆಯನ್ನೂ ನಡೆಸಿದರು. ಧಾರವಾಡದ ಗೆಳೆಯರ ಬಳಗದಲ್ಲಿ ಲೇಖಕ "ಹರಟೆ ಮಲ್ಲ", ಪತ್ರಿಕೆ "ಹರಟೆ ಮಲ್ಲ" ಗಳಿಸಿದ ಜನಪ್ರಿಯತೆ ಅಪಾರ.

ವಿದ್ಯಾಭ್ಯಾಸ ಮುಗಿಸಿದ ತರುಣದಲ್ಲಿ ಕೆಲಕಾಲ ಕೃಷ್ಣಶರ್ಮರು ತುಂಗಭದ್ರಾ ತೀರದ ಪಂಡಿತ ತಾರಾನಾಥರ ಆಶ್ರಮದಲ್ಲಿಯೂ ಆಶ್ರಯ ಪಡೆದಿದ್ದರು. ಆ ಅವಧಿಯಲ್ಲಿ ಅವರು ನಡೆಸಿದ ಸಾಧನೆ ಅಲ್ಪವಾದುದೇನಲ್ಲ. ಭವಿಷ್ಯದ ಕಾರ್ಯ ಚಟುವಟಿಕೆಗಳಿಗೆ, ನೀತಿ ನಿರೂಪಣೆಗಳಿಗೆ ತಾರಾನಾಥರ ಆಶ್ರಮ ಪೂರ್ವರಂಗವಾಯಿತು.

ಕೃಷ್ಣಶರ್ಮರು ಕೆಲವರ್ಷಗಳು ಅವರ ತಂದೆಯವರೊಂದಿಗೆ ಸಿದ್ದವನಹಳ್ಳಿಯಲ್ಲಿದ್ದು ಮಣ್ಣಿನ ಮಗನಾಗಿಯೂ ದುಡಿದರು. ರೈತನ ದಿನ ನಿತ್ಯದ ಸಮಸ್ಯೆಗಳು, ವ್ಯವಸಾಯ ಕ್ಷೇತ್ರದ ವ್ಯವಹಾರಗಳು, ದುಡಿಮೆ, ಶ್ರಮ, ಸಮಸ್ಯೆ, ಸಂತೃಪ್ತಿಗಳ ಪರಿಚಯ ಅವರಿಗೆ ಆಗ ಆಗದಿರಲಿಲ್ಲ. ಹೊಲದಲ್ಲಿ ರೈತನಾಗಿ ದುಡಿದು ವ್ಯವಸಾಯ ಕ್ಷೇತ್ರದ ಅನುಭವವನ್ನು ಶರ್ಮರು ಪಡೆದರು. ಯಾವ ಕ್ಷೇತ್ರದಲ್ಲಿ ದುಡಿದರೂ,

ಯಾವ ವೃತ್ತಿಯನ್ನು ಅವಲಂಬಿಸಿದರೂ ಶರ್ಮರು ನಿಷ್ಠೆಯಿಂದ ಪ್ರಾಮಾಣಿಕತನ ದಿಂದ, ದಕ್ಷತೆಯಿಂದ ತಮ್ಮ ಪಾಲಿನ ಕೆಲಸವನ್ನು ನಿರ್ವಹಿಸಿದರು.

ಹೈದರಾಬಾದ್‌ನಲ್ಲಿ ಕೃಷ್ಣಶರ್ಮರು ನಡೆಸಿದ ಚಟುವಟಿಕೆಗಳು ಅಚ್ಚರಿ ಪಡುವಂತಹವು. ಅವರ ಮಾವನವರು ಹೈದರಾಬಾದ್‌ನಲ್ಲಿ ಪೋಲೀಸ್ ಸರ್ಕಲ್ ಇನ್‌ಸ್ಪೆಕ್ಟರಾಗಿದ್ದರು. ಕೆಲಕಾಲ ಹೈದರಾಬಾದ್ ಅವರ ಕಾರ್ಯಕ್ಷೇತ್ರವೂ ಆಗಿತ್ತು. ಆರ್ಯ ಸಮಾಜದ ಆದರ್ಶ ಹಾಗೂ ತತ್ವಗಳನ್ನು ಅಂಗೀಕರಿಸಿದ್ದ ಶರ್ಮರು ಸಮಾಜದ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸಿದರು. ನಿಜಾಂ ಆಡಳಿತದ ವಿರುದ್ಧ ಲೇಖನಗಳನ್ನು ಬರೆದು ಜನತೆಯನ್ನು ಎಚ್ಚರಿಸಿದರು. ಉಪನ್ಯಾಸ ಗಳನ್ನು ನೀಡಿದರು. ಸಮಾಜದ ನಿಷ್ಠಾವಂತ ಕಾರ್ಯಕರ್ತರ ಚಟುವಟಿಕೆಗಳಿಂದ ಆಡಳಿತದ ಅಡಿಪಾಯವೇ ಅಲುಗಾಡಿತು. ಶರ್ಮರನ್ನು ಬಂಧಿಸಲು, ಶಿಕ್ಷಿಸಲು, ನಡೆದ ಪ್ರಯತ್ನಗಳೆಲ್ಲ ವಿಫಲವಾದವು. ಗುಡುಗುಂಟಿ ರಾಮಾಚಾರ್ಯ, ರಮಾನಂದ ತೀರ್ಥ, ಜನಾರ್ಧನರಾವ್ ದೇಸಾಯಿ ಮೊದಲಾದವರು ಶರ್ಮರ ಒಡನಾಡಿ ಗಳಾಗಿದ್ದರು. ಕೊನೆಯಲ್ಲಿ ಶರ್ಮರು ಹೈದರಾಬಾದ್‌ನಿಂದ (ನಿಜಾಂ ರಾಜ್ಯದಿಂದ) ಗಡೀಪಾರಾದರು. ಜೀವದ ಹಂಗು ತೊರೆದು ಹೋರಾಟದ ಕಣಕ್ಕಿಳಿದು ಎಲ್ಲ ಸಮಸ್ಯೆ ಗಳೊಂದಿಗೆ ಸೆಣಸಿದರು ಶರ್ಮರು. ಸೋಲಿಗೆ, ಸಮಸ್ಯೆಗಳಿಗೆ ಮಾತ್ರವೇ ಅಲ್ಲ ಸಾವಿಗೂ ಅಂಜದೆ, ಹಿಂಜರಿಯದೆ ಎದೆಗೊಟ್ಟು ನಿಂತ ಚೇತನ ಶರ್ಮರದು.

* * * *

ಕೆಲಕಾಲ ಧಾರವಾಡ ಕೃಷ್ಣಶರ್ಮರ ಕಾರ್ಯಕ್ಷೇತ್ರವಾಗಿತ್ತು. ಆ ಕಾಲದಲ್ಲಿ ಬೆಂಗಳೂರು ಮೈಸೂರುಗಳನ್ನು ಬಿಟ್ಟರೆ ಕನ್ನಡ ಸಾಹಿತ್ಯದ ಕೇಂದ್ರ ನೆಲೆ ಧಾರವಾಡ ವೆಂದೇ ಹೇಳಬಹುದು. ಧಾರವಾಡದಲ್ಲಿ ಕೃಷ್ಣಶರ್ಮರು ಹಿರಿಯ ಕಿರಿಯ ಸಾಹಿತಿಗಳ ಸಂಗದಲ್ಲಿ ನಡೆಸಿದ ಸಾಹಿತ್ಯಿಕ, ಸಾಂಸ್ಕೃತಿಕ ಕಾರ್ಯಚಟುವಟಿಕೆಗಳು ಅಸಂಖ್ಯಾತ. ಆಗ ಧಾರವಾಡ ಸಾಹಿತ್ಯ ಸ್ವಾತಂತ್ರ್ಯ ಸಂಗ್ರಾಮಕ್ಕೆ ಅತಿರಥ ಮಹಾರಥರ ತವರು ಮನೆಯಾಗಿತ್ತು. ಮಿಂಚಿನ ಬಳ್ಳಿ ಕಾರ್ಯಾಲಯ ಎಲ್ಲ ಕಾರ್ಯ ಚಟುವಟಿಕೆಗಳ ಕೇಂದ್ರಸ್ಥಾನ. ದ. ರಾ. ಬೇಂದ್ರೆ, ಜೋಷಿ, ಕುಲಕರ್ಣಿ, ಬಿಂದು ಮಾಧವ, ಆಲೂರ ವೆಂಕಟರಾಯರು, ಹುಕ್ಕೇರಿ ರಾಮರಾಯರು, ಪ್ರಹ್ಲಾದರಾವ್ ನವೇಗಲ್, ಶಂ. ಬಾ. ಜೋಷಿ ಮೊದಲಾದವರ ಒಡನಾಟ. ಕೃಷ್ಣಶರ್ಮರು ಗೆಳೆಯರೊಂದಿಗೆ ನಡೆಸಿದ ಚಿಂತನ ಮಂಥನ, ಕಾರ್ಯಚಟುವಟಿಕೆಗಳು ಮೆಚ್ಚುವಂತಹವು. ಎಲ್ಲಿ ಹೋದರೂ ಶರ್ಮರು ಒಂಟಿಯಲ್ಲ. ಸದಾ ಗೆಳೆಯರ ಗುಂಪು. ಯಾವುದೋ ಒಂದು ಸಂಸ್ಥೆ. ಕೇವಲ ವ್ಯಕ್ತಿಯಾಗಿಯೇ ಉಳಿಯದೆ ಶಕ್ತಿಯಾಗಿ, ಚೇತನವನ್ನು ಹರಿಸಿದ ಜೀವ ಶರ್ಮರದು. ಮಿಂಚಿನ ಬಳ್ಳಿ ಕಾರ್ಯಾಲಯ ಚಟುವಟಿಕೆಗಳ ಕೇಂದ್ರ ವಾಗಿದ್ದಂತೆಯೇ ಹಲವಾರು ಪ್ರಮುಖ ಕೃತಿಗಳನ್ನು ಪ್ರಕಟಿಸಿದ ಕೀರ್ತಿಯನ್ನು ಪಡೆಯಿತು.

ಕಿರಿಯ ಸಂಸ್ಥಾನಗಳ ಪರಿಷತ್ತಿನ ಅಧ್ಯಕ್ಷರು ದಿ. ಪಂ. ಜವಹಾರಲಾಲ ನೆಹರು. ಕೃಷ್ಣಶರ್ಮರು ಈ ಪರಿಷತ್ತಿನ ಕಾರ್ಯದರ್ಶಿಗಳಾಗಿ ದಕ್ಷತೆಯಿಂದ ಪರಿಷತ್ತಿನ ಕಾರ್ಯಕ್ರಮಗಳನ್ನು ನಡೆಸಿದರು.

ಮಹಾತ್ಮ ಗಾಂಧೀಜಿಯವರ ಉಪದೇಶ, ಆದರ್ಶಗಳಿಗೆ ಪ್ರಭಾವಿತರಾದವರ ಸಂಖ್ಯೆ ಕಡಿಮೆಯಲ್ಲ. ಆದರೆ ಗಾಂಧೀಜಿಯವರ ಆದರ್ಶಗಳನ್ನು ನಿಷ್ಠೆಯಿಂದ ಅನು ಸರಿಸಿದವರು, ಅವರ ತತ್ವಗಳನ್ನು ಅನುಷ್ಠಾನಕ್ಕೆ ತಂದವರ ಸಂಖ್ಯೆ ಬಹಳ ಕಡಿಮೆ ಎನ್ನಬಹುದು. ಗಾಂಧೀಜಿಯವರ ಆದರ್ಶಗಳನ್ನು ಅನುಷ್ಠಾನಕ್ಕೆ ತಂದವರ ಪೈಕಿ ಕೃಷ್ಣಶರ್ಮರು ಒಬ್ಬರು. ಆ ತತ್ವಗಳನ್ನು ನಿತ್ಯ ಜೀವನದಲ್ಲಿಯೂ ಅನುಸರಿಸಿದರು. ಅಳವಡಿಸಿಕೊಂಡರು. ಗಾಂಧೀಜಿಯವರ ಒಡನಾಡಿಯಾಗಿ ಕೃಷ್ಣಶರ್ಮರು ಕೆಲಕಾಲ ವಾರ್ಧಾ ಆಶ್ರಮದಲ್ಲಿಯೂ ಇದ್ದರು. ಜಮನ್‌ಲಾಲ್ ಬಜಾಜ್, ಜೆ. ಸಿ. ಕುಮಾರಪ್ಪ, ಆರ್ಯನಾಯಕಂ, ಭರತನ್, ಕುಮಾರಪ್ಪ ಮೊದಲಾದವರ ಸ್ನೇಹ ಲಾಭ ಶರ್ಮರಿಗೆ ವಾರ್ಧಾದಲ್ಲಿ ಲಭಿಸಿತು. ಗಾಂಧೀಜಿಯವರೊಂದಿಗೆ ಕೃಷ್ಣಶರ್ಮರು ರಚನಾತ್ಮಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಶಿಸ್ತಿನ ಸಿಪಾಯಿ ಎಂಬ ಕೀರ್ತಿ ಪಡೆದಿದ್ದ ಮಹಾತ್ಮರೊಂದಿಗೆ ಕೃಷ್ಣಶರ್ಮರು ರಚನಾತ್ಮಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಂತೆಯೇ ಬರವಣಿಗೆಯನ್ನು ಮುಂದುವರಿಸಿದರು. ಎಲ್ಲಿಯೂ ಶರ್ಮರ ಅಧ್ಯಯನ, ಲೇಖನಗಳಿಗೆ ಬಿಡುಗಡೆ ಭಂಗಬರಲಿಲ್ಲ. ತಮ್ಮ ಅವಿಶ್ರಾಂತ ಕಾರ್ಯ ಚಟುವಟಿಕೆಗಳ ಮಧ್ಯೆ ಬಿಡುವು ಮಾಡಿಕೊಂಡು ಓದುತ್ತಿದ್ದರು, ಬರೆಯುತ್ತಿದ್ದರು. ಈ ಪ್ರವೃತ್ತಿ ಅವರಿಗೆ ಮೈಗೂಡಿ ಬಂದಿತ್ತು. ಪರ್ಣಕುಟಿ, ವಾರ್ಧಾಯಾತ್ರೆ, ದೀಪ ಮಾಲೆ, ಗ್ರಂಥಗಳ ರಚನೆ ಈ ಅವಧಿಯಲ್ಲಿಯೇ ಮೈತಳೆದು ನಿಂತದ್ದು.

* * * *

ವಾರ್ಧಾದಿಂದ ಹಿಂದಿರುಗಿದನಂತರ ಕೃಷ್ಣಶರ್ಮರು ಕೆಲ ಕಾಲ ಚಿತ್ರದುರ್ಗ ದಲ್ಲಿ ತಮ್ಮ ಕಾರ್ಯ ಚಟುವಟಿಕೆಗಳನ್ನು ವಿಸ್ತರಿಸಿದರು. ಸಿದ್ದನವಹಳ್ಳಿ ಅವರ ಹುಟ್ಟೂರು ಆದರೂ ಕೃಷ್ಣಶರ್ಮರ ಚಟುವಟಿಕೆಗಳ ಮುಖ್ಯ ಕೇಂದ್ರ ಚಿತ್ರದುರ್ಗ. ಕರ್ನಾಟಕ ಸಂಘದ ಸ್ಥಾಪನೆ, ಬೆಳವಣಿಗೆ, ಪ್ರಗತಿ, ಕೀರ್ತಿಗಳ ಪರಂಪರೆಗೆ ಕೃಷ್ಣ ಶರ್ಮರ ದಕ್ಷ ಮುಂದಾಳುತನ. ದುಡಿಮೆ ಮುಖ್ಯ ಕಾರಣ ಎಂಬುದನ್ನು ಮರೆಯು ವಂತಿಲ್ಲ. ಸಾಹಿತ್ಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ಚಿತ್ರದುರ್ಗದಲ್ಲಿ ಅಪರೂಪ ಎನ್ನುವಂತಿದ್ದ ಆ ಕಾಲದಲ್ಲಿ ಹಿರಿಯ ಕಿರಿಯ ಅಭಿಮಾನಿಗಳನ್ನು ಉತ್ಸಾಹಶಾಲಿ ಗಳನ್ನು ಒಂದುಗೂಡಿಸಿ ಶರ್ಮರು ಹೆಮ್ಮೆ ಪಡುವಂತಹ ಕಾರ್ಯಕ್ರಮಗಳನ್ನು ನಡೆ ಸಿದರು. ಚಿತ್ರದುರ್ಗದಲ್ಲಿ ಕರ್ನಾಟಕ ಸಂಘದ ಆಶ್ರಯದಲ್ಲಿ ವಸಂತ ಸಾಹಿತ್ಯೋತ್ಸವ ನಡೆಸಲು ವ್ಯವಸ್ಥೆ ಮಾಡಿದರು. ಕಾರಂತ, ಟಿ. ಟಿ. ಶರ್ಮ, ತಳಕಿನ ವೆಂಕಣ್ಣಯ್ಯ, ಬೇಂದ್ರೆ, ಅ.ನ.ಕೃ ಅಂತಹ ಉದ್ದಾಮ ಸಾಹಿತಿಗಳನ್ನು ಆಹ್ವಾನಿಸಿ ಉಪನ್ಯಾಸಗಳನ್ನು

ನಡೆಸಿದರು. ಕೃಷ್ಣಶರ್ಮರ ಈ ದುಡುಮೆಗೆ, ಕಾರ್ಯಚಟುವಟಿಕೆಗಳಿಗೆ ಬೆಂಬಲ ನೀಡಿದವರಲ್ಲಿ ಕೃಷ್ಣಶರ್ಮರ ತಮ್ಮ ರಾಜಗೋಪಾಲ್, ತ. ರಾ. ಸು., ಮ. ಶ್ರೀಧರ ಮೂರ್ತಿ, ಕ. ಬಾ. ಮಾಧವರಾವ್ ಮೊದಲಾದವರು ಮುಖ್ಯರು.

* * * *

ಕೃಷ್ಣಶರ್ಮರು ಮುಂದೆ ತಮ್ಮ ಕಾರ್ಯಕ್ಷೇತ್ರವನ್ನು ಚಿತ್ರದುರ್ಗದಿಂದ ಬೆಂಗಳೂರಿಗೆ ಬದಲಿಸಿದರು. ಹಲ ಬಗೆಯ ಕಾರಣಗಳಿಂದ ಈ ಬದಲಾವಣೆ ಅನಿವಾರ್ಯವಾಯಿತು. ಶರ್ಮರು ಗಾಂಧೀಜಿಯವರ 'ಹರಿಜನ' ಪತ್ರಿಕೆಯನ್ನು ಕನ್ನಡದಲ್ಲಿ ಭಾಷಾಂತರಿಸಿ ಪ್ರಕಟಿಸುವ ವ್ಯವಸ್ಥೆ ಮಾಡಿದರು. ಆದರೆ ಹೆಚ್ಚು ಕಾಲ ಆಯಸ್ಸು ಆರೋಗ್ಯಗಳನ್ನು ಪಡೆದು ಬದುಕುವ ಯೋಗ ಕನ್ನಡ ಹರಿಜನ ಪತ್ರಿಕೆಗೆ ಇಲ್ಲವಾಯಿತು.

ತಿರುಮಲೆ ತಾತಾಚಾರ್ಯ ಶರ್ಮರ ಅನಾರೋಗ್ಯ ನಿಮಿತ್ತವಾಗಿ 'ವಿಶ್ವ ಕರ್ನಾಟಕ' ದಿನ ಪತ್ರಿಕೆಯ ಸಂಪಾದಕತ್ವ ಕೊಂಚಕಾಲ ವಹಿಸುವ ಹೊಣೆಗಾರಿಕೆ ಕೃಷ್ಣಶರ್ಮರ ಪಾಲಿಗೆ ಬಂದಿತು. 'ವಿಶ್ವಕರ್ನಾಟಕ' ಸ್ವಾತಂತ್ರ್ಯ ಪೂರ್ವದಲ್ಲಿ ಕರ್ನಾಟಕದಲ್ಲಿ (ಮುಖ್ಯವಾಗಿ ಹಳೆಯ ಮೈಸೂರು ರಾಜ್ಯದಲ್ಲಿ) ಸಮಕಾಲೀನ ರಾಜಕೀಯವನ್ನು ಬೆಳಕಿಗೆ ತರುತ್ತಿದ್ದ ಪ್ರಮುಖ ದಿನಪತ್ರಿಕೆ. ನಿತ್ಯದ ಸ್ವಾತಂತ್ರ್ಯ ಚಳುವಳಿ ಹೋರಾಟಗಳ ಸತ್ಯ ಕಥೆಯನ್ನು ಪ್ರಕಟಿಸುತ್ತಿದ್ದ ಸ್ವಾತಂತ್ರ್ಯಾಭಿಮಾನಿ ಪತ್ರಿಕೆ. ತಾನು ಉಳಿದಿದ್ದಷ್ಟು ಕಾಲ ಸಮಾಜಕ್ಕೆ, ಜನತೆಗೆ ಅಪೂರ್ವ ಸೇವೆ ಸಲ್ಲಿಸಿದ ಕೀರ್ತಿ 'ವಿಶ್ವಕರ್ನಾಟಕ' ಪತ್ರಿಕೆಗೆ ಸಲ್ಲುತ್ತದೆ. ಕೃಷ್ಣಶರ್ಮರ ಪ್ರವೇಶದಿಂದ 'ವಿಶ್ವ ಕರ್ನಾಟಕ' ಪತ್ರಿಕೆ ನವಚೇತನವನ್ನು ಪಡೆದು ಬೆಳೆಯಿತು. ಕೃಷ್ಣಶರ್ಮರ ಅಪೂರ್ವ ಲೇಖನ ಶಕ್ತಿ ಜನ ಮನ ಮುಟ್ಟಿದುದು ಈ ಪತ್ರಿಕೆಯಿಂದ. 'ವಿಶ್ವಕರ್ನಾಟಕ' ಪತ್ರಿಕೆಯ ಆಧಾರಸ್ತಂಭವಾಗಿ ಶರ್ಮರು ದುಡಿದರು. ಶರ್ಮರು ದಕ್ಷ, ಹಿರಿಯ ಪತ್ರಿಕೋದ್ಯಮಿ ಎಂಬ ಕೀರ್ತಿಯನ್ನು ಪಡೆಯಲು ಬಹುಕಾಲ ಬೇಕಾಗಲಿಲ್ಲ.

* * * *

ಪತ್ರಿಕಾರಂಗದಿಂದ ಸ್ವಾತಂತ್ರ್ಯ ಚಳುವಳಿ, ಕಾಂಗ್ರೆಸ್ ಚಳುವಳಿ, ವಿದ್ಯಾರ್ಥಿ ಚಳುವಳಿಗಳಿಗೆ ಕೃಷ್ಣಶರ್ಮರು ಪಾದಾರ್ಪಣೆ ಮಾಡಿದರು. ವಿದ್ಯಾರ್ಥಿ ಚಳುವಳಿಯ ನಾಯಕತ್ವವನ್ನು ವಹಿಸಿದ್ದರು. ನಂಜನಗೂಡು, ಶಿವಮೊಗ್ಗಗಳಲ್ಲಿ ನಡೆದ ಸ್ಟೂಡೆಂಟ್ಸ್ ರ‍್ಯಾಲಿಗಳ ನಾಯಕತ್ವವನ್ನು ವಹಿಸಿದ್ದರು. ಅಚ್ಯುತರಾವ್ ಪಟವರ್ಧನ್, ಅಶೋಕ ಮೆಹ್ತಾ, ಹಂಸಾ ಮೆಹ್ತಾ ಮೊದಲಾದವರು ಶರ್ಮರ ಸಹಚರರು ಆಗ. ಶಿವಮೊಗ್ಗ ವಿದ್ಯಾರ್ಥಿ ಸಮ್ಮೇಳನದ ಅಧ್ಯಕ್ಷರು ರಾಮಚಂದ್ರನ್.

ಆರ್ಥಿಕ ಎಡರುತೊಡರುಗಳಿಂದಾಗಿ ವಿಶ್ವಕರ್ನಾಟಕ ಪತ್ರಿಕೆಯ ಪ್ರಕಟಣೆಯು

ಸಿಲುಗಡೆ ಅನಿವಾರ್ಯವಾಯಿತು. ಪರಿಸ್ಥಿತಿಗಳ ಒತ್ತಡಕ್ಕೆ ಕೃಷ್ಣಶರ್ಮರು ತಾತ್ಕಾಲಿಕವಾಗಿ ಮಣಿಯಲೇಬೇಕಾಯಿತು. ವಿನೋಬಾ ಸಿದ್ಧಾಂತಗಳನ್ನು ಅಂಗೀಕರಿಸಿದ್ದ ಕೃಷ್ಣಶರ್ಮರು ಆ ತತ್ವಗಳ ನಿರೂಪಣೆ, ಪ್ರಚಾರಕ್ಕಾಗಿ ಪತ್ರಿಕಾ ಮಾಧ್ಯಮವನ್ನು ಮತ್ತೆ ಅನುಸರಿಸಲೇಬೇಕಾಯಿತು. 'ಸರ್ವೋದಯ' ಪತ್ರಿಕೆ ಶರ್ಮರ ಸಂಪಾದಕತ್ವದಲ್ಲಿ ಪ್ರಕಟಣೆಯನ್ನು ಆರಂಭಿಸಿತು ಒಂದಲ್ಲ ಒಂದು ರೀತಿಯಲ್ಲಿ ಲೇಖನಿ, ಪತ್ರಿಕೆಗಳು ಶರ್ಮರ ಸಂಗಾತಿಗಳಾಗಿ ಬಿಡದೆ ಹಿಂಬಾಲಿಸುತ್ತಿದ್ದವು.

ಗಾಂಧಿ ಸಾಹಿತ್ಯವನ್ನು ಕರ್ನಾಟಕಕ್ಕೆ ಪರಿಚಯ ಮಾಡಿಕೊಟ್ಟ ಕೀರ್ತಿ ಶರ್ಮರಿಗೆ ಸಲ್ಲುತ್ತದೆ. ಅವರು ಬರೆದ ಗಾಂಧಿ ಸಾಹಿತ್ಯದ ಮೊದಲ ಸಂಚಿಕೆಯನ್ನು ಡಾ|| ರಾಜೇಂದ್ರ ಪ್ರಸಾದರು ಬಿಡುಗಡೆ ಮಾಡಿದರು.

ಚಿತ್ರದುರ್ಗದಿಂದ ಬೆಂಗಳೂರಿಗೆ ಬಂದು ನೆಲೆಸಿದ ತರುಣದಲ್ಲಿ ಕೃಷ್ಣಶರ್ಮರು 'ವಾಹಿನಿ' ಮಾಸಪತ್ರಿಕೆಯ ಸಂಪಾದಕ ಮಂಡಳಿಯಲ್ಲಿಯೂ ಕೆಲಸ ನಿರ್ವಹಿಸಿದರು. ಅವರು ಕೆಲಕಾಲ 'ಜೀವನ' ಮಾಸಪತ್ರಿಕೆಯ ಸಂಪಾದಕರೂ ಆಗಿದ್ದರು.

* * * *

ಕನ್ನಡ ಸಾಹಿತ್ಯ ಪರಿಷತ್ತಿಗೂ ಕೃಷ್ಣಶರ್ಮರಿಗೂ ವಿಶೇಷ ನಂಟು. ಅವರು ಕೆಲ ಕಾಲ ಪರಿಷತ್ತಿನ ಕಾರ್ಯದರ್ಶಿಗಳೂ ಆಗಿದ್ದರು. ಗುಲ್ಬರ್ಗಾದಲ್ಲಿ ಡಾ. ರೆವರೆಂಡ್ ಉತ್ತಂಗಿ ಚೆನ್ನಪ್ಪನವರ ಅಧ್ಯಕ್ಷತೆಯಲ್ಲಿ ನಡೆದ 32ನೇ ಕನ್ನಡ ಸಾಹಿತ್ಯ ಸಮ್ಮೇಳನದ ಯಶಸ್ಸಿಗೆ ಶರ್ಮರ ದುಡಿಮೆ, ದಕ್ಷ ನಿರ್ದೇಶನ ಮುಖ್ಯ ಕಾರಣ ಎಂಬುದನ್ನು ಮರೆಯುವಂತಿಲ್ಲ.

ಶರ್ಮರದು ಬಹು ಮುಖ ಪ್ರತಿಭೆ, ಬಹು ಮುಖ ದುಡಿಮೆ, ದಕ್ಷತೆ, ಶ್ರದ್ಧೆ, ದುಡಿಮೆಗಳ ತ್ರಿವೇಣಿ ಸಂಗಮದ ಸಾಕಾರ ಮೂರ್ತಿಯಾಗಿ ಜೀವನ ನಡೆಸಿದವರು. ಕೃಷ್ಣಶರ್ಮರು ಇನ್ನೊಬ್ಬರ ಮೆಚ್ಚುಗೆ, ಪದವಿ, ಗದ್ದುಗೆಗಳಿಗಾಗಿ, ಕೀರ್ತಿ, ಹೆಸರುಗಳ ಹೆಗ್ಗಳಿಕೆಗಳಿಗಾಗಿ ಅವರು ಯಾವ ಕೆಲಸವನ್ನೂ ಮಾಡಲಿಲ್ಲ.

ಶಾಲೆ ಕಾಲೇಜುಗಳಲ್ಲಿ ಕಲಿಯುಗದ ವಿದ್ಯೆ, ಅನುಭವಗಳನ್ನು ಶರ್ಮರು ಬದುಕಿನಲ್ಲಿ ಕಲಿತರು. ಅಗಾಧವಾದ ಪ್ರತಿಭೆಯನ್ನು ಸಂಪಾದಿಸಿದರು. ಜೀವನ ಅವರಿಗೆ ಕಲಿಸಿದ ವಿದ್ಯೆ, ನೀಡಿದ ನಿರ್ದೇಶನ ಬಹು ತೂಕದ್ದು. ಅವರ ಬದುಕು ಭಾವನೆ, ಬರವಣಿಗೆ ಎಲ್ಲವೂ ಸರಳ. 'ತಾನುಂಬೋ ಮೂರು ಲೋಕವುಂಬೋ' ಎನ್ನುವ ಗುಂಪಿಗೆ ಸೇರಲಿಲ್ಲ. 'ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ' ಬದುಕಿನ ಆದರ್ಶದ ಮೇಲೆ ಮುಂದಡಿ ಇಟ್ಟವರು ಕೃಷ್ಣಶರ್ಮರು. ಪತ್ರಿಕೋದ್ಯಮ, ಗಾಂಧಿವಾದಿ–ಆದರ್ಶವಾದಿ, ಸ್ವಾತಂತ್ರ್ಯ ಹೋರಾಟಗಾರ, ಸಾಹಿತಿ ಹೀಗೆ ನಾನಾ ರೂಪಗಳು ಶರ್ಮರದು. ಎಲ್ಲವೂ ಹಿತ-ಮಿತ.

1942 ರಲ್ಲಿ ಗಾಂಧೀಜಿಯವರು 'ಕ್ವಿಟ್ ಇಂಡಿಯಾ' (Quit India)

ಘೋಷಣೆಯನ್ನು ಮಾಡಿದರು. ಗಾಂಧೀಜಿಯವರ ಈ ಘೋಷಣೆ ಭಾರತಾದ್ಯಂತ ಪ್ರತಿಧ್ವನಿಸಿತು. 'ಮಾಡು ಇಲ್ಲವೇ ಮಡಿ' ಸ್ವಾತಂತ್ರ್ಯ ಹೋರಾಟಗಾರರ ಗಾಯಿತ್ರಿಯಾಯಿತು. ಕೃಷ್ಣಶರ್ಮರು ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯ ಪಾತ್ರ ವನ್ನು ವಹಿಸಿದರು. ಸರ್ಕಾರ ಈ ಅವಧಿಯಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಚಟುವಟಿಕೆಗಳಿಗೆ ನಡುಗಿತು. ಕೃಷ್ಣಶರ್ಮರು ಬಂಧನಕ್ಕೆ ಒಳಗಾಗಬೇಕಾಯಿತು. ಸೆರೆಮನೆಯ ವಾಸವನ್ನು ಅನುಭವಿಸಬೇಕಾಯಿತು. ಈ ಅವಧಿಯಲ್ಲಿ ಅವರು 'ಇನ್ನು ಸಾಕು' ಎನ್ನುವ ಕೃತಿಯನ್ನು ರಚಿಸಿ ಪ್ರಕಟಣೆಯ ಪ್ರಯತ್ನವನ್ನು ನಡೆಸಿದರು. ಆದರೆ ಈ ಕೃತಿ ಮುದ್ರಣಾಲಯದಲ್ಲಿಯೇ ಪ್ರತಿಬಂಧಕಾಜ್ಞೆಗೆ ಒಳಗಾಗಬೇಕಾ ಯಿತು. ಕೃಷ್ಣಶರ್ಮರ ಲೇಖನಿ ಸ್ವಾತ್ರಂತ್ರ್ಯ ಹೋರಾಟಗಾರರಲ್ಲಿ ಕೆಚ್ಚು-ಆತ್ಮ ವಿಶ್ವಾಸ, ಆತ್ಮಾರ್ಪಣ ಮನೋಭಾವವನ್ನು ಬೆಳಸುವ ವಜ್ರದಂಡವಾಗಿತ್ತು. ಕಾರಾ ಗೃಹವಾಸದಿಂದ ಬಿಡುಗಡೆ ಹೊಂದಿ ಹೊರಬಂದರು.

* * * *

ಸರ್ವೋದಯ ಕಾರ್ಯಕ್ರಮ, ಆದರ್ಶ, ಉದ್ದೇಶ ಸಾಧನೆಗಳನ್ನು ಮನ ಗಂಡ ಕೃಷ್ಣಶರ್ಮರು ಆ ತತ್ವ ನಿರೂಪಣೆಗೆ ಕಾರ್ಯೋನ್ಮುಖರಾದರು. ಬೆಂಗಳೂರು ಸಮೀಪದ ವಿಶ್ವನೀಡಂನಲ್ಲಿ ಸರ್ವೋದಯದ ಉದ್ದೇಶ ಸಾಧನೆಗಳಿಗಾಗಿ ಕಾರ್ಯಕ್ಷೇತ್ರ ವನ್ನು ಆರಂಭಿಸಿದರು. ಈ ಕೇಂದ್ರ ಅವರ ದಕ್ಷತೆ, ಪ್ರತಿಭೆ, ಅನುಭವಗಳ ಮೂರ್ತಿ ರೂಪವಾಗಿ ಬೆಳೆಯಿತು. ಅವರ ಪ್ರತಿಭೆಗೆ ಇಂತಹ ನಿದರ್ಶನಗಳು ಹಲವು.

* * * *

ಸಹಕಾರ ಕ್ಷೇತ್ರ (co-operative) ದಲ್ಲಿ ಕೃಷ್ಣಶರ್ಮರ ದುಡುಮೆ ಅಲ್ಪ ವಾದುದೇನಲ್ಲ. ಆ ಕಾಲದಲ್ಲಿ ಈ ಸಹಕಾರ ತತ್ವಗಳ ಪರಿಚಯವಿದ್ದುದು ಹಲಕೆಲ ವರಿಗೆ ಮಾತ್ರವೇ ಎಂದರೂ ತಪ್ಪಾಗಲಾರದು. ಸಹಕಾರ ತತ್ವಗಳನ್ನು ಅನುಷ್ಠಾ ನಕ್ಕೆ ತರುವುದರಲ್ಲಿ ಶರ್ಮರದು ಸ್ಮರಣೀಯ ಪಾತ್ರ. ಮಲ್ಲೇಶ್ವರಂ ಕೋ-ಆಪರೇಟಿವ್ ಸೊಸೈಟಿಯ ಡೈರೆಕ್ಟರಾಗಿ ಅದರ ಪ್ರಗತಿ-ಬೆಳವಣಿಗೆಗಳಿಗೆ ಶರ್ಮರು ದುಡಿದರು. ಮುಂದೆ ಶ್ರೀ ರಾಮ ಕೋ ಆಪರೇಟಿವ್ ಬ್ಯಾಂಕಿನ ಸ್ಥಾಪಕರೂ ಆದರು. ಅದರ ನಿರ್ದೇಶಕರಾಗಿ ಸಮರ್ಥನೀಯ ಶ್ರದ್ಧಾಪೂರ್ಣ ಸೇವೆ ಸಲ್ಲಿಸಿದರು.

* * * *

ಬೆಂಗಳೂರು ಮಲ್ಲೇಶ್ವರಂನ ಗಾಂಧಿ ಸಾಹಿತ್ಯ ಸಂಘ ಕೃಷ್ಣಶರ್ಮರ ತ್ಯಾಗ, ದುಡಿಮೆ, ದಕ್ಷತೆಗಳ ಪ್ರತಿರೂಪ. ಗಾಂಧಿ ಸಾಹಿತ್ಯ ಸಂಘದ ಬೆಳವಣಿಗೆ, ಹಿರಿಮೆ ಗಳಿಗೆ ಅವರು ನೀಡಿದ ನಿರ್ದೇಶನ, ಸಲ್ಲಿಸಿದ ಸೇವೆ ಗಮನಾರ್ಹವಾದುದು. ಗಾಂಧೀಜಿ

ಯವರಲ್ಲಿ, ಅವರ ತತ್ವಗಳಲ್ಲಿ ಅಪಾರ ಗೌರವ, ನಂಬಿಕೆ, ಶ್ರದ್ಧೆಗಳನ್ನು ಹೊಂದಿರುವ ಶರ್ಮರು ಅವುಗಳನ್ನು ನಿತ್ಯ ಜೀವನದಲ್ಲಿ ಅನುಸರಿಸಿ ಬದುಕುತ್ತಿರುವ ಹಿರಿಯ ವ್ಯಕ್ತಿ. ಗಾಂಧಿ ಸಾಹಿತ್ಯ ಸಂಘ ಅವರ ಜೀವಂತ ಸ್ಮಾರಕ ಎಂದೇ ಹೇಳಬಹುದು.

ಕೃಷ್ಣಶರ್ಮರು ಹೆಸರಾಂತ ಲೇಖಕರು. ಅವರು ಸಿದ್ಧಹಸ್ತರೂ ಹೌದು–ಪ್ರಸಿದ್ಧ ಹಸ್ತರೂ ಹೌದು. ಅವರು ಕಥೆ, ಕಾದಂಬರಿಗಳನ್ನು ಬರೆದು ಪ್ರಸಿದ್ಧರಾಗಲಿಲ್ಲ. ಅವರು ಒಂದುವೇಳೆ ಕಥೆ, ಕಾದಂಬರಿಗಳನ್ನು ಬರೆದಿದ್ದರೆ ಅವರ ಲೇಖನಿಯ ಬೆಲೆ–ಬಲ ಮತ್ತಷ್ಟು ಹೆಚ್ಚುತ್ತಿತ್ತು. ಆದರೆ ಅವರು ಸೃಷ್ಟಿಸಿದ ಸಾಹಿತ್ಯ ಕಡಿಮೆಯೂ ಅಲ್ಲ, ಕಳಪೆಯೂ ಅಲ್ಲ. ಶರ್ಮರ ಅಪೂರ್ವ ಗದ್ಯ ಶೈಲಿ ಅಪಾರವಾದುದು. ಆಪ್ಯಾಯಮಾನವಾದ ಭಾಷಾ ಸಂಪತ್ತು. ಸಾಮಾಜಿಕವಾಗಿ ರಾಜಕೀಯವಾಗಿ ಅಥವಾ ಗಾಂಧೀವಿಚಾರವಾಗಿ, ಯಾವುದೇ ವಿಷಯವಾಗಲಿ–ಯಾವ ವಸ್ತುವನ್ನೇ ಲೇಖನಕ್ಕೆ ಆರಿಸಿಕೊಳ್ಳಲಿ ಎಲ್ಲವೂ ಸೊಗಸು. ಚಿಕ್ಕ ಚಿಕ್ಕ ವಾಕ್ಯಗಳು, ಮನಮುಟ್ಟುವ, ಮತ್ತೊಮ್ಮೆ ಓದಬೇಕೆನ್ನಿಸುವಂತಹ ಮಾದರಿಯ ಬರವಣಿಗೆ. ಅವರ ಬರವಣಿಗೆ ಖಡ್ಗದಷ್ಟು ಹರಿತ, ಜೊತೆಗೆ ಹೂವಿನಷ್ಟು ಕೋಮಲ.

ವಿನೋಬಾರವರ ಗೀತಾ ಪ್ರವಚನವನ್ನು ಕನ್ನಡಕ್ಕೆ ಭಾಷಾಂತರಿಸಿ ಆ ಕೃತಿಯನ್ನು ಆಚಾರ್ಯ ವಿನೋಬಾರವರಿಗೆ ಅರ್ಪಿಸಿದ್ದಾರೆ.

ಕೃಷ್ಣಶರ್ಮರ ಬರವಣಿಗೆಯನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು. ಮೊದಲನೆಯದಾಗಿ ಅವರ ಸ್ವತಂತ್ರ ಕೃತಿಗಳು. ಅವರ ಲೇಖನಿಯಿಂದ ಹರಿದು ಬಂದ ಸ್ವಾನುಭವದ ವಿಚಾರಧಾರೆ. ಎರಡನೆಯದು ಭಾಷಾಂತರ ಕೃತಿಗಳು. ಭಾಷಾಂತರ ಕಾರ್ಯ ಸುಲಭಸಾಧ್ಯವಾದುದಲ್ಲ. ಮೂಲ ಕೃತಿಗೆ ಅಪಚಾರವಾಗದಂತೆ ವಿಚಾರ ನಿರೂಪಣೆಯಾಗಬೇಕು. ಸ್ವಂತ ಕೃತಿಗಳ ರಚನೆಯಲ್ಲಿ ಕಾಣುವ ಗಟ್ಟಿತನ, ಹಿರಿಯತನ ಶರ್ಮರ ಭಾಷಾಂತರ ಕೃತಿಗಳಲ್ಲಿಯೂ ಕಾಣುತ್ತೇವೆ.

ದಿ|| ಕೆ. ಎಂ. ಮುನ್ಷಿಯವರ ಕೃಷ್ಣಾವತಾರವನ್ನು ಭಾಷಾಂತರಿಸಿ ಕನ್ನಡ ಸಾರಸ್ವತ (ಸಾಹಿತ್ಯ) ಲೋಕಕ್ಕೆ ಪರಿಚಯ ಮಾಡಿಕೊಟ್ಟರು. ಶ್ರೀ ರಾಮಾವತಾರ ಅವರ ಸ್ವಂತ–ಸ್ವತಂತ್ರ ಕೃತಿ. ದೇವಶಿಖಾಮಣಿ ಅಳಸಿಂಗಾಚಾರ್ಯರ ರಾಮಾಯಣ, ವಾಲ್ಮೀಕಿ ರಾಮಾಯಣಗಳನ್ನು ಆಧಾರವಾಗಿಟ್ಟುಕೊಂಡು ಮೂಲ ಮುಖ್ಯ ವಸ್ತು ಕ್ರೋಢೀಕರಿಸಿ ಶ್ರೀ ರಾಮಾವತಾರ ಕೃತಿಯನ್ನು ಮೂರು ಸಂಪುಟಗಳಲ್ಲಿ ರಚಿಸಿ ಪ್ರಕಟಿಸಿದ್ದಾರೆ. ಈ ಮೂರು ಸಂಪುಟಗಳು ಕ್ರಮವಾಗಿ ಸಿದ್ಧಗಂಗಾ, ಪರಕಾಲ ಮಠ, ಸಾರಸ್ವತ ಚಿತ್ರಾಪುರ ಮಠದ ಸ್ವಾಮಿಗಳಿಂದ ಬಿಡುಗಡೆ ಹೊಂದಿದವು.

ದಿ|| ನೆಹರೂ ಅವರ 'ಗ್ಲಿಂಪಸಿಸ್' ಆಫ್ ವರ್ಲ್ಡ್ ಹಿಸ್ಟರಿ (Glimpsis of–World History) ಭಾರತೀಯ ಸಾಹಿತ್ಯದಲ್ಲಿ ಅಪೂರ್ವ ಕೃತಿ. ನೆಹರೂ ನೈನಿಟಾಲ್ ಸೆರೆಯಿಂದ ತಮ್ಮ ಮಗಳು ಇಂದಿರಾಪ್ರಿಯದರ್ಶಿನಿಗೆ ಬರೆದ ಪತ್ರ ಸಂಕಲನ. ಈ ಅಪೂರ್ವಕೃತಿ ವಿಶ್ವರೂಪದರ್ಶನವನ್ನು ಹೊತ್ತ ಅಪೂರ್ವ ಸಾಹಿತ್ಯ ಕೃತಿ. ಶರ್ಮರು ಈ

ಕೃತಿಯನ್ನು ಕನ್ನಡದಲ್ಲಿ 'ಜಗತ್ಕಥಾವಲ್ಲರಿ' ಎನ್ನುವ ಹೆಸರಿನಲ್ಲಿ ಭಾಷಾಂತರಿಸಿದರು. ಶರ್ಮರ ಭಾಷಾ ಪಾಂಡಿತ್ಯ, ಅಪೂರ್ವ ಗದ್ಯ ಶೈಲಿ, ವಿಚಾರಧಾರೆಯ ನಿರೂಪಣೆಯ ಸೊಗಸು ಇಲ್ಲಿ ಕಾಣಬರುತ್ತದೆ. ಅಚ್ಚುಕಟ್ಟಾಗಿ ಅಂದವಾಗಿ ಭಾಷಾಂತರ ಕಾರ್ಯ ನಡೆದಿರುವುದಕ್ಕೆ ಈ ಕೃತಿ ಒಂದು ಉತ್ತಮ ನಿದರ್ಶನ.

ಮಿನು ಮಸಾನಿಯವರ ಅವರ್ ಇಂಡಿಯಾ (Our India) 'ನಮ್ಮ ಭಾರತ' ಎಂಬ ಹೆಸರಿನಲ್ಲಿ ಕೃಷ್ಣಶರ್ಮರು ಕನ್ನಡಕ್ಕೆ ಭಾಷಾಂತರಿಸಿದ್ದಾರೆ.

ದತ್ತಾತ್ರೇಯ ಬುರುಡೇಜಿಯವರ ವಿಚಾರಧಾರೆಗೆ ಮನಸೋತು ಗೋಸೇವಾ ಕ್ಷೇತ್ರಕ್ಕೂ ಶರ್ಮರು ಅಡಿಇಟ್ಟು ದುಡಿದರು. ಪಂಚವಟಿ ಗೋಸೇವಾ ಕ್ಷೇತ್ರದಲ್ಲಿ ಇವರ ದುಡಿಮೆ ವಿನಿಯೋಗವಾಯಿತು. ಸಹಕಾರ ಗೋಸೇವಾ ಕ್ಷೇತ್ರ ಸ್ಥಾಪನೆ, ಬೆಳವಣಿಗೆಯಲ್ಲಿ ಶರ್ಮರ ಪಾತ್ರ ಹಿರಿದು. ಈ ಸಂದರ್ಭದಲ್ಲಿ ಅವರು ರಚಿಸಿದ ಕೃತಿ 'ಕಾಮಧೇನು'. ಈ ಕೃತಿಯ ಸಂಪೂರ್ಣವರಮಾನವನ್ನು ಗೋಸೇವೆಗೆ ಕಾಣಿಕೆಯಾಗಿ ನೀಡಿದರು.

* * * *

ಕಾಂಗ್ರೆಸ್ ಪಕ್ಷದ ಸಂಘಟನೆ ಬೆಳವಣಿಗೆಗಳ ದಿಸೆಯಲ್ಲಿ ಕೃಷ್ಣಶರ್ಮರ ಪಾತ್ರ ಪ್ರಮುಖವಾದುದು. ಪಕ್ಷವನ್ನು ಕಟ್ಟಿದುದು ಮಾತ್ರವಲ್ಲ, ಅದು ಭದ್ರವಾಗಿ ನಿಲ್ಲಬೇಕೆಂದು ಪ್ರಯತ್ನಿಸಿದರು. 1942ರ ಬೆಂಗಳೂರು ಕಾರ್ಪೊರೇಷನ್ ಚುನಾವಣೆಯಲ್ಲಿ ಪಕ್ಷದ ಅಭ್ಯರ್ಥಿಗಳಿಗೆ ಬೆಂಬಲಿಗರಾಗಿ ನಿಂತು ಅವರ ಜಯಕ್ಕೆ ಕಾರಣರಾದರು. ಈ ಸಮಯದಲ್ಲಿ ದಿ|| ಕೆ. ಟಿ. ಭಾಷ್ಯಂ, ಕೆ. ಸಿ. ರೆಡ್ಡಿ, ದಿ|| ಎಚ್.ಸಿ. ದಾಸಪ್ಪ ಮೊದಲಾದವರು ಕೃಷ್ಣಶರ್ಮರ ಅನುಚರರು.

* * * *

ಕೃಷ್ಣಶರ್ಮರ ಗೆಳೆಯರ ಸಂಖ್ಯೆ ಅಪಾರವಾದುದು. ದೇಶದ ಯಾವ ಮೂಲೆಗೆ ಹೋದರೂ ಗೆಳೆಯರ ಗುಂಪು. ದೇಶದ ಸ್ವಾತಂತ್ರ್ಯಕ್ಕೆ, ನಾಡಿಗೆ, ಸಮಾಜಕ್ಕೆ, ಸಾಹಿತ್ಯ ಕ್ಷೇತ್ರಕ್ಕೆ ಶರ್ಮರು ಸಲ್ಲಿಸಿದ ಸೇವೆ ಗಮನಾರ್ಹವಾದುದು. ಶರ್ಮರ ವ್ಯಕ್ತಿತ್ವ, ಹಿರಿಯಗುಣಗಳಿಗೆ ಮಾರು ಹೋಗಿ ಅವರ ಸ್ನೇಹ ಬೆಳೆಸಿದವರ ಸಂಖ್ಯೆಯೂ ಕಡಿಮೆಯಲ್ಲ.

* * * *

ಸರ್ಕಾರದ ಶಿಕ್ಷಣದ ಇಲಾಖೆಯ ಪಠ್ಯ ಪುಸ್ತಕ ಸಮಿತಿಯ ಸದಸ್ಯರೂ ಆಗಿದ್ದರು. ಗಾಂಧಿ ಶತಮಾನೋತ್ಸವ ಸಮಿತಿಯ ಸದಸ್ಯರೂ ಆಗಿದ್ದರು. ಶರ್ಮರ ವಿವಿಧ ಸಂಘ ಸಂಸ್ಥೆಗಳೊಂದಿಗೆ ಹೊಂದಿದ್ದ ಸಂಬಂಧ ಕಡಿಮೆಯೇನಲ್ಲ.

ಬಿಡುವಿಲ್ಲದ ವಿವಿಧ ಕಾರ್ಯ ಚಟುವಟಿಕೆಗಳು; ಬಹು ಮುಖ ಪ್ರತಿಭೆ, ದಕ್ಷತೆ ಎಲ್ಲವೂ ಶರ್ಮರನ್ನು ಜನಪ್ರಿಯರನ್ನಾಗಿ ಮಾಡಿದವು. ತಮ್ಮ ಪಾಲಿನ ಕರ್ತವ್ಯ

ವನ್ನು ನಿಷ್ಠೆಯಿಂದ ನಿರ್ವಹಿಸಿದರು. ಯಾವುದೂ ಅವರಿಗೆ ಹೊರೆಯಾಗಲಿಲ್ಲ. ಸಾರ್ವಜನಿಕ ಜೀವನದಲ್ಲಿ ನಂಬಿಕೆ, ಗೌರವಗಳನ್ನು ಉಳಿಸಿಕೊಂಡು, ಬೆಳೆಸಿಕೊಂಡ ಕೀರ್ತಿ ಅವರಿಗೆ ಸಲ್ಲುತ್ತದೆ.

ಕೃಷ್ಣಶರ್ಮರು ಬರೆದ ಲೇಖನಗಳ ಸಂಖ್ಯೆ ಹಾಗೂ ಗುಣಗಳ ಮಟ್ಟದ ದೃಷ್ಟಿಯಿಂದ ಬೃಹತ್ ಎಂದೇ ಹೇಳಬಹುದು. ಕೆಲವು ಲೇಖನ ಮಾಲೆಯ ಬಿಡಿ ಲೇಖನಗಳು ಸಂಕಲನಹೊಂದಿ ಗ್ರಂಥಗಳ ರೂಪದಲ್ಲಿಯೂ ಪ್ರಕಟವಾಗಿವೆ. ನಾಡಿನ ವಿವಿಧ ಪತ್ರಿಕೆಗಳಲ್ಲಿ, ವಿಶೇಷ ಸಂಚಿಕೆಗಳಲ್ಲಿ ಅವರ ಲೇಖನಗಳು ಬೆಳಕು ಕಂಡಿವೆ. ಭಾಷೆ ಹಾಗೂ ಶೈಲಿಯ ದೃಷ್ಟಿಯಿಂದಲೂ ಅವರ ಲೇಖನಗಳು ಉತ್ತಮವಾದುವು. ಶರ್ಮರದು ಅಪೂರ್ವವಾದ ಗದ್ಯಶೈಲಿ.

ಶರ್ಮರು ಕಥೆ ಕಾದಂಬರಿಗಳನ್ನು ಬರೆಯಲಿಲ್ಲ ಎಂಬುದು ನಿಜ. ಆದರೆ ಅವರ ಲೇಖನಗಳಲ್ಲಿ-ಬರವಣಿಗೆಯಲ್ಲಿ ಕಥೆ, ಕಾದಂಬರಿಗಳ ಸೊಗಸು, ಸರಳ ನಿರೂಪಣೆ ಕಾಣ ಬರುತ್ತದೆ. ಜೀವನದ ನಾನಾ ಮುಖದ ಅನುಭವಗಳು ಅವರ ಬರವಣಿಗೆಯಲ್ಲಿ ಕಾಣ ಬರುತ್ತವೆ. ಜೀವನದ ವಿಸ್ತಾರವಾದ–ಆಳವಾದ ಅನುಭವ ಬರವಣಿಗೆಯಲ್ಲಿ ಮೈತಳೆದು ನಿಂತಿರುವುದನ್ನು ಕಾಣುತ್ತೇವೆ.

ಜೀವನದ ಅನುಭವಗಳು, ಬದುಕಿನ ಕಥೆಗಳೂ, ಸಾಮಾಜಿಕ, ರಾಜಕೀಯ ಧಾರ್ಮಿಕ, ಸಂಸ್ಕೃತಿಗಳ ಬಗೆಗೆ ಕೃಷ್ಣಶರ್ಮರು ಬರೆದ ಲೇಖನಗಳು ವಿಚಾರಪೂರ್ಣವಾದುವು, ವೈಶಿಷ್ಟ್ಯಪೂರ್ಣವಾದುವು. 'ಸಂಯುಕ್ತ ಕರ್ನಾಟಕ' ದಿನ ಪತ್ರಿಕೆಯಲ್ಲಿ 'ಮಾತಿನ ಮಂಟಪ' ಎಂಬ ಹೆಸರಿನ ಲೇಖನಮಾಲೆಯಲ್ಲಿ 'ಪ್ರಜಾವಾಣಿ' ದಿನ ಪತ್ರಿಕೆಯಲ್ಲಿ 'ಚಿಂತನ ಮಂಥನ' ಲೇಖನಮಾಲೆಯಲ್ಲಿ ಅವರ ಲೇಖನಗಳು ವಿಶೇಷವಾಗಿ ಬೆಳಕು ಕಂಡವು.

* * * *

ಕೃಷ್ಣಶರ್ಮ ದೊಡ್ಡ ಸಿದ್ದವ್ವನಹಳ್ಳಿಯವರು. ಹುಟ್ಟಿದ ಊರಿಗೆ, ತಮ್ಮ ಊರಿಗೆ ಕೀರ್ತಿ ತಂದವರು. ಶರ್ಮರು ದೊಡ್ಡಕುಟುಂಬದವರು–ದೊಡ್ಡ ಮನೆತನದವರು. ಆ ದೊಡ್ಡ (ಹಿರಿಯ) ತನವನ್ನು ಉಳಿಸಿಕೊಂಡವರು–ಬೆಳೆಸಿಕೊಂಡವರು. ಅವರ ದೊಡ್ಡತನ, ದೊಡ್ಡ ಬದುಕು–ಭಾವನೆ, ಸೇವಾಕ್ಷೇತ್ರ ಸೀಮಿತವಾಗಿ ಉಳಿಯದೆ ವಿಸ್ತಾರವಾಗಿ ಬೆಳೆಯಿತು. ದೊಡ್ಡತನವನ್ನು ಪಡೆಯಿತು. ಹರಟೆಮಲ್ಲರಾಗಿ ಲೇಖನಿಯನ್ನು ಕೈಗೆತ್ತಿಕೊಂಡು ಬರವಣಿಗೆಯನ್ನು ಆರಂಭಿಸಿದ ಶರ್ಮರು ಬರವಣಿಗೆ–ಬದುಕು ಎರಡರಲ್ಲಿಯೂ ದೊಡ್ಡತನವನ್ನು ಕಾಪಾಡಿಕೊಂಡು ಬಂದವರು. ಅವರ ವಿಚಾರ ಪರವಶತೆಗೆ, ಮನೋಧರ್ಮಕ್ಕೆ, ಅನುಭವನಿರೂಪಣೆಗೆ, ಮನದ ಚಿಂತನೆಯ ಪ್ರಕಟಣೆಗೆ ಲೇಖನಿ ಪ್ರಮುಖ ಮಾಧ್ಯಮವಾಯಿತು. ಶರ್ಮರ ಲೇಖನಿ ಹಲವು ದಶಕಗಳ ಕಾಲ ಕನ್ನಡ ನಾಡಿನಲ್ಲಿ ಹೊಸ ವಿಚಾರಧಾರೆಯನ್ನು, ಸಾಹಿತ್ಯ ಸಂಪತ್ತನ್ನು ಅಭಿವೃದ್ಧಿ ಪಡಿಸಿದ ಮಂತ್ರದಂಡವಾಯಿತು.

ಕೃಷ್ಣಶರ್ಮರ ಮನೆತವೂ ಸಿದ್ದಪ್ಪನಹಳ್ಳಿ ಹಾಗೂ ಅದರ ಸುತ್ತಮುತ್ತಲ ಗ್ರಾಮಗಳಲ್ಲಿ ಜನಪ್ರಿಯತೆ, ಗೌರವ, ಅಭಿಮಾನಗಳಿಸಿದುದೇ ಆಗಿದೆ. ಶರ್ಮರ ಪೂರ್ವಿಕರು ನಂಬಿಕೆ, ಗೌರವಗಳನ್ನು ಉಳಿಸಿಕೊಂಡು ಬಾಳಿದವರು. ಇಂದಿಗೂ 'ಸಿದ್ಧಂಪಲ್ಲಿ ರಂಗಾಚಾರ್' (ಸಿದ್ದಪ್ಪನಹಳ್ಳಿ ರಂಗಾಚಾರ್ಯರು) ಮನೆತನದವರೆಂದರೆ ಸಿದ್ದಪ್ಪನಹಳ್ಳಿಯ ಜನರಿಗೆ ಅಪಾರ ಅಭಿಮಾನ, ಗೌರವ. ಕೃಷ್ಣಶರ್ಮರ ಪೂರ್ವಿಕರೊಬ್ಬರು ಮೈಸೂರಿನ ಶ್ರೀ ಪರಕಾಲ ಮಠದ ಸ್ವಾಮಿಗಳಾಗಿದ್ದರು. ಶರ್ಮರ ಮನೆತನದವರಿಗೆ ಪೂಜ್ಯತೆ, ಗೌರವ ದೊರೆಯಲು ಆರಂಭದಲ್ಲಿ ಈ ಗುರುಸ್ಥಾನವೇ ಮುಖ್ಯಕಾರಣ. ಸಿದ್ದಪ್ಪನಹಳ್ಳಿಯಲ್ಲಿ ಕೃಷ್ಣಶರ್ಮರ ಪೂರ್ವೀಕರು ತಮ್ಮ ಸಾತ್ವಿಕ ಗುಣ, ನಡವಳಿಕೆಯಿಂದ ಗೌರವ–ಹಿರಿಮೆ ಪಡೆದವರು. ಆಚಾರ್ಯ ಪುರುಷತ್ವ, ಸ್ಥಳ ಗೌರವ, ಹಿರಿಮೆಗಳು ವಂಶಪರಂಪರೆಯಾಗಿ ನಡೆದುಬಂದವು.

ಕೃಷ್ಣಶರ್ಮರಂತೆಯೇ ಅವರ ಪೂರ್ವೀಕರೂ ಪ್ರಸಿದ್ಧ ಹಸ್ತರು, ಅಷ್ಟೇ ಅಲ್ಲ ವರದ ಹಸ್ತರು. ಅವರ ಮನೆತನ ಬೇಡಿದ ಕೈಯಾಗಿರದೆ ನೀಡಿದ ಕೈ. ಮನೆತನದ ಹಿರಿಯರ ಉದಾತ್ತ ಗುಣಗಳು ಶರ್ಮರಲ್ಲಿ ಬೆಳೆದು ಬಂದುದರಲ್ಲಿ ಅಚ್ಚರಿಯೇನಲ್ಲ.

ಕೃಷ್ಣಶರ್ಮರು ಸಿದ್ದಪ್ಪನಹಳ್ಳಿ ರಂಗಾಚಾರ್ ಮತ್ತು ಶೇಷಮ್ಮನವರ ಮೂರನೆಯ ಮಗ ಅವರ ದೊಡ್ಡ ಅಣ್ಣ ಶೇಷಾಚಾರ್ಯರು ಈಗ ಚಿತ್ರದುರ್ಗದಲ್ಲಿಯೇ ಇದ್ದಾರೆ. ಎರಡನೆಯ ಅಣ್ಣ, ದಿ. ಸುಂದರ ಶರ್ಮ. ಇವರು ರಾಜಕೀಯ ಕ್ಷೇತ್ರದಲ್ಲಿ ನಡೆಸಿದ ಸಾಧನೆ ಅಲ್ಪವಾದುದ್ದೇನಲ್ಲ. ಅವರು ಅಸಾಧಾರಣ ಸ್ವಾತಂತ್ರ್ಯ ಹೋರಾಟಗಾರರೂ ಆಗಿದ್ದರು. ಕೃಷ್ಣಶರ್ಮರು ಮೂರನೆಯವರು. ಮೊದಲನೆಯ ತಮ್ಮ ರಾಜಗೋಪಾಲ್ ಪ್ರಸ್ತುತ ಬೆಂಗಳೂರಿನಲ್ಲಿಯೇ ಇದ್ದಾರೆ. ಅವರ ಕೊನೆಯ ತಮ್ಮ ವೇಣುಗೋಪಾಲ್ ಈಗ ಹೈದ್ರಾಬಾದಿನಲ್ಲಿದ್ದಾರೆ. ತಂದೆತಾಯಿಯರಿಗೆ ಇವರು ಐದು ಜನ ಗಂಡು ಮಕ್ಕಳು. ಪಂಚಪಾಂಡವರನ್ನು ನೆನಪಿಗೆ ತರುವ ರೀತಿಯಲ್ಲಿ, ಕೃಷ್ಣಶರ್ಮರನ್ನು ಸವ್ಯಸಾಚಿಗೆ ಹೋಲಿಸಿದರೆ ಸರಿಎನಿಸುತ್ತದೆ. ಶರ್ಮರು ತಮ್ಮ ಬದುಕಿನಲ್ಲಿ ಸವ್ಯಸಾಚಿಯಂತೆಯೇ ಯಶಸ್ಸು ಗಳಿಸಿದರು.

ರಾಜಕೀಯ ಕ್ಷೇತ್ರದಲ್ಲಿಯಾಗಲಿ, ಸಾಹಿತ್ಯ ಕ್ಷೇತ್ರದಲ್ಲಿಯಾಗಲಿ ಕೇವಲ ಸ್ಥಾನ, ಗೌರವ, ಹಣ, ಪದವಿಗಳ ಆಸೆಯನ್ನು ಹೊಂದಿದ್ದರೆ ಕೃಷ್ಣಶರ್ಮರ ದೊಡ್ಡತನ ಎಂದೋ ಮರೆಯಾಗುತ್ತಿತ್ತು. ಅವರು ಅವುಗಳನ್ನು ಬಯಸಲಿಲ್ಲ. ಆಶಿಸಲಿಲ್ಲ. ಅವುಗಳೇ ಹುಡುಕಿಕೊಂಡು ಬಂದಾಗಲೂ ಬೇಡವೆಂದು ತಡೆದು ನಿಂತರು. ಹೊಗಳಿಕೆಗೆ ಹಿಗ್ಗದೆ, ತೆಗಳಿಕೆಗೆ ಕುಗ್ಗದೆ ಸುಖ, ದುಃಖ, ಸಮಸ್ಯೆ–ಸಂತೋಷಗಳನ್ನು ಸಮನಾಗಿ ಕಂಡ ಹಿರಿಯತನ-ದೊಡ್ಡತನ ಕೃಷ್ಣಶರ್ಮರದು. ಬಾಳೆಲ್ಲ ಎನ್ನ ಹೊಗಳಿ ಹೊಗಳಿ ಹೊನ್ನ ಶೂಲದಲಿಕ್ಕಿದರು, ಎನ್ನುವ ಮಹಾಮಹಿಮ, ಸಮಾಜಸುಧಾರಕ ಬಸವಣ್ಣನವರ ಮಾತನ್ನು ಅರಿತ ಮನೋಧರ್ಮ ಶರ್ಮರದು. ಹಳೆಯ ಧರ್ಮ, ಸಂಪ್ರದಾಯ, ಹೊಸ ವಿಚಾರಗಳನ್ನು ಮೈಗೂಡಿಸಿಕೊಂಡು ಬೆಳೆದ ವಿಶಾಲ ಭಾವನೆ ಅವರದು.

'ಶಿವ ಕೃಪೆಗೆ ಪನಿ ಕಡಲ್. ಕಿಡಿ ಸಿಡಿಲ್' ಎನ್ನುತ್ತದೆ ಕವಿವಾಣಿ. ಈ ಕವಿವಾಣಿಗೆ ನಿದರ್ಶನ ಕೃಷ್ಣಶರ್ಮರಂತಹ ಅಪೂರ್ವ ವ್ಯಕ್ತಿಗಳು ಎಂದು ಧಾರಾಳವಾಗಿ, ಧೈರ್ಯದಿಂದ, ಹೆಮ್ಮೆಯಿಂದ, ಹೇಳಬಹುದು. ನ್ಯಾಯಕ್ಕಾಗಿ ಹೋರಾಟ ನಡೆಸಿದ ಶರ್ಮರು ಅನ್ಯಾಯಗಳನ್ನು ಕಂಡಾಗ ಕಿಡಿಯಾಗಿ ಸಿಡಿದರು. ಅವರ ಬದುಕು, ಬರಹ, ಭಾವನೆಗಳೆಲ್ಲ ಅರ್ಥಪೂರ್ಣ–ಆದರ್ಶಪೂರ್ಣ.

ಸ್ವಾತಂತ್ರ್ಯ ಹೋರಾಟಗಾರ, ವಿಚಾರವಾದಿ, ಗಾಂಧಿವಾದಿ, ಪತ್ರಿಕೋದ್ಯಮಿ, ಲೇಖಕ, ಸರ್ವೋದಯ ಸಹಕಾರ ತತ್ವಗಳ ನಿರೂಪಕ, ಅಹಿಂಸಾವಾದಿ, ನ್ಯಾಯವಾದಿ, ಸಮಾಜ ಸುಧಾರಕ ಹೀಗೆ ಕೃಷ್ಣಶರ್ಮರ ವ್ಯಕ್ತಿತ್ವದ, ಪ್ರತಿಭೆಯ ಮುಖಗಳು ಹಲವು. ಸುಮಾರು ಐದು ದಶಕಗಳ ಕಾಲ ವಿಸ್ತಾರವಾದ ವಿವಿಧ ಕ್ಷೇತ್ರಗಳಲ್ಲಿ ಕೃಷ್ಣಶರ್ಮರು ತಮ್ಮ ಪಾಲಿನ ಕರ್ತವ್ಯವನ್ನು ಸದ್ದು ಗದ್ದಲವಿಲ್ಲದೆ ಶ್ರದ್ಧೆಯಿಂದ ನಿರ್ವಹಿಸಿದ್ದಾರೆ. ಬೇರೊಬ್ಬರ ಮೆಚ್ಚುಗೆಗಾಗಿ ದುಡಿಯದೆ ಇದ್ದುದು ಅವರ ದೊಡ್ಡತನ. ಶರ್ಮರ ಅವಿಶ್ರಾಂತ ಕಾರ್ಯಚಟುವಟಿಕೆಗಳನ್ನೂ ಸೇವೆಯನ್ನೂ ಗುರುತಿಸಿದುದು ಕೆಲವರ ದೊಡ್ಡತನ.

ಕೃಷ್ಣಶರ್ಮರ ಮೊದಲ ಹೆಸರು ಕೃಷ್ಣಸ್ವಾಮಿ. ಅವರು ಬರವಣಿಗೆಯ ಮೂಲಕ ಪರಿಚಯವಾದದ್ದು ಕೃಷ್ಣಶರ್ಮರೆಂದು. ಜನಪ್ರಿಯತೆಯೂ ಈ ಹೆಸರಿನ ಮೂಲಕವೇ.

ಜನನ: ಕ್ರೋಧಿನಾಮ ಸಂವತ್ಸರ ಆಷಾಡ ಬಹುಳ ಚೌತಿ ಭಾನುವಾರ ಪ್ರಾತಃಕಾಲ. ವಿವಾಹ: 1925 ರ ನವಂಬರ್. ವಿದ್ಯಾಭ್ಯಾಸ: ಪ್ರಥಮ ಬಿ.ಎ. ಮೈಸೂರು ಮಹಾರಾಜ ಕಾಲೇಜು. ಬಳ್ಳಾರಿ ಟಿ. ರಾಘವಾಚಾರ್ಯರ ಪ್ರಭಾವ, ನಾಟಕ ಕ್ಷೇತ್ರಕ್ಕೂ ಪ್ರವೇಶ. ಮುಂದೆ ವಿಸ್ತಾರವಾದ ಬದುಕು–ಬೆಳವಣಿಗೆ.

# ಗೆಳೆಯನಿಗೆ ಹರಕೆ

ಅಂಬಿಕಾತನಯದತ್ತ

ಹರೆಟೆಯಂದದ ರಗಟೆಯನು ಹೊತ್ತು ತಿರುಗುತಿರು–
ವಂಥ ತಿರುಮಂತ್ರ ನೀನು.
ತಿರುಗಣೆಯ ಮಡುವಿನಲಿ ತಿರತಿರುಗ ಹತ್ತಿರುವೆ
ಹೀಗೆ ಪರತಂತ್ರನೇನು ?

ಹುಡಿಯಂತೆ ಹಾರುವನೆ ದಾರಿ ತೋರಿದ ದಿಶೆಗೆ
ಚಿಕ್ಕೆಗಳ ವಂಶದವನು ?
ಕುಡಿಯನ್ನು ಕತ್ತಲೆಗೆ ಕುಡಿಯಗೊಡುವನೆ ಹೇಳು
ಪರಮಾತ್ಮನಂಶದವನು ?

*          *          *          *

ಗುರುದೇವ ನಿನ್ನ ಗುರಿ—ಗುರು ದೇಹವಲ್ಲ ಅರಿ—
ಬಹಿರಂಗ ಮರೆಯು ಅರಿಯೈ.
ಅರಿವ ದೀವಿಗೆಯ ಕುರಿ, ಅತ್ತಕಡೆ ನೀನು ಹರಿ—
ಅವನಂತರಂಗ ತೆರೆಯೈ.

ಅರುಹಿನರುಹಂತ, ಬದ್ಧತೆಯಿರದ ಬುದ್ಧ–ನೀ
ನಾ ಭಾವದಲ್ಲಿ ನುರಿಯೈ.
ಗುರುತುಗಳ ಹಿರಿಗುರಿಯು, ಭೂತಭವ್ಯದ ದೊರೆಯು
ಆ ದೇವನಲ್ಲಿ ಬೆರೆಯೈ.

ಹಿರಿತನದ ಪರಿವೆಯನು ಮರೆತು ಮಲಗಿರುವಂಥ
ನಿನ್ನ ನಾಡನ್ನು ಕರೆಯೈ.
ದೊರೆತನದ ಗುರುದೀಕ್ಷೆಯನ್ನು ಕೊಟ್ಟಾಮೇಲೆ
ಅದರೊಡನೆ ನೀನು ಮೆರೆಯೈ.

*          *          *          *

ನಿನ್ನ ಲೇಖನಿಯಾಗಿ ನಿನ್ನ ಪೇಯವದಾಗಿ
ನಿನ್ನ ಕರಮುಕುರವಾಗಿ
ನಿನ್ನ ತನು ತನುವಾಗಿ, ಕುಣಿವ ನಾಲಿಗೆ, ನಸ್ಸಿ—
ಗರೆವವಳಿಕಂಗಳಾಗಿ.

ನಿನ್ನ ಪ್ರೀತಿಯ ದೂತಿ, ನಿಷ್ಠ ಜೆಡಗಿನ ಗೆಳತಿ,
ತವ ಸ್ನೇಹಸಖಿಯದಾಗಿ,
ನಿನ್ನ ಕರುಳಿನ ಕೆಳೆಯು, ನಿನ್ನ ಮಾತಿನ ಕಳೆಯು
ತವ ಸಂಗಸುಖಿತನಾಗಿ.

ಭೋಗಿ ಜೀವವೆ! ನಿನ್ನ ಹುರುಪುಳ್ಳ ಹುರಿಯುಳ್ಳ
ಹುರುಳುಳ್ಳ ಹರಟೆಯಾಗಿ
ಸಾಗಿ ಸಂಗಡ ಬರುವೆ (ಯೋಗಿ ಜೋಗಿಯ ಆಗು)
ನಿನ್ನ ಕೈ ಪರಟೆಯಾಗಿ

ನಿನ್ನ ಜೀವದ ದೊರೆಯು, ನಿನ್ನ ಭಾವದ ಗುರಿಯು
ಸುಸ್ಫೂರ್ತಿ ಝುರಿಯು ಆಗಿ
ನಿನ್ನ ಕಾವ್ಯದ ತೊರೆಯು, ನಿನ್ನ ಕೀರ್ತಿಯ ಪರೆಯು
ಸ್ವಾನಂದ ಲಹರಿಯಾಗಿ.

ಹಡೆದ ತಾಯಿಯು ಆಗಿ, ಪಡೆದ ಮಡದಿಯದಾಗಿ
ಜೀವದೊಡನಾಡಿಯಾಗಿ
ಬಿಡದ ಗೆಳೆಯನು ಆಟವಾಡಲನುವಾಗಿಹೆನು
ಲೀಲಾವತಾರಿಯಾಗಿ.

* * * *

ಗದ್ದರಿಸಿ ಗಂಡುದನಿಯಿಂದ ಚೇತರಿಸುವೆನು
ಬಿದ್ದಿರಲು ತನ್ನ ತನುವಾ
ಮುದ್ದಿರಿಸಿ ಹೆಂಗರುಳಿನಂತರಳ ಹಚ್ಚುವೆನು
ಮುಗಿದಿರಲು ನಿನ್ನ ಮನವಾ.

ಭಾವ ದೇವಾಲಯದ ದೇವಿಯಾಗುತ ನಾನು
ಹರಿಯಿಸುವೆ ಹರಣಗಳನು
ಜೀವಜೀವಾಳಗಳ ದೇವನಾಗುತ ನಾನು
ತೆರೆಯಿಸುವೆ ಕರಣಗಳನು.

* * * *

ಮಿತ್ರನುಸುರಿಗೆ ಹಸಿದು 'ಆ'ಯೆಂದು ತೆರೆಯದಿಹ
ಹೃತ್ಕಮಲವಿರಲು ಬಹುದೆ?
ಚಿತ್ರ ಚೈತ್ರದ ಗಾಳಿಯುಂಡು ಮೌನವ ತಳೆವ
ಕೋಗಿಲೆಯು ಜಗದಲಿಹುದೆ?

ಸ್ನೇಹಪೋಷಣೆಯಿಂದ ಯಾರ ಮನದೀಪಿಕೆಯು
ಬೆಳ್ ಬೆಳಗು ಬೆಳಗದಿರದು?
ದೇಹದಾಸನು ಅದರ ಬೆಳಕಿನಲಿ ಮುಗಿಸಿದನು
ಈ ಹಾಡ ಹರಟೆ ಬರೆದು.

* * * *

ಮನದ ನಂದನದಲ್ಲಿ ಬೆಳೆದ ಹೂಗಳದೊಂದು
ಮುತ್ತಿದೆನು ಹಾರವಿಂದು
ಜನ ರೀತಿಯಂತೀಗ ಜಗದಲ್ಲಿ ಕಳುಹಿದೆನು
ಮಾತುಗಳ ಮಾಲೆಯೆಂದು.

[ಗೆಳೆಯ ಸಿದ್ದವ್ವನಹಳ್ಳಿ ಕೃಷ್ಣಶರ್ಮರು ತುಂಗಭದ್ರಾ ಆಶ್ರಮಕ್ಕೆ ಹೊರಟಾಗ ಅವರ ಹುಟ್ಟುಹಬ್ಬದ ದಿನಕ್ಕಾಗಿ ಬರೆದ ಪದ್ಯ ಪತ್ರ.]

# ಶರ್ಮಾಜಿಯವರೊಡನೆ ೩೦ ವರ್ಷಗಳ ಸವಿನೆನಪು

ಎಚ್. ಶ್ರೀನಿವಾಸಯ

ಶರ್ಮಾಜಿಯ ಪರಿಚಯವಾದದ್ದು 1942 ನೇ ಸ್ವಾತಂತ್ರ್ಯದ ಆಂದೋಳನ ಕಾಲದಲ್ಲಿ. ಆಗ, ನಾನು ವಿದ್ಯಾರ್ಥಿ. ಕಾಲೇಜು ಮುಚ್ಚಿದೆ. ಏನು ಮಾಡಬೇಕೆಂದು ತಿಳಿಯದು. ಕಳ್ಳತನದಲ್ಲಿ ಪತ್ರಿಕೆ ಹೊರಡಿಸಿ ಹಂಚುವುದು ಒಂದು ಕೆಲಸ, ಶಾಲೆಗಳ ಹತ್ತಿರ ಗಲಾಟೆ, ಹೀಗಾಗಿತ್ತು. ರಚನಾತ್ಮಕ ಕೆಲಸಮಾಡಬೇಕೆಂಬ ಕೆಲವರ ಸಲಹೆ ಮೇರೆಗೆ ಖಾದಿ ಮಾರುವುದು, ಚರಕ ಕಲಿಯುವವರಿಗೆ ಹೇಳಿಕೊಡುವುದು. ವಯಸ್ಕರ ಶಿಕ್ಷಣ ಶಾಲೆ ಇವೆಲ್ಲ ಪ್ರಾರಂಭಿಸಿದೆವು. ಆಗ ಈ ವಿದ್ಯಾರ್ಥಿಗಳನ್ನು ಒಟ್ಟಿಗೆ ಸೇರಿಸಿ ಗಾಂಧೀಜಯಂತಿ ಮಾಡಿಸಿ, ಉಳಿದ ಹಣದಲ್ಲಿ ಪುಸ್ತಕ ಭಂಡಾರ ಪ್ರಾರಂಭಿಸಿ ಗಾಂಧೀ ಸಾಹಿತ್ಯ ಸಂಘಸ್ಥಾಪನೆಯಾಗಲು ಕಾರಣ ನಮ್ಮ ಶರ್ಮಾಜಿ.

ಈ ಸಂಘಕ್ಕೆ ಹೆಸರು ಏನು ಇಡಬೇಕು ಎಂಬುದೇ ಒಂದು ಸಮಸ್ಯೆ ಆಗಿತ್ತು. ಯಾವ ಹೆಸರು ಇಟ್ಟರೂ ಪೋಲೀಸರ ಕಾಟ. ಗಾಂಧೀ ಹೆಸರಿಟ್ಟರೆ ಉತ್ತಮ, ಗಾಂಧೀ ಪುಸ್ತಕಗಳನ್ನು ಮಾತ್ರ ಇಡೋಣ ಎಂದು, "ಗಾಂಧೀ ಸಾಹಿತ್ಯ ಸಂಘ" ಎಂದು ಹೆಸರನ್ನು ಶರ್ಮಾಜಿಯವರು ಸೂಚಿಸಿದರು. ಸಂಘ ಪ್ರಾರಂಭವಾಯಿತು. ಶರ್ಮಾಜಿಯವರು ಗಾಂಧೀಜೀ, ರಾಷ್ಟ್ರಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಮಾತ್ರ ಇಡಬೇಕು ಎಂದರು. ಆಗ ಶ್ರೀ ಸಿ. ರಾಮು (ಈಗ ಸ್ವಾಮಿಾಜಿ ಆಗಿದ್ದಾರೆ) "ಬೇರೆ ಪುಸ್ತಕಗಳನ್ನೂ ಇಡೋಣ, ಗಾಂಧೀ, ಸಾಹಿತ್ಯ ಸಂಘ, ಗಾಂಧೀ ಪಕ್ಕದಲ್ಲಿ Comma ಹಾಕಿದರೆ ಆಯಿತು. ಎಲ್ಲಾ ಪುಸ್ತಕಗಳನ್ನು ಇಡಬಹುದು" ಎಂದು ಸಲಹೆ ಮಾಡಿದರು. ಶರ್ಮಾಜಿಯವರು "ಬರೀ ಗೆರೆ ಎಳೆದರೆ ಪರವಾಗಿಲ್ಲ, ಹಾಗೇ ಮುಂದಕ್ಕೆ ಗಾಂಧೀ ಕಾಮ ಸಾಹಿತ್ಯ ಸಂಘವಾಗಿ ಕಾಮ ಸಾಹಿತ್ಯಗಳೂ ಎಂದರೆ ಕಷ್ಟವಾಗುತ್ತದೆ" ಅಂದರು. ಹೀಗೆ ಹುಡುಗರನ್ನು ತಮಾಷೆ ಮಾಡಿ ನಗಿಸುತ್ತಿದ್ದರು.

ಶರ್ಮಾಜಿಯವರು ನಾಟಕ ಆಡಬಲ್ಲರು ಎಂಬುದು ನಮ್ಮ ಹುಡುಗರಿಗೆ ತಿಳಿಯದು. ನಮ್ಮ ಗೋಪಾಲಕೃಷ್ಣರಾಯ (ಈಗ ಇಲ್ಲ) ಆಗಿನ ಸನ್ನಿವೇಶಕ್ಕೆ ತಕ್ಕಂತೆ ರಾಜರತ್ನಂರವರ "ಗಂಡುಗೊಡಲಿ" ನಾಟಕ ಆಡೋಣ ಎಂದರು. ಸರಿ

ರಾಮಮಂದಿರದಲ್ಲಿ ಗಾಂಧೀ ಜಯಂತಿ ಕಾಲದಲ್ಲಿ ಎಲ್ಲರೂ ಅಲ್ಲೇ ಮಲಗುವ ರೂಢಿ. ರಾತ್ರಿ 10 ರಿಂದ 1 ಗಂಟೆಯವರೆಗೆ ಶರ್ಮಾಜಿಯವರ ಹರಟೆ. ಅಲ್ಲಿ ಬಾರದೇ ಇದ್ದ ವಿಷಯವೇ ಇಲ್ಲ. ಪುನಃ ಬೆಳಿಗ್ಗೆ 5 ಗಂಟೆಗೆ ಪ್ರಾರ್ಥನೆಗೆ ಏಳಬೇಕು. ನಾಟಕ ಅಭ್ಯಾಸ ಮಾಡುವಾಗ ಶರ್ಮಾಜಿ ಮನೆಯಿಂದ ಊಟಮಾಡಿ ಬಂದರು. ಗೋಪಾಲ ಕೃಷ್ಣ ರಾವ್‌ರವರು ಪರಶುರಾಮನ ಪಾತ್ರ ವಹಿಸಿದ್ದರು. 'ಮಸೆ ಮಸೆ ಕೊಡಲಿ ಮಸೆ' ಎಂದು ನಾಟಕ ಅಭ್ಯಾಸ ಪ್ರಾರಂಭವಾಯಿತು. ಶರ್ಮಾಜಿ ಮಂದಿರದ ಒಳಗಡೆ ಮೆಟ್ಟಿಲ ಮೇಲೆ ಕುಳಿತಿದ್ದರು. "ಗೋಪಾಲಕೃಷ್ಣ ಇಲ್ಲಿ ಕೊಡಿ ಪುಸ್ತಕ" ಎಂದು ಪುಸ್ತಕ ತೆಗೆದುಕೊಂಡು "ಮಸೆ ಮಸೆ ಕೊಡಲಿ ಮಸೆ" ಎಂದು ಒಂದು ಕೂಗು ಹಾಕಿದರು.

ರಾಮ ಮಂದಿರದ ಸಭಾಂಗಣಕ್ಕೆ ಹೊದಿಸಿದ್ದ ತಗಡುಗಳು ಅಲ್ಲಾಡಲು ಪ್ರಾರಂಭಿಸಿದುವು. ಸುತ್ತಲ ಮನೆಗಳಲ್ಲಿ ಮಲಗಿದ್ದವರು ಎದ್ದು ಬಂದರು. ಆಗ ನಮಗೆ ಗೊತ್ತಾಯಿತು. ಅವರು ನಾಟಕ ತಂಡಗಳಲ್ಲಿ ನಾಟಕವಾಡಿದವರೆಂದು. ಆ ದಿನ ತಮ್ಮ ನಾಟಕ ಕಂಪನಿಯ ಜೀವನ ಚರಿತ್ರೆಯನ್ನು ತಿಳಿಸಿದರು.

ನಮ್ಮ ಕಿಟ್ಟ (ಈಗ ಮಿರಮರ, ವರ್ಧಾ) ಸ್ವಲ್ಪ ಒರಟು. ದಬಾಯಿಸಿಯೇ ಕೇಳುವದು : "ಶರ್ಮಾಜಿ ನಾವುಗಳು ಗಾಂಧೀ ಜಯಂತಿಗೆ ಭಾಷಣಕ್ಕೆ ಕರೆಯಲು ಹೋಗುತ್ತೇವೆ, ಖಾದಿ ಮಾರಲು ಹೋಗುತ್ತೇವೆ. ಹೊಟ್ಟೆಗೆ ಏನೂ ಇರುವದಿಲ್ಲ. ಆದುದರಿಂದ ಒಂದು ಇಡ್ಲಿ ಒಂದು ಕಾಫಿಯಾದರೂ ಕೊಟ್ಟರೆ ಒಳ್ಳೆಯದಲ್ಲವೇ" ಅಂದ. ಅದಕ್ಕೆ ಶರ್ಮಾಜಿ ಅಂದರು : "ಖಂಡಿತ ಆಗಬಹುದು, ಆದರೆ ಇದಕ್ಕೆ ಒಂದು ಮಿತಿಯೆಲ್ಲಿ. ನಾಳೆ ಊಟವನ್ನೇ ಹಾಕಿ ಅನ್ನುತ್ತಾನೆ ನಿನ್ನ ಸ್ನೇಹಿತ. ಆದುದರಿಂದ ಎಷ್ಟು ಕೆಲಸ ಮಾಡುತ್ತಾರೊ ಅಷ್ಟೇ ಸಾಕು, ಜಯಂತಿಗೆ ಸೇರಿಸಿದ ದುಡ್ಡನ್ನು ಕಾಫಿ ತಿಂಡಿಗೆ ಖರ್ಚು ಮಾಡುವುದು ಬೇಡ" ಅಂದರು. ಈಗಲೂ ಸಂಘದಲ್ಲಿ ಕಾಫಿ ತಿಂಡಿಗೆ ದುಡ್ಡು ಖರ್ಚು ಮಾಡುವುದಿಲ್ಲ.

ಇಲ್ಲಿ ಯಾವ ಕೆಲಸ ಮಾಡಲೂ ಎಲ್ಲರಿಗೂ ಸ್ವಾತಂತ್ರ್ಯ. ಒಳ್ಳೆಯ ಕೆಲಸ ಅಷ್ಟೆ. ಕೈಲಾದಷ್ಟು ಮಾಡಬಹುದು. ಹಣ ಪೋಲು ಆಗಬಾರದು. ಯಾರಾದರೂ ಒಂದು ಯೋಜನೆ ತಂದರೆ ಅವರೇ ಅದನ್ನು ಕಾರ್ಯಗತ ಮಾಡಬೇಕು.

ಶರ್ಮಾಜಿಯವರೊಡನೆ ಮಾತನಾಡುವುದೆಂದರೆ, ವಿಶ್ವಕೋಶದೊಂದಿಗೆ ಮಾತ ನಾಡಿದಂತೆ. ವಿಚಾರಗಳನ್ನು ಎಲ್ಲಿ ಶೇಖರಿಸಿದರೋ ತಿಳಿಯದು. ಆ ಜ್ಞಾನ ಭಂಡಾರದಲ್ಲಿ, ಎಲ್ಲಿ ಕೂಡಲಿ, ಎಲ್ಲಿ ಹೋಗಲಿ, ರಸ್ತೆಯಲ್ಲಿ, ಕೂಟದಲ್ಲಿ, ಮನೆಯಲ್ಲಿ ಎಲ್ಲೆಡೆಯೂ ವಿಚಾರಧಾರೆ ಹರಿಯುತ್ತಲೇ ಇರುತ್ತದೆ, ಕೊನೆ ಮೊದಲಿಲ್ಲ. ನಾವು ಕೇಳುವ ಪ್ರಶ್ನೆ. ರಾಜಕೀಯದಿಂದ ಕಾಮ ಶಾಸ್ತ್ರದವರೆಗೂ ಇದ್ದರೂ ಎಲ್ಲದಕ್ಕೂ ಸಮಾಧಾನವಾದ ಉತ್ತರ. ಮರು ಪ್ರಶ್ನೆಗೆ ಅವಕಾಶವಿಲ್ಲ. ಮಾತು ಅಂದರೆ ಗಂಟೆ ಗಟ್ಟಲೆ. ರಾತ್ರಿ ಎಷ್ಟು ಹೊತ್ತಾದರೂ ಚಿಂತೆಯಿಲ್ಲ. ಒಂದು ಸಾರಿ ಹುಚ್ಚು ಹಿಡಿದ

ಹಾಗೆ 11 ಗಂಟೆಯ ಮೇಲೆ ಬೆಳದಿಂಗಳಲ್ಲಿ ಯಶವಂತಪುರದ ಕಡೆ ಎರಡು ಮೂರು ಮೈಲಿ ನಡೆದು ಹೋಗಿ ಬಂದೆವು. ದಾರಿಯುದ್ದಕ್ಕೂ ಚರ್ಚೆ ಮಾಡುತ್ತಾ, ನನಗೇನಾದರೂ ರಾಜಕೀಯ, ಆರ್ಥಿಕ, ಗಾಂಧೀಜಿ–ವಿಚಾರ ಗೊತ್ತಿದೆ ಅಂದರೆ ಪುಸ್ತಕ ಓದಿರುವದಕ್ಕಿಂತ ಅವರೊಡನೆ ನಡೆಸಿದ ಚರ್ಚೆಗಳಿಂದ. ಈ ಚರ್ಚೆಗಳೇ "ಸೂತಿನ ಮಂಟಪ" ರೂಪದಲ್ಲಿ ಮುಂದಿನ ವಾರಪತ್ರಿಕೆಯಲ್ಲಿ ಲೇಖನಗಳು ಬರುತ್ತಿದ್ದವು. ಅನೇಕ ಸಾರಿ ನಾವು ಹಾಕಿದ ಪ್ರಶ್ನೆಗಳಿಗೆ ಅವರು ಕೊಟ್ಟ ಉತ್ತರವನ್ನೇ 'ಹರಿಜನ' ಪತ್ರಿಕೆಯಲ್ಲಿ ತಿಂಗಳಾದ ಮೇಲೆ ಯಾರೋ ಹಾಕಿದ ಪ್ರಶ್ನೆಗೆ ಗಾಂಧೀಜಿ ಕೊಡುತ್ತಿದ್ದರು. ಎರಡೂ ಉತ್ತರಗಳೂ ಒಂದೇ. ನಾನು ಒಂದು ಸಾರಿ ಕೇಳಿದೆ: "ನಿಮಗೆ ಅವರು ಕೊಡುವ ಉತ್ತರ ಹೇಗೆ ಗೊತ್ತು ?" ಎಂದು. ಅದಕ್ಕೆ ಅವರ ಉತ್ತರ ಇಷ್ಟೆ: "ಸತ್ಯ ಒಂದೇ. ಯಾರು ನುಡಿದರೂ ಸತ್ಯವನ್ನೇ ಹೇಳಬೇಕು."

ಹಣಕಾಸಿನ ವಿಚಾರದಲ್ಲಿ ಬಹು ಲೆಕ್ಕಾಚಾರ. ಜನರಿಂದ ವಸೂಲಿ ಮಾಡುವ ಹಣದ ವಿಷಯದಲ್ಲಿ ಬಹು ಹುಷಾರಾಗಿರಬೇಕು. ವೃಥಾ ಖರ್ಚು ಮಾಡಲು ಬಿಡುತ್ತಿರಲಿಲ್ಲ. ಬಹಳ ಕಟ್ಟುನಿಟ್ಟು. ನಾನು ಬ್ಯಾಲೆನ್ಸ್‌ಷೀಟು ಲೆಕ್ಕಾಚಾರ ಇಡುವುದು ಎಲ್ಲವನ್ನು ಕಲಿತದ್ದು ಶರ್ಮಾಜಿಯವರಿಂದ. ಒಂದು ಸಾರಿ ಲೇಣಿದೇಣಿ ಲೆಕ್ಕ ಹಾಕಿದೆ. 75 ರೂಪಾಯಿ ಉಳಿಯಿತು. ಏನು ಮಾಡಬೇಕೆಂದು ತಿಳಿಯದು. ಆಗ ಅವರು ಹೇಗೆ ಬ್ಯಾಲೆನ್ಸ್‌ಷೀಟ್ ಮಾಡಬೇಕೆಂದು ತೋರಿಸಿ ಕೊಟ್ಟರು. ನಯಾಪೈಸೆ ಲೆಕ್ಕ ಕೂಡ ಸರಿಯಾಗಿ ಇರಬೇಕು. ಲೆಕ್ಕದಲ್ಲಿ ಸುಳ್ಳು ಹೇಳಿದರೆ ಅವರಿಗೆ ಬಹು ಸಿಟ್ಟು ಬರುತ್ತಿತ್ತು.

ಯುವಕರು, ವಿದ್ಯಾರ್ಥಿಗಳು ಅಂದರೆ ಅವರಿಗೆ ಬಹು ಇಷ್ಟ. ಮುಂದಿನ ಪ್ರಜೆಗಳು, ಇವರನ್ನು ಬೆಳೆಸಬೇಕು ಎಂಬುದೇ ಧ್ಯೇಯ. ಯಾರೇ ಬಂದು ಒಂದು ಸಂಸ್ಥೆ ಮಾಡಬೇಕು ಎಂದರೆ ಸರಿ ಇವರ ಒಪ್ಪಿಗೆ. ಇವರೇ ಅಧ್ಯಕ್ಷರು. ನಾನು ಒಂದು ಸಾರಿ ಕೇಳಿದೆ: "ಹೀಗೆ ನೀವು ಎಷ್ಟು ಸಂಸ್ಥೆಗಳಿಗೆ ಅಧ್ಯಕ್ಷರಾಗಿರುತ್ತೀರಿ. ಎಲ್ಲ ಕಿರಿಯ ಸಂಸ್ಥೆಗಳು. ಮುಂದೆ ಗಾಂಧಿ ಸಾಹಿತ್ಯ ಸಂಘದ ಗತಿ ಏನು ?" ಎಂದು ಅವರು ಹೇಳಿದರು: "ಯುವಕರ ಉತ್ಸಾಹವನ್ನು ಕುಗ್ಗಿಸಬಾರದು. ಕೆಲಸ ಮಾಡಲು ಎಷ್ಟು ಶಕ್ತಿ ಇದ್ದರೆ ಅಷ್ಟು ಮಾಡಲಿ. ರಾಷ್ಟ್ರೀಯ ಸೇವೆ, ನಾನು ಅವರು ಕೇಳಿದಾಗ ಅಧ್ಯಕ್ಷನಾದರೆ, ನಾನು ಹೇಳಿದ ಹಾಗೆ ಅವರು ಕೇಳುವರು. ಇಲ್ಲವೇ ಮುಂದೆ ನಮ್ಮ ಹಿಡಿತಕ್ಕೆ ಸಿಗುವುದಿಲ್ಲ. ನಾಯಕರಿಲ್ಲದ ಹಾಗೆ ಆಗುತ್ತಾರೆ. ತಪ್ಪು ದಾರಿ ಹಿಡಿಯಲು ಅವಕಾಶವಾಗುತ್ತದೆ." ಎಷ್ಟೋ ಯುವಕರ ಸಂಸ್ಥೆಗಳು ಕೆಲವು ದಿನ ಕೆಲಸ ಮಾಡಿ ನಿಂತುಹೋದುವು.

ಶರ್ಮಾಜಿ ದುಡಿಯದ ಕ್ಷೇತ್ರವಿಲ್ಲ. ವಿದ್ಯಾರ್ಥಿ, ಯುವಕರು, ಮಹಿಳೆಯರು, ಪತ್ರಿಕೋದ್ಯಮಿಗಳು, ವಿದ್ಯಾವಂತರು, ಅವಿದ್ಯಾವಂತರು, ಲಾಯರುಗಳು, ಇಂಜಿನೀಯರುಗಳು, ಡಾಕ್ಟರ್‌ಗಳು, ಎಲ್ಲರೂ ಅವರ ಸ್ನೇಹಿತರು. ಕ್ಷೇತ್ರ ಹೇಳಬೇಕೆ ?

ರಾಜಕೀಯ, ಸಾಹಿತ್ಯ, ಸಾರ್ವಜನಿಕ ಸೇವೆ, ಸಹಕಾರ, ಧಾರ್ಮಿಕ ಸಂಸ್ಥೆ, ಎಲ್ಲದರಲ್ಲೂ ಅವರ ಅನುಭವ ಹೇರಳ. ಯಾವ ಸಂಸ್ಥೆ ನಡೆಸುವುದರಲ್ಲೂ ಒಂದು ಶಿಸ್ತು. ಒಂದು ಸಾರಿ ಒಂದು ಕೂಗು ಹಾಕಿದರೆ ಸಾಕು, ನಿಶ್ಯಬ್ದವಾಗಿ ಎಲ್ಲರೂ ಕೂತು ಕೇಳುವವರೇ.

ನಂಜನಗೂಡಿನಲ್ಲಿ ವಿದ್ಯಾರ್ಥಿಗಳ ಒಂದು ಸನ್ನಿವೇಶ ಜ್ಞಾಪಕಕ್ಕೆ ಬರುತ್ತದೆ. ಒಂದು ನಿರ್ಣಯವನ್ನು ಚರ್ಚಿಸುವಾಗ ಅಶೋಕ ಮೆಹತಾ ಅಧ್ಯಕ್ಷರಾಗಿದ್ದರು. ಹುಡುಗರು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡಲಾಗದೆ ಶರ್ಮಾಜಿಯವರನ್ನು ಅಧ್ಯಕ್ಷ ಸ್ಥಾನದಲ್ಲಿ ಕೂಡಿಸಿ ಹೋದರು. ಶರ್ಮಾಜಿಯವರು ಸಭೆಯನ್ನು ಅರ್ಧ ಗಂಟೆಯಲ್ಲಿ ಮುಗಿಸಿದರು. ಹಾಗೆ ಎಲ್ಲರನ್ನೂ ಆಕರ್ಷಿಸಿ ಸಮಾಧಾನ ಮಾಡುವ ಶಕ್ತಿ ಅವರದು.

ನಂಜನಗೂಡಿನ ವಿದ್ಯಾರ್ಥಿ ಸಮ್ಮೇಳನದ ಕಾಲ ಅಂದರೆ, I. N. A. ಕಾಲ. ಎಲ್ಲಿ ನೋಡಿದರೂ ಯುವಕರು, ಕ್ಯಾಪ್ಟನ್ ಲಕ್ಷ್ಮೀಕೀ ಜೈ, ಷಾ ನವಾಜಕೀ ಜೈ, ನೇತಾಜೀಕೀ ಜೈ ಅನ್ನುವ ಕಾಲ. ಶರ್ಮಾಜಿಯವರು, ಪಾರ್ಥನಾರಾಯಣ ಪಂಡಿತರು, ಕೆಲವು ಸ್ನೇಹಿತರೂ ಸೇರಿ ಬೆಂಗಳೂರಿನಿಂದ ಒಂದೇ ರೈಲು ಬಂಡಿಯಲ್ಲಿ ಹತ್ತಿ ನಂಜನಗೂಡಿಗೆ ಹೊರಟೆವು. ರೈಲು ತುಂಬಾ ವಿದ್ಯಾರ್ಥಿಗಳೇ, ಎಲ್ಲರೂ ಸಮ್ಮೇಳನಕ್ಕೆ ಹೋಗುವವರೆ! ಎಲ್ಲರೂ ನೇತಾಜೀಕೀ ಜೈ ಎಂದು ಕೂಗುತ್ತಿದ್ದರು. ಶರ್ಮಾಜಿಯವರು ನಮ್ಮ ಗಾಡಿಯಲ್ಲಿ ಇದ್ದ ವಿದ್ಯಾರ್ಥಿಗಳಿಗೆ ಹೇಳಿದರು. "ದಯವಿಟ್ಟು ರೈಲು ಬೆಂಗಳೂರು ಸ್ಟೇಷನ್ ಬಿಡುವವರೆಗೆ ಕೂಗಬೇಡಿ. ಕೆಂಗೇರಿ ಸೇರಿದ ಮೇಲೆ ಕೂಗುವಿರಂತೆ. ಇದ್ದಕ್ಕಿದ್ದಂತೆ ಪೋಲೀಸ್‌ನವರು ನಮ್ಮನ್ನು ಬೆಂಗಳೂರಿನಲ್ಲೇ ಇಳಿಸಬಹುದು, ಸಮ್ಮೇಳನಕ್ಕೆ ಹೋಗುವುದು ತಪ್ಪಿಹೋಗುತ್ತದೆ ?" ಎಂದರು. ವಿದ್ಯಾರ್ಥಿಗಳಾದ ನಾವು ಹಿರಿಯರು ಹೇಳಿದರಲ್ಲ ಎಂದು ಸುಮ್ಮನಾದೆವು. ರೈಲು ಕೆಂಗೇರಿ ಸೇರುವುದಕ್ಕೆ ಮುಂಚೆ "ಕೂಗೋಣವೇ" ಎಂದು ಕೇಳಿದೆವು. "ಅಯ್ಯೋ ಹೇಡಿಗಳೇ. ಅಲ್ರಯ್ಯ ನೋಡೋಣ ಎಂಬು ನಾನು ಹೆದರಿಸಿದರೆ ಅಷ್ಟಕ್ಕೇ ಹೆದರೋದೆ. ಧೈರ್ಯ ಇದ್ದವರು ಕೂಗಬೇಡವೇ. ಇಷ್ಟು ಹೇಡಿಗಳಾದರೆ ಇನ್ನು ಸಮ್ಮೇಳನದಲ್ಲಿ ಏನು ಮಾಡುತ್ತೀರಿ ? ಪೋಲೀಸ್‌ನವರು ಹೆದರಿಸಿದರೆ ಮನೆಗೆ ಓಡಿಹೋಗುತ್ತೀರಷ್ಟೆ ? ಏಕೆ ಈಗಲೇ ವಾಪಸ್ ಹೋಗುವುದು ಒಳ್ಳೆಯದಲ್ಲವೇ ?" ಎಂದರು. ಎಲ್ಲರೂ ತಲೆ ತಗ್ಗಿಸಬೇಕಾಯಿತು. ಅಲ್ಲಿಂದ ಕೂಗಲು ಪ್ರಾರಂಭಿಸಿದವರು ನಂಜನಗೂಡು ಸೇರುವವರೆಗೂ ಬಿಡಲಿಲ್ಲ.

ಮಲ್ಲೇಶ್ವರದ ಶ್ರೀರಾಮ ಕೋ–ಆಪರೇಟಿವ್ ಬ್ಯಾಂಕ್, ಬಡವರ ಬ್ಯಾಂಕ್. ಅದಕ್ಕೆ 15–16 ವರ್ಷ ಅಧ್ಯಕ್ಷರಾಗಿದ್ದರು. ಅದು ರಿಜಿಸ್ಟರ್ ಮಾಡಿಕೊಡುವುದಕ್ಕೆ ಮುಂಚೆ ರಿಜಿಸ್ಟ್ರಾರ್‌ರವರು "ಮಲ್ಲೇಶ್ವರದಲ್ಲಿ ಅನೇಕ ಸಹಕಾರ ಸಂಘಗಳು ಮುಚ್ಚಿ ಹೋದವು. ಪುನಃ ಇದು ಏಕೆ" ಎಂದು ಕೇಳಿದರು. ಶರ್ಮಾಜಿಯವರೇ ಬಂದು "ನಾನು ಇದ್ದೇನೆ, ನನ್ನಲ್ಲಿ ನಂಬಿಕೆ ಇಲ್ಲವೇ ? ಇದನ್ನು ರಿಜಿಸ್ಟರ್ ಮಾಡಿಕೊಡ

ಬೇಕು" ಎಂದು ಹೇಳಿ ಮಾಡಿಸಿಕೊಟ್ಟರು. ಮೊದಲನೇ ಡೈರೆಕ್ಟರ್ ಸಭೆಯಲ್ಲಿ ಯಾರೋ ಕಾಫಿ ತರಿಸಬೇಕೆಂದು ಕೇಳಿದರು. ತಕ್ಷಣ ಶರ್ಮಾಜಿಯವರು ಐದು ರೂಪಾಯಿ ಕೊಟ್ಟು ಕಾಫಿ ತರಿಸಿದರು. ನಂತರ ನಮ್ಮದು ಬಡವರ ಬ್ಯಾಂಕು. ನಾವು ಇಲ್ಲಿ ಇರುವುದು ಧರ್ಮದರ್ಶಿಗಳಾಗಿ. ಕಷ್ಟಪಟ್ಟು ಸದಸ್ಯರು ಕೊಡುವ ಬಡ್ಡಿಯ ದುಡ್ಡಿನಲ್ಲಿ ನಾವು ಕಾಫಿ ಕುಡಿಯಬಾರದು. ಕಾಫಿ ಕುಡಿಯುವ ಚಪಲ ಇದ್ದರೆ ನಮ್ಮ ಸ್ವಂತ ದುಡ್ಡು ಹಾಕಿ ಕುಡಿಯೋಣ. ನಾನು ಬೇಡ ಅನ್ನುವುದಿಲ್ಲ" ಎಂದು ಹೇಳಿದರು. ಆವೊತ್ತಿನಿಂದ ಇದುವರೆಗೆ ಈ ಬ್ಯಾಂಕಿನ ಡೈರೆಕ್ಟರ್‌ಗಳ ಸಭೆಯಲ್ಲಿ ಕಾಫಿ ತಿಂಡಿ ಇಲ್ಲ.

ಬ್ಯಾಂಕಿನ ಕಾರ್ಯನಿರ್ವಾಹಕ ಸಮಿತಿಗೆ ಸದಸ್ಯರು ಎಲ್ಲ ಮಟ್ಟದವರೂ ಇರಬೇಕು. ಅನಕ್ಷರಸ್ಥ, ಅಕ್ಷರಸ್ಥ, ವಿದ್ಯಾವಂತ, ಅವಿದ್ಯಾವಂತ ಎಂಬ ಭೇದ ಭಾವ ಇಲ್ಲ, ಎಲ್ಲರೂ ಒಂದೇ. ಎಷ್ಟೇ ವಿರೋಧವಾಗಿ ಮಾತನಾಡಿದರೂ ತಾಳ್ಮೆ ಯಿಂದ ಕೇಳುತ್ತಿದ್ದರು. ನಮಗೇ ಸಿಟ್ಟು ಬರುತ್ತಿತ್ತು. ಆದರೆ ಅವರು ನಮ್ಮನ್ನು ಸಮಾಧಾನ ಮಾಡುತ್ತಿದ್ದರು.

ಯಾವುದಾದರೂ ಸಭೆಗೆ ಅಧ್ಯಕ್ಷರಾಗಬೇಕಾದರೆ, ಸಭೆಯಲ್ಲಿ ಭಾಷಣ ಮಾಡ ಬೇಕಾದರೆ, ತಯಾರಿಸಿ ಇರುತ್ತಿರಲಿಲ್ಲ. ಏನು ವಿಷಯ ಎಂದು ನಮ್ಮನ್ನೇ ಕೇಳು ತ್ತಿದ್ದರು. ಯಾವ ವಿಷಯ ಮಾತನಾಡಲಿ ಎಂದು ಕೇಳುತ್ತಿದ್ದರು. ಎಷ್ಟೋ ಸಾರಿ ಒಂದು ಗೀತೆ ಹಾಡಿದರೆ, ದೇವರ ನಾಮ ಹಾಡಿದರೆ, ಅದರ ಮೇಲೆಯೇ ಒಂದು ಭಾಷಣ! ಸ್ವಾಗತ ಭಾಷಣ ಮಾಡಿದರೆ ಅವರು ತಂದ ಯಾವುದಾದರೂ ಒಂದು ಸಮಸ್ಯೆ ಮೇಲೆ 2–3 ಗಂಟೆ ಭಾಷಣ. ಭಾಷಣದಲ್ಲಿ ಬೇಸರವಿಲ್ಲ. ಹೊತ್ತು ಕಳೆಯುವುದು ತಿಳಿಯುತ್ತಿರಲಿಲ್ಲ.

ಸಂಘದಲ್ಲಿ ಯಾರೇ ಓಡಾಡಲೀ, ಅವರೆಲ್ಲರೂ ಅವರ ಮಕ್ಕಳು, ಒಂದು ಕುಟುಂಬದವರು. ನನಗಂತೂ ಅವರೇ ಗುರು. ಎಲ್ಲದರಲ್ಲೂ ಅವರ ಆಶೀರ್ವಾದವೇ, ಓದುವಾಗ ಸಹಾಯ ಮಾಡಿದರು, ಕಷ್ಟಸುಖಗಳನ್ನು ವಿಚಾರಿಸುತ್ತಿದ್ದರು. B. E. ಆದಮೇಲೆ ಕೆಲಸಕ್ಕೆ ಸಹಾಯ ಮಾಡಿದರು. ನನ್ನ ಕೆಲಸಕ್ಕೆ ಅವರು ಪ್ರಯತ್ನ ಪಟ್ಟರು. ನನ್ನ ತಾಯಿಯವರು ಮಗನಿಗೆ ಮದುವೆ ಮಾಡಬೇಕೆಂದು ಕೇಳಿದಾಗ ಅವರೇ ಹೆಣ್ಣು ನೋಡಲು ಪ್ರಾರಂಭಿಸಿದರು, ಗೊತ್ತುಮಾಡಿದರು. ಅವರೂ ಅವರ ಕುಟುಂಬದವರೇ ಎಲ್ಲದಕ್ಕೂ ಮುಂದೆ ನಿಂತು ನಡೆಸಿದರು. ಅವರ ಹೆಸರಿನಲ್ಲಿ ನನ್ನ ಮದುವೆಯ ಲಗ್ನಪತ್ರಿಕೆಯಾಯಿತು. ಎಲ್ಲ ಸ್ನೇಹಿತರಿಗೂ, ಮಂತ್ರಿಗಳಿಗೂ ಕಳುಹಿಸಿದರು. ಆಗ ಶ್ರೀ ಟಿ. ಮರಿಯಪ್ಪನವರು P. W. D. ಮಂತ್ರಿಗಳು. ಶರ್ಮಾಜಿಗೆ ಫೋನ್‌ಮಾಡಿ ಕೇಳಿದರು: "ನೀವು ಕಳಿಸಿದ ಲಗ್ನಪತ್ರಿಕೆ ತಲುಪಿತು, ಆದರೆ ಹುಡುಗ ನಿಮಗೆ ಏನಾಗಬೇಕೆಂಬುದೇ ಹಾಕಿಲ್ಲ, ಅಲ್ಲದೆ ಹೆಸರುಗಳನ್ನು ನೋಡಿದರೆ ಏಕೋ ವಿಚಿತ್ರವಾಗಿದೆ. ಇದು ಹೇಗೆ?" ಎಂದು. ಅದಕ್ಕೆ ಶರ್ಮಾಜಿ

ಹೇಳಿದರು : "ಶ್ರೀ ಮರಿಯಪ್ಪನವರೇ, ನೀವು ನಾಗಮಂಗಲದಲ್ಲಿ M. L. A. ಚುನಾವಣೆಗೆ ನಿಂತಾಗ ನಾನು ಬಂದು ಸಾರ್ವಜನಿಕ ಸಭೆಯಲ್ಲಿ 'ನಮ್ಮ ಮರಿಯಪ್ಪ ನವರು ಬಹಳ ಯೋಗ್ಯರು, ಕ್ಷೇತ್ರದಲ್ಲಿ ಕೆಲಸ ಮಾಡುತ್ತಾರೆ. ಅವರಿಗೆ ಓಟು ಕೊಡೀ' ಎಂದು ಕೇಳುತ್ತೀನಲ್ಲ, ನಿಮ್ಮ ಪರವಾಗಿ, ನನಗೂ ನಿಮಗೂ ಏನು ಸಂಬಂಧ? ಅದೇ ರೀತಿ ಶ್ರೀನಿವಾಸಯ್ಯ ನಮ್ಮ ಗಾಂಧೀ ಸಾಹಿತ್ಯ ಸಂಘದ ಹುಡುಗ. ಚಿಕ್ಕ ವಯಸ್ಸಿನಿಂದ್ಲ ಗೊತ್ತು. ಜೊತೆಯಲ್ಲೇ ಇದ್ದಾನೆ. ಇದರಿಂದ ನಮ್ಮ ಹೆಸರಿನಲ್ಲಿ ಲಗ್ನಪತ್ರಿಕೆ ಮಾಡಿ ನಿಮ್ಮನ್ನು ಆಹ್ವಾನಿಸಿದ್ದಲ್ಲಿ ಏನು ತಪ್ಪಿದೆ ?"

ಸಂಘದ ಮತ್ತು ಕುಟುಂಬದವರ ಕಷ್ಟಸುಖ, ಖರ್ಚು ಎಲ್ಲಾ ಕೇಳುತ್ತಿದ್ದರು. ದುಡ್ಡಿನ ಸಹಾಯ ಮಾಡುತ್ತಿದ್ದರು. ಸಮಸ್ಯೆಗಳಿದ್ದರೆ ಬಿಡಿಸುತ್ತಿದ್ದರು. ಗಂಡ ಹೆಂಡತಿಯ ಜಗಳಕೂಡ ಬಿಡಿಸುತ್ತಿದ್ದರು. ರಾತ್ರಿ 12 ಗಂಟೆಯಲ್ಲಾದರೂ ಎದ್ದು ಎಲ್ಲಿಗೆ ಕರೆದರೂ ಬಂದು ಇತ್ಯರ್ಥ ಮಾಡುತ್ತಿದ್ದರು.

ಶರ್ಮಾಜಿಯವರ ಬರವಣಿಗೆ ಬಹು ಹರಿತ. ಹಿಂದೆ ವಿದ್ಯಾಇಲಾಖೆಯಲ್ಲಿ ಇದ್ದ ವಹಾಬ ಸಾಹೇಬರು ಉಪಧ್ಯಾಯರನ್ನು ಕತ್ತೆ ಎಂದು ವಿದ್ಯಾರ್ಥಿಗಳ ಮುಂದೆ ಬಯ್ಯುತ್ತಾರೆಂದು ಉಪಾಧ್ಯಾಯರು ಬಂದು ದೂರು ಹೇಳಿದ್ದರು. ಅದಕ್ಕೆ ಶರ್ಮಾಜಿ ಯವರು 'ಮಾತಿನ ಮಂಟಪದಲ್ಲಿ ಬರೆದರು' : "ವಿದ್ಯಾ ಇಲಾಖೆಯ ಅಧಿಕಾರಿಗಳಾದ ವಹಾಬ ಸಾಹೇಬರವರ ನಾಲಿಗೆಯ ಮೇಲೆ ಸದಾ ಕತ್ತೆ ಕುಣಿಯುತ್ತಿರುತ್ತದೆ" ಎಂದು.

ಶರ್ಮಾಜಿಯವರ ಜೊತೆಯಲ್ಲಿ ಮಾತನಾಡುವುದು ಎಂದರೆ ಒಂದು ಹಿತ. ಈ 30 ವರುಷದ ನೆನಪುಗಳನ್ನು ಬರೆಯುತ್ತ ಹೋದರೆ ನೂರಾರು ಪುಟ ಬರೆಯ ಬಹುದು. ನಮ್ಮ ಗಾಂಧೀ ಸಾಹಿತ್ಯ ಸಂಘಕ್ಕೆ ಸೇರಿದವರು ಅವರ ಆಶೀರ್ವಾದ ದಿಂದ ಉತ್ತಮ ಸ್ವಯಂಸೇವಕರಾಗಿದ್ದಾರೆ, ಅವರವರ ಕ್ಷೇತ್ರದಲ್ಲಿ. ನನ್ನ ಜೀವನವಂತೂ ಅವರು ರೂಪಿಸಿದ್ದೇ. ಅವರ ಸಹವಾಸವೇ ನನಗೆ ಬೆಳಕು. ನನ್ನಂತೆ ಹೇಳುವವರು ಅನೇಕರಿದ್ದಾರೆ ಎಂದು ತಿಳಿದಿದ್ದೇನೆ.

# ನಮ್ಮ ಕೃಷ್ಣಶರ್ಮರು ಹತ್ತಿಸಿದ ದಾರಿದೀಪ

ಕೆ. ಎಸ್. ನಾರಾಯಣಸ್ವಾಮಿ

**ರಾ**ಷ್ಟ್ರಹೃದಯದಲ್ಲಿ ಚೈತನ್ಯಶಕ್ತಿಯೊಂದು ಅರಳಿನಿಲ್ಲುತ್ತಿದ್ದ ಕಾಲ ಅದು. ಸ್ವಾತಂತ್ರ್ಯ ಸಮರ ಗಾಂಧೀಪ್ರಭಾವದ ಮಹಾಪೂರವಾಗಿ ಹರಿಯುತ್ತಿತ್ತು. ನಾಲ್ಕು.ರಾಜ್ಯಗಳಲ್ಲಿ ಹಂಚಿಹೋಗಿದ್ದ ಕರ್ನಾಟಕ ತನ್ನ ನಿಸ್ಸೀಮ ಸಾಹಸ ಸಾಧನೆಗಳಿಂದ "ಗಾಂಧೀಪ್ರಾಂತ" ಅನ್ನಿಸಿಕೊಂಡಿತ್ತು. ಬೆಳಗಾವಿಯ ಕಾಂಗ್ರೆಸ್ ಅಧಿವೇಶನ ಸ್ವತಃ ಗಾಂಧೀಜಿಯವರ ಅಧ್ಯಕ್ಷತೆಯಲ್ಲೇ ನಡೆದು ಅಹಿಂಸಾ ಸಮರದ ವೀರ ದುಂದುಭಿಯ ಮಹಾನಾದ ಅಲೆಅಲೆಯಾಗಿ ಕ್ರಾಂತಿಶಕ್ತಿಗಳಿಗೆ ಪುಟಕೊಟ್ಟು ಯುವಕರನ್ನು ಹುರಿದುಂಬಿಸಿ ನಿಲ್ಲಿಸುತ್ತಿತ್ತು. ಕನ್ನಡದ ಕಡುಗಲಿಗಳು ನಿಸ್ಸೀಮ ಬಲಿದಾನಕ್ಕೆ ಸಿದ್ಧರಾಗಿ ನಿರ್ಭೀತಿಯಿಂದ ಸ್ವಾತಂತ್ರ್ಯ ಸಂದೇಶವನ್ನು ಜನಕೋಟಿಯ ಬಾಗಿಲಿಗೆ ಮುಟ್ಟಿಸಿ ಪ್ರಚಂಡ ಜಾಗೃತಿಯನ್ನು ನಿರ್ಮಿಸಿದರು. ಆ ವೀರಾಗ್ರಣಿಗಳ ಪ್ರಥಮ ಪಂಕ್ತಿಗೆ ಸೇರಿದವರು ಕೃಷ್ಣಶರ್ಮರು. ನಾಲ್ಕೂ ರಾಜ್ಯಗಳ ಯುವಜನರ ಮಧ್ಯೆ ಕೆಚ್ಚೆದೆಯ ಕಟ್ಟಾಳಾಗಿ ನಿಂತು ಮಹಾತ್ಮಗಾಂಧಿಯ ಜೀವನ ಸಂದೇಶವನ್ನು ಕಡೆದು ನಿಲ್ಲಿಸಿದ ಅನಾದೃಶ್ಯ ಸಾಹಸ ಅವರದು. ಈ ಶತಮಾನದ ಮೂರು ನಾಲ್ಕನೆಯ ದಶಕಗಳಲ್ಲಿ ಕನ್ನಡದೇಶದ ವಿದ್ಯಾರ್ಥಿ ವೃಂದಕ್ಕೆ, ಸ್ವಯಂಸೇವಕ ಪಡೆಗಳಿಗೆ ಆತ್ಮೀಯ ಬಂಧುವಾಗಿ ಕೈಹಿಡಿದು ನಡೆಸಿದ ನಿಸ್ಸೀಮ ಸಾಹಸಿ ನಮ್ಮ ಸಿದ್ದವನಹಳ್ಳಿ ಕೃಷ್ಣಶರ್ಮರು.

1939–40 ಸರಿ ಸುಮಾರಿನಲ್ಲಿ ಬೆಂಗಳೂರಿನ ವಿದ್ಯಾರ್ಥಿ ಸ್ತೋಮಕ್ಕೆ ಕೃಷ್ಣಶರ್ಮರ ತ್ರಿವಿಕ್ರಮ ವ್ಯಕ್ತಿತ್ವ ಅತ್ಯಂತ ಆಕರ್ಷಣೀಯ ಶಕ್ತಿ. ಆಗಿನ ಹೈದರಾಬಾದ್ ನಿಜಾಮರ ಕ್ರೂರದಮನ ಶಕ್ತಿಯನ್ನೆದುರಿಸಿ ನಿಂತು ಹೋರಾಡಿದ್ದ ಪ್ರಭಾವಳಿ, ಧಾರವಾಡದ ಗೆಳೆಯರ ಗುಂಪಿನ ಚೈತನ್ಯಪೂರ್ಣ ಮಣಿದೀಪಗಳಲ್ಲಿ ಒಂದಾಗಿ ಸಾಹಿತ್ಯ ಶೈಲಿಯಲ್ಲಿ ಅಗ್ರಪಂಕ್ತಿಯ ಲೇಖಕ ಎನಿಸಿದ್ದ ಖ್ಯಾತಿ, ಅಹಿಂಸಾ ಸಮರದ ಸೈದ್ಧಾಂತಿಕ ವಿಚಾರ ಪ್ರಚಾರದ ಪ್ರಖರ ವಾಗ್ಮಿ ಎಂಬ ಸಿದ್ಧಿ, ಈ ತ್ರಿವೇಣಿ ಸಂಗಮದ ಈ ವಾಮನ ಮೂರ್ತಿ ಬೆಂಗಳೂರು ಮಲ್ಲೇಶ್ವರದ ಕಿರು ಮನೆಯೊಂದರಲ್ಲಿ ಯುವಕವೃಂದವನ್ನಾಕರ್ಷಿಸುವ ಸೂಜಿಗಲ್ಲಾದರು. ಬಂದವರೆಲ್ಲರಿಗೂ ಅವರು ಆತ್ಮೀಯರೇ. ಚಳುವಳಿಗಳು ಉಗ್ರ ಸ್ವರೂಪಕ್ಕೆ ತಿರುಗಿದಾಗಲೆಲ್ಲ:ವಿಫಲರಾಗಿ ಹಿಂದೆ ಸರಿಯುತ್ತಿದ್ದ ವಿದ್ಯಾರ್ಥಿವೃಂದಕ್ಕೆ ಉತ್ಸಾಹ ತುಂಬಿ ರಚನಾತ್ಮಕ ಅಹಿಂಸಾ ಕ್ರಾಂತಿಗೆ ಅಣಿ ಮಾಡು

ತ್ತಿದ್ದ ಶಿಲ್ಪಿ ನಮ್ಮ ಶರ್ಮಾಜಿ. ಆ ದಿನಗಳ ಸ್ಫೂರ್ತಿ ಚಿಲುಮೆ ನೂರಾರು ಯುವಜನರನ್ನು ಆವರಿಸಿ ಒಂದು ಪ್ರೇಮಮಯ ವರ್ತುಲವನ್ನು ನಿರ್ಮಿಸಿತ್ತು. ಅದೇ ಮಲ್ಲೇಶ್ವರದ ಸುಪ್ರಸಿದ್ಧ ಗಾಂಧೀ ಸಾಹಿತ್ಯ ಸಂಘ. ಅದರ ಕೇಂದ್ರ ಬಿಂದು ನಗೆಮುಖದ ಶರ್ಮಾಜಿ.

ಬೆಂಗಳೂರಿಗೆ ಬಂದ ಹೊಸದರಲ್ಲಿ ಶ್ರೀ ಶರ್ಮರು 'ವಿಶ್ವಕರ್ನಾಟಕ'ಕ್ಕೆ ಬರೆಯುತ್ತಿದ್ದ ಲೇಖನಗಳು, ಅವರ 'ಹರಿಜನ'ದ ಕನ್ನಡ ಭಾಷಾಂತರ, 'ಮಾತಿನ ಮಂಟಪ'ದ ಪ್ರಖರವಾದ ನಿತ್ಯ ಶೀರ್ಷಿಕೆಯ ಲೇಖನಗಳು, 'ಕನ್ನಡದ ಕಿಡಿ'ಗಳಾಗಿ ಹೊರಬಿದ್ದ ಮಿಂಚಿನ ಸಾಹಿತ್ಯ ಇವು ಅಂದಿನ ವಿದ್ಯಾರ್ಥಿವೃಂದಕ್ಕೆ ಅಮೃತಸಿಂಚನದ ಅನುಭವವನ್ನುಂಟುಮಾಡಿದ್ದವು. ಶರ್ಮರ ಭಾಷಣ ಎಂದರೆ ಕಿರಿಯರಿಗೆ ಅತ್ಯಂತ ಸಮೀಪದ ವಿವೇಕವಾಣಿ. ದಿನದಿನವೂ ಒಂದಲ್ಲ ಒಂದು ರೀತಿಯ ಚಳುವಳಿಗಳು ನಡೆಯುತ್ತಿದ್ದ ಕಾಲ ಅದು. ನಮ್ಮ ಸಮಸ್ಯೆಗಳಿಗೆಲ್ಲ ತಾಳ್ಮೆಯಿಂದ ಉತ್ತರಿಸುವ ಹಿರಿಯರೆಂದರೆ ಅವರೊಬ್ಬರೇ. ಮಿಕ್ಕವರೆಲ್ಲ ಸಿಡಿಲಿದಂತೆರಗುತ್ತಿದ್ದಾಗ ತಿಳಿನೀರಿನ ಜರಿಯಂತೆ ಕಶ್ಮಲವನ್ನು ತೊಳೆದು ಅಹಿಂಸಾ ಪಥದ ವಿಸ್ಮಯಕಾರಕ ದರ್ಶನವನ್ನು ಮನವರಿಕೆ ಮಾಡಿಕೊಡುತ್ತಿದ್ದ ಅವರ ನೇರ 'ಮಾತಿನ ಮಂಟಪ' ಅವ್ಯಾಹತವಾಗಿ ರಾತ್ರಿಯೆಲ್ಲ ಸಮಾವೇಶವಾದುದ್ದುಂಟು. ಗೆಳೆಯರ ಕ್ಷುಲ್ಲಕ ಜಗಳದಿಂದ ಹಿಡಿದು ರಾಷ್ಟ್ರೀಯ ಮಟ್ಟದ ಗಂಭೀರ ಸಮಸ್ಯೆಗಳನ್ನು ಬಿಡಿಸುವ ನಮ್ಮ ಆಸರೆಯಾದರು ಶರ್ಮರು. ಅವರು ಹೇಳಿದರು ಎಂದರೆ ನಮಗೆ ಸಾಕು. ಅದಕ್ಕಿಂತ :ಹೆಚ್ಚಿನ ಅಧಿಕಾರವಾಣಿ ಯಾರದೂ ನಮಗೆ ಪಥ್ಯವಾಗದು. ಆ ಮೋಡಿ, ಆ ಸಿದ್ಧಿ, ಆ ನಯ ವಿನಯ ಅವರ ವ್ಯಕ್ತಿತ್ವದಲ್ಲೇ ತುಂಬಿ ತುಳುಕುತ್ತಿರುವಂತೆ ನಮಗೆ ಭಾಸವಾಗುತ್ತಿತ್ತು.

ಒಮ್ಮೆ ಕಾಲೇಜಿನ ಅತ್ಯಂತ ಪ್ರಸಿದ್ಧ ಪ್ರಾಧ್ಯಾಪಕರೊಬ್ಬರು ವಿದ್ಯಾರ್ಥಿಗಳೊಡನೆ ಮಾತನಾಡುತ್ತ ಖಾದಿಯ ಬಗ್ಗೆ ವ್ಯಂಗ್ಯವಾಗಿ ಟೀಕಿಸಿ ನನ್ನ ರಾಷ್ಟ್ರಪ್ರೇಮ ನನ್ನ ಬಟ್ಟೆಯ ಒರಟು ಗುಣದ ಮೇಲೆ ನಿರ್ಧಾರವಾಗುವುದಿಲ್ಲ. (My Patriatism not measured by the roughness of my cloth) ಎಂದರು. ಆಕಸ್ಮಾತ್ತಾಗಿ ಶರ್ಮರು ಅಲ್ಲೇ ಇದ್ದರು. ನಮ್ಮ ಮುಖಗಳೆಲ್ಲ ಯಂತ್ರದಂತೆ ಅವರ ಕಡೆ ತಿರುಗಿದವು. ಪ್ರಾಧ್ಯಾಪಕರನ್ನು ಎದುರಿಸಿ ಮಾತನಾಡಲು ನಮಗೆ ಧೈರ್ಯ ಸಾಲದು. ನಗುಮುಖದ ಶರ್ಮಾಜಿ ತಕ್ಷಣ ('Nor is any body's culture established by the fineness of dress) 'ಉಡುಪಿನ ನಯಗಾರಿಕೆಯ ಮೇಲೆ ಯಾರ ಸಂಸ್ಕೃತಿಯೂ ಸಿದ್ಧವಾಗುವುದಿಲ್ಲ' ಅಂದುಬಿಟ್ಟರು. ಪ್ರೊಫೆಸರರ ಮುಖ ನೋಡಬೇಕೆ ! ಮುಂದೆ ನಮ್ಮ ಸಭೆಗಳಿಗೆ ಅವರನ್ನು ಕರೆಯಲು ಅವರು ಅನುಮತಿಯನ್ನೇ ಕೊಡುತ್ತಿರಲಿಲ್ಲ. ಆ ದಿನ ನಮ್ಮಲ್ಲಿನ ಅನೇಕ ಕಿರಿಯ ಗೆಳೆಯರಿಗೆ ಮಿಂಚಿ

ನಂತೆ ಬಂದ ಆ ಎರಡು ಮಾತುಗಳು ಶರ್ಮರ ವ್ಯಕ್ತಿತ್ವವನ್ನು ಮರೆಯಲಾಗದ ಅಚ್ಚಾಗಿ ಹೃದಯಗಳಲ್ಲಿ ಬೇರೂರಿಸಿ ಬಿಟ್ಟಿತು.

ಅದೇ ಸರಿ ಸುಮಾರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಕನ್ನಡ ಚಳುವಳಿ ವಿದ್ಯಾರ್ಥಿಗಳ ಆಕರ್ಷಕ ಸೇವಾಕ್ಷೇತ್ರವಾಗಿತ್ತು. ಕನ್ನಡದ ಬಳಕೆಯೇ ವಿದ್ಯಾವಂತರಿಗೆ ಅವಮಾನಕರವೆಂದು ಭಾವಿಸಲಾಗಿದ್ದ ಕಾಲ ಅದು. ಬಿ ಎಂ. ಶ್ರೀ. ಅಂತಹ ಉದ್ದಾಮ ಇಂಗ್ಲೀಷ್ ಪ್ರಾಧ್ಯಾಪಕರು ಕನ್ನಡ ಕುರಿತು ತೋರಿದ ಆಸಕ್ತಿ ಎಷ್ಟೋ ಪ್ರತಿಷ್ಠಿತರಿಗೆ ನುಂಗಲಾರದ ತುತ್ತಾಗಿತ್ತು. 'ಶ್ರೀ ಶ್ರೀ' ಅವರೂ ಸಹ ಬಹಳ ಸವಿನಯ ನಡೆನುಡಿಗಳಿಂದಲೇ ಅಂದಿನ ವಿದ್ಯಾವಂತವರ್ಗವನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಸ್ವಲ್ಪ ಉಗ್ರಗಾಮಿಗಳಾಗಿ ಹಿರಿಯರ ಈ ಪಾಶ್ಚಾತ್ಯ ಅಂಧಾನುಕರಣೆಯ ನಾಟಕೀಯತೆಯನ್ನು ಕಂಡು ಸಹಿಸಲಾಗದ ಕಿರಿಯರಿಗೆ ಯಾರಾದರೂ ಪ್ರಬಲವಾಗಿ ನಮ್ಮ ಕನ್ನಡ ತನವನ್ನು ಎತ್ತಿ ಹಿಡಿದು ಪ್ರತಿಭಟಿಸುವ ಸಾಹಿತಿ ಬರಬಾರದೇ ಅನ್ನಿಸುತ್ತಿತ್ತು. ಕೃಷ್ಣಶರ್ಮರ 'ಕನ್ನಡದ ಕಿಡಿಗಳು' ಬಂದಾಗ ಒಂದು ಹೊಸ ಆತ್ಮಗೌರವದ ಚೇತನವೇ ನಮ್ಮ ಮುಂದೆ ನಿಂತಂತಾಯಿತು. ಅವರೊಮ್ಮೆ ಬರೆಯುತ್ತಾ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಮನೆಯ ಮುಂದೆ ಇಂಗ್ಲಿಷ್ ನಾಮಫಲಕ ಇದ್ದುದನ್ನು ಟೀಕಿಸಿ 'ಕನ್ನಡದ ಗುರುವರ್ಯ ಶ್ರೀ ಅವರ ತಲೆಬಾಗಿಲಿನ ಬರಹ ಇಂಗ್ಲೀಷಿನಲ್ಲಿ!' ಎಂದಾಗ ಅದರ ಕಡೆ ಗಮನಿಸದಿದ್ದ ನಮಗೆಲ್ಲ ಒಂದು ರೋಮಾಂಚನದ ಮಿಂಚು ಹಾದು ಹೋದಂತಾಯಿತು! ಶ್ರೀಯವರೂ ಆನಂತರ ಆ ನಾಮಫಲಕವನ್ನು ತೆಗೆದರು. ಎಲ್ಲ ಕಡೆಯೂ ಕನ್ನಡದ ಹೆಸರುಗಳೂ ಫಲಕಗಳೂ ಧ್ಯೇಯವಾಕ್ಯಗಳೂ ತಲೆ ಬರಹಗಳೂ ಕಾಲೇಜಿನ ಆವರಣದೊಳಗೂ ಸಹ ಕಾಣಿಸತೊಡಗಿದವು ಈ ಒಂದೊಂದು ಹೆಜ್ಜೆಯೂ ಅಂದಿನ ಹಿನ್ನೆಲೆಯಲ್ಲಿ ಮರೆಯಲಾಗದಂತಹವು.

ಗಾಂಧೀ ಸಾಹಿತ್ಯಕ್ಕೆ ಶರ್ಮರ ಕೊಡುಗೆ ಅಮರವಾದ ಶ್ರೇಷ್ಠ ಕಾಣಿಕೆ. ಗಾಂಧೀಜಿ ಮತ್ತು ವಿನೋಬಾಜಿ ಕನ್ನಡ ಜನದ ಮನಸ್ಸು ಹೃದಯಗಳನ್ನು ಸೂರೆಗೊಂಡುದು ಬಹುಮಟ್ಟಿಗೆ ಶರ್ಮರ ಸಾಹಿತ್ಯಶಕ್ತಿಯ ಸ್ಫಟಿಕಮಣಿ ಸ್ಪರ್ಶದಿಂದಲೇ ಅವರ ವರ್ಧಾಯಾತ್ರೆ, ಪರ್ಣಕುಟಿ, ಸಂವಾದ ಮಾಲೆಗಳು ಕನ್ನಡದ ಒಂದು ಹೊಸ ಶೈಲಿಯನ್ನೇ ನಿರ್ಮಿಸಿ ಗಾಂಧೀಜಿಯ ವ್ಯಕ್ತಿತ್ವವನ್ನು ಕಡೆದು ನಿಲ್ಲಿಸಿದುವು. ಇಂದಿಗೂ ಈ ಕೃತಿಗಳಂತಹವು ಬೇರೆ ಭಾರತೀಯ ಭಾಷೆಗಳಲ್ಲಿ ಅಪರೂಪ. ಕಾಗದದ ಅಭಾವಕಾಲದಲ್ಲಿ ಒರಟು, ಮಾಸಲು ಕಾಗದದ ಮೇಲೆ ಮೈಸೂರಿನ ಗೆಳೆಯರು 'ವರ್ಧಾಯಾತ್ರೆ'ಯನ್ನು ಶ್ರೀ ಭದ್ರಯ್ಯನವರ ಗ್ರಾಮ ಸೇವಾ ನಿಲಯ ಮುದ್ರಣಾಲಯದಲ್ಲಿ ಅಚ್ಚುಹಾಕಿಸಿ ಮನೆಮನೆಗೆ ಮಾರಲು ಹೊರಟಾಗ ಅನೇಕ ಕಡೆ ನಾಲ್ಕಾರು ಗೆಳೆಯರು ಕುಳಿತು ಅದರ ಪುಟಪುಟಗಳನ್ನು ಗಟ್ಟಿಯಾಗಿ ಪಠಿಸುತ್ತಿದ್ದೆವು. ಒಂದು ದೊಡ್ಡ ಗುಂಪೇ ಸೇರಿ ಆ ಬರಹದ ಸಂಗೀತದಲ್ಲಿ ತಲ್ಲೀನವಾಗಿಬಿಡುತ್ತಿತ್ತು. ಸೇವಾಗ್ರಾಮವೇ ಚಿತ್ರಪಟದಂತೆ ಇಳಿದು ಗಾಂಧೀಜಿ ಅಲ್ಲಿಯೇ ನಮ್ಮ ಕಣ್ಣ ಮುಂದೆ ಜ್ವಲಿ

ಸುತ್ತಿರುವಂತೆ ಭಾಸವಾಗುತ್ತಿತ್ತು. ವಾಸ್ತವವಾಗಿ ಗಾಂಧೀಜಿಯ ಪ್ರತ್ಯಕ್ಷ ದರ್ಶನಕ್ಕೆ ಮುಂಚೆ ನಮ್ಮಲ್ಲಿ ಮೂಡಿದ್ದ ಗಾಂಧೀ ರೂಪ ಅವರನ್ನು ನಾವು ಮೊದಲ ಬಾರಿಗೆ ಕಂಡೊಡನೆ ಒಂದು ಆತ್ಮೀಯ ಬಾಂಧವ್ಯವನ್ನು ನಿರ್ಮಿಸಿತು. ನಮಗೆ ಬಾಳಿನಲ್ಲಿ ಬೆಳಕು ತೋರಿದುದು ಗಾಂಧೀ ನಡೆನುಡಿಗಳಷ್ಟೇ ಅಲ್ಲ, ಆತ್ಮೀಯತೆಯಿಂದ ನಮ್ಮನು ಕೈಹಿಡಿದು ಅವರೆಡೆಗೆ ಕೊಂಡೊಯ್ದ ಶರ್ಮಾಜಿ ಅವರೂ ಹೌದು.

ರಚನಾತ್ಮಕ ಕಾರ್ಯಕ್ರಮ ಅಂದಿನ ಸಂಗ್ರಾಮದಿನಗಳಲ್ಲಿ ಹೆಚ್ಚು ಯುವಕರಿಗೆ ಹಿಡಿಸುತ್ತಿರಲಿಲ್ಲ. ಬಿಸಿ ಬಿಸಿ ಸುದ್ದಿಗಳಾಗುವಂತಹ ನೇರ ಪ್ರತಿಭಟನೆಯ ಸಾರ್ವಜನಿಕ ಚಳುವಳಿಗಳು ಹೆಚ್ಚು ಆಕರ್ಷಣೀಯವಾಗುತ್ತಿದ್ದವು. ಚರಕದಲ್ಲಿ ನೂತು ಖಾದಿ ತೊಡುವ ಸಂದೇಶಕ್ಕಿಂತ ಪರದೇಶಿವಸ್ತುಗಳನ್ನು 'ಹೋಳಿ' ಮಾಡುವ ಕೋಲಾಹಲಕಾರೀ ಕಾರ್ಯಕ್ರಮದಲ್ಲಿ ಉತ್ಸಾಹದಿಂದ ಓಡುತ್ತಿದ್ದೆವು. ನೊರೆಯಂತೆ ಏರಿ ಬರುತ್ತಿದ್ದ ಆವೇಶ ಕಡಿಮೆಯಾದೊಡನೆ ನಮಗೆ ನಿರಾಶೆಯೇ ಎದುರಾಗುತ್ತಿತ್ತು. ಅದೇ ಸಮಯಕ್ಕೆ ವಿವೇಕ ಮೂಡಿಸಲು ನಮಗೊದಗಿದ್ದ ವಿವೇಕವಾಣಿ ಎಂದರೆ ಕೃಷ್ಣ ಶರ್ಮರ ನಿರಂತರ ಮಾತುಕಥೆಗಳು, ಗಾಂಧೀ ಪ್ರಣೀತ ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯ ಶಾಸ್ತ್ರಗಳು ಗೋಚರವಾಗಿದ್ದು ಶರ್ಮರ ಬರಹಗಳಿಂದ, ವ್ಯಾಖ್ಯಾನಗಳಿಂದ ಮುಂದೆ ಅದೇ ಜಾಡಿನಲ್ಲಿ ಗಾಂಧೀಸಾಹಿತ್ಯ ಸಂಘದ ಪ್ರಕಟಣೆಗಳು ಬಂದವು. ಗಾಂಧೀ ವಿಚಾರ ಮಾರ್ಗದ ಮಂತ್ರ ದ್ರಷ್ಟಾರರಂತೆ ಆಚಾರ್ಯಪುರುಷರಾಗಿ ಪತ್ರಿಕಾ ಕೀರ್ತಿಗೆ ಹೊರತಾಗಿದ್ದು ಗಾಂಧೀವಾದಕ್ಕೆ ಅಡಿಗಲ್ಲುಗಳನ್ನು ಹಾಸುತ್ತಿದ್ದ ಡಾ॥ ಕುಮಾರಪ್ಪ, ಶ್ರೀ ಮಶ್ರುವಾಲ, ಆಚಾರ್ಯ ವಿನೋಬಾ, ಕಾಕಾ ಕಾಲೇಲ್ಕರ್, ಶ್ರೀ ಆರ್ಯನಾಯಕಂ ಇವರುಗಳನ್ನು ಕನ್ನಡ ಜನಕ್ಕೆ ಪರಿಚಯ ಮಾಡಿಕೊಡುವ ಕಾರ್ಯವನ್ನು ಶ್ರೀ ಶರ್ಮಾಜಿ ಕೈಕೊಂಡಿದ್ದರು. ನಮಗಾಗಿ ವ್ಯಾಸಂಗ ಗೋಷ್ಠಿಗಳನ್ನೇರ್ಪಡಿಸಿ ಕೊಟ್ಟರು. ಗಾಂಧೀ ಸಾಹಿತ್ಯ ಭಂಡಾರವೊಂದನ್ನು ತಮ್ಮ ಮನೆಯಲ್ಲೇ ಏರ್ಪಡಿಸಿದರು. ಯಾರು ಬಂದು ಎಷ್ಟು ಹೊತ್ತು ಏನು ಚರ್ಚೆ ಮಾಡಿದರೂ ಈ ಪುಣ್ಯಾತ್ಮನಿಗೆ ಬೇಸರವಾಗುತ್ತಲೇ ಇರಲಿಲ್ಲ. ಶ್ರೀ ಕೃಷ್ಣಶರ್ಮರ ಸುತ್ತ ಒಂದು ವಿಶ್ವವಿದ್ಯಾನಿಲಯವೇ ನೇಯ್ದುಕೊಂಡಿರುತ್ತಿತ್ತು. ಕಾಲೇಜಿನಿಂದ ಅಲ್ಲಿಗೆ ಧಾವಿಸಿ ಬರುವ ಉತ್ಸಾಹ ನಮ್ಮಲ್ಲಿ ತುಂಬಿತುಳುಕುತ್ತಿತ್ತು. ಗಾಂಧೀಯುಗದ ಗುರುಕುಲವೊಂದು ತಾನೇ ತಾನಾಗಿ ಸೃಷ್ಟಿಯಾಗಿ ಮಹಾವೃಕ್ಷದಂತೆ ಬೆಳೆದು ನಿಂತಿದ್ದುದು. ಈ 'ವಸುದೈವ ಕುಟುಂಬಕ'ರಾದ ಉದಾರ ಚರಿತರಿಂದ.

ಮೈಸೂರು ನಗರದಲ್ಲಿ ನಮ್ಮದೊಂದು ಸಣ್ಣ ಗೆಳೆಯರ ತಂಡವಿತ್ತು. ಗಾಂಧೀಜಿಯ ಮೊಮ್ಮಗ ಕಾಂತಿಲಾಲಗಾಂಧಿ ಆಗ ಅಲ್ಲಿನ ಮೆಡಿಕಲ್ ಕಾಲೇಜ್ ವಿದ್ಯಾರ್ಥಿ. ವಯಸ್ಕರ ಶಿಕ್ಷಣ ಸಮಿತಿಯ ಪ್ರಾಣದಂತಿದ್ದ ಭದ್ರಯ್ಯ, ಶ್ರೀ ಸಂಪತ್ ಶ್ರೀ ಟಿ. ಎಸ್. ಶಾಮರಾಯರು, ಈಗಿನ ರಿಜಿಸ್ಟ್ರಾರ್ ಶ್ರೀರಂಗರಾಜು ಮುಂತಾದವರು ಗ್ರಾಮ ಸೇವಾ ನಿಲಯದ ನಿಕಟಾನುವರ್ತಿಗಳು. ಭದ್ರಯ್ಯನವರೇ ಅದರ ಮೂಲ

ಸ್ಫೂರ್ತಿ. ಈ ಗುಂಪಿಗೆ ಗುರುಪೀಠದಲ್ಲಿದ್ದವರು ಶ್ರೀ ಕೃಷ್ಣಶರ್ಮರು. ಬೆಂಗಳೂರಿಗೆ ಓಡಿಬಂದು ಅವರೊಡನೆ ಸಮಾಲೋಚಿಸದಿದ್ದರೆ ನಮಗೆ ಯಾವ ಕಾರ್ಯಕ್ರಮವೂ ಸಮಾಧಾನ ತರುತ್ತಿರಲಿಲ್ಲ. ಅವರು ಆಗಾಗ್ಗೆ ಮೈಸೂರಿಗೆ ಬಂದುಬಿಡುತ್ತಿದ್ದರು. ವಿದ್ಯಾರ್ಥಿಸಭೆಗಳಲ್ಲಿ ಅವರಿಲ್ಲದೆ ಯಾವ ಚಟುವಟಿಕೆಗಳೂ ಸಾಗುತ್ತಿರಲಿಲ್ಲ. ನಂಜನಗೂಡಿನಲ್ಲಿ ನಡೆದ ಒಂದು ಬೃಹತ್ ಪ್ರಮಾಣದ ವಿದ್ಯಾರ್ಥಿ ಸಮ್ಮೇಳನದಲ್ಲಿ ಯಾವುದೋ ಕೆಲವು ಕುತಂತ್ರಶಕ್ತಿಗಳ ಕೈವಾಡದಿಂದ ಆಸ್ಫೋಟವಾಗಿ ಬಿಡುತ್ತಿದ್ದ ದೊಡ್ಡ ಹಿಂಸಾತ್ಮಕ ದೊಂಬಿ ಶ್ರೀ ಶರ್ಮರ ಅದ್ಭುತ ಸಹನಾಶೀಲ ಮಾರ್ಗದರ್ಶನದಿಂದ ತಪ್ಪಿ ಒಂದು ನೂತನ ಯುವಕ ಸಂಘಟನೆಯೇ ಸೃಷ್ಟಿಯಾಯಿತು. ಆ ಕಾಲಕ್ಕೆ ಅಲ್ಲಿಗೆ ಬಂದಿದ್ದ ಅಶೋಕಮೆಹತ, ರಾವ್‌ಸಾಹೇಬ್ ಪಟವರ್ಧನ್ ರಂತಹ ಅಖಿಲಭಾರತ ನಾಯಕವರ್ಗ ಈ ಅಪೂರ್ವ ಸಂಘಟನೆಯನ್ನು ಮುಕ್ತಕಂಠದಿಂದ ಶ್ಲಾಘಿಸುವಂತಾಯಿತು ನಮ್ಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಾವು ಸಕ್ರಿಯವಾಗಿ ಭಾಗವಹಿಸಿದುದು 1942 ರಿಂದ 1947ರ ಮಧ್ಯೆ. ಆ ಕಾಲದಲ್ಲಿ ನಮ್ಮನ್ನು ಎಡೆಬಿಡದೆ ರಕ್ಷಾಮಣಿಯಂತೆ ಕಾಯ್ದುಕೊಂಡು ಬಾಳನೌಕೆ ಬಿರುಗಾಳಿಯಲ್ಲಿ ಹೊಡೆದುಕೊಂಡು ಹೋಗದಂತೆ ಕಾಪಾಡಿದ ಶರ್ಮಾಜಿ ಅವರ ಕೃಪಾಶ್ರಯವನ್ನು ನೆನೆದಾಗಲೆಲ್ಲ ಕಣ್ಣು ಹನಿಗೂಡಿ ಹೃದಯ ತುಂಬಿಬರುತ್ತದೆ.

ಸ್ವಾತಂತ್ರ್ಯಾನಂತರ ರಾಜಕೀಯ ಕ್ಷೇತ್ರ ಅಧಿಕಾರ ಸ್ಪರ್ಧೆಯ ತುಮುಲವನ್ನು ಪ್ರವೇಶಿಸಿದಾಗ ಶರ್ಮಾಜಿ ಅವರಿಂದ ಆಕರ್ಷಿತರಾಗದೆ ರಚನಾತ್ಮಕ ಕಾರ್ಯಕ್ಷೇತ್ರದಲ್ಲಿ ಉಳಿದುದು ನಮ್ಮ ಮತ್ತೊಂದು ಭಾಗ್ಯವಾಯಿತು. ಗಾಂಧೀಜಿಯ ಕನಸಿನ ಭಾರತ ಅಧಿಕಾರ ಲಾಲನೆಯ ರಹಸ್ಯ ಸ್ಪರ್ಧೆಯಲ್ಲಿ ಜನತೆಯ ಹೃದಯ ಪೀಠದಿಂದ ಅಳಿಸಿ ಹೋದೀತು ಎಂಬ ಎಚ್ಚರ ಅವರಲ್ಲಿ ಪ್ರಜ್ವಲಿತವಾಗಿತ್ತು. ಸುಖಾಸೀನ ಪದವಿಗಳ ಆಮಿಷವನ್ನು ನಿರಾಕರಿಸಿ ಶುದ್ಧ ಅಹಿಂಸಾವಾದಿಗಳಾಗಿ ಗಾಂಧೀಪ್ರಣೀತ ರಚನಾತ್ಮಕ ಕಾರ್ಯಕ್ರಮಗಳನ್ನು ಉತ್ಸಾಹದಿಂದ ಮುಂದುವರಿಸಲು ನವಚೇತನವನ್ನು ತುಂಬಿದರು. ತಾವು ತಮ್ಮ ಸಾಂಸಾರಿಕ ಕಷ್ಟನಿಷ್ಟುರಗಳನ್ನೆಲ್ಲ ಕಡೆಗಣಿಸಿ ಸರ್ವೋದಯ ವಿಚಾರ ಪ್ರಚಾರದಲ್ಲಿ ಮುಂದೆ ನಿಂತರು. ಭೂದಾನ ಗ್ರಾಮದಾನಗಳ ಹೊಸ ವಿಚಾರ ಪ್ರವಾಹ ಅವರ ವಿಚಾರ ಉಚ್ಚಾರ ಆಚಾರಗಳಲ್ಲಿ ಓತಪ್ರೋತವಾಗಿ ಹರಿಯ ತೊಡಗಿತು. ಯುವಕರನ್ನು ಮತ್ತೆ ತ್ಯಾಗಜೀವನದ ಕಡೆಗೆ ಸೆಳೆಯುವ ಕಠಿಣತಮ ಕಾರ್ಯದಲ್ಲಿ ಅವರಷ್ಟು ಯಶಸ್ಸುಗಳಿಸಿದವರು ಅಪೂರ್ವ. ವಿನೋಬಾಜಿ 1956-57 ರ ಸುಮಾರಿನಲ್ಲಿ ಕರ್ನಾಟಕದಲ್ಲಿ ಪಾದಯಾತ್ರೆ ಕೈಗೊಂಡಾಗ ಅವರಿಗೆ ಭುಜಬಲವಾಗಿ ನಿಂತ ಕೆಲವೇ ಅಗ್ರನಾಯಕ ಪಂಕ್ತಿಯಲ್ಲಿ ಕೃಷ್ಣಶರ್ಮರು ಮುಖ್ಯರು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿರಲಿ, ಕನ್ನಡ ನುಡಿಯ ಸಂಪಾದಕರಾಗಲಿ, ಗಾಂಧಿ ಸ್ಮಾರಕ ನಿಧಿಯ ಸಂಚಾಲಕರಾಗಲೀ, ಸರ್ಕಾರದ ಶಿಕ್ಷಣ ಕ್ಷೇತ್ರದ ವಿವಿಧ ಸಮಿತಿಗಳ ಸದಸ್ಯರಾಗಲೀ ಅವರ ಸಾಹಿತ್ಯ ವೇಣುವಿನಿಂದ ಸುಮಧುರವಾಗಿ ಸ್ಪಂದಿಸು

ತ್ತಿದ್ದ ಏಕೈಕ ಮಹಾಮಂತ್ರ "ಸರ್ವೋದಯ". 'ಗಾಂಧಿಯಿಂದ–ವಿನೋಬ' ಈ ನಾಡಿನ ಪರಿವರ್ತನ ಇತಿಹಾಸದಲ್ಲಿ ಒಂದು ಅತ್ಯಂತ ಮಹತ್ವದ ಹೆಜ್ಜೆ. ಬರಲಿರುವ ಯುಗ ಚರಿತ್ರೆಯಲ್ಲಿ ಈ ಮಹಾಯಾತ್ರೆಯ ವಿಚಾರರಂಗಗಳು ಮಾನವಕೋಟಿಯ ಬದುಕನ್ನೇ ಬದಲಿಸಿ ಅಹಿಂಸೆಯ ಜ್ಯೋತಿಪಥವೆಡೆಗೆ ಕೊಂಡೊಯ್ಯುವಂತಹವು. ಇದನ್ನು ಕಂಡುಕೊಂಡಿರುವ ದ್ರಷ್ಟಾರರು ಗಾಂಧೀನಾಯಕತ್ವವನ್ನು ಒಪ್ಪಿಕೊಂಡವ ರಲ್ಲೂ ಸಹಸ್ರಕ್ಕೆ ಒಬ್ಬರು. ಆ ಪರಂಪರೆಯಲ್ಲಿ ಕನ್ನಡನಾಡು ಒಂದು ಪುಣ್ಯಭೂಮಿ ಎಂದು ಆಚಾರ್ಯ ವಿನೋಬಾ ಎಷ್ಟೋವೇಳೆ ಬಣ್ಣಿಸುತ್ತಾರೆ. ಅವರು ಸ್ನೇಹ ಬೆಳೆ ಸಿರುವ ಇಲ್ಲಿನ ಹಲವು ದಿವ್ಯಚೇತನಗಳಲ್ಲಿ ಕೃಷ್ಣಶರ್ಮರ ಸ್ಥಾನ ಅತಿಹಿರಿಯದು. ನಮ್ಮಂತಹವರ ಬಾಳಿನಲ್ಲಿ ಅವರು ಹಚ್ಚಿಟ್ಟ ದಾರಿದೀಪ ಅತ್ಯಂತ ಮೌಲಿಕಮಹತ್ವ ವುಳ್ಳ ಆಸ್ತಿ. ನಮ್ಮ ಕೃತಜ್ಞತೆಯ ನಮನ ದಿನದಿನವೂ ಅವರಿಗೆ ಸಲ್ಲುತ್ತವೆ.

# ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ—ನಾನು ಕಂಡಂತೆ

ಕೆ. ಸಂಪದ್ಗಿರಿರಾವ್

ಮೊದಲು ನಾನು ಸಿದ್ಧವನಹಳ್ಳಿ ಕೃಷ್ಣಶರ್ಮರನ್ನು ನೋಡಿದ್ದು ರಂಗಮಂಟಪದಲ್ಲಿ ನಟರಾಗಿ—1922 ರಲ್ಲಿ. ಮೈಸೂರಿನಲ್ಲಿ ಆ ಕಾಲಕ್ಕೆ ಒಂದು ವಿಲಾಸಿ ನಾಟಕ ಮಂಡಲಿ ಸ್ಥಾಪಿತವಾಗಿತ್ತು. 'ಮೈಸೂರು ಲಿಟರರಿ ಅಂಡ್ ಡ್ರಮಾಟಿಕ್ ಅಸೋಸಿಯೇಷನ್' ಎಂಬ ಹೆಸರಿನಿಂದ. ಬೆಂಗಳೂರಿನಲ್ಲಿ ಕೆಲವು ನಾಟಕಗಳನ್ನು ಪ್ರದರ್ಶಿಸಲು ಅವರು ಇಲ್ಲಿಗೆ ಬಂದಿದ್ದರು. ಅವರಲ್ಲಿ ವಕೀಲರು, ಪ್ರಾಧ್ಯಾಪಕರು ಮುಂತಾದವರು ಹಲವರಿದ್ದರು. ಮಾನ್ಯಮಿತ್ರರಾದ ರಾಳ್ಳಪಲ್ಲಿ ಅನಂತ ಕೃಷ್ಣಶರ್ಮ ಅವರು ಸೂತ್ರಧಾರಿಯ ವೇಷವನ್ನು ಹಾಕಿದ್ದರು. ಇಲ್ಲಿದ್ದ ಅಮೆಚೂರು ನಾಟಕ ಮಂಡಲಿಯವರು ಮೈಸೂರಿನವರಿಗೆ ನೆರವು ನೀಡಿದರು. ಮೈಸೂರಿನವರು ಆಡಿದ ಒಂದು ನಾಟಕದಲ್ಲಿ ಜನಸಂದಣಿ ಪ್ರದರ್ಶಿಸುವ ಒಂದು ದೃಶ್ಯದಲ್ಲಿ ಒಬ್ಬ ಸಣ್ಣ ಹುಡುಗ ಕುರುಡು ಭಿಕ್ಷುಕನಂತೆ ಅನಂತರ ವೈಯಾರಿ ಹುಡುಗಿಯಂತೆ ರಂಗಸಜ್ಜಿಕೆಯ ಮೇಲೆ ಪಾದರಸದಂತೆ ಅತ್ತಿತ್ತ ಓಡಾಡಿ ಎಲ್ಲರ ಮೆಚ್ಚುಗೆಯನ್ನು ಪಡೆದನು—ಮಾತಿಲ್ಲ—ಹಾಡಿಲ್ಲ—ಕೇವಲ ತದ್ವತ್ತಾದ ನಟನೆ—ಆ ಹುಡುಗನ ಹೆಸರು ಕೃಷ್ಣಶರ್ಮನೆಂದೂ ಆತ ಐದನೆಯ ಫಾರಮ್ಮಿನಲ್ಲಿ ಓದುತ್ತಿದ್ದ ವಿದ್ಯಾರ್ಥಿ ಎಂದೂ, ಶ್ರೀ ಅನಂತ ಕೃಷ್ಣಶರ್ಮನ ನೆಂಟನೆಂದೂ ಹೇಳಿದರು. ಅಮೆಚೂರು ನಾಟಕ ಮಂಡಲಿಯವರು ಮೈಸೂರಿನವರಿಗೆ ಒಂದು ಸಂತೋಷ ಕೂಟವನ್ನು ಏರ್ಪಡಿಸಿದ್ದರು. ಅಲ್ಲಿ ನನಗೆ ಕೃಷ್ಣಶರ್ಮರ ಪ್ರತ್ಯಕ್ಷ ಪರಿಚಯವಾಯಿತು.

ಗಾಂಧೀಯುಗದ ಆಂದೋಲನ ನಡೆಯುತ್ತಿದ್ದ ಕಾಲವದು. ಆಗಲೇ ಕೃಷ್ಣಶರ್ಮ ಲೇಖನಗಳನ್ನು ಬರೆಯುತ್ತಿದ್ದರೆಂದು ಕೇಳಿದೆ. ಆಂಡ್ರೂಸ್ ಅವರು ಬರೆದ "ಪೂರ್ಣ ಸ್ವಾತಂತ್ರ್ಯದ ಅವಶ್ಯಕತೆ" ಎಂಬ ಪುಸ್ತಕವನ್ನು ಬಹಳ ಸೊಗಸಾಗಿ ಕನ್ನಡಕ್ಕೆ ಅನುವಾದ ಮಾಡಿ ಪ್ರಕಟಿಸಿದ್ದನು. ಹುಡುಗನ ದೇಶಭಕ್ತಿ, ಮತ್ತು ಸಾಹಿತ್ಯ ಕೃಷಿ ನನಗೆ ಮೆಚ್ಚುಗೆಯಾದವು. ಪರಸ್ಪರ ಆದರ ವಿಶ್ವಾಸಗಳು ಅಂದಿನಿಂದ ಬೆಳೆದವು.

ಅದೇ ವರ್ಷ ಡಿಸೆಂಬರ್ ತಿಂಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧಿವೇಶನ ದಾವಣಗೆರೆಯಲ್ಲಿ ನಡೆಯಿತು. ಅಲ್ಲಿ ಓದಿದ ಪ್ರಬಂಧಗಳಲ್ಲಿ ಸಿದ್ಧವನಹಳ್ಳಿ ಕೃಷ್ಣ

ಶರ್ಮ "ಸರ್ವಜ್ಞ"ನ ಕುರಿತು ಬರೆದಿದ್ದ ಪ್ರಬಂಧ ಎಲ್ಲರ ಮೆಚ್ಚುಗೆಯನ್ನು ಪಡೆಯಿತು. ಆ ಅಧಿವೇಶನಕ್ಕೆ ಉತ್ತರ ಕರ್ನಾಟಕದಿಂದ ಬಂದಿದ್ದವರಲ್ಲಿ ತರುಣ ದ. ರಾ. ಬೇಂದ್ರೆಯವರೂ ಇದ್ದರು. ಪ್ರತಿನಿಧಿಗಳ ಬಿಡಾರದಲ್ಲಿ ಅವರು ತಮ್ಮ ಕವನಗಳನ್ನು ಓದಿ ಶ್ರೋತೃಗಳನ್ನು ಚಕಿತಗೊಳಿಸಿದರು. ಕೃಷ್ಣಶರ್ಮರಿಗೂ ಬೇಂದ್ರೆಯವರಿಗೂ ಆಗ ಉಂಟಾದ ಪರಿಚಯ ಮುಂದೆ ಶರ್ಮರು 'ಗೆಳೆಯರ ಗುಂಪಿ' ನವರೊಂದಿಗೆ ನಿಕಟವಾದ ಸಂಬಂಧವನ್ನು ತಾಳುವಂತೆ ಮಾಡಿತು. 'ಗೆಳೆಯರ ಗುಂಪ'ನ್ನು ಹೋಲುವ 'ತುಂಟರ ಗುಂಪೊ'ಂದು ಬೆಂಗಳೂರಿನಲ್ಲಿಯೂ ರೂಪುಗೊಂಡಿತು. ಆದರೆ ಈ 'ತುಂಟರ ಗುಂಪು' ಕವಿಗಳ ಕೂಟವಲ್ಲ–ಗದ್ಯದಲ್ಲಿ ವಿಮರ್ಶೆಗಳನ್ನೂ ವಿಡಂಬನ ಲೇಖನಗಳನ್ನೂ ಬರೆಯುವವರ ಗುಂಪು. ಈ ಗುಂಪಿನಲ್ಲಿಯೂ ಕೃಷ್ಣಶರ್ಮರು ಸಕ್ರಿಯ ಪಾತ್ರವನ್ನು ವಹಿಸಿದರು.

ರಾಜಕೀಯ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಆಸಕ್ತರಾಗಿದ್ದ ಕೃಷ್ಣಶರ್ಮರಿಗೆ ಪ್ರೌಢವಿದ್ಯಾಭ್ಯಾಸಂಗದ ಕಡೇ ಮನಸ್ಸು ಒಲಿಯಲಿಲ್ಲ. ಆ ಎಳೆಯ ವಯಸ್ಸಿನಲ್ಲಿಯೇ ತಮ್ಮ ವಯಸ್ಸಿಗೆ ಮೀರಿದ ವಿವೇಕವನ್ನೂ ಪ್ರಾಪಂಚಿಕ ವ್ಯವಹಾರ ಜ್ಞಾನವನ್ನೂ ವ್ಯವಸ್ಥಾಪನಾ ಕೌಶಲ್ಯವನ್ನೂ ದೃಢವಾದ ಸಂಕಲ್ಪ ಶಕ್ತಿಯನ್ನೂ ಅವರಲ್ಲಿ ಕಾಣಬಹುದಾಗಿತ್ತು.

ಶರ್ಮ ಅವರಿಗೆ ಮದುವೆಯಾದ ನಂತರ ತಮ್ಮ ವಿದ್ಯಾಭ್ಯಾಸಂಗಕ್ಕೆ ವಿರಾಮ ಹಾಕಿ, ಚಿತ್ರದುರ್ಗದಲ್ಲಿ ಆಗಾಗ್ಗೆ ನೆಲೆಸುತ್ತಾ ಹೈದರಾಬಾದಿನಲ್ಲಿ ಪತ್ರಿಕೋದ್ಯಮಕ್ಕೆ ತೊಡಗಿದರು- ತೆಲುಗು ಮತ್ತು ಇಂಗ್ಲೀಷು ಭಾಷೆಗಳಲ್ಲಿ ಪ್ರಕಟವಾಗುತ್ತಿದ್ದ ಒಂದು ಪತ್ರಿಕೆಯನ್ನು ನಡೆಸುವುದರಲ್ಲಿ ನೆರವಾದರು. ಆ ನಗರದ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೇರಕವಾಗಿದ್ದುದು ಮಾತ್ರವಲ್ಲದೆ ಅಲ್ಲಿನ ರಾಜಕೀಯದಲ್ಲಿಯೂ ಪಾಲುಗೊಂಡರು. ಉರ್ದು ಭಾಷೆಯ ಪರಿಚಯವನ್ನು ರೂಢಿಸಿಕೊಂಡರು. ನೈಜಾಮು ರಾಜ್ಯದ ಅಧಿಕಾರವರ್ಗದ ಸಂಪರ್ಕ ತಕ್ಕಮಟ್ಟಿಗೆ ಬೆಳೆಯಿತು. ಸಾರ್ವಜನಿಕ ಮುಖಂಡರ ವಿಶ್ವಾಸವನ್ನು ಗಳಿಸಿದರು. ದೇಶೀಯ ಸಂಸ್ಥಾನಗಳ ಭವಿಷ್ಯ, ಈ ಸಂಸ್ಥಾನಗಳಲ್ಲಿನ ಪ್ರಜೆಗಳ ಹಕ್ಕುಬಾಧ್ಯತೆಗಳ ಪ್ರಶ್ನೆ–ಇವುಗಳ ಬಗೆಗೆ ಭಾರತ ದೇಶದ ಮುಖಂಡರಲ್ಲಿ ಹೆಚ್ಚು ಆಸಕ್ತಿ, ವಿಚಾರ ವಿನಿಮಯ ಬೆಳೆಯುತ್ತಿದ್ದ ಕಾಲವದು. ನಮ್ಮ ರಾಷ್ಟ್ರ ಮಹಾ ಸಭೆ—ಈ ಪ್ರಶ್ನೆಗಳನ್ನು ನೇರವಾಗಿ ಚರ್ಚಿಸದೆ ಇದ್ದರೂ, ರಾಷ್ಟ್ರದ ನಾಯಕರು ಪರೋಕ್ಷವಾಗಿ ದೇಶೀಯ ಸಂಸ್ಥಾನಗಳ ಮುಖಂಡರಿಗೆ ನೆರವಾಗುತ್ತಿದ್ದರು. ಸಲಹೆಗಳನ್ನೂ ಉತ್ತೇಜನವನ್ನೂ ಕೊಡುತ್ತಿದ್ದರು. ಹೈದರಾಬಾದಿನ ಪ್ರಜೆಗಳ ಸಂಸ್ಥೆಯ ಪರವಾಗಿ ಅಲ್ಲಿನ ವಿದ್ಯಮಾನಗಳನ್ನು ವರದಿ ಮಾಡಲು ಕೃಷ್ಣಶರ್ಮರು ಸೇವಾಗ್ರಾಮಕ್ಕೆ ಹೋಗಿ ಅಲ್ಲಿಯೇ ಕೆಲವು ಕಾಲ ನೆಲೆಸಿದರು. ಗಾಂಧೀಜಿ, ಸರದಾರ ಪಟೇಲ್ ಮುಂತಾದ ಮಹಾನಾಯಕರೊಂದಿಗೆ ಈ ರಾಜಕೀಯ ಪ್ರಶ್ನೆಗಳನ್ನು ಚರ್ಚಿಸುವ ಅವಕಾಶವೂ ಅವರಿಗೆ ಉಂಟಾಯಿತು.

ಆದರೆ ರಾಜಕೀಯದಲ್ಲಿದ್ದರೂ ಯಾವ ಪದವಿಗಳಿಗಾಗಲಿ, ಅಧಿಕಾರಕ್ಕಾಗಲಿ ಅವರು ಇಚ್ಛಿಸಲಿಲ್ಲ. ಕೇವಲ ಸಲಹೆಗಾರರಾಗಿ, ಸಂಧಿ ವಿಗ್ರಹಿಗಳಾಗಿ ಮಾತ್ರ ತಮ್ಮ ಶಕ್ತ್ಯಾನುಸಾರ ಸೇವೆ ಸಲ್ಲಿಸಿದರು. ಅವರ ಒಲವು ಪತ್ರಿಕೋದ್ಯಮಗಳ ಮತ್ತು ಸಾಹಿತ್ಯದ ಕಡೆಗೆ ಅಚ್ಚಳಿಯದೆ ಇತ್ತು.

ಈ ಸೇವಾಗ್ರಾಮದ ಸಂಪರ್ಕದ ಫಲವಾಗಿ ಗಾಂಧೀಜಯರ 'ಹರಿಜನ' ಪತ್ರಿಕೆಯ ಕನ್ನಡ ಭಾಷಾಂತರದ ಪತ್ರಿಕೆಯ ಪ್ರಕಟಣೆಯನ್ನು ಅವರು ಕೈಗೊಂಡರು ಮತ್ತು ಅವರು 'ಪರ್ಣಕುಟಿ' ಮತ್ತು 'ಪರ್ಧಾಯಾತ್ರೆ' ಎಂಬ ಪುಸ್ತಕಗಳನ್ನು ಬರೆದರು. ಅಂದಿನಿಂದ ಸತತವಾಗಿ ಅವರ ಲೇಖಣಿಯಿಂದ ಗಾಂಧೀಜಿ ಮತ್ತು ವಿನೋಬಾಭಾವೆ ಯವರ ಲೇಖನಗಳ ಹಾಗೂ ಪುಸ್ತಕಗಳ ಭಾಷಾಂತರಗಳು ಹೊರ ಬಂದವು. ಕನ್ನಡ ಜನಕ್ಕೆ ಗಾಂಧೀಜಿ ಮತ್ತು ವಿನೋಬಾ ಅವರ ಸಾಹಿತ್ಯವನ್ನು ಕೃಷ್ಣಶರ್ಮ ಅವರು ಒದಗಿಸಿದ ಪ್ರಮಾಣದಲ್ಲಿ ಬೇರೆ ಯಾರೂ ಮಾಡಿರುವುದಿಲ್ಲ.

ಮಲ್ಲೇಶ್ವರದಲ್ಲಿ ಸ್ಥಾಪಿಸಿರುವ ಗಾಂಧೀ ಸಾಹಿತ್ಯ ಸಂಘ ಮತ್ತು ಅದರ ಭವ್ಯ ವಾದ ಕಟ್ಟಡ, ಅದರ ಗ್ರಂಥ ಭಂಡಾರ, ಶರ್ಮರವರ ಕರ್ತೃತ್ವ ಶಕ್ತಿಯ ಸಂಕೇತ ಗಳಾಗಿವೆ.

ಅಂತೆಯೇ ಅವರು ಮೂರು ಸಂಪುಟಗಳಲ್ಲಿ ಪ್ರಕಟಿಸಿರುವ ವಾಲ್ಮೀಕಿ ರಾಮಾ ಯಣದ ಸರಳ ಕನ್ನಡಾನುವಾದ ಕನ್ನಡ ಸಾಹಿತ್ಯಕ್ಕೆ ಅವರು ನೀಡಿರುವ ಉತ್ಕೃಷ್ಟ ಕೊಡುಗೆಯಾಗಿವೆ.

ಒಂದು ಅನುವಾದ ಉತ್ಕೃಷ್ಟವಾಗಬೇಕಾದರೆ ಅದು ಮೌಲಿಕ ಕೃತಿಯಂತೆಯೇ ಓದುಗರಿಗೆ ಅನಿಸಬೇಕು. ಈ ಕಲಾಕೌಶಲದಲ್ಲಿ ಕೃಷ್ಣಶರ್ಮರು ಸಿದ್ಧಹಸ್ತರು.

ಇಂಗ್ಲೀಷು ಮತ್ತು ಹಿಂದಿಯಿಂದ ಅವರು ಮಾಡಿದ ಅನುವಾದಗಳು ತಮ್ಮದೇ ಆದ ಸರಳವೂ ನಿರರ್ಗಳವೂ ಆದ ಶೈಲಿಯಿಂದ ಶೋಭಿಸುತ್ತವೆ. ಡಾ|| ಮುನ್ಷಿಯವರ 'ಕೃಷ್ಣಾವತಾರ' ಅನುವಾದ ಮಾಡಿದ ಸಂಪುಟಗಳೂ ಇದಕ್ಕೆ ನಿದರ್ಶನ. ಅದರಲ್ಲಿ ಕೃಷ್ಣಶರ್ಮರ ನಿರಾಡಂಬರವಾದ ಕನ್ನಡ ಶೈಲಿ ಎದ್ದು ಕಾಣುವುದೇ ಹೊರತು ಡಾ|| ಮುನ್ಷಿಯವರ ಗಂಭೀರವಾದ ಇಂಗ್ಲೀಷ್ ಶೈಲಿಯಲ್ಲ.

ಮೌಲಿಕ ಗ್ರಂಥಗಳಲ್ಲಿಯೂ ಭಾಷಾಂತರಗಳಲ್ಲಿಯೂ ಕೃಷ್ಣಶರ್ಮ ಆಧುನಿಕ-ಕನ್ನಡ ಗದ್ಯ ಸಾಹಿತ್ಯಕ್ಕೆ ತಮ್ಮದೇ ಆದ ಒಂದು ವಿಶಿಷ್ಟವಾದ ಕೊಡುಗೆಯನ್ನು ಕೊಟ್ಟಿದ್ದಾರೆ. ಗ್ರಾಮ್ಯಕ್ಕೆ ಇಳಿಯದೆ ಆಡುವ ಮಾತನ್ನು ಎಷ್ಟು ಹೋಲಬಹುದೋ ಅಷ್ಟು ಅದು ಹೋಲುತ್ತದೆ. ವ್ಯಾಕರಣದ ನಿಯಮಾನುಸಾರ ಪ್ರತ್ಯಯಗಳನ್ನು ಅವಶ್ಯವಿಲ್ಲವಾದರೆ ಬಿಟ್ಟಿದ್ದಾರೆ. ಕ್ಲಿಷ್ಟವಾದ ವಾಕ್ಯಗಳನ್ನು ಪದಗಳನ್ನೂ ಉಪ ಯೋಗಿಸುವ ಚಪಲವನ್ನು ದೂರಮಾಡಿದ್ದಾರೆ. ಅವರ ವಾಕ್ಯಗಳಲ್ಲಿನ ಅರ್ಥ ತಿಳಿ ಯಾಗಿ, ತೊಡಕಿಲ್ಲದೆ ಎಲ್ಲರಿಗೂ ಎದ್ದು ಕಾಣುತ್ತದೆ.

ಯಾರ ಅಧೀನಕ್ಕೂ ಒಳಪಡದೆ ಸ್ವತಂತ್ರ, ಜೀವನವನ್ನು ನಡೆಸಬೇಕೆಂಬ

ಧ್ಯೇಯವನ್ನು ಎಳೆಯ ವಯಸ್ಸಿನಿಂದ ಅವರು ತಾಳಿದವರೆಂದು ಕಾಣುತ್ತದೆ. ಈ ಧೀರ ಸಂಕಲ್ಪವನ್ನು ಸಾಧಿಸುವುದರಲ್ಲಿ ಅವರು ಯಶಸ್ವಿಗಳಾಗಿದ್ದಾರೆ. ಹಾಗೂ ತಮ್ಮ ಗೃಹಸ್ಥ ಜೀವನದ ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಿದ್ದಾರೆ. ಲೇಖಣಿಯಿಂದ ಜೀವಿಕೆಯನ್ನು ನಡೆಸುವವರು–ಯಾವ ಭಾಷೆಯಲ್ಲೂ ವಿರಳರೇ! ಅದರಲ್ಲಿಯೂ ಕನ್ನಡದಲ್ಲಿ ಮತ್ತಷ್ಟು ವಿರಳರು; ಅಂತಹವರಲ್ಲಿ ಕೃಷ್ಣಶರ್ಮ ಬೆಳಗುವ ತಾರೆಯಾಗಿದ್ದಾರೆ. ಅಷ್ಟೇ ಅಲ್ಲ ದೈವದತ್ತವಾದ ಪ್ರತಿಭೆಯನ್ನು, ಲೇಖಣಿ ಯನ್ನು ಉತ್ತಮ ಧ್ಯೇಯಗಳ ಸಾಧನೆಗೆ ಉಪಯೋಗಿಸಿದ್ದಾರೆ. ಅವರ ಗ್ರಂಥಗಳು ಉತ್ತಮ ಸಾಹಿತ್ಯದ ಶ್ರೇಣಿಗೆ ಸೇರುವ ಸಾಹಿತ್ಯ ಮಾತ್ರವಲ್ಲ-ಅವು ಜನಜೀವನಕ್ಕೆ ಒಳ್ಳೆಯ ಜ್ಞಾನವನ್ನೂ ದೃಷ್ಟಿಯನ್ನೂ ಸ್ಫೂರ್ತಿಯನ್ನೂ ಒದಗಿಸಬಲ್ಲ ಸಾಮಗ್ರಿ. ಇವುಗಳಲ್ಲಿ ಅನೇಕ ಗ್ರಂಥಗಳು ಒಂದು ಸಲ ಓದಿ ಬಿಸಾಡುವ ಗ್ರಂಥಗಳಲ್ಲ–ಪದೇ ಪದೇ ಓದಿ ಪ್ರಯೋಜನ ಪಡೆಯುವ ಗ್ರಂಥಗಳು. ಪಾರಾಯಣಕ್ಕೂ ಮನನಕ್ಕೂ ಯೋಗ್ಯವಾದ ಗ್ರಂಥಗಳು. ಕೃಷ್ಣಶರ್ಮ ತಮ್ಮ ರಚನೆಗಳ ಮೂಲಕ ಕೃತಕೃತ್ಯ ರಾಗಿದ್ದಾರೆ.

ಈ ಕೆಲವು ವರ್ಷಗಳಿಂದ ಅವರ ದೇಹಸ್ಥಿತಿಯನ್ನು ಕಂಡು ಅವರ ಆಪ್ತೇಷ್ಟರಿಗೆ ವರ್ಣಿಸಲಸಾಧ್ಯವಾದ ಮೂಕ ಯಾತನೆ ಉಂಟಾಗಿದೆ. ದಯಾಮಯನಾದ ಭಗವಂತನು ಅವರು ಮತ್ತೆ ಪೂರ್ಣ ಆರೋಗ್ಯದಿಂದ ಓಡಾಡುವಂತೆ ಅನುಗ್ರಹಿಸ ಬೇಕೆಂದೇ ಅವರೆಲ್ಲರ ಹೃದಯಾಂತರಾಳದ ಪ್ರಾರ್ಥನೆಯಾಗಿದೆ.

# ಪ್ರಚೋದನಾ ಪ್ರವೀಣರು

ಬಿ. ಎಸ್. ರಾಮಾಚಾರ್ಯ

ಮೂವತ್ತು ವರುಷದ ಸವಿನೆನಪು. ಶ್ರೀ ಕೃಷ್ಣಶರ್ಮರನ್ನು ಚಿತ್ರದುರ್ಗದಲ್ಲಿ ಮೊದಲು ಕಂಡೆ. ಚಿತ್ರಭಾನ ಸಂವತ್ಸರ. ಅವರ ಸಂಗಾತದ ಭಾಗ್ಯ ಸಿಕ್ಕಿತು. ಆಗ ನನಗೆ ನೌಕರಿ ಇರಲಿಲ್ಲ. ನಮ್ಮ ಚಿಕ್ಕತಂದೆ ಮನೆಯಲ್ಲಿದ್ದೆ. ಅವರಿಗೂ ಶರ್ಮರಿಗೂ ಬಾಂಧವ್ಯದ ಸಲುಗೆ. ನನ್ನನ್ನು "ಶರ್ಮರ ಮನೆಗೆ ಹೋಗುತ್ತಿರು. ಹೊತ್ತು ಕಳೆಯಬೇಡ" ಎಂದರು. ನಾನು ಅಂತೆಯೇ ಮಾಡಿದೆ. ನಾನು ದೇವರ ನಾಮ ಹಾಡಿದ್ದು ಕೇಳಿ, ನಾಳೆ ಕವಿ ಬೇಂದ್ರೆ ಅವರು ಬಂದಾಗ ನೀನೆ ಪ್ರಾರ್ಥನೆ ಮಾಡು" ಎಂದರು. ಆ ದಿನ ಅನುಭವ ಮಂಟಪದ ವಿಷಯ ಕುರಿತು ವರಕವಿ ಉಪನ್ಯಾಸವಿತ್ತರು. ಅನಂತರ ಅಲ್ಲಿನ ಸಾಹಿತ್ಯಪ್ರೇಮಿಗಳ ಜೊತೆಯಲ್ಲಿ ವೆಂಕಟರಮಣನ ಗುಡಿಗೆ ಹೋದೆವು. ದೇವರ ಸಾನ್ನಿಧ್ಯದಲ್ಲಿ ಮತ್ತೆ ದೇವರ ನಾಮ ಹಾಡಿದ್ದು ಕೇಳಿ ಕವಿ ಬೇಂದ್ರೆಯವರು, "ಚೆನ್ನಾಗಿ ಹಾಡುವೆ. ಕನ್ನಡ ಕವನಗಳನ್ನು ಹಾಡುವುದನ್ನು ಕಲಿಯಿರಿ; ಶರ್ಮರವರು ಆರಿಸಿಕೊಡುವರು" ಅಂದಾಗ ಒಪ್ಪಿದೆ. ಅಂದು ಸುದಿನ ನನ್ನ ಜೀವನದಲ್ಲಿ. ವಸಂತದ ಅಮಾವಾಸ್ಯೆ. ಮಾರನೆಯ ದಿನ ಶರ್ಮರು ನನಗೆ ನಮ್ಮ ಸುಕವಿಗಳ ಕೆಲವು ಕವನ ತೋರಿಸಿ ಅದಕ್ಕೆ ರಾಗಕಟ್ಟಿ ಹಾಡಲು ದಾರಿ ತೋರಿದರು; ಆಸಕ್ತಿ ಮೂಡಿಸಿದರು. ಕಾವ್ಯಗಾಯನದ ಹುಚ್ಚು ಹಿಡಿಸಿದರು. ಕವನಗಳ ಜೊತೆಗೆ ಕುಮಾರವ್ಯಾಸ, ಲಕ್ಷ್ಮೀಶ ಕವಿಯ ರಸವತ್ತಾದ ಭಾಗಗಳನ್ನು, ಶರಣರ ವಚನಗಳನ್ನು ಆಯ್ಕೆಮಾಡಿಕೊಟ್ಟರು. ಅಲ್ಲಿನ ಕನ್ನಡ ಪ್ರೇಮಿಗಳಾದ ಶ್ರೀಗಳಾದ ಬಿ. ಕೆ. ರಾಮಚಂದ್ರರಾಯರು, ಕೈವಾರ ರಾಜಾರಾಯರು, ಹುಲ್ಲೂರು ಶ್ರೀನಿವಾಸ ಜೋಯಿಸರು ನನಗೆ ಮತ್ತಷ್ಟು ಪ್ರೋತ್ಸಾಹಿಸಿದರು. ಬೆಂಗಳೂರಿನಲ್ಲಿ ಕ. ಸಾ. ಪ. ನಡೆಸುವ ವಸಂತ ಸಾಹಿತ್ಯೋತ್ಸವಕ್ಕೆ ಕಳುಹಿಸಿಕೊಟ್ಟರು. ಮತ್ತೆ ದುರ್ಗದಲ್ಲೇ ಶ್ರೀ ಶಿವರಾಮ ಕಾರಂತರ ಪರಿಚಯ ಮಾಡಿಸಿದರು. ಅವರ 'ಕಿಸಾಗೌತಮಿ' ಗೀತನಾಟಕದಲ್ಲಿ ನನಗೆ ಬುದ್ಧನ ಪಾತ್ರ ಸಿಕ್ಕಿತು. ನನಗೆ ರಂಗಮಂಟಪದ ಹೆದರಿಕೆ ತಪ್ಪಿಸಿದರು.

ಅವರ 'ಪರ್ಣಕುಟಿ' ಹೊತ್ತಿಗೆ ಸಾರಿ ಸಾರಿ ಓದಿ ಸಂತಸಗೊಂಡೆ. ಮಾತಿನ ಶೈಲಿಗೆ ಮಾರುಹೋದೆ. ಗದ್ಯವೂ ಎಷ್ಟು ಹೃದ್ಯವಾಗಿದೆ ಎಂದೆನಿಸಿತು. ಕೇರಳದ

ಕನ್ಯೆ ಬಾಪೂಜಿಗೆ ಕಂಕಣ ದಾನ ಮಾಡಿದ ಸಂಗತಿ ಕವನ ಕಟ್ಟಿದೆ. ಶರ್ಮರಿಗೆ ತೋರಲು 'ಪರವಾಯಿಲ್ಲಾ ಕವಿತೆಯನ್ನು ಕಟ್ಟು. ಧೈರ್ಯ ಮಾಡು' ಎಂದು ಬೆನ್ನು ತಟ್ಟಿದರು. ಅಂದಿನಿಂದ ತಿಣಿಕಿ, ತಿಣಿಕಿ, ಕೆಲವು ಭಕ್ತಿ ಗೀತಗಳನ್ನು, ದೇಶ ಪ್ರೇಮದ ಹಾಡುಗಳನ್ನು, ಲಾವಣಿಗಳನ್ನು ಕಟ್ಟಿ ಶರ್ಮರ ಕೈಯಲ್ಲಿ ತಿದ್ದಿಸಿಕೊಳ್ಳುತ್ತಿದ್ದೆ. ಅದನ್ನು ಅಚ್ಚು ಹಾಕಿಸುವ ಹಂಬಲ. ಶರ್ಮಾಜಿ ಅವರು ಮುನ್ನುಡಿ ಇತ್ತರು. ಅದರಲ್ಲಿ: "ಶ್ರೀ ರಾಮಾಚಾರ್ಯರ ಕವನಲತೆ ಕುಡಿಯೊಡೆಯುತ್ತಿರುವಾಗ ದಿನದಿನವೂ ಅದನ್ನು ನೋಡಿ ಆನಂದಿಸುತ್ತಿದ್ದವನು ನಾನು. ಅವರು ಗಮಕಿಗಳು. ತಮ್ಮ ಸವಿದನಿಯಿಂದ ಆಧುನಿಕ ಗೀತೆಗಳನ್ನು ಹಾಡಿ ಜನರನ್ನು ಮೆಚ್ಚಿಸಿದ್ದಾರೆ. ಅವರ ಕಾವ್ಯ ಗಾಯನ ಅವರಲ್ಲೇ ಸುಪ್ತವಾಗಿದ್ದ ಕಾವ್ಯಶಕ್ತಿಯನ್ನು ಎಚ್ಚರಿಸಿದೆ; ಹೊರಗೆ ಹರಿಯಿಸಿದೆ. ಇದು ಅವರ ಚೊಚ್ಚಲ ಸಂಭ್ರಮ. ಈ ಗೀತೆಗಳಲ್ಲಿ ಹಾಡು ಪ್ರಧಾನ. ಸಾಹಿತ್ಯ ಸಂಗೀತ ಎರಡೂ ಬೆರೆತು ಅಮೋಘ ಪಾಕವಾಗಬಲ್ಲು ವೆಂದು ಕವಿಗಳ ನಂಬಿಕೆ. ಕಾವ್ಯ ಬರೀ ಗದ್ಯವಾಗಿ ಗಾನದ ಛಂದದ ಸಮ್ಮೋಹಕ ಶಕ್ತಿ ಉಡುಗಿಹೋಗುತ್ತಿರುವಾಗ ಇಂಥ ಪ್ರಯತ್ನ ಸಾಹಸದ್ದು. ಆದರೆ ಅಮೂಲ್ಯ ವಾದದ್ದು. ಅವರ ಪ್ರಯತ್ನ ಸಫಲವಾಗಲಿ. ಅವರ ಕೈ ಪಳಗಿದಂತೆ ಉತ್ತಮ ಗೀತೆ ಗಳು ಅವರಿಂದ ಬಂದಾವೆಂಬ ನಂಬಿಗೆಯಿಂದ ಈ ವಸಂತ ಗೀತೆ ಕೃತಿಯನ್ನು ಜನರ ಮುಂದೆ ಅವರ ಪರವಾಗಿ ಇಡುತ್ತಿದ್ದೇನೆ."

ಇದು ಅವರು ಕೊಟ್ಟ ಯೋಗ್ಯತಾ ಪತ್ರ. ನಾನು ಓದಿದ್ದು ಒಕ್ಕಲತನ, ಜತೆಗೆ ಸೊಳ್ಳೆ ಸಾಯಿಸುವ ತರಬೇತಿ, ಬಯಕೆ ಕವನ ಹಾಡುವುದು!

—ದುರ್ಗ ಬಿಟ್ಟು ಶರ್ಮರು ಬೆಂಗಳೂರಿಗೆ ಬಂದ ಮೇಲೆ ವರ್ಷಕ್ಕೆ ಎರಡು ಸಲವಾದರೂ ನೋಡಬೇಕೆಂಬ ಆಶೆ ಮೂಡುತ್ತಿತ್ತು. ಲೋಕಾಭಿರಾಮವಾಗಿ ಮಾತಾಡುತ್ತ ಇರುವಾಗ "ನಿನ್ನಷ್ಟು ಉದ್ದವಾಗಿದ್ದರೆ ನಾನು ಹೈದರಾಬಾದನ್ನೇ ಅಲ್ಲಾಡಿಸುತ್ತಿದ್ದೆ." ಅದ್ಯಾಕೆ ಎಂದು ಕೇಳಿದಾಗ "ಮಂದಿಯನ್ನು ನಮ್ಮ ದಾರಿಗೆ ಎಳೆದುಕೊಳ್ಳಲು ಒಳ್ಳೆಯ ಎತ್ತರವಾದ ಮೈಕಟ್ಟುಬೇಕು" ಎಂದರು. ಪ್ರತಿಯಾಗಿ ನಾನು "ಕುಳ್ಳರಿಗಿರೋ ಬುದ್ಧಿವಂತಿಕೆ ಉದ್ದಾನೇ ಮನುಷ್ಯರಿಗೆಲ್ಲಿ?" ಎಂದಾಗ ನಕ್ಕು ಸುಮ್ಮನಾದರು. ಅವರ 'ರಾಮಾವತಾರ'ದ ಹೊತ್ತಿಗೆ ಅಲ್ಲಲ್ಲಿ ಓದಿ "ಪರೀಕ್ಷೆ ಮಾಡುವವರಿಗೆ ತುಂಬಾ ಸಹಾಯಕವಾಗಿದೆ" ಅಂದಾಗ "ಹಾಗೇನು" ಎಂದು ಸಂತಸ ಗೊಂಡರು. ಮರುಕ್ಷಣವೇ "ತಮ್ಮ ಮೊಟಕು ಮಾತಿನ ಶೈಲಿ ರಾಮಾಯಣದ ಘನತೆಗೆ ಕುಂದಾಗುವುದು ಎಂದು ಯಾರೊ ಅಂದ್ರು" ಅಂದಾಗ 'ಲೋಕೋಭಿನ್ನ ರುಚಿಃ' ಎಂದು ಸಮಾಧಾನಗೊಂಡರು.

ಖಾಯಿಲೆಯಾಗಿ ಹಾಸಿಗೆ ಹಿಡಿದು ಕಣ್ಣು ಮಂಜಾಗಿ ನರಳುತ್ತಾ ವಿಶ್ರಾಂತಿ

ಯಲ್ಲಿದ್ದಾಗ ನಾನು ನೋಡಹೋದರೆ "ನೀವು ಬಂದರೆ ಸ್ವಲ್ಪ ಹೊತ್ತು ಹೋಗತ್ತೆ. ಬೆಂಗಳೂರಿಗೆ ಬಂದಾಗ ಬರುತ್ತೀರಿ" ಎಂದರು.

"ಶರ್ಮಾ ಅವರೇ! ನನಗೆ ನಾಲ್ಕು ಹೆಣ್ಣು ಮಕ್ಕಳು, ಹೇಗೆ ಮದುವೆ ಮಾಡಲೋ" ಎಂದು ಪ್ರಶ್ನಿಸಿದಾಗ ಅವರು ಸ್ವಂತ ಅನುಭವದಿಂದ ಅಪ್ಪಣೆ ಕೊಡಿಸಿದರು. "ನಮ್ಮ ದೊಡ್ಡಸ್ತಿಕೆ, ಒಣಜಂಬ ಬಿಟ್ಟು ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು. ನಾನು ಕೇವಲ ಐದು ಸಾವಿರ ರೂಪಾಯಿನಲ್ಲೇ ಒಂದೊಂದು ಮದುವೆ ಮಾಡಿರುವೆ. ಮೊದಲೇ ಬೀಗರ ಸಂಗಡ ಕರಾರು ಮಾಡಿಕೊಳ್ಳುತ್ತಿದ್ದೆ. ಕೇವಲ ಬಾಂಧವ್ಯದವರಿಗೆ ಮಾತ್ರ ಆಮಂತ್ರಣ. ನನ್ನ ಮಿತ್ರರಾದ ಮಂತ್ರಿಗಳನ್ನೂ ಸಾಹಿತಿಗಳನ್ನೂ ಕರೆಯಲಾಗಲಿಲ್ಲ. ಆರತಿ ಅಕ್ಷತೆ ಸಂಗೀತ ಇಲ್ಲ. ಮಿತವ್ಯಯದ ಉಪಾಯದಲ್ಲಿ ನಡೆದುಕೊಂಡಾಯ್ತು. ಮನಸ್ಥಾಪಗಳಿಗೆ ಹೆದರಬಾರದು. ನೀವೂ ಪರ್ಯಾಲೋಚಿಸಿ" ಎಂದರು.

ಶರ್ಮಾಜಿ ನನ್ನನ್ನು ಗಮಕಿಯಾಗಿ ಮಾಡಿದರು; ಕವಿಯನ್ನಾಗಿಯೂ ಮಾಡಿದರು; ನಟನನ್ನಾಗಿ ಮಾಡಿದರು: ಖಾದಿ ಹಾಕಿಸಿದರು. ಸರ್ವೋದಯದ ಪ್ರಚಾರಕನಾಗಿಯೂ ಮಾಡಿದರು; ಸ್ವತಂತ್ರ ಜೀವಿಯಾಗಿ ಮಾಡಿದರು. ಎಂಥಾ ಪ್ರಚೋದನಾ ಪ್ರವೀಣರು!

ಅವರ ಬಹು ಮಂದಿ ಶಿಷ್ಯರಲ್ಲಿ ನಾನೂ ಒಬ್ಬನಾಗಿರುವೆ. ಅವರ ಸರ್ವತೋಮುಖವಾದ ಪ್ರತಿಭೆಯ ಬೆಳಕು ಕಂಡಿರುವೆ. ಆನಂದಪಟ್ಟಿರುವೆ. ಮೊದಲೇ ಆಚಾರ್ಯರ ವಂಶದವರು. ಮುದ್ರಾಧಾರಣೆ ಮಾಡುವುದು, ನಾಮ ಹಾಕುವುದು 'ಓಂನಮೋನಾರಾಯಣಾಯ' ಮಾತ್ರ ಉಪದೇಶಿಸುವುದು; ಪಾಮರರನ್ನು ಉದ್ಧಾರ ಮಾಡುವುದು. ಮನೆತನದ ಸತ್ಕಾರ್ಯ.

ಎನಗೆ ದಾರಿ ತೋರಿದ ದಯಾಳು; ಶರ್ಮಾಜಿ.

# ಹಿರಿಯಣ್ಣ ಕೃಷ್ಣಶರ್ಮ

ವಿ. ಎಸ್. ನಾರಾಯಣರಾವ್

ಕೃಷ್ಣಶರ್ಮರಿಗೂ ನನಗೂ ಪರಿಚಯ ಎಂದು ಬೆಳೆಯಿತು ಎಂದು ಹೇಳಲು ನನಗೆ ಸಾಧ್ಯವಾಗುತ್ತಿಲ್ಲ. ಅವರ ಮತ್ತು ನನ್ನ ಕಾರ್ಯಕ್ಷೇತ್ರಗಳು, ಚಿಂತನೆ ಮತ್ತು ಮನೋಧರ್ಮದಲ್ಲಿ ಏಕತೆ ಬಹಳ ಇತ್ತು. ಆದುದರಿಂದ ಅವರಿಗೂ ನನಗೂ ನಿಕಟ ಬಾಂಧವ್ಯ ಬೆಳೆದುಬಂದಿರುವುದರಲ್ಲಿ ಆಶ್ಚರ್ಯವಿಲ್ಲ. ವ್ಯಕ್ತಿ ಸ್ವಾತಂತ್ರ್ಯ ಮತ್ತು ರಾಜಕೀಯ ಸ್ವಾತಂತ್ರ್ಯಕ್ಕೆ ಅವಕಾಶವೇ ಇಲ್ಲದ ನಿಜಾಮರ ಹೈದರಾಬಾದಿನಲ್ಲಿ ಕೆಚ್ಚೆದೆಯ ಹೋರಾಟ ನಡೆಸಿದವರು, ಹೈದರಾಬಾದಿನಲ್ಲಿ ಹೆಸರಾಂತ ವಕೀಲರಾಗಿ ಮಹಾತ್ಮಾ ಗಾಂಧಿಯವರ ತತ್ವಗಳಿಂದ ಆಕರ್ಷಿತರಾಗಿ, ವಕೀಲವೃತ್ತಿ ತೊರೆದು, ರಾಜಕೀಯ ಕ್ಷೇತ್ರಕ್ಕೆ ಇಳಿದು, ಖಾದಿಧಾರಿಗಳಾಗಿ ಚರಖ ತಕಲಿ ಹಿಡಿದು ತಾತಾಚಾರ್ಯರ ಜೊತೆಯಲ್ಲಿ ಕೆಲಸಮಾಡಿದವರು, ಹೈದರಾಬಾದಿನಿಂದ ಗಡೀಪಾರು ಮಾಡಲ್ಪಟ್ಟ ವಕೀಲ ಕೋಲಾರ ತಾತಾಚಾರ್ಯರು ಬೆಂಗಳೂರಿಗೆ ಬರುತ್ತಿದ್ದರು. ಇಂಡಿಯನ್ ಪ್ರೆಸ್ಸಿನ ಮ್ಯಾನೇಜರಾದ ಸಿ. ರಾಜಗೋಪಾಲಚಾರ್ಯರು, ತಾತಾಚಾರ್ಯರಿಗೆ ಬಂಧುಗಳು. ಕೃಷ್ಣಶರ್ಮರಿಗೂ ಅವರಿಗೂ ನಂಟು. ನಮ್ಮ ರಾಜಗೋಪಾಲಚಾರ್ಯರ ಅಣ್ಣ ಹೈದರಾಬಾದಿನ ಪ್ರಸಿದ್ಧ ವಕೀಲರು. ಕೃಷ್ಣಶರ್ಮರೂ ಇವರೆಲ್ಲರೊಡನೆ ಕೆಲಸಮಾಡಿದವರು. ಶರ್ಮರು ಹೈದರಾಬಾದಿನ ಎಲ್ಲ ಕಾಂಗ್ರೆಸ್ಸಿಗರಿಗೂ ಮಾರ್ಗದರ್ಶಕರಾಗಿದ್ದರು. ಅಲ್ಲಿಂದ ಗಡೀಪಾರು ಮಾಡಲ್ಪಟ್ಟು ಬೆಂಗಳೂರಿಗೆ ಬಂದರು.

ಕೃಷ್ಣಶರ್ಮರು ಉತ್ತಮ ಭಾಷಣಗಾರರು, ಬರಹಗಾರರು. ಬರವಣಿಗೆಯಲ್ಲಿ ಅವರದೇ ವಿಶಿಷ್ಟ ರೀತಿಯ ಮೋಹಕ ಶೈಲಿ. ಸಣ್ಣ ಸಣ್ಣ ವಾಕ್ಯಗಳು. ಹತ್ತಾರು ಪಂಕ್ತಿಗಳಲ್ಲಿ ನಾವು ಹೇಳುವುದನ್ನು ಒಂದೆರಡು ವಾಕ್ಯಗಳಲ್ಲಿ, ಮಾತುಗಳಲ್ಲಿ ಅರ್ಥಗರ್ಭಿತವಾಗಿ ಮುಗಿಸುವರು. 'ವರ್ಧಾಯಾತ್ರೆ', 'ಪರ್ಣಕುಟಿ' ಅವರ ಶೈಲಿಯ ದ್ಯೋತಕಗಳು. ಅವರ ಶೈಲಿ ನನ್ನ ಬರವಣಿಗೆಯಮೇಲೆ ತುಂಬ ಪ್ರಭಾವ ಬೀರಿತು.

ತಿರುಮಲೆ ತಾತಾಚಾರ್ಯರೂ ಕೃಷ್ಣಶರ್ಮರೂ ಬಂಧುಗಳು. ಕೃಷ್ಣಶರ್ಮರು 'ವಿಶ್ವಕರ್ನಾಟಕ'ವನ್ನು ಸೇರಿ, ಕೆಲಕಾಲ ಅದರ ಸಂಪಾದಕರೂ ಆಗಿದ್ದರು. ಪತ್ರಿಕೋದ್ಯಮ ನನ್ನ ವೃತ್ತಿಯಾಗಿತ್ತು, ಒಂದು ಕಾಲಕ್ಕೆ. ಈ ವೃತ್ತಿಯಲ್ಲಿ ನನಗೆ ತುಂಬ

ಆಸಕ್ತಿ. ನನ್ನ ತಂದೆ ವಿ. ಎಸ್. ಸಂಜೀವರಾಯರು ಹೆಸರಾಂತ ಪತ್ರಿಕೋದ್ಯಮಿಗಳು. ಕೃಷ್ಣಶರ್ಮರೂ ನಾನೂ ಮಲ್ಲೇಶ್ವರದ ನಿವಾಸಿಗಳು. ಸಾಮಾನ್ಯವಾಗಿ ಬಸ್ಸಿನಲ್ಲಿ ಇಬ್ಬರೂ ಒಟ್ಟಿಗೇ ಬಂದು ಹೋಗುತ್ತಿದ್ದೆವು. ನಾನಂತೂ ಪ್ರತಿದಿನ ನಮ್ಮ ಮುದ್ರಣಾಲಯಕ್ಕೆ ಬರಬೇಕು. ಕೃಷ್ಣಶರ್ಮರಿಗೂ ಪ್ರತಿದಿನ ಪೇಟೆಯಲ್ಲಿ ಏನಾದರೂ ಕೆಲಸ ಇದ್ದೇ ಇರುತ್ತಿತ್ತು. ಎಲ್ಲರೂ ಕಲೆಯಲು ಇಂಡಿಯನ್ ಪ್ರೆಸ್ ಒಂದು ಕ್ಷೇತ್ರ. ಕಾಫಿ ಸೇವಿಸಲು ನಾನೂ ಅವರೂ ಜೋಡಿ. ಕಾಫಿ ತೆಗೆದುಕೊಳ್ಳದಿದ್ದರೂ ನನ್ನೊಡನೆ ಬರುವರು. ಅದು ಅವರ ಸೌಜನ್ಯ ಮತ್ತು ಸ್ನೇಹಪರತೆ.

ರಾಜಕೀಯ ಕ್ಷೇತ್ರದಲ್ಲಿ ಒಟ್ಟಾರೆ ಕೆಲಸ ಮಾಡಿರುತ್ತೇವೆ. ಚುನಾವಣೆಗೆ ಉಮೇದುವಾರರನ್ನು ಆರಿಸುವುದರಲ್ಲಿ, ಚುನಾವಣಾ ಪ್ರಚಾರ ಕಾರ್ಯದಲ್ಲಿ ಸಹೋದ್ಯೋಗಿಗಳಾಗಿ ದುಡಿದಿದ್ದೇವೆ. ಮೈಸೂರು ರಾಜ್ಯವನ್ನೆಲ್ಲಾ ಜೊತೆ ಜೊತೆಯಾಗಿ ಸುತ್ತಾಡಿದ್ದೇವೆ. ನಿರ್ಣಯಗಳನ್ನು ರೂಪಿಸುವುದರಲ್ಲಿ ಅವರದು ಎತ್ತಿದ ಕೈ. ಸುಮಾರು ಅರ್ಧಶತಮಾನಕಾಲ, ನಾವಿಬ್ಬರೂ ಕಾಂಗ್ರೆಸ್ಸಿನ ಮುಖಾಂತರ ದೇಶಸೇವೆಯಲ್ಲಿ ತೊಡಗಿದ್ದೆವು. ಸ್ವಾತಂತ್ರ್ಯಾನಂತರವೂ ಕಾಂಗ್ರೆಸ್ಸಿನಲ್ಲಿ ಎಂದಿನ ಉತ್ಸಾಹಗಳಿಂದಲೇ ಕೆಲಸಮಾಡುತ್ತಿದ್ದಾಗ, ಇನ್ನು ಸಾಕು ಈ ರಾಜಕೀಯ ಕ್ಷೇತ್ರದ ಗೋಜು. ಈ ಕ್ಷೇತ್ರದಲ್ಲಿ ಕೆಲಸಮಾಡಲು ಸಾಕಷ್ಟು ಜನರಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಕೆಲಸಮಾಡುವ ನಿನ್ನ ಶಕ್ತಿ ಬೆಳೆಸಿಕೊ ಎಂದು ನನ್ನ ಆಸಕ್ತಿಗೆ ತಿರುವು ಕೊಟ್ಟವರು ಕೃಷ್ಣಶರ್ಮ. ವಿಶ್ವೇಶ್ವರಯ್ಯನವರ ಜೀವನ ಚರಿತ್ರೆ ಬರೆಯುವಂತೆ ಪ್ರೋತ್ಸಾಹ ಮತ್ತು ಮಾರ್ಗದರ್ಶನ ನೀಡಿದವರು ಕೃಷ್ಣಶರ್ಮರು. ತಮ್ಮ 'ಕನ್ನಡ ಕಿಡಿ' ಗಳಿಂದ ಎಷ್ಟು ವಿಷಯ ಬೇಕಾದರೂ ತೆಗೆದುಕೊಳ್ಳಲು ಅವಕಾಶವಿತ್ತರು.

ಮೈಸೂರು ರಾಜ್ಯ ಪ್ರಕಾಶಕರ ಮತ್ತು ಪುಸ್ತಕವ್ಯಾಪಾರಿಗಳ ಸಂಘದ ಅಧ್ಯಕ್ಷರಾಗಿ ಕೃಷ್ಣಶರ್ಮರಿದ್ದಾಗ ಅವರ ನೇತೃತ್ವದಲ್ಲಿ ಕಾರ್ಯದರ್ಶಿಯಾಗಿ ಕೆಲಸಮಾಡುವ ಸೌಭಾಗ್ಯ ನನ್ನದಾಗಿತ್ತು.

ಕನ್ನಡದ ಯಾವುದಾದರೂ ಪದ ಪ್ರಯೋಗದಲ್ಲಿ ಇದು ಸರಿಯೇ ಎಂದು ಸಂದೇಹ ತೋರಿದಾಗ ಶರ್ಮರ ಅಧಿಕಾರವಾಣಿಯೇ ನನಗೆ ಕಡೆಯ ಮಾತು. ಅಂತೆಯೇ ಗಾಂಧೀ ವಾದದಲ್ಲಿ. ಗಾಂಧೀಜೀ ಈ ರೀತಿ ಹೇಳಿದ್ದರೆ, ಇದು ಸರಿಯೇ ತಪ್ಪೇ ಎಂದು ಸಂದೇಹ ಪ್ರಾಪ್ತವಾದಾಗ ಕೃಷ್ಣಶರ್ಮರನ್ನು ಕೇಳಿ ಪ್ರಶ್ನಿಸಿ, ವಾದಿಸಿ ಸಂದೇಹ ಪರಿಹಾರಮಾಡಿಕೊಳ್ಳುತ್ತಿದ್ದೆ. ಈ ಕ್ಷೇತ್ರದಲ್ಲಿ ನನಗೆ ಮತ್ತು ಗಾಂಧೀಸಾಹಿತ್ಯ ಸಂಘದ ಬಳಗಕ್ಕೆ ಹಿರಿಯ ಅಣ್ಣನಂತೆ ಮಾರ್ಗದರ್ಶಕರು. ದಾರಿತಪ್ಪಿ ಹೋಗುತ್ತಿದ್ದ ತರುಣರಿಗೆ ದಾರಿದೀಪ. ಅವರು ಶ್ರೀಮಂತರಾಗಿ ಮಹಡಿ ಮನೆಗಳನ್ನು ಕಟ್ಟದೆ ಇರಬಹುದು. ಕೆಟ್ಟಚಾಳಿಗಳಿಗೆ ಕಟ್ಟುಬೀಳದೆ ಉದಾತ್ತ ಗುರಿಗಳನ್ನು ತಮ್ಮ ಧ್ಯೇಯವಾಗಿ ಮಾಡಿಕೊಂಡು ಸತ್ಯಸಂಯಮ ಮಾರ್ಗದಲ್ಲಿ ನಡೆಯುವಂತೆ ಮಾಡಿದ

ದವರು, ಶರ್ಮಾಜಿ. ಕೇವಲ ಆಡಿ ಹೇಳಿದವರಲ್ಲ, ಮಾಡಿ ತೋರಿದವರು. ಅವರ ಜೀವನವೇ ಅಂಥದು. ನಿಃಸ್ವಾರ್ಥ ಸೇವೆಯ ಶುದ್ಧ ಸಾತ್ವಿಕ ಆದರ್ಶ ಜೀವನ.

ಕೃಷ್ಣಶರ್ಮರಿಗೆ ಅರವತ್ತು ತುಂಬಿದಾಗ ಅವರ ಷಷ್ಠ್ಯಬ್ದಪೂರ್ತಿಯನ್ನು ಸಂಭ್ರಮದಿಂದ ಆಚರಿಸಬೇಕು, ಆ ಕಾಲಕ್ಕೆ ಈ ಸವಿನೆನಪಿಗಾಗಿ ಕಾಣಿಕೆಯ ಒಂದು ಪುಸ್ತಕ ತರಬೇಕು ಎಂದು ಗಾಂಧೀ ಸಾಹಿತ್ಯ ಸಂಘದ ಶಿಷ್ಯವೃಂದ ತುಂಬ ಉತ್ಸಾಹ ಭರಿತವಾಗಿತ್ತು. ಆದರೆ ಆಡಂಬರದ ಉತ್ಸವಗಳು ಬೇಡ ಎಂದು ಅವರದು ಒಂದೇ ಹಟ. ಇತರ ಗಣ್ಯ ವ್ಯಕ್ತಿಗಳ ಜನ್ಮದಿನೋತ್ಸವ ನಡೆಸುವುದರಲ್ಲಿ ಅದೆಷ್ಟು ಆಸಕ್ತಿ ಶರ್ಮಾಜಿಗೆ. ಹಿರಿಯ ವ್ಯಕ್ತಿಗಳ ಜೀವನದಿಂದ ಕಿರಿಯರು ಪಾಠ ಕಲಿಯಬೇಕು. ಇದು ಜನ್ಮದಿನೋತ್ಸವಗಳನ್ನು ಆಚರಿಸುವುದರ ಉದ್ದೇಶ. ಅಲ್ಲದೆ ಆ ಗಣ್ಯವ್ಯಕ್ತಿಯಲ್ಲಿ ನಮಗಿರುವ ಪೂಜ್ಯ ಭಾವನೆ ವ್ಯಕ್ತಪಡಿಸಲು, ಲೋಕಕ್ಕೆ ತಿಳಿಯಪಡಿಸಲು ಅದೊಂದು ಸದವಕಾಶ. ಶ್ರೇಷ್ಠ ವ್ಯಕ್ತಿಗಳ ವ್ಯಕ್ತಿ ಚಿತ್ರ ಬರೆಯುವುದರಲ್ಲಿ, ವ್ಯಕ್ತಿ ಪರಿಚಯ ಮಾಡಿ ಕೊಡುವುದರಲ್ಲಿ ಅವರದು ಎತ್ತಿದ ಕೈ. 'ದೀಪಮಾಲೆ', 'ಕುಲದೀಪಕರು' ಇದಕ್ಕೆ ಸಾಕ್ಷಿ. ಚಿತ್ರಗಾರ ಕುಂಚದಿಂದ ಚಿತ್ರ ಬಿಡಿಸುವಂತೆ, ತಮ್ಮ ಕುಂಚದಿಂದ ವ್ಯಕ್ತಿಯನ್ನು ನಮ್ಮೆದುರಿಗೆ ಸಾಕ್ಷಾತ್ಕಾರ ಮಾಡಿಕೊಡುವ ಅಸಾಧಾರಣ ಶಕ್ತಿ ಅವರದು. ಅವರ 'ದೀಪಮಾಲೆ'ಯನ್ನು ಓದಿದವರಿಗೆ ಈ ಅನುಭವ ಆಗದೆ ಇರದು. ಆ ವ್ಯಕ್ತಿಯ ಬಾಹ್ಯ ಸ್ವರೂಪ, ಮೈಕಟ್ಟು, ಅಂಗಸೌಷ್ಠವ, ನಿಲುವು ಇದಕ್ಕೂ ಹೆಚ್ಚಾಗಿ ಅವನ ನಡೆನುಡಿ, ಅವನ ಗುಣವೈಶಿಷ್ಟ್ಯ, ಸ್ವಭಾವ ಎಲ್ಲವೂ ತುಂಬಿ ಬರುತ್ತದೆ. ಆ ವ್ಯಕ್ತಿಮೂರ್ತಿವೆತ್ತು ನಮ್ಮ ಕಣ್ಣೆದುರಿಗೇ ಬಂದು ನಿಂತಂತೆ ಭಾಸವಾಗುತ್ತದೆ. ಅಂಥದು ಅವರ ಲೇಖನಿಯ ಶಕ್ತಿ.

ಕೃಷ್ಣಶರ್ಮರಿಗೆ ಗಾಂಧೀವಾದದಲ್ಲಿ, ಗಾಂಧಿಯವರ ತತ್ವಗಳಲ್ಲಿ ನಿಜ್ವಾದ ನಂಬಿಕೆ ಮತ್ತು ಶ್ರದ್ಧೆ ಸಣ್ಣ ದೊಡ್ಡ ವಿಷಯಗಳಲ್ಲೂ ಅವರನ್ನು ಅನುಸರಿಸಲು ಪ್ರಯತ್ನಿಸುವುದು. ಮನೆಗೆ ಬರುವ ಆಮಂತ್ರಣ ಪತ್ರಿಕೆ, ಲಕೋಟೆ ಇವುಗಳನ್ನು ಕತ್ತರಿಸಿ ಬರೆಯಲು ಒಪ್ಪವಾಗಿ ಇಟ್ಟುಕೊಳ್ಳುವರು. ಸಣ್ಣಗೆ ಕೊರೆದು ಬರೆಯುವ ಅಕ್ಷರ ನಮಗೆ ಒಂದು ದೊಡ್ಡ ಹಾಳೆ ಬೇಕಾದರೆ ಅವರು ಅಷ್ಟನ್ನು ಒಂದು ತುಂಡು ಕಾಗದದಲ್ಲಿ ಬರೆದು ಮುಗಿಸುವರು. ಪತ್ರಿಕೆಗಳಿಗೆ ಲೇಖನಗಳನ್ನು ಇಂಥ ತುಂಡು ಕಾಗದಗಳಲ್ಲೇ ಬರೆದು ಕಳುಹಿಸುವರು. ನೋಡಲು ಅಂದವಾದರೂ ಕೆಲವು ಸಂದರ್ಭಗಳಲ್ಲಿ ಓದಲು ಕಷ್ಟ. ಸಣ್ಣಗೆ ಬರೆಯುವ ಫೌಂಟೇನ್ ಪೆನ್ ಬಳಸುವರು. ಪಳಗಿದ ಕಂಪೋಸಿಟರ್ ಮಾತ್ರ ಇವರ ಬರವಣಿಗೆ ಓದಬಲ್ಲ.

ಬಿ. ಎನ್. ಗುಪ್ತರು ತಮ್ಮ ಪತ್ರಿಕೆಗಳ ಸಂಪಾದಕತ್ವ ವಹಿಸಿಕೊಳ್ಳುವಂತೆ ಶರ್ಮರನ್ನು ಎಷ್ಟೋ ಸಾರಿ ಒತ್ತಾಯ ಪಡಿಸಿದರು. ಕೇಳಿದಷ್ಟು ವೇತನ ಕೊಡಲು ಸಿದ್ಧರಿದ್ದರು. ಮತ್ತೊಬ್ಬರ ಅಧೀನದಲ್ಲಿ ಕೆಲಸ ಮಾಡಲು ಇಚ್ಛಿಸದೆ ಇದೇ ರೀತಿ ಅನೇಕ ಕಡೆಗಳಿಂದ ಬಂದ ಆಹ್ವಾನಗಳನ್ನು ಅವರು ತಿರಸ್ಕರಿಸಿದರು. ಬೆಂಗಳೂರಿನ

ಸುಪ್ರಸಿದ್ಧ ಪತ್ರಿಕೆಗೆ ಅವರು ಪ್ರಚಲಿತ ವಿಷಯಗಳ ಬಗ್ಗೆ ತಮ್ಮ ಆಕರ್ಷಕ ಶೈಲಿಯಲ್ಲಿ ಲೇಖನಗಳನ್ನು ಬರೆದು ಕೊಡುತ್ತಿದ್ದರು. ತಮ್ಮ ಪತ್ರಿಕೆಗೆ ಮಾತ್ರ ಲೇಖನಗಳನ್ನು ಬರೆದುಕೊಡಬೇಕು, ಇತರ ಪತ್ರಿಕೆಗಳಿಗೆ ಬರೆಯಬಾರದು. ಇದಕ್ಕೆ ಪ್ರತಿಯಾಗಿ ಸಂಭಾವನೆಯನ್ನು ದ್ವಿಗುಣಗೊಳಿಸುವುದಾಗಿ ಅವರು ತಿಳಿಸಿದರು. ಬೇರೆ ಪತ್ರಿಕೆಗಳಿಗೆ ಬರೆಯುವ ತಮ್ಮ ಸ್ವಾತಂತ್ರ್ಯ, ಹಣದಾಶೆಗಾಗಿ ಕಳೆದುಕೊಳ್ಳಲು ಅವರು ಒಪ್ಪಲಿಲ್ಲ. ಇವರ ಲೇಖನ ಪ್ರಕಟಗೊಳ್ಳದ ವಾರದಲ್ಲಿ ಪತ್ರಿಕೆಯ ಮಾರಾಟ ಗಮನಾರ್ಹವಾಗಿ ಕಡಿಮೆಯಾಗುತ್ತಿತ್ತು. ಶರ್ಮರ ಲೇಖನ ಪ್ರಕಟವಾಗದ ಪತ್ರಿಕೆ ನಮಗೆ ಬೇಡ ಎಂದು ಚಂದಾದಾರರು ಸಂಪಾದಕರಿಗೆ ತಿಳಿಸುತ್ತಿದ್ದರು. ಅಷ್ಟು ಜನಪ್ರಿಯವಾದುದು ಅವರ ಬರವಣಿಗೆ. ಪ್ರಕಟಣ ಶಾಖೆಯ ಅಧಿಕಾರಿಯಾಗುವಂತೆ ಕಾಂಗ್ರೆಸ್ ಸರ್ಕಾರ ಆಹ್ವಾನಿಸಿತು. ಆದರೆ ಅವರು ಒಪ್ಪಿಕೊಳ್ಳಲಿಲ್ಲ. ಬಡತನ, ಮನೆತುಂಬ ಮಕ್ಕಳು, ಆದರೆ ಹಣದಾಸೆಗಾಗಿ ತಮ್ಮ ವ್ಯಕ್ತಿ ಸ್ವಾತಂತ್ರ್ಯ ಕಳೆದುಕೊಳ್ಳಲು ಸಿದ್ಧರಿರಲಿಲ್ಲ.

ಹೈದರಾಬಾದಿನ ಮುಖ್ಯಮಂತ್ರಿಗಳಾಗಿ, ಅನಂತರ ಕೇರಳದ ಗವರ್ನರ್ ಆದ ರಾಮಕೃಷ್ಣರಾಯರಿಗೂ ಕೃಷ್ಣಶರ್ಮರಿಗೂ ಆಪ್ತಸ್ನೇಹ. ಏಕವಚನದಲ್ಲೇ ಮಾತು. ಬೆಂಗಳೂರಿಗೆ ಬಂದಾಗಲೆಲ್ಲಾ ರಾಯರು ತಪ್ಪದೆ ಶರ್ಮರ ಮನೆಗೆ ಬಂದು ಹೋಗುತ್ತಿದ್ದರು. ಗಡೀಪಾರಾಗಿ ಬೆಂಗಳೂರನ್ನು ತಮ್ಮ ವಾಸಸ್ಥಾನವಾಗಿ ಮಾಡಿಕೊಂಡಿದ್ದ ಶರ್ಮರಿಗೆ, ಹೈದರಾಬಾದಿಗೆ ಮರಳುವಂತೆ ರಾಯರು ತುಂಬ ಒತ್ತಾಯಪಡಿಸಿದರು. ಪ್ರಕಟಣ ಶಾಖಾಧಿಕಾರಿಯಾಗಲು ಆಹ್ವಾನಿಸಿದರು. ಸರ್ಕಾರದಲ್ಲಿ ನೌಕರರಾಗಿ ಕೆಲಸ ಮಾಡಲು ಶರ್ಮರು ಒಪ್ಪಿಕೊಳ್ಳರು ಎಂಬು ರಾಮಕೃಷ್ಣರಾಯರೂ ತಿಳಿದಿದ್ದರು. ಆದ್ದರಿಂದ ಒಂದು ಲಕ್ಷ ರೂ.ಗಳ ಮುದ್ರಣಾಲಯ ಹೈದರಾಬಾದಿನಲ್ಲಿ ಅಣಿಮಾಡಿ ಕೊಡುತ್ತೇವೆ. ಸ್ವತಂತ್ರವಾಗಿ ಪತ್ರಿಕೆ ನಡೆಸಿ. ಹಿಂದೆ ನೀವು ನಮಗೆ ಮಾರ್ಗದರ್ಶಕರಾಗಿದ್ದಿರಿ. ಈಗಲೂ ನೀವು ಮಾರ್ಗದರ್ಶಕರಾಗಿರಬೇಕು. ನೀವು ನಮ್ಮಲ್ಲಿ ಬಂದು ಉಳಿದಿರಿ. ಇಷ್ಟೇ ಸಾಕು ಎಂದು ರಾಯರು ಶರ್ಮರನ್ನು ಎಷ್ಟೋ ಕೇಳಿಕೊಂಡರು. ಈ ಮಾತು ಬಂದಾಗ ಈ ಆಹ್ವಾನ ಸ್ವೀಕರಿಸಿ ಹೈದರಾಬಾದಿಗೆ ಹೋಗುವಂತೆ ನಾನೂ ಹೇಳಿದೆ. ಮೈಸೂರಿನಲ್ಲಿ ಕೃಷ್ಣಶರ್ಮರಿಗೆ ದೊರೆಯಬೇಕಾದ ಪುರಸ್ಕಾರ ದೊರೆಯದಿದ್ದರೂ ಇದು ಯಾವುದನ್ನೂ ಗಣನೆಗೆ ತೆಗೆದುಕೊಳ್ಳದೆ ಅವರು ಬೆಂಗಳೂರಿನಲ್ಲೇ ಉಳಿಯಲು ನಿಶ್ಚಯಿಸಿದ್ದರು.

ನಿಜಲಿಂಗಪ್ಪನವರೂ ಕೃಷ್ಣಶರ್ಮರೂ ಸಿದ್ದವನಹಳ್ಳಿಯಲ್ಲಿ ಬೆಳೆದವರು. ಒಂದೇ ಶಾಲೆಯಲ್ಲಿ ಓದಿದವರು. ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾದಮೇಲೂ ಸಂಭಾಷಣೆ ಏಕವಚನದಲ್ಲೇ. ಅಷ್ಟು ಸಲಿಗೆ. ಆದರೇನು ಒಮ್ಮೆ ಒಂದು ಸಂಘದ ಪರ ಮುಖ್ಯಮಂತ್ರಿಗಳನ್ನು ನೋಡಬೇಕಾದರೆ ಒಂದುವಾರ ಅವರ ಮನೆಬಾಗಿಲು ಕಾಯಬೇಕಾಯಿತು. ದೋಷ ನಿಜಲಿಂಗಪ್ಪನವರದಲ್ಲ. ಬಹುಶಃ ಸ್ಥಾನಮರ್ಯಾದೆ

ಕೃಷ್ಣಶರ್ಮರು ಬಹು ಭಾಷಾ ವಿಶಾರದರು. ಕನ್ನಡ, ತೆಲುಗು, ಇಂಗ್ಲಿಷ್, ಹಿಂದಿ, ಉರ್ದು, ಮರಾಠೀ, ಸಂಸ್ಕೃತ ಬಲ್ಲರು. ಅನುವಾದ ಮಾಡುವುದರಲ್ಲಿ ಅವರದು ಪಳಗಿದ ಕೈ. ಆಕ್ಸ್‌ಫರ್ಡ್, ಲಾಂಗರ್ಮ ಮೊದಲಾದ ಹೆಸರಾಂತ ಪ್ರಕಾಶಕರಿಗೆ ಅವರು ಸಲಹೆಗಾರರು. our India, our food ಇವನ್ನು ಕನ್ನಡಿಸಿದವರು ಅವರೇ. ಮಹಾರಾಷ್ಟ್ರ ಭಾಷೆಯಲ್ಲಿ ಅಷ್ಟೊಂದು ಪಾಂಡಿತ್ಯವಿಲ್ಲದಿದ್ದರೂ, ಗೀತಾ ಪ್ರವಚನದ ಅನುವಾದ ಮಾಡಿರುವುದನ್ನು ಓದಿದರೆ, ಅವರಿಗೆ ಪಾಂಡಿತ್ಯವಿಲ್ಲವೆಂದು ಯಾರೂ ಒಪ್ಪರು. "ನನ್ನ ಮೂಲಕ್ಕಿಂತ ನಿನ್ನ ಅನುವಾದವೇ ಉತ್ತಮವಾಗಿದೆ" ಎಂದಿದ್ದಾರೆ ವಿನೋಬಾಜಿ. ಪಟ್ಟಾಭಿ ಸೀತಾರಾಮಯ್ಯ, ವಿನೋಬಾ ಇವರ ಭಾಷಣಗಳನ್ನು ಅನುವಾದ ಮಾಡಲು ಎದ್ದು ನಿಂತಾಗ ಭಾಷಣಕಾರರ ವಾಕ್ಯ ಮುಗಿಯುವುದರೊಳಗಾಗಿ ಕೃಷ್ಣಶರ್ಮರ ಅನುವಾದದ ವಾಕ್ಯ ಮುಗಿದಿರುವುದು. ಅವರ ಗ್ರಹಣಶಕ್ತಿ, ಭಾಷೆಯ ಮೇಲಿನ ಜ್ಞಾನ ಅಷ್ಟು ಚುರುಕು ಮತ್ತು ಶ್ರೇಷ್ಠ.

ಸಾರ್ವಜನಿಕ ಸಂಸ್ಥೆಗಳ ನಿಧಿ ತಮ್ಮ ಸ್ವಂತದ ಕೆಲವರು ಬಳಸಿಕೊಳ್ಳುವುದುಂಟು. ಆದರೆ ಶರ್ಮರು ಅದನ್ನು ವಿಷದಂತೆ ಭಾವಿಸುವರು. ಒಂದು ನಯೆ ಪೈಸೆಯನ್ನೂ ಪೋಲುಮಾಡರು. ಉಪಹಾರಕ್ಕೆ ಎರಡು ರೂಪಾಯಿ ವೆಚ್ಚಮಾಡುವಂತೆ ಸದಸ್ಯರು ಕೋರಿದರೆ ಎಂಟಾಣೆಗಿಂತ ಹೆಚ್ಚು ವೆಚ್ಚ ಮಾಡಲು ಅವಕಾಶ ಕೊಡರು. ತಮ್ಮ ಸ್ವಂತಕ್ಕಾಗಿ ಒಂದು ಕಾಸನ್ನೂ ತೆಗೆದುಕೊಳ್ಳಲು ಒಪ್ಪರು. ವ್ಯವಹಾರದಲ್ಲಿ ಎಡರುತೊಡರುಗಳು ಸಂಭವಿಸದಿರುವುದು ಅಪರೂಪ. ನನ್ನಿಂದ ಪರಿಹರಿಸಿಕೊಳ್ಳಲು ಅಸಾಧ್ಯವಾದ ತೊಂದರೆಗಳು ಬಂದಾಗ ಕೃಷ್ಣಶರ್ಮರ ಸಹಾಯ, ಸಲಹೆ ನನಗೆ ಸದಾ ಲಭ್ಯ. ಅವರ ಸಮಯೋಚಿತ ಸಲಹೆಗಳು ನನ್ನನ್ನು ಎಷ್ಟೋ ಕಷ್ಟ ಸಂಕಟಗಳಿಂದ ಪಾರುಮಾಡಿವೆ. ಆದ್ದರಿಂದಲೇ ಅವರನ್ನು ಹಿರಿಯಣ್ಣ ಎಂದು ಸಂಬೋಧಿಸಿರುತ್ತೇನೆ.

# ಅಚ್ಚುಮೆಚ್ಚಿನ ತಮ್ಮ ಕಿಟ್ಟು

'ಭಾರತಿ'

ವೀರ ಮದಕರಿನಾಯಕನ ಹೆಸರುವಾಸಿಯಿಂದ ದುರ್ಗಮ ದುರ್ಗವೆನಿಸಿದ್ದು ಕಾಲತಂತ್ರದಿಂದ ಫಿರಂಗಿಯವರ ವಶವಾಯ್ತು ಚಿತ್ರದುರ್ಗ. ಈ ಪ್ರಖ್ಯಾತಿಯೊಂದಿಗೆ ಜಲಕ್ಷಾಮಕ್ಕೂ ಈ ಊರು ಪ್ರಖ್ಯಾತವಾಗಿತ್ತು. ಊರು ಅನ್ನುವ ಸಹನೆ ಇಲ್ಲದೆ ಜಲಕ್ಷಾಮದ ಕೊಂಪೆ ಅನ್ನುವವರೇ ಹೆಚ್ಚು. ಈಗ ಬಹುಮಟ್ಟಿಗೆ ಸುಧಾರಣೆಯಾಗಿ ಜಲ ಸಮೃದ್ಧಿಯಾಗಿರಬಹುದು. ಆಗ ಅಂದರೆ ೬೨ ವರ್ಷಗಳ ಹಿಂದೆ ೧೯೪೯ ನೆಯ ವರ್ಷದಲ್ಲಿ ನಮ್ಮ ತಂದೆಗೆ ಹಾಸನದಿಂದ ಚಿತ್ರದುರ್ಗಕ್ಕೆ ವರ್ಗವಾಯಿತು. ಬೆಳಗಿನಿಂದ ರಾತ್ರಿಯವರೆಗೂ ನೀರಿನ ತಾಪತ್ರಯ ಹೇಳತೀರದು. ಸಣ್ಣ ಚೆಂಬು ಥಾಲಿಗಳನ್ನು ಹಿಡಿದ ಸಣ್ಣ ಮಕ್ಕಳು, ದೊಡ್ಡ ಬಿಂದಿಗೆಗಳನ್ನು ಸೊಂಟದಲ್ಲಿಟ್ಟು ನಿಂತ ದೊಡ್ಡವರು ನೀರಿಗೆ ಪರದಾಡುತ್ತಾ ನಿಂತ ದೃಶ್ಯ ಆ ಪೈಪೋಟಿ ಜಗಳಗಳು ಎಂದಿಗೂ ಮರೆಯುವಂತಿಲ್ಲ. ಇಷ್ಟು ಕ್ಲೇಶ ಪಟ್ಟು ಪಡೆದ ನೀರು ಕುಡಿಯುವಂತಿಲ್ಲ, ಕುಡಿಯುವ ಶುದ್ಧ ಗಂಗಾಜಲ ಎರಡು ಮೈಲಿಗಳಾಚೆ ಇದ್ದ ಹೊಂಡದಿಂದ ತರಬೇಕು.

ಹನುಮಂತರಾಯನ ಗುಡಿಯು ಚಿಕ್ಕದಾಗಿದ್ದರೂ ಆ ಊರಿಗೆ ಅದು ಪ್ರಸಿದ್ಧ ದೇವಾಲಯ, ಅದರ ಪಕ್ಕದಲ್ಲಿದ್ದ ಮನೆಯೇ ಸಿದ್ದಪ್ಪನಹಳ್ಳಿ ರಂಗಾಚಾರ್ಯರ ಸ್ವಗೃಹ. ಹಿಂದಿನ ಕಾಲದ ರಚನೆ ತಲೆಬಾಗಿಲಿನಿಂದ ನೆಟ್ಟಗೆ ಉದ್ದಕ್ಕೂ ಹೋದರೆ ಹಿಂದೆ ಅಂಗಳ, ಬಚ್ಚಲು ಮನೆ, ಅಡಿಗೆ ಮನೆ. ಶ್ರೀ ರಂಗಾಚಾರ್ಯರು ಅಧ್ಯಯನ ಸಂಪನ್ನರಾದ ವೈದಿಕ ವಿದ್ವಾಂಸರು. ಅಲ್ಲದೆ ಜ್ಯೋತಿಷ್ಕರು. ಅವರ ಕುಟುಂಬ ಸೌ॥ ಶೇಷಮ್ಮನವರು ಸನಾತನ ಸಂಪ್ರದಾಯದ ಅಚ್ಚುಮೆಚ್ಚಿನ ಗೃಹಿಣಿ! ಮಕ್ಕಳಿಂದ ತುಂಬಿದ ಮನೆ. ಜೇಷ್ಠ ಪುತ್ರ ಶೇಷಾದ್ರಿಶರ್ಮ, ದ್ವಿತಿಯ ಸುಂದರಶರ್ಮ, ತೃತಿಯನೇ ಕೃಷ್ಣಶರ್ಮ. ಎಲ್ಲರೂ ಕರೆಯುವುದು ಕಿಟ್ಟುಯೆಂಬೆರಡೇ ಅಕ್ಷರ. ಆ ಮನೆಗೆ ಬಹಳ ಹತ್ತಿರವೆ ನಮ್ಮ ಮನೆ. ನಮ್ಮ ತಂದೆಗೆ ಜ್ಯೋತೀಷ್ಯದ ಗೀಳು ಹೆಚ್ಚು. ಶ್ರೀ ರಂಗಾಚಾರ್ಯರಲ್ಲಿ ಬಳಕೆ ಹೆಚ್ಚಾಗಲು ಸ್ವಜನ ಅನ್ನುವುದಕ್ಕಿಂತ ಈ ಗೀಳೇ ಮುಖ್ಯಕಾರಣವಾಗಿತ್ತು. ಸೌ॥ ಶೇಷಮ್ಮನವರ ಗೃಹ ನಿರ್ವಾಹದ ಅಚ್ಚುಕಟ್ಟು, ಅವರ ಸೌಜನ್ಯತೆ ನಮ್ಮ ತಾಯಿಯ ಮನಸ್ಸನ್ನಾಕರ್ಷಿಸಿ ಸ್ನೇಹ ಸಲಿಗೆಗಳಿಗೆ ಕಾರಣವಾಗಿತ್ತು. ಈ ಕಾರಣಗಳಿಂದ ದಿನಕ್ಕೆ ಎರಡು ಮೂರು ಸಲವಾದರೂ ಸಿದ್ದಪ್ಪನಹಳ್ಳಿಯವರ ಮನೆಗೆ ನಾನು ಹೋಗುವ ಅಗತ್ಯವಾಗುತ್ತಿತ್ತು.

ಸಂಜೆ ಶಾಲೆಯಿಂದ ಮನೆಗೆ ಬರುವ ವೇಳೆಗೆ ನೀರಿನ ಚೆಂಬುಗಳು ನನ್ನನ್ನು ನಿರೀಕ್ಷಿಸುತ್ತಿದ್ದವು. ಅವುಗಳನ್ನು ಹಿಡಿದು ಬೀದಿಯ ಅಂಚಿಗೆ ನಿಲ್ಲಿಸಿದ್ದ ನಲ್ಲಿಯ ಕಟ್ಟೆಗೆ ಹೋಗಿ ನಿಲ್ಲುವ ದಿನಚರಿ. ಆರುವರ್ಷದ ಕಿಟ್ಟುವಿಗೂ ಇದೇ ದಿನಚರಿ. ಬರಿ ಮೈಯಲ್ಲಿ ಪುಟ್ಟದೊಂದು ಚೆಂಬು ಹಿಡಿದು ನೀರಿಗೆ ಕಾಯುತ್ತಾ ನಿಲ್ಲುವನು, ಅಡಿಗೆ ಮನೆಗೆ ಮಡಿನೀರು ಬೇಕು. ಮಗ ಬರೀ ಮೈಯಲ್ಲೇ ಅದನ್ನು ತೆಗೆದುಕೊಂಡು ಹೋಗಬೇಕು. ಇದಕ್ಕಾಗಿ ಗಂಟೆಗಟ್ಟಲೆ ಕಾಯಬೇಕು. ಮುದ್ದಾದ ಮಗು. ದುಂಡು ಮುಖ, ಹೊಳೆಯುವ ಕಣ್ಣುಗಳು. ಹೊಂಬಣ್ಣದ ಮೈ. ಬಾಲಕೃಷ್ಣನೇ ನಿಂತಂತೆ ಈಗಲೂ ಆ ನೋಟ ಆಗಾಗ ನೆನಪಾಗುತ್ತದೆ. ಹುಡುಗ ಅದೆಷ್ಟು ಚುರುಕು. ದೀಪ ಹೊತ್ತಿಸುವ ವೇಳೆಗೆ ದಿನವೂ ಕಿಟ್ಟು ಮನೆಗೆ ಬರುವನು. ಪದ್ಯಗಳನ್ನು ಹೇಳುವನು. ಆ ವಯಸ್ಸಿಗಾಗಲೇ ಎಷ್ಟು ಪದ್ಯಗಳನ್ನು ಕಲಿತಿದ್ದನೋ. ಕಥೆ, ನಾಟಕ ಓದುವುದೆಂದರೆ ಬಹಳ ಇಷ್ಟ. ನಮ್ಮ ಸೋದರ ಮಾವಂದಿರ ಭೋಜ ಪ್ರಬಂಧ ನಾಟಕ ಅಚ್ಚಾಗಿ ಬಂತು. ಅದರಲ್ಲಿನ ಕುರುಬನ ಪಾತ್ರ ಕಿಟ್ಟುವಿಗೆ ಬಹಳ ಇಷ್ಟ. ಆ ಪಾತ್ರವನ್ನು ಅಭಿನಯಪೂರ್ವಕ ಓದುವನು. ಆ ಓದುವ ರೀತಿಗೆ ನಾವೆಲ್ಲ ಆಶ್ಚರ್ಯಪಡುತ್ತಾ ಮತ್ತೆ ಮತ್ತೆ ಓದಿಸಿ ಕೇಳುವೆವು. ಸ್ಪಷ್ಟ ಉಚ್ಚಾರಣೆ ಭಾವ ಇಂಗಿತಗಳು ಓದುವ ಹೇಳುವ ಧ್ವನಿಯಲ್ಲೇ ಸೂಚಿತ, ಇದೆಂತಹ ಪ್ರಚಂಡ ಮಗು ಅನ್ನದೆ ಇದ್ದವರು ಯಾರು ?

ಎರಡು ವರ್ಷಗಳಲ್ಲೇ ಈ ದಿನಚರಿಯೆಲ್ಲಾ ಮುಗಿಯಿತು. ಪುನಃ ಹಾಸನಕ್ಕೆ ಹಿಂತಿರುಗಬೇಕಾಯಿತು. ಚಿತ್ರದುರ್ಗದ ರಮ್ಯ ದೃಶ್ಯಗಳು ನೆನಪಾದಂತೆ ಬಾಲ ಕಿಟ್ಟುವಿನ ನೆನಪೂ ಆಗಾಗ ಆಗುತ್ತಲೇ ಇತ್ತು. ಇದಾಗಿ ಹತ್ತು ವರ್ಷಗಳು ಕಳೆದ ಮೇಲೆ ಅಕಸ್ಮಾತ್ ಒಂದು ದಿನ ನಾವಿದ್ದ ಮನೆವಾರ್ತೆ ಸೇಟಿಯ ಮನೆಗೆ ಹರಟೆಯ ಮಲ್ಲನಾಗಿದ್ದ ಕಿಟ್ಟು ಐದಾರು ಪ್ರಬಂಧಗಳ ಸಮೇತ ಆಗಮಿಸಿದ. ಕರತಂದವರು ಶ್ರೀ ಸಂಪದ್ಗಿರಿರಾಯರು. ಅವರಿಗಿಂತ ಈ ಹರಟೆಯ ಮಲ್ಲ ನಮಗೆ ಪೂರ್ವ ಪರಿಚಿತನೆಂದು ತಿಳಿದ ಮೇಲೆ ಅವರು "ಹಾಗೇನು ಆದರೆ ನನ್ನ ಮಧ್ಯಸ್ತಿಕೆ ಏನೂ ಬೇಕಾಗಿಲ್ಲ" ಅಂದರು. ಹರಟೆಯ ಮಲ್ಲನ ಪ್ರಬಂಧಗಳನ್ನು ಓದಿಸಿ ಕೇಳಿ ಕುರುಬನ ಪಾತ್ರದ ನೆನಪಾಗಿ "ಅದೇ ದಿಟ್ಟತನ ಅದೇ ಧ್ವನಿ ಅದೇ ಚುರುಕು. ಆಗ ಎಳೆಮಗು ಈಗ ಬೆಳೆದ ಮಗು" ಅಂದರು ನಮ್ಮ ತಂದೆ.

ಹರಟೆಯ ಮಲ್ಲನ ವಸತಿ ಸಂಚಾರ ಇತರ ಕಾರ್ಯಕ್ರಮಗಳೆಲ್ಲಾ ಹೈದರಾಬಾದು ಉತ್ತರ ಕರ್ನಾಟಕಗಳ ಕಡೆಗೇ ಇತ್ತು. ಬೆಂಗಳೂರು ಆಕರ್ಷಿಸಿದ್ದೂ ದೇಶೀಯ ವಿದ್ಯಾಶಾಲೆಗೆ ಈತನ ಪ್ರವೇಶವಾದ ಮೇಲೆಯೇ. ಒಂದು ಸಲ ಮನೆಗೆ ಒಂದಾಗ ನನ್ನ ಆರಂಭದೆಸೆಯ ಕೆಲವು ಸಾಹಿತ್ಯಗಳನ್ನು ತೀಕ್ಷ್ಣವಾಗಿ ನೋಡಿ "ಇಲ್ಲ ಈ ಪದ ಹೊಂದುವುದಿಲ್ಲ. ಇದು ಅರಿಸಮಾಸ" ಎಂದು ಹೀಗೆಂದೇ ಒಂದೆರಡು ಸೂಚನೆಗಳನ್ನು ಮಾಡಿದ. "ಎಲಾ ಛೋಕರೀ ನೀನಿಷ್ಟು ಬುದ್ಧಿವಂತನಾದೆಯೊ !"

ಎಂದು ಸಂತೋಷವಾಯಿತಲ್ಲದೆ ಅದನ್ನು ತಪ್ಪಾಗಿ ಗ್ರಹಿಸಲು ಸಾಧ್ಯವಾಗಲಿಲ್ಲ. ಕ್ರಮೇಣ ಈ ಅಭಿಮಾನ ಹೆಚ್ಚಾಗಿ ಬೆಳೆಯುತ್ತಾ ಸಾಮೀಪ್ಯವನ್ನು ಬಯಸುವಂತಾಯಿತು. ನಾವು ಒಂದೆರಡು ಸಲ ಧಾರವಾಡಕ್ಕೆ ಹೋದಾಗ ಅಲ್ಲಿ ಕಿಟ್ಟುವು ಸಿದ್ಧ. ಎಳೆಮಗುವಿನೊಂದಿಗೆ ನಾನು ಬೆಳಗಾಂ ಕಾಂಗ್ರೆಸಿಗೆ ಹೋದಾಗ ಕಿಟ್ಟು ನನ್ನ ಅಂಗರಕ್ಷಕ. ನಾನು ಕಡೆಯವಳನಾಗಿ ಹುಟ್ಟಿ ನನಗೆ ತಮ್ಮಂದಿರಿಲ್ಲವಲ್ಲಾ ಅನ್ನುವ ಲೋಪವನ್ನು ಕಿಟ್ಟು ಹೋಗಲಾಡಿಸಿ ಸಾಕ್ಷಾತ್ ನನ್ನ ತಮ್ಮನೇ ಆಗಿ ನಡೆದು ಕೊಂಡ ಸಂದರ್ಭಗಳು ಲೆಕ್ಕವಿಲ್ಲದಷ್ಟು. ಕೇವಲ ತಮ್ಮನೇ ಅಲ್ಲ ಆಪದ್ಬಂಧು ಎಂದು ಮನಸಾರ ಹೇಳಬೇಕು.

ಯಾವುದೋ ನಿಮಿತ್ತ ನಾನೊಂದು ಸಲ ಬೊಂಬಾಯಿಗೆ ಹೋಗಬೇಕಾಯಿತು. ಅಲ್ಲಿದ್ದ ಎರಡು ವಾರಗಳು ಈ ತಮ್ಮನ ಸಹಚರ್ಯೆ. ನನಗೆ ದೊರೆತ ಜನ ಮರ್ಯಾದೆ ಹೇಳಲಾಗದು. ಒಂದು ದಿನ ತನ್ನ ಮಿತ್ರರ ಕೂಟವನ್ನು ಸೇರಿಸಿ ನನ್ನಿಂದ "ತಪಸ್ವಿನಿ" ನಾಟಕವನ್ನೋದಿಸಲು ಏರ್ಪಡಿಸಿ ಕಡೆಯಲ್ಲಿ ಆ ಕೃತಿಯನ್ನು ಕುರಿತು ದೀರ್ಘವಾದ ವ್ಯಾಖ್ಯಾನವನ್ನು ಮಾಡಿದ. ಅದನ್ನು ರಚಿಸಿದ ನನಗೆ ತೋರದೇ ಇದ್ದಂತಹ ಸೂಕ್ಷ್ಮಾಂಶಗಳು ಈ ತಮ್ಮನ ಪ್ರಖರ ಬುದ್ಧಿಗೆ ತೋರಿಬಂದವು. ಎಂತಹ ವಿಮರ್ಶಾತ್ಮಕ ಬುದ್ಧಿ. ನಾನಿದನ್ನು ಯೋಚಿಸಿ ಬರೆಯಲೇ ಇಲ್ಲವಲ್ಲಾ ಎಂದು ನನಗೆ ಅತ್ಯಾಶ್ಚರ್ಯವಾಯಿತು.

ಇದಾದ ಒಂದೆರಡು ವರ್ಷಗಳಲ್ಲೇ ನೆಪಕ್ಕೆ ಯಾವುದೋ ಅಪರಾಧವನು ಹೊರಿಸಿ ಆ ನಿಜಾಮ ರಾಜ್ಯದಿಂದ ಅಲ್ಲಿನ ಸರಕಾರ ಕಿಟ್ಟುವನ್ನು ಗಡೀಪಾರು ಮಾಡಿತು. ಮತ್ತೆಲ್ಲಿಗದ ಹೋಗದೆ ತಮ್ಮನು ನೆಟ್ಟಗೆ ಅಕ್ಕನ ಮನೆಗೆ ಬಂದ. ಇನ್ನು ಮುಂದೇನು? ಈ ಪ್ರಶ್ನೆ ಮುಂದೆ ನಿಂತಿದೆ. ಮಡದಿ ಮಕ್ಕಳು ಒಬ್ಬೊಬ್ಬರೊಂದೊಂದು ಕಡೆ ಇದ್ದಾರೆ, ಇಲ್ಲಿಯೂ ನಿರುಪಾಧಿಕವಾಗಿ ತಾನು ಏನಾದರೂ ಮಾಡಲು ಸಾಧ್ಯವೇ? ಈತ ಗಾಂಧಿ ಪಕ್ಷದ ಗೂಢಚಾರಿ ಎಂಬ ಆಪಾದನೆ ಇದ್ದೇ ಇದೆ. ಹೇಗಾದರೂ ಆಗಲಿ ಎಂದು ಸಾಹಿತ್ಯ ಪರಿಷತ್ತಿನಲ್ಲಿ ಒಂದು ಭಾಷಣವನ್ನೇರ್ಪಡಿಸಲಾಯಿತು. ಬಿ. ಯಂ. ಶ್ರೀ ಅವರೇ ಅಧ್ಯಕ್ಷರಾಗಿದ್ದಂತೆ ನೆನಪು. ಘನವಿದ್ವಾಂಸರೆಲ್ಲಾ ಬಂದಿದ್ದರು. ಆ ವಾಗ್ಮಿತೆಗೆ ಬೆರಗಾದರು.

ವಿಷಯ "ಸ್ವಾತಂತ್ರ್ಯೋದ್ಯಮ ನಿರಾಧಾರ ಜೀವನ" ಇಂತಹ ವಿಷಯವನ್ನು ಹೃದಯಂಗಮವಾಗಿ ಮಾತನಾಡಲು ಸರಸ ವಾಕ್ಚತುರ ಕೃಷ್ಣಶರ್ಮನಿಗಲ್ಲದೆ ಮತ್ತೊಬ್ಬರಿಗೆ ಸಾಧ್ಯವಾಗಲಾರದು.

* * * *

ಸಾಹಿತ್ಯ ಸೃಷ್ಟಿಗೆ ಮೊದಲಾಯಿತು. ಪರ್ಣಕುಟಿಯೋ, ವರ್ಧಾಯಾತ್ರೆಯೋ, ಕುಲದೀಪಕರೋ, ದೀಪಮಾಲೆಯೋ, ಇನ್ನು ಸಾಕೇ ಯಾವದು ಹೆಚ್ಚು ಯಾವದು ಕಡಿಮೆ. ಒಂದನ್ನೊಂದು ಮೀರಿಸುತ್ತವೆ. ಮಹಾತ್ಮಗಾಂಧಿ, ವಿನೋಬಾಭಾವೆ ಸಾಹಿತ್ಯ

ಗಳ ಅನುವಾದಗಳೇ, ಸ್ವತಂತ್ರ ವಿಚಾರ ಶಕ್ತಿಯ ನಿರೂಪಿತ ಕೃತಿಗಳೇ, ಪುರಾಣ ಕಥನಗಳೇ ಇವೆಲ್ಲ ಏಕೆ ಮನುಷ್ಯರು ವಿಚಾರಶಕ್ತಿಯನ್ನು ದೀಪಿಸುವುದಕ್ಕೆ ಅವರನ್ನು ಮನುಷ್ಯರನ್ನಾಗಿ ಮಾಡುವುದಕ್ಕೆ. ಈ ಸಾಹಿತ್ಯಕೃಷಿ ಈ ಪಂಥ ಮಹಾ ಜನರು ನಡೆವ ಪಂಥ. ಆ ಸರಸೋಕ್ತಿ ಆ ವಚನವಿಲಾಸ ಕಾವ್ಯಶಕ್ತಿ ತಾನಾಗಿ ಒಲಿದು ವಿಧೇಯವಾಗಿ ಬಂದಿದೆ. ಅದನ್ನು ಓದಿ ತಿಳಿಯಬೇಕಲ್ಲದೆ ಬೇರೆ ವಿಧಾನವಿಲ್ಲ.

ವಿಶ್ವಕರ್ಣಾಟಕ ಪತ್ರಿಕೆಗೆ ಎಂದೂ ದುರವಸ್ಥೆಯೇ. ಕ್ಷಣ ಗಂಡಗಳೇ, ಅದರಲ್ಲಿ ಆ ಹೊಣೆಯನ್ನೆಲ್ಲ ಹೊತ್ತ ಸಂಪಾದಕರು ಒಂದೆರಡು ವರ್ಷ ಅನಾರೋಗ್ಯಕ್ಕೆ ಗುರಿಯಾದರು. ಋಣಬಾಧೆ ರೋಗಬಾಧೆ ಜೀವನವನ್ನು ಮುಕ್ಕಿತಿನ್ನುತ್ತಿದೆ. ಪತ್ರಿಕೆಯನ್ನು ನಡೆಸುವುದೇ ನಿಲ್ಲಿಸುವುದೇ ಇದು ಘೋರ ಸಮಸ್ಯೆಯಾಯಿತು, ಆ ಸಮಯಕ್ಕೆ 'ನಾನಿದ್ದೇನೆ' ಎಂದು ಆಪದ್ಬಂಧುವಾಗಿ ನಮ್ಮ ಕಿಟ್ಟಿ ಕೈಹಿಡಿಯದಿದ್ದರೆ ಪತ್ರಿಕೆಯ ಪಾಡೇನಾಗುತ್ತಿತ್ತೋ. ಅದನ್ನೊಂದು ಸುವ್ಯವಸ್ಥೆಗೆ ತರಲು ಆತನೆಷ್ಟು ಶ್ರಮಿಸಿದನೆಂಬುದನ್ನು ಯಾವ ಮಾತುಗಳಿಂದ ಹೇಳಬಹುದು ?

ಸ್ವಾತಂತ್ರ್ಯೋದ್ಯಮ ಬಹಳ ಚುರುಕಿನಿಂದ ರಭಸದಿಂದ ನಡೆಯುತ್ತಿದ್ದ ಕಾಲವದು. ಈ ಗೂಢಚಾರಿಯ ಮೇಲೆ ಮೈಸೂರು ಸರಕಾರ ಏನೋ ಸಂಶಯದಿಂದ ಒಳಗೊಳಗೇ ತನಿಖೆ ಮಾಡುತ್ತಾ ಆತ ಹೋದಲ್ಲಿ ಬಂದಲ್ಲಿ ಮಾತು-ಚರ್ಯೆಗಳನ್ನೆಲ್ಲಾ ಪರಿಶೀಲಿಸುತ್ತಿತ್ತು. ಇದು ನಮಗೆಲ್ಲಾ ಗೊತ್ತು. ಆದರೂ ಈ ತರುಣ ನಿರ್ಭೀತ. ಅಗತ್ಯವಾದಾಗ ವರ್ಧಾಯಾತ್ರೆ ನಡೆಯುತ್ತಲೇ ಇತ್ತು. ಯಾವುದೋ ಸಮಯವನ್ನು ಹೊಂಚುಹಾಕಿ ಶರ್ಮರಿಬ್ಬರ ಮೇಲೂ ಆಪಾದನೆಗಳನ್ನು ಸಿದ್ಧಮಾಡಿ ಒಂದು ದಿನ ರಾತ್ರಿ ದಸ್ತಗಿರಿಗಾಗಿ ವಾರೆಂಟನ್ನು ಕೈಲಿ ಹಿಡಿದು ನಾಲ್ಕು ಮಂದಿ ಪೋಲೀಸು ನೌಕರರು ಅವರ ವಾಹನವನ್ನು ದೂರದಲ್ಲಿ ನಿಲ್ಲಿಸಿ ಬಂದು ಬಾಗಿಲು ತಟ್ಟಿದರು. ತಿ.ತಾ. ಶರ್ಮರಿಗೆ ಈ ಸುಳಿವು ಮೊದಲೇ ತಿಳಿದಿದ್ದು, ನನಗೆ ಒಂದು ಪತ್ರವನ್ನು ಬರೆದಿಟ್ಟಿದ್ದರು. ವಿಷಯ ತಿಳಿದಿದ್ದರೂ ಎದ್ದು ಬಾಗಿಲು ತೆಗೆಯದೆ 'ಯಾರೋ ನಿದ್ರಾಕಂಟಕರು ಬಂದರು' ಅಂದ ಮಾತು ಆಗಂತುಕರ ಕಿವಿಗೂ ಬಿತ್ತು. ಅವರನ್ನು ಎರಡು ಮೂರು ಸಲ ಹಾಗೆಯೇ ಸತಾಯಿಸಿ ಕಡೆಗೆ ರಾತ್ರಿ ಒಂದು ಗಂಟೆಗೆ ಹಿರಿಯ ಶರ್ಮರನ್ನು ಅವರೊಂದಿಗೆ ಕಳುಹಿಸಿದ್ದಾಯಿತು. ಒಂದು ಗಂಟೆ ಬಿಟ್ಟು ಪುನಃ ಅವರ ಆಗಮನ. ಅಸಹನೆಯಿಂದ "ನಿಮ್ಮ ಕೆಲಸ ಆಗಲೇ ಆಯಿತಲ್ಲಾ. ಪುನಃ ಏತಕ್ಕೆ ಬಂದಿರಿ ?" ಎಂಬ ಪ್ರಶ್ನೆಗೆ ಅವರು "ಇಲ್ಲಿ ಸಿದ್ದವ್ವನಹಳ್ಳಿ ಕೃಷ್ಣಶರ್ಮ ಇದಾರಂತೆ. ಅವರು ಬೇಕಾಗಿದೆ" "ಅವರು ಇಲ್ಲಿಲ್ಲ. ಹೆಂಗಸರೇ ಇರುವ ಮನೆಗೆ ಹೀಗೆ ಅರ್ಧರಾತ್ರಿಯಲ್ಲಿ ಬರಬಹುದೇ ?" ಎಂದು ಅಧಿಕಾರ ಸ್ವರದಿಂದ ಅವರನ್ನು ತಡೆದದ್ದಾಯಿತು. ಇದು ಕೂಡ ಮೊದಲೇ ತಿಳಿದಿತ್ತಾಗಿ ಕೃಷ್ಣಶರ್ಮರನ್ನು ಹಿಂದಿನ ಭಾಗದಲ್ಲಿದ್ದ ಊಟದ ಮನೆಯಲ್ಲಿ ಮಲಗಲು ಹೇಳಿದ್ದೆ. ಬೆಳಗಿನವರೆಗೂ ಹಾಗೆಯೇ ಅವರನ್ನು ಸತಾಯಿಸಿದ್ದಾಯಿತು. ಕಡೆಗೆ ಕೃಷ್ಣಶರ್ಮನೇ "ಹೋಗಲಿ ಬಿಡಮ್ಮ ಹೇಗೂ ಇದು ತಪ್ಪಿದ್ದೇ

ಅಲ್ಲ” ಅಂದಮೇಲೆ ಕೈನೂಲಿನ ಹಾರವನ್ನು ಹಾಕಿ ಬೀಳ್ಕೊಟ್ಟಿದಾಯಿತು. ಹಿರಿಯ ಶರ್ಮರಿಗೇನೋ ಒಂದೆರಡು ವಾರಗಳಲ್ಲೇ ಬಿಡುಗಡೆಯಾಯಿತು. ಈ ಕಿರಿಯ ತುಂಟನ ಕಿಡಿಯನ್ನು ಮಾತ್ರ ತಿಂಗಳುಗಟ್ಟಲೆ ಹಿಡಿದಿಟ್ಟುಕೊಂಡರು. ಈ ಕಿಡಿಯ ಸಿಡಿತ ಪ್ರಬಲವಾದುದೆಂದು ಅವರಿಗೂ ಚೆನ್ನಾಗಿ ತಿಳಿದಿತ್ತು. [ತುಂಟರ ಕಿಡಿ ಇದು ಅನ್ವರ್ಥ ನಾಮಧೇಯ. ದೇಶೀಯ ವಿದ್ಯಾಶಾಲೆಯ ಪತ್ರಿಕೆಗೆ ಬರೆಯುತ್ತಿದ್ದ ಇನ್ನೂ ಕೆಲವು ಮುಖ್ಯ ಕಾರ್ಯಗಳಲ್ಲಿ ಪ್ರವೃತ್ತವಾಗಿದ್ದ ತುಂಟರ ಗುಂಪೊಂದು ಇಂತಹ ಕೆಲವು ನಾಮಧೇಯಗಳಿಂದ ಪ್ರಸಿದ್ಧವಾಗಿತ್ತು. ಕಿಟ್ಟು ತುಂಟರ ಕಿಡಿ. ಇನ್ನೊಬ್ಬ ಅಸಾಧ್ಯ ತುಂಟ ಅ. ನ. ಕೃಷ್ಣರಾಯ ತುಂಟರ ಕೊಳ್ಳಿ.] ನಿರ್ಬಂಧವಾಸ ಮುಗಿದು ಹೊರಗೆ ಬಂದ ಮೇಲೆ ಒಂದಕ್ಕೆ ನಾಲ್ಕರಷ್ಟು ಚಟುವಟಿಕೆಯಿಂದ ಈ ತುಂಟಕಿಡಿ ಕಾರ್ಯರಂಗವನ್ನು ಪ್ರವೇಶ ಮಾಡಿದನು.

ನಾವು ನಾಡನ್ನು ಕಟ್ಟಿದೆವು ಎಂದು ಹೆಮ್ಮೆಯ ಮಾತುಗಳನ್ನು ಕೆಲವರು ಆಡುತ್ತಾರೆ. ಆ ಉದ್ಧಾರ ಕರ್ತೃಗಳು ಯಾವುದರಿಂದ ಹೇಗೆ ಕಟ್ಟಿದರು:? ಇಟ್ಟಿಗೆ ಗಾರೆಗಳಿಂದಲೋ ಕಲ್ಲು ಸಿಮೆಂಟುಗಳಿಂದಲೋ? ಅದೆಷ್ಟು ಕಾಲ ನಿಂತೀತು? ಕನ್ನಡನಾಡಿನ ಭವಿಷ್ಯದ ಕನಸುಗಳನ್ನು ದಿನ ದಿನವೂ ಕಾಣುತ್ತಿದ್ದ ನಾಡದೇವಿಯ ವರ ಪುತ್ರರು ಕೆಲವರೇ. ಅದರಲ್ಲಿ ಮೊದಲಿನ ಸಾಲಿಗೆ ನಿಲ್ಲುವ ಧೀಮಂತ ಪುತ್ರ ನಮ್ಮ ಕೃಷ್ಣಶರ್ಮ; ಈತನು ಮುತ್ತಿನಂತಹ ಮಾತುಗಳಲ್ಲಿ ನಾಡ ತಾಯಿಗೆ ಪೂಜಾಮಂದಿರವನ್ನು ನಿರ್ಮಿಸಿದ್ದಾನೆ. ಆ ತಾಯಿ ಪ್ರೀತಿಯಿಂದ ಅಲ್ಲಿ ನೆಲಸಿದ್ದಾಳೆ. ಆ ತಾಯಿಯ ತಾಯಿ ಭಾರತಾಂಬೆಯು ಇದನ್ನು ಮೆಚ್ಚಿ ತಲೆದೂಗುತ್ತಿದ್ದಾಳೆ.

ಇಂತಹ ದೇಶಪ್ರೇಮಿಯನ್ನು, ಮಾನವ ಪ್ರೇಮಿಯನ್ನು, ಸಾಹಿತ್ಯ ಭಕ್ತನನ್ನು ತನ್ನ ಭೃತ್ಯರ ಭೃತ್ಯನನ್ನು ದಯಾಳುವಾದ ಜಗದೀಶ್ವರನು ಹೀಗೇಕೆ ವಿಪರೀತ ಪರೀಕ್ಷೆಗೆ ಗುರಿಮಾಡುತ್ತಿರುವನು? ಸಜ್ಜನರನ್ನು ಹೀಗೆ ದುಃಖಿತರನ್ನಾಗಿ ಮಾಡುವ ನಿನ್ನ ಈ ಪರೀಕ್ಷೆಯಿಂದ ನಿನಗಾಗುವ ಸಮಾಧಾನವೇನು, ಪ್ರಭುವೇ! ಇನ್ನಿದನ್ನು ಸಾಕು ಮಾಡು, ಕನಿಕರಿಸು, ನನ್ನ ಈ ತಮ್ಮನು ಅಸಾಧಾರಣ ಪ್ರತಿಭಾಸಂಪನ್ನನು. ಆತನಿಂದ ಸಲ್ಲಬಹುದಾದ ಜಗತ್ಸೇವೆಗೆ ಈ ವಿಧವಾದ ಆತಂಕಗಳು ಬರಬಾರದು. ಅದು ನಿನ್ನ ಮಹಿಮೆಗೇ ಕಳಂಕವಾದೀತು. ಲೋಕಹಿತವು ನಿನ್ನದೇ ಅಲ್ಲವೇ? ಅದಕ್ಕೆ ಸಮರ್ಥರಾದವರಿಗೆ ಪೂರ್ಣಾಯುರಾರೋಗ್ಯಗಳನ್ನು ನೀಡದಿದ್ದರೆ ಲೋಕಹಿತ ಕಾರ್ಯವು ಹೇಗೆ ಸಮರ್ಪಕವಾಗಿ ನಡೆದೀತು? ಈ ಒಂದು ಜೀವ ನೊಂದರೆ ಸಹಸ್ರ ಜೀವ ಶಕ್ತಿಗಳು ನಷ್ಟವಾದಂತೆಯೇ ಸರಿ. ಇದನ್ನು ಭಾವಿಸು. ಸಜ್ಜನರನೇಕರು ದುರ್ಜೀವಿಗಳೆಂದು ಕರೆಸಿಕೊಂಡರೆ ಅದು ನಿನ್ನ ಕೀರ್ತಿಯೇ? ಈ ಅಪವಾದದಿಂದ ಪಾರಾಗಬೇಕಾದರೆ ಮೊದಲು ನಿನ್ನ ಕೃಪಾಕಟಾಕ್ಷವನ್ನು ಇತ್ತ ಕಡೆ ತಿರುಗಿಸು,” ಎಂದು ನನ್ನ ತಮ್ಮನ ಶ್ರೇಯಸ್ಸಿಗಾಗಿ ಆ ದಯಾಮಯನಲ್ಲಿ ಮೊರೆಯಿಟ್ಟು ವಿರಮಿಸುತ್ತೇನೆ.

# ಕನ್ನಡದ ಕರ್ಮಯೋಗಿ ಕೃಷ್ಣಶರ್ಮರು

ನಾಡಿಗ ಕೃಷ್ಣಮೂರ್ತಿ

1942 ನೇ ಇಸವಿ!

ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಕಹಳೆ ಎಲ್ಲೆಡೆಯೂ ಮೊಳಗುತ್ತಿದ್ದ ಕಾಲ!!

ಆಗತಾನೇ ಉಪಾಧ್ಯಾಯರ ಕೆಲಸಕ್ಕೆ ರಾಜೀನಾಮೆ ಕೊಟ್ಟು ಸ್ವಾತಂತ್ರ್ಯ ಸಮರದಲ್ಲಿ ಯಾವುದಾದರೂ ಒಂದು ಕ್ಷೇತ್ರದಲ್ಲಿ ಭಾಗವಹಿಸಿ ಸೇವೆ ಸಲ್ಲಿಸಬೇಕೆಂಬ ಉತ್ಕಟೇಚ್ಛೆಯಿಂದ ಮೈಸೂರಿಗೆ ಬಂದೆ. ಬಂದವನೇ ಚಳುವಳಿಯಲ್ಲಿ ನೇರವಾಗಿ ಧುಮ್ಮಿಕ್ಕಿ ಸೆರೆಮನೆಗೆ ಸೇರಿದೆ.

ಮೈಸೂರು ಸೆರೆಮನೆಯಲ್ಲಿ ವಿದ್ಯಾರ್ಥಿಗಳ ಸಮೂಹವೇ ಸಮೂಹ. ಅದರಲ್ಲಿ ನಾನೊಬ್ಬ 'ಬಿ' ವರ್ಗದ ಖೈದಿ. ನನಗೆ ಪತ್ರಿಕೆಯನ್ನು ಸರಬರಾಜು ಮಾಡುತ್ತಿದ್ದರು. ಅದೊಂದು ವಿಶೇಷ.

ಒಂದು ದಿನ ಸೆರೆಮನೆಯಲ್ಲಿ ಸ್ನೇಹಿತರ ಯೋಜನೆಯೊಂದು ತಯಾರಾಯಿತು. ಸೆರೆಮನೆಯಲ್ಲೊಂದು ಪತ್ರಿಕೆಯೊಂದನ್ನು— ಕೈ ಬರಹದ ಪತ್ರಿಕೆ —ಹೊರಡಿಸಬೇಕೆಂದು.

ಆಗಿನ ವಿದ್ಯಾರ್ಥಿ ನಾಯಕರಲ್ಲೊಬ್ಬರಾಗಿದ್ದ ಶ್ರೀ ಹೆಚ್. ಕೆ. ಕುಮಾರಸ್ವಾಮಿ ಮತ್ತು ನಾನು ಆ ದಿನ ಪತ್ರಿಕೆಯ ಸಂಪಾದಕರೆಂದು ಘೋಷಿಸಿಕೊಂಡೆವು. ಜಿಲ್ಲಾಧಿಕಾರಿಗಳ ಮುಂದಲ್ಲ—ವಿದ್ಯಾರ್ಥಿ ಸಮೂಹದ ಮುಂದೆ.

ಪತ್ರಿಕೆಗೊಂದು ಹೆಸರು—ಗೋಕುಲ.

ಮೈಸೂರಿನ ಸೆರೆಮನೆ ನಮಗೆ ನಂದಗೋಕುಲವಾಗಿತ್ತು. ಬರೀ ವಿದ್ಯಾರ್ಥಿ ಬಂದಿಗಳು.

ಆದ್ದರಿಂದಲೇ ಪತ್ರಿಕೆಗೆ, "ಗೋಕುಲ" ವೆಂದು ನಾಮಕರಣವಾಯಿತು.

"ಸೆರೆಮನೆಯಲ್ಲಿ ಸುದ್ದಿ ಹೇಗೆ ಸಂಪಾದಿಸುತ್ತಿದ್ದಿರಿ?" ಎಂದು ಕೇಳುವಿರಲ್ಲವೇ?

ನನಗೆ ಬರುತ್ತಿದ್ದ "ಹಿಂದೂ" ಪತ್ರಿಕೆಯಲ್ಲಿ ಪ್ರಕಟವಾದ ಸ್ವಾತಂತ್ರ್ಯ ಸಮರದ ಸುದ್ದಿಗಳು, ಪ್ರತಿದಿನವೂ, ಸೆರೆಯಾಳಾಗಿ ಬರುತ್ತಿದ್ದ ಸ್ವಾತಂತ್ರ್ಯ ಯೋಧರು ಕೊಡುತ್ತಿದ್ದ ಮಾಹಿತಿಗಳು, ಸೆರೆಮನೆಯ ಗಾರ್ಡುಗಳ ಸಹಾಯದಿಂದಲೇ ಒಳಗೆ

ಬರುತ್ತಿದ್ದ "ವಿಶ್ವ ಕರ್ನಾಟಕ" ಪತ್ರಿಕೆಯ ಸುದ್ದಿಗಳು; ಮತ್ತು ಇನ್ನು ಇತರ ಮೂಲಗಳು. "ವಿಶ್ವಕರ್ನಾಟಕ"ದ ಸಂಪಾದಕರ ಲೇಖನಗಳು, ಸುದ್ದಿಗಳು ನಮ್ಮ ಪತ್ರಿಕೆಯಲ್ಲಿ ಮರು ಪ್ರಕಟವಾಗುತ್ತಿದ್ದವು.

ಆಗಿನ "ವಿಶ್ವ ಕರ್ನಾಟಕ"ದ ಸಂಪಾದಕರು, ಸಿದ್ದವ್ವನಹಳ್ಳಿ ಕೃಷ್ಣಶರ್ಮರು.

ಅವರನ್ನೇ ನಾವು ಕರೆಯುವುದು, "ಅಣ್ಣ ಕೃಷ್ಣಶರ್ಮರು"ಎಂದು.

ಅವರು ಸಂಪಾದಿಸುತ್ತಿದ್ದ "ವಿಶ್ವ ಕರ್ನಾಟಕ"ವನ್ನು ಓದುತ್ತಾ ಅವರ ಭಾಷೆಗೆ, ಅವರ ಮೋಹಕ ಶೈಲಿಗೆ ನಾನು ಮಾರುಹೋದೆ. ಅಂದೇ ನಾನು ನಿರ್ಧಾರ ಮಾಡಿದೆ—ಅವರೇ ನನಗೆ ಪತ್ರಿಕೋದ್ಯಮದ ಗುರುಗಳೆಂದು—ಅದು ಇಂದಿಗೂ ನಿಜ.

ನಮ್ಮ "ಗೋಕುಲ" ಮೂರು ತಿಂಗಳು ನಡೆಯಿತು. ನಾನು ಮತ್ತು ಕುಮಾರ ಸ್ವಾಮಿ ಸೆರೆಮನೆಯಿಂದ ಬಿಡುಗಡೆಯಾಗಿ ಬಂದಮೇಲೆ ಅದು ನಿಂತುಹೋಯಿತು. ಆವೇಳೆಗಾಗಲೇ ವಿದ್ಯಾರ್ಥಿಗಳ ಸಮೂಹವೂ ಅಲ್ಲಿಂದ ಕರಗಿಹೋಗಿತ್ತು.

"ಗೋಕುಲ" ನಮಗೆ ಕೊಟ್ಟ ಸ್ಫೂರ್ತಿ "ವಿಶ್ವಕರ್ನಾಟಕದ್ದು"-ಅದರ ಸಂಪಾದಕರಾಗಿದ್ದ ಅಣ್ಣ ಕೃಷ್ಣಶರ್ಮರದ್ದು. ಅವರ ಮೊನಚಾದ ಭಾಷೆ, ತಿಳಿಯಾದ ಸುದ್ದಿ, ಬಿರುಸಾದ ಸಂಪಾದಕೀಯ, ನಾವು ಓದುತ್ತಾ, ಓದುತ್ತಾ ಇದ್ದ ಹಾಗೆ ನಮ್ಮ ಮೈನವಿರೇಳುತ್ತಿದ್ದವು. ಅನೇಕ ವೇಳೆ "ಗೋಕುಲ" ದಲ್ಲಿ ಅವನ್ನು ಪುನಃ ಬರೆಯುತ್ತಿದ್ದೆವು, ಗೆಳೆಯ ವಿದ್ಯಾರ್ಥಿಗಳ ಅವಗಾಹನೆಗಾಗಿ.

ಗೋಕುಲ—ನನಗೆ ಸ್ಫೂರ್ತಿಯನ್ನು ಕೊಟ್ಟಿತು, ಪತ್ರಿಕೋದ್ಯಮ ಕ್ಷೇತ್ರಕ್ಕಿಳಿಯಲು. ಆಗಲೇ ನಾನು ನಿರ್ಧಾರ ಕೈಗೊಂಡೆ. ಸೆರೆಮನೆಯಿಂದ ಬಿಡುಗಡೆಯಾದ ತಕ್ಷಣ, ಬೆಂಗಳೂರಿನ "ವಿಶ್ವ ಕರ್ನಾಟಕ" ಕಚೇರಿಗೆ ಹೋಗಿ ಸಂಪಾದಕರಾದ ಶ್ರೀ ಕೃಷ್ಣಶರ್ಮರಲ್ಲಿ ಪತ್ರಿಕಾವೃತ್ತಿಯ ಮೊದಲ ಪಾಠಗಳನ್ನು ಕಲಿಯಬೇಕೆಂದು ತೀರ್ಮಾನಿಸಿದೆ.

* * * *

ಆದರೆ ನಾನು ಹಣ ಸಂಪಾದಿಸಬೇಕಾಗಿತ್ತು. ನಮ್ಮಣ್ಣ ಸಖತ್ ಖಾಹಿಲೆ ಬಿದ್ದು ಆಸ್ಪತ್ರೆ ಸೇರಿದ್ದರು. ಅವರ ಶುಶ್ರೂಷೆ ಭಾರವನ್ನು ನನ್ನ ಮುಪ್ಪಿನ ತಂದೆ ತಾಯಿ ವಹಿಸಿದ್ದರೂ ಅವರಿಗೆ ಬೆಂಬಲವಾಗಿ ನಾನು ಅವರ ಹಿಂದೆ ಇರಬೇಕಾಗಿತ್ತು.

ಚಿಂತಾಮಣಿ ಹೈಸ್ಕೂಲಿನಲ್ಲಿ ಉಪಾಧ್ಯಾಯನಾಗಿ ಕೆಲಕ್ಕೆ ಸೇರಿದೆ. ನಾನು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಮೈಸೂರಿಗೆ ಬಂದಾಗ ಚಿಕ್ಕಮಗಳೂರು ಹೈಸ್ಕೂಲಿನಲ್ಲಿ ಕೆಲಸಕ್ಕೆ ಸೇರಿದ್ದು; ರಾಜಿನಾಮೆ ಕೊಟ್ಟು ಬಂದಿದ್ದೆ. ಆದ್ದರಿಂದ ಸರ್ಕಾರ ನನ್ನ ಮೇಲೆ ಒಂದು ನಿರ್ಬಂಧಹಾಕಿತ್ತು. ನನಗೆ ಸರ್ಕಾರಿ ಶಾಲೆಗಳಲ್ಲಿ ಉಪಾಧ್ಯಾಯರ ಕೆಲಸ ಕೊಡಬಾರದೆಂದು. ಚಿಕ್ಕಮಗಳೂರು ವಿಭಾಗದ ಡಿ.ಡಿ.ಪಿ.ಐ. ಆಗಿದ್ದವರು ನಾನು ಚಿಂತಾಮಣಿ ಹೈಸ್ಕೂಲಿನಲ್ಲಿ ಕೆಲಸಮಾಡುತ್ತಿದ್ದಾಗ, ಆ ವಿಭಾಗದ

ಡಿ. ಡಿ. ಪಿ. ಐ. ಆಗಿ ಚಿಂತಾಮಣಿ ಹೈಸ್ಕೂಲಿಗೆ ಪರೀಕ್ಷೆಗಾಗಿ ಬಂದಿದ್ದರು. ಬಂದಿದ್ದವರೇ ನನ್ನನ್ನು ನೋಡಿದರು. ಕಿಡಿ ಕಿಡಿಯಾದರು. ನನಗೆ ಹೇಗೆ ಕೆಲಸ ಕೊಟ್ಟರೆಂದು ಅಲ್ಲಿಯ ಹೆಡ್ಮಾಸ್ಟರವರ ಮೇಲೆ ರೇಗಾಡಿದರು.

ಸಂಜೆ ನನಗೆ ವಜಾ ಆಜ್ಞೆ ತಲಪುವ ವೇಳೆಗೆ ನನ್ನ ರಾಜೀನಾಮೆ ಪತ್ರ ಹೆಡ್ಮಾಸ್ಟರ ಕೈಯಲ್ಲಿತ್ತು. ಬಿಟ್ಟೆ ಗಾಡಿ ಚಿಂತಾಮಣಿಯಿಂದ, ಚಿಂತಾಮಣಿ ಪಾತ್ರೆ ಕೈಯ್ಯಲ್ಲಿ ಹಿಡಿದುಕೊಂಡು.

* * * *

"ನಮಸ್ಕಾರ"

"ನಮಸ್ಕಾರ, ಬನ್ನಿ, ಕುಳಿತುಕೊಳ್ಳಿ. ನೀವು ಯಾರು?"

"ನನ್ನ ಹೆಸರು ನಾಡಿಗ ಕೃಷ್ಣಮೂರ್ತಿ"

"ಓಹೋ! ನೀವೆಯೋ ಮೈಸೂರಿನ ಗಲಾಟೆಯ ವಿದ್ಯಾರ್ಥಿ. ಹೇಗೆ ತಪ್ಪಿಸಿಕೊಂಡಿದ್ದೀರಿ ಪೋಲಿಸಿನವರ ಕಣ್ಣಿನಿಂದ?"

"ನಾನೀಗ ರಾಜರೋಷ ಓಡಾಡುತ್ತಿದ್ದೇನೆ. ಚಿಂತಾಮಣಿ ಹೈಸ್ಕೂಲಿನಲ್ಲಿ ಐದು ತಿಂಗಳು ಉಪಾಧ್ಯಾಯನಾಗಿದ್ದೆ, ಅಲ್ಲಿಂದ ಈಗತಾನೆ 'ಡಿಸ್‌ಮಿಸ್' ಆಗಿ ಬಂದಿದ್ದೇನೆ."

"ಕಾರಣ"

"ಗೊತ್ತೇ ಇದೆಯಲ್ಲಾ? ನನಗೆ ಸರ್ಕಾರಿ ಕೆಲಸ ಕೊಡಕೂಡದೆಂದು ಆಜ್ಞೆಯಾಗಿದೆಯಂತೆ."

"ಅದು ಮುನಿಸಿಪಲ್ ಹೈಸ್ಕೂಲ್ ಅಲ್ವೆ?"

"ಹಾಗೆಂದೇ ನಾನು ಹೋಗಿದ್ದೆ"

"ಅಲ್ಲೇ ಚಳುವಳಿ ಪ್ರಾರಂಭಿಸಿದರೇನೋ?"

"ಹಾಗೇನಿಲ್ಲ. ಪಾಠಮಾಡುವಾಗ ಮಾತ್ರ ರಾಷ್ಟ್ರ ನಾಯಕರ ಚರಿತ್ರೆ ಹೇಳುತ್ತಿದ್ದೆ. ಆದರೆ ಆ ಡಿ. ಡಿ. ಪಿ. ಐ. ಕಣ್ಣಿಗೆ ಬಿದ್ದುಬಿಟ್ಟೆ."

"ಹೋಗಲಿ ಬಿಡಿ. ನೀವು ಹೇಗೂ ಪತ್ರಿಕೆಯಲ್ಲಿ ಕೆಲಸಮಾಡಬೇಕೆಂದು ಆಸೆ ವ್ಯಕ್ತಪಡಿಸಿದ್ದೀರಲ್ಲಾ. ಇಲ್ಲೇ ಇದ್ದುಬಿಡಿ. ಊಟ, ಬಟ್ಟೆ ಮತ್ತು ರೂಮು ಬಾಡಿಗೆ ಆಗುವಷ್ಟು ಹಣ ಕೊಡಿಸ್ತೇನೆ."

"ರೋಗಿ ಬಯಸಿದ್ದು ಹಾಲೂ ಅನ್ನ, ವೈದ್ಯ ಹೇಳಿದ್ದೂ ಅದೇ."

ರೋಗಿ ನಾನೇ.

ಆದರೆ, ವೈದ್ಯ ಯಾರು ಗೊತ್ತೇ? ಯಾರಿರಬಹುದು ಹೇಳಿ ನೋಡೋಣ. ಚಿಕ್ಕಪೇಟೆ, ಬಳೇಪೇಟೆ ಸಂಧಿಸುವ ಮೂಲೆಯಲ್ಲಿ ಸುಪ್ರಸಿದ್ಧ ಉಡುಪಿ ಬ್ರಾಹ್ಮಣರ

ಹೋಟೆಲ್ಲೊಂದಿದೆ. ಅದರ ಹಿಂಭಾಗದಲ್ಲಿ ಅಷ್ಟೇನೂ ಆಕರ್ಷಕವಲ್ಲದ ಹುಡಿಯ ಮನೆಯೊಂದರಲ್ಲಿ ಒಂದು ಪತ್ರಿಕೆಯ ಕಾರ್ಯಾಲಯ. ಕರ್ನಾಟಕದ ಮೂಲೆ ಮೂಲೆಗಳಲ್ಲೂ ಸ್ವಾತಂತ್ರ್ಯದ ಕಹಳೆಯನ್ನೂದಿ ಜನಸಾಮಾನ್ಯರಲ್ಲಿ ಸುದ್ದಿಯನ್ನು ಹರಡುತ್ತಿದ್ದ, ಖ್ಯಾತ ಬರಹಗಾರ, ದಕ್ಷ ಸಂಪಾದಕ ಶ್ರೀ ತಿರುಮಲೆ ತಾತಾಚಾರ್ಯ ಶರ್ಮರು, ಸ್ಥಾಪಿಸಿ ಪ್ರಸಿದ್ಧಿಗೆ ತಂದ "ವಿಶ್ವಕರ್ನಾಟಕ" ಪತ್ರಿಕೆ ಅದು.

ಆ ಪತ್ರಿಕೆಯ ಸಂಪಾದಕರೇ ನನ್ನನ್ನು ಸ್ವಾಗತಿಸಿ, ಪತ್ರಿಕಾಲಯದಲ್ಲಿ ಕೆಲಸ ಮಾಡೆಂದು ಆಮಂತ್ರಣ ಕೊಟ್ಟರು.

ಬಿಳಿಯ ಶುಭ್ರವಾದ ಖಾದಿ ದಟ್ಟಿ ಪಂಚೆ, ಬಿಳಿಯ ಜುಬ್ಬಾ. ಆಕರ್ಷವಾದ ಹೊಳೆಯುವ ಕಣ್ಣುಗಳು. ಮಾಟವಾದ ದೇಹ ಕಂಚಿನ ಕಂಠ, ಮೃದುವಾದ ಮಾತು. ಅಂತಃಕರ್ಣಪೂರ್ವಕವಾದ ಉತ್ತೇಜನ ಕೊಡುವ, ಯುವಕರನ್ನು ಸ್ಫೂರ್ತಿಗೊಳಿಸುವ, ನಿರ್ಮಲ ಹೃದಯ. ವ್ಯಕ್ತಿಯನ್ನು ನೋಡಿದ ಕೂಡಲೇ ಆಕರ್ಷಣಗೊಳ್ಳುವಂತಹ ಮೋಹದ ಮೋಡಿ.

ನಾನು ಅವರನ್ನು ನೋಡಿದ ತಕ್ಷಣವೇ ಅವರಿಗೆ ನಾನು ಮಾರುಹೋದೆ.

ಅವರೇ ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರು. ಅಂದಿನಿಂದಲೇ ನಾನವರನ್ನು "ಅಣ್ಣ ಕೃಷ್ಣಶರ್ಮ"ರೆಂದು ಸಂಬೋಧಿಸತೊಡಗಿದೆ. ನನಗಾದಂತೆ ನೂರಾರು ಯುವಕರಿಗೆ "ಅಣ್ಣ"ನಾಗಿ ಮಾರ್ಗದರ್ಶನ ಮಾಡಿದ್ದಾರೆ.

* * * *

"ನೀವು ಭಾಷಾಂತರವನ್ನೂ ಮಾಡಬೇಕು. ಸ್ಥಳೀಯ ಸುದ್ಧಿಗಳಿಗೆ ತಲೆಬರಹವನ್ನೂ ಕೊಡಬೇಕು. ಸಾಧ್ಯವಾದಾಗ ಸ್ವತಂತ್ರವಾದ ಲೇಖನ ಬರೆಯಬೇಕು." ಇದು ಅಣ್ಣ ಶರ್ಮರು ನನಗೆ ನನ್ನ ಕೆಲಸದ ಎರಡನೆಯ ದಿನ ನನಗಿತ್ತ ಸೂಚನೆ.

ಇತರ ಗೆಳೆಯರೊಂದಿಗೆ ಸೇರಿಕೊಂಡು ಭಾಷಾಂತರ ಮಾಡುವುದನ್ನು ಕಲಿತೆ. ಶರ್ಮರ ಕೈಗೆ ನಮ್ಮ ಭಾಷಾಂತರ ಸಿಕ್ಕಾಗ ಅದು ಅನೇಕ ಕಡೆ ಮಾರ್ಪಾಡಾಗುತ್ತಿತ್ತು. ಅವರ ಮೊನಚಾದ ಭಾಷೆ, ಅಗತ್ಯವಿಲ್ಲದ ಶಬ್ದಗಳನ್ನು ತೆಗೆದುಹಾಕುವಿಕೆ, ಮಿತ ಶಬ್ದಗಳ ಉಪಯೋಗ, ಚಿಕ್ಕ ಚಿಕ್ಕ ವಾಕ್ಯಗಳು, ಪ್ರಭಾವಶಾಲಿಯಾದ ಪದಗಳು, ಅರ್ಥಗರ್ಭಿತವಾದ ಅವರ ವಾಕ್ಯವೃಂದಗಳು, ನಮಗೆ ಪ್ರತಿ ದಿನವೂ ಒಂದೊಂದು ಪಾಠ. ಮನಸ್ಸು ನೋಯಿಸದೆ ಅಕ್ಕರೆಯಿಂದ ನಮ್ಮ ತಪ್ಪುಗಳನ್ನು ತಿದ್ದುತ್ತಿದ್ದ ಅವರ ಮಾರ್ಗದರ್ಶನ ತುಂಬಾ ಫಲಕಾರಿಯಾಗಿತ್ತು.

ಶರ್ಮರು ಯುವಕರಿಗೆ ಉತ್ತೇಜನ ಕೊಡುವುದರಲ್ಲಿ ಮುಂದು. ತಿದ್ದಿದ ಬರವಣಿಗೆಯನ್ನು ಅಚ್ಚುಮಾಡಿ, "ಭಲೆ" ಅನ್ನುತ್ತಿದ್ದರು.

ಒಂದು ಸಲ:

ನಾನು ವಯಸ್ಕರ ಶಿಕ್ಷಣ ಪದ್ಧತಿಯಮೇಲೆ ಒಂದು ಚಿಕ್ಕ ಲೇಖನವನ್ನು ಬರೆದು ಒಪ್ಪಿಸಿದೆ. ಅವರದನ್ನು ಓದಿದರು.

"ಇದು ನನ್ನಲ್ಲೇ ಇರಲಿ, ಹೋಗು" ಎಂದರು.

ಏನನ್ನುವರೋ ಎಂಬ ಭಯ.

ಬೆಳಿಗ್ಗೆ ಎದ್ದು "ವಿಶ್ವ ಕರ್ನಾಟಕ" ಪತ್ರಿಕೆಯನ್ನು ತಿರುವಿ ಹಾಕಿದೆ. ಪತ್ರಿಕೆಯ "ಅಗ್ರಲೇಖನ"ವೇ ನನ್ನ ಚಿಕ್ಕ ಲೇಖನವಾಗಿತ್ತು. ಒಂದೆರಡು ಕಡೆ ಬದಲಾಯಿಸಿ ನನ್ನ ಲೇಖನವನ್ನೇ, ಸಂಪಾದಕೀಯ ಲೇಖನವನ್ನಾಗಿ ಮಾರ್ಪಡಿಸಿ, ಅಚ್ಚು ಮಾಡಿದ್ದರು.

ಬೆಳಿಗ್ಗೆ ಬಂದವರೇ ನನಗೆ ಹೇಳಿ ಕಳುಹಿಸಿದ್ದರು. "ನಿಮ್ಮ ಲೇಖನ ಚೆನ್ನಾಗಿತ್ತು. ಹಾಗೆಯೇ ಬರೆಯಬೇಕು."

ನನ್ನ ಲೇಖನ ಅಗ್ರ ಲೇಖನವಾಗಿ ಬಂದ ದಿನ ನಾ ಮರೆಯಲಾರೆ. ಅಣ್ಣ ಕೃಷ್ಣ ಶರ್ಮರು ಅಂದು ನನಗೆ ಕೊಟ್ಟ ಸ್ಫೂರ್ತಿ, ಇಂದಿಗೂ ದಾರಿದೀಪವಾಗಿದೆ. ಅದೇ ನನ್ನ ಜೀವನದ ನಂದಾದೀಪವೂ ಆಯಿತು. ಅಂದೇ ನಾನು ಪ್ರತಿಜ್ಞೆ ಮಾಡಿದೆ ನಾನು ಪತ್ರಿಕೋದ್ಯಮಿಯಾಗಬೇಕೆಂದು. ಕಾರಣರು ಶ್ರೀ ಕೃಷ್ಣಶರ್ಮರು.

* * * *

"ವಿಶ್ವಕರ್ನಾಟಕ"ದಲ್ಲಿ ಶ್ರೀ ಸಿದ್ದವನಹಳ್ಳಿಯವರ ನೇತೃತ್ವದಲ್ಲಿ ನಡೆದ ನನ್ನ ಶಿಷ್ಯವೃತ್ತಿ ನೂರು ದಿನಗಳನ್ನೂ ಮುಟ್ಟಲಿಲ್ಲ. ನಮ್ಮಣ್ಣನವರು ಖಾಹಿಲೆ ಬಿದ್ದರು. ಅವರ ಶುಶ್ರೂಷೆಗಾಗಿ ನಾನು ಪತ್ರಿಕಾ ಕಚೇರಿಯಿಂದ ಹೊರಬೀಳಬೇಕಾಯಿತು.

ಒಂದು ದಿನ ಬೆಳಿಗ್ಗೆ :

"ನಾನು ಊರಿಗೆ ಹೋಗಬೇಕು."

"ಏಕೆ ?"

"ನಮ್ಮಣ್ಣನಿಗೆ ಖಾಹಿಲೆ, ಅವರ ಆರೈಕೆಗಾಗಿ."

"ಸರಿ. ಆದರೆ ನಿಮ್ಮ ಕೆಲಸ? ಗುರಿ ?"

"ಸಾಧ್ಯವಾದರೆ ಗುರಿಮುಟ್ಟುತ್ತೇನೆ"

"ಆಗಲಿ, ಹೋಗಿ ಬನ್ನಿ. ಆಗಾಗ್ಗೆ ವಿಶ್ವಕರ್ನಾಟಕಕ್ಕೆ ಲೇಖನ ಬರೆಯುತ್ತಿರಿ" ಎಂದರು. ಆಗಲೂ ಅವರದು ಅದೇ ಉತ್ತೇಜನ, ಅದೇ ಆತ್ಮೀಯತೆ, ಅದೇ ಮಮತೆ.

* * * *

ನಮ್ಮಣ್ಣನವರನ್ನು ಮೈಸೂರಿನ ಆರೋಗ್ಯಧಾಮಕ್ಕೆ ಸೇರಿಸಿ, ಅವರ ಆರೈಕೆಗಾಗಿ ಮೈಸೂರಲ್ಲಿ ನಿಂತೆ. ಕೆಲಸಕ್ಕಾಗಿ ತಡಕಾಡಿ, ಒಂಟಿಕೊಪ್ಪಲಿನ ಮಹಾಜನ ಹೈಸ್ಕೂಲಿನಲ್ಲಿ ಉಪಾಧ್ಯಾಯನಾದೆ.

ವಿದ್ಯಾರ್ಥಿಗಳನ್ನು ಒಟ್ಟಿಗೆ ಸೇರಿಸಿ, ಒಂದು ದಿನ ಗಾಂಧೀಜಿಯ ಬಗ್ಗೆ ಉಪನ್ಯಾಸ ಕೊಟ್ಟೆ. ಗಾಂಧೀಜಿಯ ಬಗ್ಗೆ ತಮಗೆ ತಿಳಿದುದನ್ನು ಒಂದು ಘಂಟೆಯ ಅವಧಿಯಲ್ಲಿ ಬರೆಯಬೇಕೆಂದು ಕೇಳಿಕೊಂಡೆ. ಸುಮಾರು ವಿದ್ಯಾರ್ಥಿಗಳು ಬರೆದರು. ಉತ್ತಮ ಲೇಖನಗಳನ್ನು ಆಯ್ದುಕೊಂಡು, 'ಬಾಪೂಜಿ' ಎಂದು ಸಂಕಲನವೊಂದನ್ನು ತಂದೆ.

ಈ ಪುಸ್ತಕದ ಬಿಡುಗಡೆ–ಕೃಷ್ಣಶರ್ಮರೇ ಯೋಗ್ಯರು. 'ಪರ್ಧಾಯಾತ್ರೆ' ಯನ್ನು ಮಾಡಿ 'ಪರ್ಣಕುಟಿ'ಯ ಯೋಗಿಯನ್ನು ಕಂಡ ಕೃಷ್ಣಶರ್ಮರೇ ತಕ್ಕವರೆಂದು ಅವರಿಗೆ ಆಹ್ವಾನವನ್ನಿತ್ತೆ.

"ಮೈಸೂರಿಗೆ ಬಂದು ವಿದ್ಯಾರ್ಥಿಗಳನ್ನು ಹರಸಿ" ಎಂದು. ವಿದ್ಯಾರ್ಥಿ ಪ್ರೇಮಿ ಶರ್ಮರು ತಕ್ಷಣವೇ ನನ್ನ ಆಹ್ವಾನವನ್ನು ಸ್ವೀಕರಿಸಿ ಮೈಸೂರಿಗೆ ಬಂದು, ಮಹಾಜನ ಹೈಸ್ಕೂಲಿನ ಸಾಹಿತ್ಯ ಸಂಘದಲ್ಲಿ 'ಬಾಪೂಜಿ' ಯನ್ನು ಬಿಡುಗಡೆ ಮಾಡಿ, ಎಳೆಯರನ್ನು ಪರ್ಧಾಯಾತ್ರೆ ಮಾಡಿಸಿದರು. ಅವರ ಭಾಷಣವನ್ನು ಕೇಳಿ ಪ್ರಭಾವಿತರಾದ ನನ್ನ ವಿದ್ಯಾರ್ಥಿಯಾಗಿದ್ದ, ಈಗ ಶಾರದಾವಿಲಾಸ ಕಾಲೇಜಿನಲ್ಲಿ ಅಧ್ಯಾಪಕರಾಗಿರುವ ಗಾಂಧೀವಾದಿ ಶ್ರೀ ಬಿ. ಆರ್. ಪ್ರಾಣೇಶರಾವ್ ಹೇಳುತ್ತಾರೆ:

> "ನಮ್ಮ ಸಾಹಿತ್ಯ ಸಂಘದಲ್ಲಿ ಶ್ರೀ ಕೃಷ್ಣಶರ್ಮರ ಭಾಷಣವನ್ನು ನಾನು ಕೇಳಿದಮೇಲೆ, ಗಾಂಧೀಜಿಯಲ್ಲಿ ತುಂಬಾ ಭಕ್ತಿಪರವಶನಾದೆ. ಅವರ ತತ್ವಗಳನ್ನು ಕಿಂಚಿತ್ತಾದರೂ ಪಾಲಿಸಲೇಬೇಕೆಂದು, ಪಣತೊಟ್ಟೆ. ಕಸ್ತೂರಿಬಾ ಬಗ್ಗೆ ಅವರು ವರ್ಣಿಸಿದ ಚಿತ್ರ ಇನ್ನೂ ನನ್ನ ಕಣ್ಣಿಗೆ ಕಟ್ಟಿದಂತೆ ಇದೆ. ಶರ್ಮರ ಭಾಷಣ ಈಗಲೂ ನನ್ನ ಸ್ಮೃತಿಪಥದಲ್ಲಿದೆ. ಆ ಭಾಷಣ ಬೀರಿದಷ್ಟು ಇನ್ನಾವ ಭಾಷಣವಾಗಲಿ, ಅಥವಾ ಪುಸ್ತಕವಾಗಲಿ, ನನ್ನ ಮೇಲೆ ಪ್ರಭಾವ ಬೀರಲಿಲ್ಲ."

ಶರ್ಮರು ಮೈಸೂರಿಗೆ ಬಂದಾಗ ಒಂಟಿಕೊಪ್ಪಲಿನ ಗಾನ ಕಲಾಮಂದಿರದ ಹಿಂದೆ ಇದ್ದ ನನ್ನ ಮನೆಯಲ್ಲೇ ಬಿಡಾರ ಮಾಡಿದ್ದರು. ಅವತ್ತು ನಮ್ಮಲ್ಲೇ ಊಟ. ನಮ್ಮ ತಾಯಿ ಮಾಡಿದ ಸೌತೆಕಾಯಿ ಹುಳಿ ರುಚಿ, ಅವರು ಆಗಾಗ್ಗೆ ನೆನಪು ಮಾಡಿಕೊಳ್ಳುತ್ತಿದ್ದರು.

ಸರಳ ಸ್ವಭಾವದ, ಆತ್ಮೀಯರಾದ ಶ್ರೀ ಶರ್ಮರು ತಮ್ಮ ಸಂಭಾಷಣಾಕಲೆಯಲ್ಲಿ ಎಂಥವರನ್ನೂ ಮರಳುಗೊಳಿಸಬಲ್ಲರು. ತಮ್ಮ ವಾದದೆಡೆ ವಿರೋಧಿಗಳನ್ನು ಸೆಳೆದುಕೊಳ್ಳುವ ವಿಶೇಷ ಗುಣ ಅವರಲ್ಲಿದೆ. ರಾಜರನ್ನು, ನವಾಬರನ್ನು, ಮಂತ್ರಿಗಳನ್ನು ಅತಿ ಹತ್ತಿರದಲ್ಲಿ ಸ್ನೇಹಿತರನ್ನಾಗಿಸಿಕೊಂಡ ಶರ್ಮರಿಗೆ, ಅವರ ಗೆಳೆಯರು, ಶಿಷ್ಯರು ಮತ್ತು ಇತರರು ಎಂದೂ ದೂರವಾಗಿರಲಿಲ್ಲ.

* * * *

ಪತ್ರಿಕೋದ್ಯಮವನ್ನೇ ಜೀವನದ ಮುಖ್ಯವೃತ್ತಿಯನ್ನಾಗಿ ಅವಲಂಬಿಸ ಬೇಕೆಂದು ಕೃಷ್ಣಶರ್ಮರಿಂದ ದೀಕ್ಷೆಪಡೆದ ನಾನು ಸುವ್ಯವಸ್ಥಿತವಾಗಿ ಪತ್ರಿಕೋದ್ಯಮ ಶಿಕ್ಷಣವನ್ನು ಕಲಿಯಬೇಕೆಂದು ಇಚ್ಛೆಪಟ್ಟೆ. ಅಮೇರಿಕೆಯಲ್ಲಿ ಪತ್ರಿಕೋದ್ಯಮ ಶಿಕ್ಷಣವನ್ನು ಶಾಲೆಕಾಲೇಜುಗಳಲ್ಲಿ ಕಲಿಸುವರೆಂದು ತಿಳಿದ ನಾನು ಅಮೇರಿಕೆಗೆ ಹೋಗಬೇಕೆಂದು ಹವಣಿಸತೊಡಗಿದೆ.

1945ನೇ ಇಸವಿ ಜನವರಿ.

ಬೆಂಗಳೂರಿಗೆ ಬಂದು ಕೃಷ್ಣಶರ್ಮರನ್ನು ಕಂಡೆ.

ನಾನು ಮನಸ್ಸಿನಲ್ಲಿ ಮಾಡಿದ ಕನಸನ್ನು, ಕಂಡ ಚಿತ್ರವನ್ನೆಲ್ಲಾ ಅವರಿಗೆ ತಿಳಿಸಿದೆ.

ಅವರು ಒಂದು ದೊಡ್ಡ ನಿಟ್ಟುಸಿರುಬಿಟ್ಟರು.

"ನಿನ್ನ ಕೈಲಿ ಇದು ಸಾಧ್ಯವೇ ?" ಎಂದರು.

"ಪ್ರಯತ್ನ ಮಾಡುತ್ತೇನೆ" ಎಂದೆ.

"ಅಸ್ತು" ಎಂದರು. ಶುಭವನ್ನು ಹಾರೈಸಿ ನನ್ನನ್ನು ಬೀಳ್ಕೊಡುವಾಗ ಒಂದು ಮಾತು ಹೇಳಿದರು.

"ಕೃಷ್ಣಮೂರ್ತಿ, ಈಗಿನ ಕಾಲದಲ್ಲಿ ಹತ್ತು ಸಾವಿರ ರೂಪಾಯಿ ಸಂಗ್ರಹಿಸು ವುದು ತುಂಬಾ ಕಷ್ಟ. ಅದರಲ್ಲೂ ನಿನ್ನ ಪರಿಸ್ಥಿತಿಯಲ್ಲಿ ? ಯೋಚನೆ ಮಾಡು" ಎಂದರು.

ಯೋಚನೆ ಮಾಡಿದೆ. ಹತ್ತು ಸಾವಿರ ಸಂಗ್ರಹಿಸಲೇಬೇಕೆಂದು ನಿರ್ಧರಿಸಿದೆ. ಮೂರು ತಿಂಗಳಲ್ಲಿ ರಾಷ್ಟ್ರನಾಯಕರ ಚಿಕ್ಕ ಚಿಕ್ಕ ಹತ್ತು ಜೀವನ ಚರಿತ್ರೆಗಳನ್ನು ಬರೆದು ಖುದ್ದಾಗಿ, ರೈಲುಗಳಲ್ಲಿ, ಬಸ್ಸುಗಳಲ್ಲಿ, ಮನೆಮನೆಗೆ ಹೋಗಿ ಮಾರಾಟಮಾಡಿ ಮೂರು ಸಾವಿರ ಸಂಗ್ರಹಿಸಿದೆ.

ಬೊಂಬಾಯಿನಿಂದ ವಿದ್ಯಾರ್ಥಿವೇತನಗಳೆರಡು ದಕ್ಕಿದವು. ಅದರಿಂದ ಎರಡು ಸಾವಿರ ಬಂದವು. ಮದರಾಸಿನಿಂದ ಬಂತು, ಮತ್ತೊಂದು ಸಾವಿರ.

ನನಗೆ ಅಮೆರಿಕದ ವೀಸಾ ಸಿಕ್ಕಲು ಹತ್ತು ಸಾವಿರ ಬೇಕೇಬೇಕು. ನನ್ನಲ್ಲಿ ಹಾಗೂ ಹೀಗೂ ಸಂಗ್ರಹವಾಗಿದ್ದುದು ಒಟ್ಟು ಏಳು ಸಾವಿರ.

ಆಗ ಪುನಃ ನಿರಾಶನಾಗಿ ಬೆಂಗಳೂರಿಗೆ ಬಂದೆ. ಕೃಷ್ಣಶರ್ಮರನ್ನು ಕಂಡೆ. ಆರು ತಿಂಗಳ ನನ್ನ ಶ್ರಮದ ಫಲವನ್ನು ವಿವರಿಸಿ ಏಳುಸಾವಿರ ಸಂಗ್ರಹವಾದ ಸಮಾ ಚಾರ ತಿಳಿಸಿದೆ. ಅವರಿಗೆ ಆದ ಆನಂದ ಹೇಳತೀರದು.

"ಭಲೇ" ಎಂದರು.

"ಮೂರು ಸಾವಿರ ಬೇಕು" ಎಂದೆ.

"ಹೆದರಬೇಡ" ಎಂದರು.

ತಯಾರಾಯಿತು; ಒಂದು ಮನವಿಪತ್ರ. ನಾನೇ ತಯಾರು ಮಾಡಿದೆ.

ಅದರಲ್ಲಿದ್ದುದು, "ನನಗೆ ಅಮೇರಿಕೆಗೆ ಹೋಗಲು ಬೇಕಾದ ಮೂರು ಸಾವಿರ ರೂಪಾಯಿ, ದಾನಿಗಳು ಸಹಾಯ ಮಾಡಬೇಕೆಂದು" ಇತ್ತು. ಆ ಮನವಿ ಪತ್ರಕ್ಕೆ ಅವರದೇ ಮೊದಲ ಸಹಿ. ಕೆ. ಟಿ.ಭಾಷ್ಯಂರಿಂದ ಸಹಿ ಹಾಕಿಸಿದರು. ಕೆ. ಸಿ. ರೆಡ್ಡಿ, "ಹೂಂ" ಅಂದರು. ಮಾಸ್ತಿ ವೆಂಕಟೇಶ ಐಯ್ಯಂಗಾರರು ಆ ಮನವಿ ಪತ್ರಕ್ಕೆ ತಮ್ಮ ದನಿಗೂಡಿದರು.

ಕನ್ನಡ ಸಾಹಿತ್ಯ ಪರಿಷತ್ತಿಗೆ ಹೋಗಿ ವಿಳಾಸಗಳನ್ನು ತಂದು ಸುಮಾರು 300 ಜನರಿಗೆ ಮನವಿ ಪತ್ರ ಕಳುಹಿಸಿದೆ.

ಮೂರು ತಿಂಗಳ ಅವಧಿ ಕೊಟ್ಟಿದ್ದೆ.

ಈ ಯೋಜನೆಗೆ, ಅಚ್ಚಿಗಾಗಿ, ಪೋಸ್ಟಿಗಾಗಿ, ಕಾಗದಕ್ಕಾಗಿ ಸುಮಾರು ಮುನ್ನೂರು ರೂಪಾಯಿ ಖರ್ಚು ಮಾಡಿದ್ದೆ. ನನಗೆ ಬಂದ ಉತ್ತರ, ಕೇವಲ ಇನ್ನೂರು ರೂಪಾಯಿ. ಎದೆಗುಂದಲಿಲ್ಲ.

ನನ್ನ ಸಾಹಸದ ಫಲ ಶರ್ಮರಿಗೆ ಹೇಳಿದೆ. ಆ ವೇಳೆಗೆ ನಾನಾಗಲೇ ತುಂಬಾ ಸುಸ್ತಾಗಿಬಿಟ್ಟಿದ್ದೆ.

"ಚಿಂತಿಸಬೇಡ" ಎಂದರು.

* * * *

ಒಂದು ದಿನ ಬೆಳಿಗ್ಗೆ ನನ್ನನ್ನು ಮಲ್ಲೇಶ್ವರದ ನಾಲ್ಕನೇ ಮೇನ್ ರಸ್ತೆಯಲ್ಲಿರುವ ಶ್ರೀ ಜಿ. ಎ. ಆಚಾರ್ಯರ ಮನೆಗೆ ಶ್ರೀ ವಿ. ಎಸ್. ನಾರಾಯಣ ರಾಯರೊಂದಿಗೆ ಕರೆದುಕೊಂಡು ಹೋದರು.

ನಾನು ಶ್ರೀ ಆಚಾರ್ಯರನ್ನು ಮೊದಲು ಕಂಡಿದ್ದೇ ಇರಲಿಲ್ಲ. ಕೇಳಿಯೂ ಇರಲಿಲ್ಲ. ಕೃಷ್ಣಶರ್ಮರು ನನ್ನ ಬಗ್ಗೆ ವಿವರ ತಿಳಿಸಿದರು.

"ಈಗ ಏಳಾಗಿದೆ. ಇನ್ನು ಮೂರು ಸಾವಿರ ಬೇಕು. ನೀವು ಒಂದು ಕೊಡಿ" ಎಂದರು.

"ಈ ಹುಡುಗ, ಮೂರು ಸಾವಿರ ರೂಪಾಯಿ ತುಂಬುತ್ತಾನೆ, ಎಂಬ ನಂಬಿಕೆ ಹೇಗೆ? ಈಗ ಎಲ್ಲಿದೆ ಏಳುಸಾವಿರ?" ಎಂದು ಕೇಳಿದರು ಆಚಾರ್ಯರು.

ತಕ್ಷಣವೇ ನಾನು ಹೇಳಿದೆ.

"ಬೊಂಬಾಯಿನ ಮೈಸೂರು ಬ್ಯಾಂಕಿನಲ್ಲಿಟ್ಟಿದ್ದೇನೆ."

"ಎಲ್ಲಿದೆ ಪಾಸ್ ಬುಕ್ಕು? ತೋರಿಸಿ" ಎಂದರು.

ನನ್ನಲ್ಲಿರಲಿಲ್ಲ. ಅದು ಬೊಂಬಾಯಿನಲ್ಲಿ ನನ್ನ ಸ್ನೇಹಿತ ಸಂಜೀವನಲ್ಲಿತ್ತು.

ತಕ್ಷಣ ಆಚಾರ್ಯರು ಹೇಳಿದರು:

"ನಾನು ಒಂದು ಸಾವಿರ ಕೊಡಲು ಸಿದ್ಧ. ಆದರೆ ಆತ ಉಳಿದ ಎರಡು

ಸಾವಿರ ಸೇರಿಸಿ, ಒಂಬತ್ತು ಸಾವಿರ ರೂಪಾಯಿಯ ಲೆಕ್ಕ ತೋರಿಸಿದರೆ ಮಾತ್ರ" ಎಂದರು.

"ಗಗನ ಕುಸುಮ", ಎಂದು ನಾನು ಮನಸ್ಸಿನಲ್ಲೇ ಅಂದುಕೊಂಡೆ.

ಶರ್ಮರು ಹೇಳಿದರು:

"ಕೃಷ್ಣಮೂರ್ತಿ, ಇದು ಸಾವಿರ ನಿನಗೆ ಬಂದೇ ಬರುತ್ತದೆ, ಉಳಿದೆರಡು ಶೇಖರಿಸು ನಡೆ" ಎಂದರು.

ನಾ ನಂಬಲಿಲ್ಲ.

ನಿರಾಶನಾಗಿ ಇಂಡಿಯಾ ಹೌಸ್‌ನಿಂದ ಹೊರಟೆ.

ದಾರಿಯಲ್ಲಿ ಬರುತ್ತಾ ಶರ್ಮಾಜಿ ಹೇಳಿದರು: "ಆಚಾರ್ಯರ ಮಾತನ್ನು ಲಘುವಾಗಿ ತಿಳಿಯಬೇಡ. ಹೇಳಿದ್ದನ್ನು ಮಾಡುವವರು ಅವರು" ಎಂದು.

ಆಗಲೂ ನನಗೆ ನಂಬಿಕೆ ಬರಲಿಲ್ಲ.

ಉಳಿದ ಮೂರು ಸಾವಿರಕ್ಕೆ ಮೈಸೂರಿನಲ್ಲಿ ಪ್ರಯತ್ನ ಮಾಡೋಣವೆಂದು ಬಂದೆ. ಇಲ್ಲಿ ಮೈಸೂರು ಪತ್ರಿಕೆಯ ಶ್ರೀ ಟಿ. ನಾರಾಯಣ ಅವರ ಸಹಾಯದಿಂದ ಮೂರೇ ದಿನದಲ್ಲಿ ಮೂರುಸಾವಿರ ಸೇರಿಹೋಯಿತು.

ನನ್ನ ಮನವಿ ಪತ್ರ ಇಲ್ಲಿ ಚೆನ್ನಾಗಿ ಕೆಲಸ ಮಾಡಿತ್ತು.

ಖುದ್ದಾಗಿ ಹೋಗಿ ಭೇಟಿಮಾಡಿದಾಗ ನೂರು, ನೂರರಂತೆ 30 ಜನ ಮೂರು ಸಾವಿರ ಕೊಟ್ಟುಬಿಟ್ಟರು.

ಸರಿ. 1947ನೇ ಇಸವಿ ಜನವರಿ 22ನೇ ತಾರೀಖು, ಅಮೇರಿಕಾಕ್ಕೆ ಹೊರಡಲು ಬೊಂಬಾಯಿಗೆ ತೆರಳಿದೆ. ಕೃಷ್ಣಶರ್ಮರ ಆಶೀರ್ವಾದವನ್ನು ಹೊತ್ತು ಬೊಂಬಾಯಿಗೆ ಬಂದಾಗ ಶ್ರೀ ಆಚಾರ್ಯರು ಹೇಳಿದ್ದು ನೆನಪಾಯಿತು.

ತಕ್ಷಣವೇ ಮೈಸೂರು ಬ್ಯಾಂಕಿಗೆ ಹೋಗಿ ಅಲ್ಲಿಯ ಮ್ಯಾನೇಜರಿಂದ ಒಂದು ರಸೀದಿ ಪಡೆದು ನನಗೆ ಹತ್ತು ಸಾವಿರ ಸೇರಿರುವುದೆಂದು ಜನವರಿ 26 ನೇ ಬೆಳಿಗ್ಗೆ ನಾನು ಹಡಗು ಹತ್ತುವುದಾಗಿಯೂ, ಶ್ರೀ ಆಚಾರ್ಯರು ಹೇಳಿದ ಮಾತನ್ನು ಪರೀಕ್ಷೆಮಾಡಲು ನಾನು ಅವರಿಗೆ ತಂತಿಕೊಟ್ಟೆ.

ಕೃಷ್ಣಶರ್ಮರು ಹೇಳಿದ ಮಾತು: "ಆಚಾರ್ಯರ ಮಾತನ್ನು ಲಘುವಾಗಿ ತಿಳಿಯಬೇಡ" ಎಂಬುದು ಪ್ರತಿಧ್ವನಿತವಾಗುತ್ತಿತ್ತು. ಜನವರಿ 22ಕ್ಕೆ ತಂತಿ ಕೊಟ್ಟೆ" 23 ಆಯಿತು. 24 ಕಳೆಯಿತು. ಏನೂ ಬರಲಿಲ್ಲ. ನನ್ನ ನಂಬಿಕೆಯೇ ಸರಿ ಎಂದುಕೊಂಡೆ.

ಜನವರಿ 25ನೇ ತಾರೀಖು ಬೆಳಿಗ್ಗೆ ಬೊಂಬಾಯಿನ ನಾನಿಳಿದುಕೊಂಡಿದ್ದ ಕೃಷ್ಣಕುಂಜಕ್ಕೆ ಒಬ್ಬ ಆಸಾಮಿ ದಯಮಾಡಿಸಿದರು.

"ಇಲ್ಲಿ ನಾಡಿಗ ಕೃಷ್ಣಮೂರ್ತಿ ಇದ್ದಾರೆಯೇ ?"

"ನಾನೆ" ಎಂದು ಮುಂದೆ ಬಂದೆ.

"ನಾನು ಜಿ. ಜಿ. ಆಚಾರ್ಯ. ಬೆಂಗಳೂರಿನ ಶ್ರೀ ಜಿ. ಎ. ಆಚಾರ್ಯರ ಭಾಮೈದುನ. ಇದೋ, ನಿಮಗಾಗಿ ಸಾವಿರ ರೂಪಾಯಿ ಕಳುಹಿಸಿದ್ದಾರೆ. ತೆಗೆದು ಕೊಳ್ಳಿ" ಎಂದರು.

"ಸ್ತಂಭೀಭೂತನಾದೆ" ತುಂಬಾ ಸಂತೋಷಪಟ್ಟೆ.

"ಧನ್ಯವಾದ" ಎಂದೆ.

ತಕ್ಷಣವೇ ಶ್ರೀ ಜೆ. ಜೆ. ಆಚಾರ್ಯರು ಅಲ್ಲಿಂದ ಹೊರಟೇಬಿಟ್ಟರು.

ನನ್ನ ಮನಸ್ಸಿನಲ್ಲಿ ತಕ್ಷಣ ಆದ ಭಾವನೆ. "ಬೆಂಗಳೂರಿಗೆ ಓಡಿ ಹೋಗಿ ಶ್ರೀ ಆಚಾರ್ಯರಿಗೆ ವಂದನೆಗಳನ್ನು ಅರ್ಪಿಸಿ, ಶ್ರೀ ಕೃಷ್ಣಶರ್ಮರಿಗೆ ಖುದ್ದಾಗಿ ಎಲ್ಲ ವನ್ನೂ ತಿಳಿಸಬೇಕೆಂದು."

ಶ್ರೀ ಆಚಾರ್ಯರ ಮಗಳನ್ನು ಮೊದಲೇ ಮದುವೆ ಆಗಿದ್ದರೆ, ಅಮೇರಿಕೆಗೆ ಹೋಗದೆ, ಬೆಂಗಳೂರಿಗೆ ಓಡಿಹೋಗಿ ಬಿಡುತ್ತಿದ್ದೆನೋ, ಏನೋ.

ಶ್ರೀ ಕೃಷ್ಣಶರ್ಮರಿಗೂ ಶ್ರೀ ಆಚಾರ್ಯರಿಗೂ ಒಂದು ತಂತಿ ಕೊಟ್ಟು ನನ್ನ ವಂದನೆಗಳನ್ನು ಅರ್ಪಿಸಿದೆ.

"ಶ್ರೀ ಆಚಾರ್ಯರ ಮಾತನ್ನೂ ಲಘುವಾಗಿ ತಿಳಿಯಬೇಡ" ಎಂದು ಶರ್ಮರು ಹೇಳಿದ್ದೂ, ಆಗಾಗ್ಗೆ ನನ್ನ ಕಿವಿಯಲ್ಲಿ ಝೇಂಕರಿಸುತ್ತಿತ್ತು.

ಪತ್ರಿಕೋದ್ಯಮದಲ್ಲಿ ಉಚ್ಚ ಶಿಕ್ಷಣವನ್ನು ಪಡೆದು ಅಮೇರಿಕೆಯಿಂದ ಮರಳಿ ಬಂದ ನಂತರ ಅಣ್ಣ ಕೃಷ್ಣಶರ್ಮರ ಆಶೀರ್ವಾದ ಪಡೆಯಲು ಮಲ್ಲೇಶ್ವರದ ಶರ್ಮರ ಮನೆಗೆ ಹೋದಾಗ, ಅವರು ಅದೇ ಅಂತಃಕರಣ ಮತ್ತು ಅದೇ ಪ್ರೀತಿವಿಶ್ವಾಸ ಗಳಿಂದ ನನ್ನನ್ನು ಬರಮಾಡಿಕೊಂಡರು.

ಅಮೇರಿಕೆಯಲ್ಲಿ ನಾನು ಪಡೆದ ಶಿಕ್ಷಣ, ಮಾಡಿದ ಕೆಲಸ, ನೋಡಿದ ಪತ್ರಿ ಕಾಲಯಗಳು, ಮುಂತಾದವುಗಳ ಬಗ್ಗೆ ಕುತೂಹಲದಿಂದ ಕೇಳಿತಿಳಿದುಕೊಂಡರು. ನಾನು ಮುಂದೇನು ಮಾಡಬೇಕೆಂಬ ಬಗ್ಗೆ ಅವರ ಸಲಹೆಯನ್ನು ಕೇಳಿದೆನಾದರೂ, ಅವರ ಸಲಹೆಯಂತೆ ನಾನು ನಡೆಯಲಿಲ್ಲ.

ನನಗೆ ಈಗನಿಸುತ್ತದೆ: "ಅವರ ಬುದ್ಧಿವಾದವನ್ನು ಕೇಳಿದ್ದರೆ ನಾನು ಬುದ್ಧಿ ವಂತನಾಗುತ್ತಿದ್ದೆ" ಎಂದು.

* * * *

ಮದುವೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿ, ಜೀವನದ ಸಂಗಾತಿಯನ್ನು ಆರಿಸಿಕೊಳ್ಳಬೇಕೆಂದು; ಕಲ್ಯಾಣನಗರಿಗೆ ಬಂದು ಶ್ರೀ ಕೃಷ್ಣಶರ್ಮರಲ್ಲಿ ಪ್ರಸ್ತಾಪಿ ಸಿದೆ. ಅವರು "ಒಳ್ಳೆಯ ಮನೆತನದ ಹುಡುಗಿಯನ್ನು ನೋಡೋಣ. ಅವಸರ ಪಡಬೇಡ" ಎಂದರು.

ಅದೇ ವಾರವೇ, ಬೆಂಗಳೂರಿನ ಮಲ್ಲೇಶ್ವರದ ಶ್ರೀ ಜಿ. ಎ. ಆಚಾರ್ಯರು

ತಮ್ಮ ಮಗಳನ್ನು ನನಗೆ ಕೊಡುವುದಾಗಿಯೂ ನಾನು ಇಷ್ಟಪಟ್ಟರೆ ಮದುವೆಯಾಗಬಹುದೆಂದೂ ಹುಡುಗಿಯನ್ನು ನೋಡಬಹುದೆಂದೂ ತಿಳಿಸಿದರು. ಹುಡುಗಿಯನ್ನು ನೋಡಿದ ಐದು ನಿಮಿಷದಲ್ಲೇ ನನ್ನ ಒಪ್ಪಿಗೆ ಕೊಟ್ಟೆ. ಆದರು ಅವರು ಸಮಯ ಬೇಕೆಂದರು.

ನನ್ನ ಬಗ್ಗೆ ಅವರು ವಿಚಾರಿಸಬೇಕಿತ್ತು.

ಅವರ ಬಗ್ಗೆ ನಾನು ವಿಚಾರಿಸುವುದು ಏನೂ ಇರಲಿಲ್ಲ.

ನಮ್ಮ ಮಾವನವರು, ಯಾರನ್ನು ವಿಚಾರಿಸಿದರು, ಗೊತ್ತೆ ?

ಮರುದಿನವೇ ಅವರು ಶ್ರೀ ಕೃಷ್ಣಶರ್ಮರ ಮನೆಗೆ ಹೋಗಿ, ನನ್ನ ಬಗ್ಗೆ ವಿಚಾರಿಸಿಕೊಂಡು ಬಂದರು.

ಎರಡು ದಿನಗಳ ನಂತರ, ನಾನು ಕೃಷ್ಣಶರ್ಮರ ಮನೆಗೆ ಹೋಗಿ, ನಾನು ನೋಡಿದ ಹುಡುಗಿಯ ವಿಚಾರ ತಿಳಿಸಿದೆ.

"ಒಪ್ಪಿದೆಯೋ, ಇಲ್ಲವೋ ?" ಎಂದರು.

"ನಾನು ಒಪ್ಪಿದೆ; ಅವರು ಒಪ್ಪಿಲ್ಲ" ಎಂದೆ.

"ನಿನ್ನೆ ನಿಮ್ಮ ಮಾವನವರಾಗುವವರು ಬಂದಿದ್ದರು. ನಿನ್ನ ವಿಚಾರ ಕೇಳಲು ಎಲ್ಲಾ ಹೇಳಿದ್ದೇನೆ."

"ಅವರು ಒಪ್ಪಿದರೇ ?"

"ಇನ್ನೂ ವಿಚಾರಿಸಿಬೇಕಂತೆ. ವಿಚಾರಿಸಲಿ. ಆದರೆ ಯೋಚಿಸಬೇಡ. ಈ ಸಂಬಂಧವೇ ಆಗುತ್ತದೆ ಹೋಗು ಎಂದರು" ಶರ್ಮರು" ಮುಗುಳ್ನಗೆ ನಗುತ್ತಾ;

"ಕೃಷ್ಣಮೂರ್ತಿ: ಜ್ಞಾಪಕವಿದೆಯೇ ಎರಡು ವರ್ಷಗಳ ಕೆಳಗೆ ನಾನು ಹೇಳಿದ ಮಾತು. ಶ್ರೀ ಆಚಾರ್ಯರ ಮಾತನ್ನು ಲಘುವಾಗಿ ಎಣಿಸಬೇಡ" ಎಂದು. ಈಗಲೂ ಹಾಗೆಯೇ" ಎಂದರು.

ಒಂದು ತಿಂಗಳ ಮೇಲೆ ದೆಹಲಿಗೆ ನನಗೆ ಎರಡು ಕಾಗದಗಳು ಬಂದವು. ಒಂದು ಶ್ರೀ ಕೃಷ್ಣಶರ್ಮರದ್ದು. ಇನ್ನೊಂದು ಶ್ರೀ ಆಚಾರ್ಯರದ್ದು.

ಕೃಷ್ಣಶರ್ಮರು ಬರೆದಿದ್ದರು :

"ಶ್ರೀ ಆಚಾರ್ಯರು ಒಪ್ಪಿದ್ದಾರೆ. ನೀನು ಒಪ್ಪಿಗೆ ಕೊಡು. ಮತ್ತೆಲ್ಲಿಯೂ ವಿಚಾರಿಸಲು ಹೋಗಬೇಡ."

ಆಚಾರ್ಯರ ಒಕ್ಕಣಿಕೆ ಹೀಗಿತ್ತು:

"ನನ್ನ ಮಗಳನ್ನು ನಿಮಗೆ ವಿವಾಹ ಮಾಡಲು ನಾವು ಒಪ್ಪಿದ್ದೇವೆ. ಮದುವೆ ದಿನ ನಿಶ್ಚಯ ಮಾಡಲು ದೆಹಲಿಗೆ ಬರುತ್ತೇನೆ. ನಿಮ್ಮ ಅಭಿಪ್ರಾಯ ತಿಳಿಸಿ."

1949 ನೇ ಇಸವಿ ಆಗಸ್ಟ್ 11ನೇ ತಾರೀಖು, ಶ್ರೀ ರಾಘವೇಂದ್ರ ಸ್ವಾಮಿಗಳ ಆರಾಧನೆಯ ಪುಣ್ಯದಿನದಂದು ನಮ್ಮ ಮದುವೆಯಾಯಿತು. ಶ್ರೀ ಕೃಷ್ಣಶರ್ಮರು

ಬಂದು ನಮ್ಮನ್ನು ಹರಸಿದರು. ಆನಂದದಿಂದ ಆತ್ಮೀಯವಾಗಿ ನಸ್ನಕ್ಕಿಕೊಂಡರು. ಆ ದಿನ ಮರೆಯಲಾರೆ.

* * * *

ಅಮೇರಿಕೆಯಿಂದ ಬಂದ ಮೇಲೆ ನಾನು ಕೆಲವು ದಿನಗಳು ಭಾರತ ಸರ್ಕಾರದ ವಾರ್ತಾ ಇಲಾಖೆಯಲ್ಲೂ ಇನ್ನು ಕೆಲವುದಿನಗಳು ಅಮೇರಿಕಾ ದೂತವಾಸದ ವಾರ್ತಾ ಇಲಾಖೆಯಲ್ಲೂ ಕೆಲಸ ಮಾಡಿದನಂತರ 1953 ನೇ ಇಸವಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪತ್ರಿಕೋದ್ಯಮ ಇಲಾಖೆಯ ಮುಖ್ಯಸ್ಥನಾಗಿ ಕೆಲಸ ಮಾಡ ತೊಡಗಿದೆ.

ಪತ್ರಿಕೋದ್ಯಮ ಶಿಕ್ಷಣದಲ್ಲಿ ತುಂಬಾ ನಂಬುಗೆಯುಳ್ಳ ಕೃಷ್ಣಶರ್ಮರು, ನಮ್ಮ ವಿದ್ಯಾರ್ಥಿಗಳನ್ನುದ್ದೇಶಿಸಿ ಹಲವಾರು ಬಾರಿ ಉಪದೇಶ ಮಾಡಿದ್ದಾರೆ. ನಮ್ಮ ಸಂಘದ ಪ್ರಥಮಭಾಷಣವನ್ನೂ ಅವರೇ ಮಾಡಿದ್ದಾರೆ.

ಆಮೇಲಿಂದ ನಾನವರನ್ನು ಅನೇಕ ಬಾರಿ ಭೇಟಿಮಾಡಿದ್ದೇನೆ. ಮಾತ ನಾಡಿಸಿದ್ದೇನೆ.

ಮೂವತ್ತು ವರ್ಷಗಳ ಕೆಳಗೆ ಯಾವ ಗುಣಗಳನ್ನು ಅವರಲ್ಲಿ ಕಂಡೆನೋ ಅದೇ ಗುಣಗಳನ್ನು ಈಗಲೂ ಕಾಣುತ್ತಿದ್ದೇನೆ.

ಕೃಷ್ಣಶರ್ಮರು ಅನೇಕ ಕ್ಷೇತ್ರಗಳಲ್ಲಿ ದುಡಿದರು. ಪತ್ರಿಕೋದ್ಯಮ, ಸಾಹಿತ್ಯ, ರಾಜಕೀಯ, ರಚನಾತ್ಮಕ ಕ್ಷೇತ್ರ, ಹಿಂದಿ, ಶಿಕ್ಷಣ ಕ್ಷೇತ್ರ, ಧಾರ್ಮಿಕರಂಗ, ಮುಂತಾದ ಕಡೆಗಳಲ್ಲಿ ಅವರು ತಮ್ಮ ಪ್ರಭಾವವನ್ನೂ ವರ್ಚಸ್ಸನ್ನೂ ಬೀರಿದರು.

"ವಿಶ್ವ ಕರ್ನಾಟಕ" ಪತ್ರಿಕೆಯ ಸಂಪಾದಕರಾದುದಲ್ಲದೆ, ಗಾಂಧೀಜಿ ಸಂಪಾ ದಿಸುತ್ತಿದ್ದ 'ಹರಿಜನ' ಪತ್ರಿಕೆಯ ಕನ್ನಡ ಮುದ್ರಣವನ್ನು ಕರ್ನಾಟಕಕ್ಕೆ ಕೊಟ್ಟ ಕೀರ್ತಿ ಶರ್ಮರದು.

ಸಾಹಿತ್ಯ ರಂಗದಲ್ಲಂತೂ ಅವರದು ಎತ್ತಿದ ಕೈ. ಗಾಂಧೀ ಸಾಹಿತ್ಯವನ್ನು ಕರ್ನಾಟಕಕ್ಕೆ ಮೊದಲ ಬಾರಿಗೆ ಕೊಟ್ಟವರು ಶರ್ಮರು. ಪರ್ಣಕುಟಿ, ವರ್ಧಾ ಯಾತ್ರೆ, ಆಗಸ್ಟ್ 9 ಅವರ ಕೃತಿಗಳಲ್ಲಿ ಎದ್ದು ಕಾಣುವ ಸಾಹಿತ್ಯ. ಅವರ ಪ್ರಭಾವಿತ ಭಾಷೆ, ಆಕರ್ಷಕ ಶಬ್ದಗಳು, ಪರಿಣಾಮಬೀರುವ ಅವರ ಭಾವನೆಗಳು, ಕನ್ನಡ ಸಾಹಿತ್ಯಕ್ಕೆ ಒಂದು ಕೊಡುಗೆ.

ಹೈದರಾಬಾದಿನ ಸಂಸ್ಥಾನದಲ್ಲಿ ರಾಜಕೀಯ ಜಾಗೃತಿಯನ್ನುಂಟು ಮಾಡಿ ದವರು ಶರ್ಮರೇ. ಅಲ್ಲಿ ಕಾಂಗ್ರೆಸ್ಸನ್ನು ಕಟ್ಟಿ, ಜವಾಬ್ದಾರಿ ಸರ್ಕಾರದ ಹೋರಾಟ ದಲ್ಲಿ ಮೊದಲಿನ ಸಾಲಿನಲ್ಲಿದ್ದು ಸೆರೆಮನೆಯನ್ನು ಸೇರಿ, ಹೈದರಾಬಾದಿನಂತಹ ಹಿಂದುಳಿದ ಸಂಸ್ಥಾನದಲ್ಲಿ ಜನರನ್ನು ನಿದ್ರೆಯಿಂದ ಎಬ್ಬಿಸಿ ರಾಜಕೀಯ ಜನ ಜಾಗೃ ತಿಯನ್ನು ಹುಟ್ಟಿಸಿದವರು ಶರ್ಮರೇ. ಅಲ್ಲಿಯ ಜನ ತಮ್ಮ ಅರಿವನ್ನು ತಿಳಿದ

ಕೂಡಲೆ ಮೈಸೂರಿಗೆ ಬಂದರು; ಮೈಸೂರು ಸಂಸ್ಥಾನದ ರಾಜಕೀಯದಲ್ಲಿ ಕೃಷ್ಣ ಶರ್ಮರು ವಹಿಸಿದ ಪಾತ್ರ ಚಿರಸ್ಥಾಯಿಯಾದುದು.

ಹಿಂದಿ ಪ್ರಚಾರ ಸಭೆಯ ಸದಸ್ಯರಾಗಿ ಮೈಸೂರು ರಾಜ್ಯದಲ್ಲಿ, ದಕ್ಷಿಣಭಾರತ ದಲ್ಲಿ ಹಿಂದಿ ಪ್ರಚಾರಕ್ಕಾಗಿ ಅವಿರತವಾಗಿ ದುಡಿದರು.

ಶಿಕ್ಷಣ ಕ್ಷೇತ್ರ, ಧಾರ್ಮಿಕರಂಗ ಅವರ ಚಟುವಟಿಕೆಯ ಇನ್ನೊಂದು ಮುಖ. ಬೆಂಗಳೂರಿನಲ್ಲಿ ವಿದ್ಯಾರ್ಥಿಗಳಿಗಾಗಿ ಹಾಸ್ಟೆಲ್ ಒಂದನ್ನು ಕಟ್ಟಿ ಅದರ ಮೇಲ್ವಿಚಾರಣೆ ನಡೆಸುತ್ತಿದ್ದರು.

ಇವರ ಎಲ್ಲಾ ಚಟುವಟಿಕೆಗಳನ್ನು ಒಂದೆಡೆ ಕ್ರೋಢಿಕರಿಸಿ ನಡೆಸಿಕೊಂಡು ಬರಲು ಮಲ್ಲೇಶ್ವರದಲ್ಲಿ ಗಾಂಧೀ ಸಾಹಿತ್ಯ ಸಂಘವನ್ನು ಸ್ಥಾಪಿಸಿದರು. ಅದರ ಅಂಗವಾಗಿ ಒಂದು ಭವ್ಯವಾದ ಕಟ್ಟಡವನ್ನೇ ಕಟ್ಟಿದರು. ಅಲ್ಲಿ ಒಂದು ಗ್ರಂಥಾಲ ಯವನ್ನು ಸ್ಥಾಪಿಸಿ ವಿದ್ಯಾರ್ಥಿಗಳಿಗಾಗಿ ಪ್ರತಿದಿನವೂ ತರಗತಿಗಳನ್ನು ನಡೆಸಿದರು. ಈಗಲೂ ಅಲ್ಲಿ ಚರ್ಚಾಗೋಷ್ಠಿಗಳು, ಭಾಷಣಗಳು, ಸ್ಪರ್ಧೆಗಳು, ಹಿಂದಿ ತರಗತಿ ಗಳು ನಡೆಯುತ್ತಿದೆ. ಕೃಷ್ಣಶರ್ಮರ ರಚನಾತ್ಮಕ ಕಾರ್ಯಕ್ರಮಗಳ ರಂಗಮಂಟಪ ವಾಗಿ, ಮಲ್ಲೇಶ್ವರದ ಗಾಂಧಿ ಸಂಘದ ಕಟ್ಟಡ, ಅವರ ನೆನಪನ್ನು ಸದಾ ಕೊಡು ತ್ತಿದೆ.

ಕನ್ನಡ ನಾಡಿನ ದುರ್ದೈವದಿಂದ, ಈಗೆರಡು ವರ್ಷಗಳಿಂದ ಕೃಷ್ಣಶರ್ಮರು ಹಾಸಿಗೆ ಹಿಡಿದಿದ್ದಾರೆ. ಈಗಾರು ತಿಂಗಳ ಹಿಂದೆ ಅವರನ್ನು ನಾನು ನೋಡಿದಾಗ ಅದೇ ಅಂತಃಕರಣವನ್ನು ತೋರಿಸಿದರು. ದೈಹಿಕ ಶಕ್ತಿಯು ಉಡುಗಿದ್ದರೂ, ಬುದ್ಧಿ ಶಕ್ತಿಯ ಚುರುಕು ಅಷ್ಟೇ ವರ್ಚಸ್ವಿಯಾಗಿದೆ. ಬೇಗನೆ ಗುಣಮುಖವಾ ಗಲಿ ಎಂದಿಷ್ಟೇ ದೇವರನ್ನು ಪ್ರಾರ್ಥಿಸಿ ಆಗ ಅವರನ್ನು ಬೀಳ್ಕೊಟ್ಟೆ.

ಸರಳ ಹೃದಯಿಗಳೂ, ನಿರ್ಮಲಾಂತಃಕರುಣಿಗಳೂ ಗಾಂಧಿವಾದಿಗಳೂ ಸತತ ಖಾದಿಧಾರಿಗಳೂ ಸ್ವಾತಂತ್ರ್ಯ ಪ್ರೇಮಿಗಳೂ ಕರುಣಾಮಯಿಗಳೂ ಆದ ಅಣ್ಣ ಕೃಷ್ಣಶರ್ಮರು ಇನ್ನೂ ಬಹುಕಾಲ ಬದುಕಿ ಕನ್ನಡ ನಾಡಿಗೆ ಅವರ ಉಪದೇಶದ ಫಲ ದೊರಕುವಂತಾಗಲಿ ಎಂದು ದೇವರನ್ನು ಪ್ರಾರ್ಥಿಸುತ್ತೇನೆ.

ಕೃಷ್ಣಶರ್ಮರು ಕನ್ನಡಕ್ಕಾಗಿ ದುಡಿದರು. ಕರ್ನಾಟಕಕ್ಕಾಗಿ ತ್ಯಾಗಮಾಡಿ ದರು. ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ತಮ್ಮ ತನು ಮನ ಧನವನ್ನು ಕನ್ನಡ ನಾಡಿಗಾಗಿ ಧಾರೆಯೆರೆದು ಈಗ ಶರಶಯ್ಯೆಯಲ್ಲಿ ಭೀಷ್ಮರಂತೆ ಮಲಗಿ, ಕನ್ನಡ ನಾಡಿನ ಶ್ರೇಯೋಭಿವೃದ್ಧಿಯನ್ನೇ ನೋಡುತ್ತಿದ್ದಾರೆ. ನಿಜಕ್ಕೂ ಅವರು ಕನ್ನಡದ ಕರ್ಮಯೋಗಿಗಳು.

# ಸಿಂಹ ಸದೃಶ ಮಹಾವ್ಯಕ್ತಿ

ಅರ್ಚಿಕ ವೆಂಕಟೇಶ

Happiness presents itself before man, wearing the crown of sorrow or its head. He who welcomes it must also welcome sorrow.

*—Swami Vivekananda*

**ಸು**ಮಾರು 30 ವರ್ಷಗಳಷ್ಟು ಹಿಂದಿನ ಮಾತು. ನಾನು ಬೆಂಗಳೂರಿಗೆ ಬಂದು ಆಗಲೇ ಮೂರು ವರ್ಷಗಳು ಕಳೆದಿದ್ದವು. ಉತ್ಸಾಹದಿಂದ ತುಂಬಿ ತುಳುಕುತ್ತಿದ್ದ ತರುಣನಾಗಿದ್ದ ನನ್ನ ಮನಸ್ಸಿನಲ್ಲಿ ನಾನೊಬ್ಬ ಗಣ್ಯ ಸಾಹಿತಿಯಾಗಬೇಕು; ಪ್ರಖ್ಯಾತ ಕವಿಯಾಗಬೇಕು; ಅಸಾಧಾರಣ ಪ್ರತಿಭೆಯ ವಾಗ್ಮಿಯಾಗಬೇಕು ಎಂಬ ಅನೇಕಾನೇಕ ಹುಚ್ಚು ಕಲ್ಪನೆಗಳು ತುಂಬಿ ತುಳುಕುತ್ತಿದ್ದವು. ಆಗ ಕನ್ನಡನಾಡಿನಲ್ಲಿ ತಮ್ಮ ಅನನ್ಯ ಸಾಧಾರಣ ವಿದ್ವತ್ತು, ಪ್ರತಿಭೆ, ವಾಗ್ವೈಭವ, ಪರಿಶುದ್ಧ ಜೀವನ, ವ್ಯಕ್ತಿಮತ್ತೆಗಳಿಂದ ಜನಮನವನ್ನು ಸೂರೆಗೈದಿದ್ದ ಸ್ಮರಣೀಯ ಪೂಜ್ಯ ಬಿ. ಎಂ. ಶ್ರೀಕಂಠಯ್ಯನವರು, ಶ್ರೀ ಎಂ. ಆರ್. ಶ್ರೀನಿವಾಸ ಮೂರ್ತಿಗಳು, ದೇವುಡು ನರಸಿಂಹ ಶಾಸ್ತ್ರಿಗಳು ಮೊದಲಾದ ಮಹಾ ಪುರುಷರ ಹತ್ತಿರದ ಸಂಪರ್ಕವನ್ನು ಪಡೆಯಬೇಕು; ಅವರ ವಾತ್ಸಲ್ಯ, ಪ್ರೇಮಾದರಗಳಿಗೆ ಪಾತ್ರನಾಗಬೇಕು; ಅವರ ಆಶೀರ್ವಾದ ಪಡೆದು ಒಬ್ಬ ಮನುಷ್ಯನಾಗಬೇಕು ಎಂದು ಚಡಪಡಿಸುತ್ತಿದ್ದೆ. ಆ ಮೊದಲೇ ಕನ್ನಡದ ಸೀಮಾ ಪುರುಷರಾದ ಮಹಾಕವಿ ಶ್ರೀ ಸಾಲಿ ರಾಮಚಂದ್ರ ರಾಯರು, ಪೂಜ್ಯ ದ. ರಾ. ಬೇಂದ್ರೆಯವರು, ಶಂ. ಬಾ. ಜೋಶಿ ಅವರೇ ಮೊದಲಾದವರ ಪರಿಚಯ ಭಾಗ್ಯವನ್ನು ಪಡೆದಿದ್ದೆ. ಅವರೆಲ್ಲ ನನ್ನನ್ನು ಅತ್ಯಂತ ಆತ್ಮೀಯತೆಯಿಂದ ಕಂಡು ಹಿತನುಡಿಗಳನ್ನಾಡಿ ಮನಸಾರ ಹರಸಿದರು.

ಅಂದಿನ ಕನ್ನಡ ಸಾಹಿತ್ಯ ಪರಿಷತ್ತು ಎಂದರೆ ಸಾಕ್ಷಾತ್ ಸರಸ್ವತಿಯ ದಿವ್ಯ ದೇಗುಲವೆನಿಸಿತ್ತು. ಒಂದು ದಿನ ಪೂಜ್ಯ ಬೇಂದ್ರೆ ಪರಿಷತ್ತಿಗೆ ಬರುತ್ತಾರೆಂಬ ಸುದ್ದಿ

ತಿಳಿದು ಅವರ ದರ್ಶನ ಭಾಗ್ಯಕ್ಕೆಂದು ಅಲ್ಲಿಗೆ ಹೋಗಿದ್ದೆ. ಆಗ ಶ್ರೀ ಬೇಂದ್ರೆ ಅವರು ಯಾರದೋ ಬಳಿ ಆತ್ಮೀಯತೆಯಿಂದ ಮಾತನಾಡುತ್ತಿದ್ದರು. ನಾನು ಹೋದವನೇ ಭಕ್ತಿಯಿಂದ ಅವರಿಗೆ ನಮಸ್ಕಾರ ಮಾಡಿದೆ. ತಕ್ಷಣ ಶ್ರೀ ಬೇಂದ್ರೆ ಅವರು ಅತ್ಯಂತ ವಿಶ್ವಾಸದಿಂದ 'ಬಾ, ನಿನ್ನನ್ನೇ ಜ್ಞಾಪಿಸಿಕೊಳ್ಳುತ್ತಿದ್ದೆ. ಹೇಗಿದ್ದಿ ?' ಎಂದು ಕುಶಲ ಪ್ರಶ್ನೆ ಮಾಡಿದರು. ತಕ್ಷಣ ತಮ್ಮ ಎದುರಿಗೆ ನಿಂತಿದ್ದ ಪರಮ ಆಕರ್ಷಕ ಧೀಮಂತ ವ್ಯಕ್ತಿಯೊಬ್ಬರ ಕಡೆಗೆ ತಿರುಗಿ 'ಶರ್ಮಾ ಇವ ನನ್ನ ಹುಡುಗ. ಇಂದಿನಿಂದ ಇವನನ್ನು ನಿನ್ನ ಕೈಗೆ ಒಪ್ಪಿಸುತ್ತೇನೆ. ಇವನ ಯೋಗಕ್ಷೇಮ ನಿನಗೆ ಸೇರಿದ್ದು. ಈತ ಚೆನ್ನಾಗಿ ಬರೆಯುತ್ತಾನೆ. ಈಗ ನಾನು ನಿಶ್ಚಿಂತ" ಎಂದರು. ನಾನು ಶ್ರೀ ಶರ್ಮಾಜಿಗೆ ಭಕ್ತಿಯಿಂದ ತಲೆಬಾಗಿ ವಂದಿಸಿದೆ. ಅವರು ಹಿಂದುಮುಂದಿನ ಯೋಚನೆಯನ್ನೇ ಮಾಡದೆ: "ನೀವು ಬೇಂದ್ರೆಯವರಿಗೆ ಇಷ್ಟು ಬೇಕಾದವರಾದರೆ ನನಗೂ ಅಷ್ಟೇ ಬೇಕಾದವರು. ನಾಳೆಯಿಂದ ನನ್ನ ಬಳಿ ಬಂದುಬಿಡಿ. ಇಂದಿನಿಂದ ನೀವು ನನ್ನವರು" ಎಂದು ಶ್ರೀ ಶರ್ಮರು ಹೇಳಿದರು. ಹೀಗೆ ಪ್ರಥಮ ಅನಿರೀಕ್ಷಿತ ಸಂದರ್ಶನದಲ್ಲೇ ತಾವೆಷ್ಟು ಉದಾರಶೀಲರೂ, ಪರೋಪಕಾರ ಬುದ್ಧಿಯುಳ್ಳವರೂ ಪ್ರತಿಭೆಯನ್ನು ಗುರುತಿಸಬಲ್ಲವರೂ ಅಸಾಧಾರಣವಾದ ಮಾನವೀಯತೆಯನ್ನುಳ್ಳವರೂ ಎಂಬುದನ್ನು ತೋರ್ಪಡಿಸಿದರು. ಆಗಲೇ ಅವರ ಬಗ್ಗೆ ನನ್ನ ಮನದಲ್ಲಿ ಅತ್ಯಪೂರ್ವವಾದ ಆದರಾಭಿಮಾನಗಳು ಮೂಡಿದವು. ಈ ರೀತಿ ನನ್ನ ಜೀವನದಲ್ಲಿ ಬಹು ದೊಡ್ಡ ಪಾತ್ರ ವಹಿಸಿ, ನನ್ನನ್ನು ತಿದ್ದಿ ಓರ್ವ ವ್ಯಕ್ತಿಯಾಗಿ ರೂಪುಗೊಳ್ಳುವಂತೆ ಮಾಡಿದವರೇ ಪೂಜ್ಯ ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮ ಅವರು.

ಆಗಲೇ ಕನ್ನಡ ನಾಡಿನಲ್ಲಿ ತತ್ರಾಪಿ ಅಂದಿನ ಮೈಸೂರು ಸಂಸ್ಥಾನದಲ್ಲಿ 'ವಿಶ್ವಕರ್ಣಾಟಕ' ದಿನಪತ್ರಿಕೆಯ ಹೆಸರು ಮನೆಮಾತಾಗಿತ್ತು. ಅದಕ್ಕೆ ಕಾರಣ ಅದರ ಸಂಪಾದಕರಾಗಿದ್ದವರ ಧೀರೋದಾತ್ತವಾದ ಲೇಖನ ಸಾಮರ್ಥ್ಯ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಆ ಪತ್ರಿಕೆಯ ಸಿಂಹಸದೃಶ ಸಂಪಾದಕರಾದ ಪೂಜ್ಯ ಶ್ರೀ ತಿರುಮಲೆ ತಾತಾಚಾರ್ಯ ಶರ್ಮರು, ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರು ಪತ್ರಿಕೆಯ ಮೂಲಕ ಸಲ್ಲಿಸಿದ ಸೇವೆ ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದ ಪರಮೋಜ್ವಲವಾದ ಸಾಹಸಮಯ ಚರಿತ್ರೆ. ಅವರ ನಿರ್ಮಲ ಚಾರಿತ್ರ್ಯ, ದೇಶಪ್ರೇಮ, ಅನನ್ಯಸಾಧಾರಣವಾದ ತ್ಯಾಗಶೀಲತೆ, ಅವರ್ಣನೀಯ ಕಷ್ಟಸಹಿಷ್ಣುತೆ, ದೇಶಕ್ಕಾಗಿ ಸಮಸ್ತವನ್ನೂ ಸಮರ್ಪಿಸುವ ಪರಮ ಔದಾರ್ಯವೇ ಮೊದಲಾದವುಗಳನ್ನು ಕುರಿತು ಮಹಾ ಚರಿತ್ರೆಯೊಂದನ್ನು ಬರೆದರೂ ಅದು ಮುಗಿಯದ ಕತೆ. ಓದಿದವರ ರಕ್ತವನ್ನು ಕುದಿಸಬಲ್ಲಂಥ ರೋಮಾಂಚಕಾರಿ ಕಥಾನಕವದು. ಇಂಥ ಮಹಾ ಪತ್ರಿಕೆಯ ಸಿಂಹಸದೃಶ ಸಂಪಾದಕರ ಸಂಪರ್ಕ ಭಾಗ್ಯ ಮತ್ತು ಅವರ ಕಾರ್ಯಾಲಯದಲ್ಲಿ ವಿನಮ್ರ ಕೆಲಸಗಾರನಾಗುವ ಪುಣ್ಯ ಪ್ರಾಪ್ತವಾದುದಕ್ಕೆ ನಾನು ಪರಮ ಧನ್ಯ ಎಂದುಕೊಂಡು ಅಂತರಂಗದಲ್ಲಿಯೇ ವರ್ಣಿಸಲಸದಳವಾದ ಸಂತೃಪ್ತಿಯನ್ನು ಹೊಂದಿದ್ದೆ. ಪರಕೀಯರ

ದಾಸ್ಯದಲ್ಲಿ ಬಿದ್ದು ನರಳುತ್ತಿದ್ದ ಭಾರತಮಾತೆಯ ಸ್ವಾತಂತ್ರ್ಯಕ್ಕಾಗಿ ಪತ್ರಿಕೆಯ ಮೂಲಕ ಸೇವೆ ಸಲ್ಲಿಸುವ ಮಹಾ ಭಾಗ್ಯ ದೊರೆತುದು ನನ್ನ ಜನ್ಮಾಂತರದ ಪುಣ್ಯ ವೆಂದು ಭಾವಿಸಿದ್ದೆ. ನನಗೆ ಗೊತ್ತಿಲ್ಲದಂತೆಯೇ ನನ್ನಲ್ಲಿ ಧನ್ಯತೆಯ ಭಾವ ಬಂದು, ತಾನೇ ತಾನಾಗಿ ಮೂಡಿ ನಿಂತಿತ್ತು.

ನನ್ನ ಚಿಕ್ಕಂದಿನಲ್ಲಿ ನಮ್ಮ ತಂದೆಯವರ ಬಾಯಿಂದ ಕೇಳಿದ ಪತ್ರಿಕೆಯ ಹೆಸರು 'ಕೇಸರಿ'. ಅದು ಮರಾಠಿ ದಿನಪತ್ರಿಕೆ. ಅದರ ಸಂಪಾದಕರು ಲೋಕಮಾನ್ಯ ಬಾಲಗಂಗಾಧರ ತಿಲಕರು. ಕೇಸರಿ ಪತ್ರಿಕೆಯನ್ನು ಓದದೇ ಇದ್ದರೆ ಊಟವೇ ಸೇರುವುದಿಲ್ಲ ಎಂದು ನಮ್ಮ ತಂದೆ ಹೇಳಿದ್ದು ಇನ್ನೂ ನನ್ನ ಸ್ಮೃತಿ ಪಥದಲ್ಲಿದೆ. ನನ್ನ ತಂದೆ ಕೇಸರಿ ಓದುವಷ್ಟು ಮರಾಠಿ ಬಲ್ಲವರಾಗಿದ್ದರು. ನನಗೆ ತಿಳುವಳಿಕೆ ಬಂದ ಮೇಲೆ ಲೋಕಮಾನ್ಯರ ಬಗ್ಗೆ ಹಾಗೂ ಅವರ ಜೊತೆ ಜೊತೆಗೇ ಕಾರ್ಯ ನಿರ್ವಹಿಸಿದ ಸಾಹಿತ್ಯ ಸಮ್ರಾಟ್ ಶ್ರೀ ನರಸಿಂಹ ಚಿಂತಾಮಣ ಕೇಳಕರ ಅವರ ಬಗೆಗೂ ಸಾಕಷ್ಟು ತಿಳಿದುಕೊಂಡೆ. ಪತ್ರಿಕಾ ಸಂಪಾದಕರೆಂದರೆ ಶ್ರೀ ತಿಲಕರು ಮತ್ತು ಶ್ರೀ ಕೇಳಕರರು ಎಂದು ನನ್ನ ನಿರ್ಧಾರವಾಗಿತ್ತು. ಅವರಿಗೆ ಸರಿಸಮರಾದ ಸಂಪಾದಕರನ್ನು ಕಾಣಬೇಕು ಎಂಬುದು ನನ್ನ ಉತ್ಕಟವಾದ ಅಭಿಲಾಷೆಯಾಗಿತ್ತು.

ಒಂದು ಸುಮುಹೂರ್ತದಲ್ಲಿ ನಾನು ಸುಪ್ರಖ್ಯಾತ ವಿಶ್ವಕರ್ಣಾಟಕ ದಿನಪತ್ರಿಕೆಯ ಸಂಪಾದಕ ವರ್ಗಕ್ಕೆ ವಿನಮ್ರ ಸೇವಕನಾಗಿ ಸೇರಿದೆ—ಅರ್ಥಾತ್ ಅಸಾಧಾರಣ ತ್ಯಾಗ ಜೀವನಕ್ಕೆ—ಸರ್ವಸುಖಗಳಿಂದ ವಿವಂಚಿತನಾಗುವುದಕ್ಕೆ ಆತ್ಮಸಾಕ್ಷಿಯಾಗಿ ಸಿದ್ಧನಾದೆ. ಸ್ವಲ್ಪ ಕಾಲದಲ್ಲಿಯೇ ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರು ಮತ್ತು ಶ್ರೀ ತಿ. ತಾ. ಶರ್ಮರು ಎಷ್ಟು ದೊಡ್ಡ ವ್ಯಕ್ತಿಗಳೆಂಬುದು ಖಚಿತವಾಗಿ ಹೋಯಿತು. ಆಗಲೇ ನಾನು ಶ್ರೀ ತಿ. ತಾ. ಶರ್ಮರು ಕನ್ನಡದ ಲೋಕಮಾನ್ಯ ತಿಲಕರೆಂದೂ ಶ್ರೀ ಕೃಷ್ಣಶರ್ಮರನ್ನು ಕನ್ನಡದ ಕೇಳಕರರೆಂದೂ ಭಾವಿಸಿದೆ. ಅವರಿಬ್ಬರ ಬಗೆಗೆ ನನ್ನ ಅಂತರಂಗದಲ್ಲಿ ಪೂಜ್ಯ ಭಾವನೆ ತುಂಬಿ ತುಳುಕಲಾರಂಭಿಸಿತು.

ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರು ಪರಮ ಗಂಭೀರ ಸ್ವಭಾವದ, ಸರಳ, ಸೌಜನ್ಯ, ಸಜ್ಜನಿಕೆಗಳಿಂದ ತುಂಬಿದ ಮಹಾವ್ಯಕ್ತಿ. ಅವರ ಸಾಹಿತ್ಯ ಶ್ರೀಮಂತಿಕೆಯನ್ನು ಕಂಡು ಮುಗ್ಧನಾಗಿದ್ದ ನಾನು ನನ್ನ ಯಾವುದಾದರೊಂದು ಕೃತಿಗೆ ಅವರ ಮುನ್ನುಡಿ ಪಡೆಯಬೇಕೆಂದು ಬಯಸುತ್ತಿದ್ದೆ. ಅವರು ಬರೆಯುತ್ತಿದ್ದ 'ಹುರಿಗಾಳು', ಸಂಪಾದಕೀಯ ಲೇಖನಗಳನ್ನು ತಪ್ಪದೆ ಓದುತ್ತಿದ್ದೆ. ಅವರ ಶೈಲಿಯಂತೂ ನನ್ನನ್ನೇ ಮಂತ್ರಮುಗ್ಧನನ್ನಾಗಿ ಮಾಡಿತ್ತು. ಕನ್ನಡ ಭಾಷೆಗೊಂದು ಅವರ ಧೀಮಂತ ಶೈಲಿ ದಿವ್ಯ ಕಾಣಿಕೆ. ಅದು ಗದ್ಯವಲ್ಲ, ಗದ್ಯ ಶೈಲಿಯ ದಿವ್ಯ ಪದ್ಯ. ವಿಶ್ವಕವಿ ರವೀಂದ್ರರ ಗೀತಾಂಜಲಿಯ ಪರಮಾಕರ್ಷಕ ಗದ್ಯದಂತೆಯೇ ಶರ್ಮರ ಗದ್ಯ ನಾಡವರ ಹೃನ್ಮನಗಳನ್ನು ಸೂರೆಗೈದಿತ್ತು. ಪತ್ರಿಕೆ ಎಷ್ಟು ಕಾಗದದಲ್ಲಿ, ಎಂಥ ಬಣ್ಣದ ಕಾಗದದಲ್ಲಿ ಮುದ್ರಿತವಾಗಿ ಹೊರ ಬಂದರೂ ಜನ ಅದರ ಕಡೆಗೆ ಎಳ್ಳಷ್ಟೂ

ಪರಿಗಣಿಸದೇ ಅದರ ಬರವಣಿಗೆಗಾಗಿ ಕೊಳ್ಳುತ್ತಿದ್ದರು. ಕ್ಯೂ ನಿಂತು ಪತ್ರಿಕೆ ಕೊಂಡದ್ದನ್ನು ನಾನು ಕಣ್ಣಾರೆ ನೋಡಿದ್ದೇನೆ. ಅದು ಶ್ರೀ ಕೃಷ್ಣಶರ್ಮರ ಬರವಣಿಗೆ ಜನತೆಗೆ ಮಾಡಿದ್ದ ಮಹಾ ಮೋಡಿ.

ಶರ್ಮರು ನೂರಕ್ಕೆ ನೂರರಷ್ಟು ಗಾಂಧೀ ವಾದಿಗಳು. ಅವರ ವೇಷ-ಭೂಷಣ ಅತ್ಯಂತ ಸರಳ. ಒಂದು ಪಂಚೆ, ಒಂದು ಜುಬ್ಬ ಆಯಿತು. ಕಡ್ಲೆಕಾಯಿ ಎಂದರೆ ಪಂಚಪ್ರಾಣ. ಊಟ ತಿಂಡಿಗಳೂ ತೀರ ಸಾಮಾನ್ಯವೇ. ಸದಾ ಪಾದ ಯಾತ್ರೆ, ಅದೂ ಬರಿಗಾಲಿನಿಂದ. ಅವರನ್ನು ನೋಡಿದರೆ ಇವರೇ ಕೃಷ್ಣಶರ್ಮರೆಂದು ಯಾರಿಗೂ ನಂಬಿಕೆಯಾಗದಷ್ಟು ಸಾರಳ್ಯ. ನಾನಂತೂ ಅವರು ಕೋಪ ಮಾಡಿದ್ದನ್ನು ನೋಡಲೇ ಇಲ್ಲ. ತಮ್ಮ ಕೈ ಕೆಳಗಿನ ಎಲ್ಲರನ್ನೂ ಅದೆಷ್ಟು ಸೌಜನ್ಯದಿಂದ ನಡೆಸಿಕೊಳ್ಳುತ್ತಿದ್ದರೆಂದರೆ ಅದಕ್ಕೆ ಮಾತೇ ಸಾಲದು. ನಾನಂತೂ ನಾನು ಕಡಿಮೆ ದರ್ಜೆಯ ನೌಕರ, ಅವರು ದೊಡ್ಡ ಸಂಪಾದಕರು ಎಂದು ಭಾವಿಸುವಂತೆ ಅವರು ನಡೆದುಕೊಂಡದ್ದನ್ನು ಕಾಣಲೇ ಇಲ್ಲ. ಯಾವಾಗ ಕರೆದರೂ 'ಅರ್ಚಕರೇ' ಎಂದು ಗೌರವ ಸೂಚಕ ಪದವನ್ನು ಬಳಸಿಯೇ ನನ್ನನ್ನು ಅವರು ಕರೆಯುತ್ತಿದ್ದರು. ಆಕಸ್ಮಿಕವಾಗಿ ಕಚೇರಿಗೆ ತಿಂಡಿ ತರಿಸಿದರೆ ನನ್ನನ್ನು ಬಿಟ್ಟು ತಿಂದದ್ದನ್ನು ನಾನು ನೋಡಲೇ ಇಲ್ಲ.

ನಿಜಕ್ಕೂ ವಿಶ್ವಕರ್ನಾಟಕ ಕಚೇರಿ ನಮಗೆಲ್ಲ ನಮ್ಮ ಮನೆಯೆಂದೇ ಭಾಸವಾಗಿತ್ತು. ಒಂದು ಮನೆಯವರಂತೆ ನಾವೆಲ್ಲ ಇದ್ದೆವು. ಕೃಷ್ಣಶರ್ಮರು ಕಚೇರಿಗೆ ಬಂದರೆಂದರೆ ಅದೇನೋ ಅನಿರ್ವಚನೀಯ ಆನಂದ ನಮ್ಮೆಲ್ಲರ ಹೃದಯದಲ್ಲಿ ತುಂಬಿ ಹೋಗುತ್ತಿತ್ತು.

ಶರ್ಮರು ಯಾವಾಗಲೂ ತೀರ ಚಿಕ್ಕ ಅಕ್ಷರ ಬರೆಯುವ ಸ್ವಭಾವದವರು. ಹಲವರು ಅವರಿಗೆ 'ಶರ್ಮಾಜಿ ಸೂಜಿಮೊನೆಯಿಂದ ಬರೆಯುತ್ತಾರೆ' ಎಂದು ಹೇಳುತ್ತಿದ್ದರು. ಅಷ್ಟು ಸಣ್ಣ ಅಕ್ಷರಗಳು. ಆದರೆ ಅವರ ಬರವಣಿಗೆ ತುಂಬ ಸುಂದರ. ನೋಡಲು ಸಲ್ಲಕ್ಷಣ ಪರಿಪೂರ್ಣವಾಗುತ್ತಿತ್ತು ಅವರ ಹಸ್ತಪ್ರತಿ.

* * * *

ಒಂದು ದಿನ ಶರ್ಮಾಜಿ ತುಂಬ ಉತ್ಸಾಹಶಾಲಿಗಳಾಗಿದ್ದ ಸಮಯ. ಅರ್ಚಕರೆ ಬನ್ನಿ ತಿರುಗಾಡಿಕೊಂಡು ಬರೋಣ" ಎಂದರು. ಮರುಕ್ಷಣ ತಕ್ಷಣ "ನೀವು ಬರೆದ ಪದ್ಯಗಳಿದ್ದರೆ ಕೈಲಿ ಹಿಡಿದುಕೊಂಡು ಬನ್ನಿ" ಎಂದರು. ನಾನು ಬಾಲಿಶವಾದ ಕೆಲವು ಪದ್ಯಗಳನ್ನು ಜೇಬಿನಲ್ಲಿ ಇಟ್ಟುಕೊಂಡು ಅವರ ಬೆನ್ನಗುಂಟ ಸಾಗಿದೆ. ಟಿಪ್ಪು ಸುಲ್ತಾನರ ಕೋಟೆಗೆ ಇಬ್ಬರೂ ಬಂದೆವು. ಮೇಲೆ ಹತ್ತಿದೆವು. ಸಂಧ್ಯಾ ಸೂರ್ಯ ಪರಮ ಮನೋಹರವಾಗಿ ಕಾಣಿಸುತ್ತಿದ್ದ. ಮೇಲೆ ಹೋಗಿ ಇಬ್ಬರೂ ಕೂತ ಮೇಲೆ ನನಗೆ ನನ್ನ ಪದ್ಯ ಓದಲು ಹೇಳಿದರು. ನಾನು ಓದಿದೆ. ಅನಂತರ ಶರ್ಮಾಜಿ

"ನಿಮ್ಮ ಕಾವ್ಯದಲ್ಲಿ ಶಕ್ತಿ ಇದೆ. ಸಹೃದಯರಾದವರಿಗೆ ಇದು ಪ್ರಿಯವಾಗಲೇಬೇಕು. ನಿಮಗೆ ಖಂಡಿತ ಭವ್ಯ ಭವಿಷ್ಯವಿದೆ" ಎಂದು ಹೃದಯ ತುಂಬಿ ನಾಲ್ಕು ಪ್ರೋತ್ಸಾಹದ ಮಾತುಗಳನ್ನು ಆಡಿದರು. ತರುಣನಾಗಿದ್ದ ನನಗೆ ಆ ಹಿರಿಯರ ಮಾತು ಅಂದು ಸಹಸ್ರ ಕೋಟಿ ರೂ.ಗಳಿಗಿಂತಲೂ ಹೆಚ್ಚು ಎನಿಸಿತು. ಅದು ಶರ್ಮರ ಔದಾರ್ಯ. ಯೋಗ್ಯತೆಯನ್ನು ಗುರುತಿಸಬಲ್ಲ ಅಂತಶ್ಚಕ್ಷುಗಳು ಅವರಿಗೆ ಖಂಡಿತ ಇವೆ ಎಂಬುದಕ್ಕೆ ಈ ಮಾತೇ ಸಾಕ್ಷಿ.

ಇನ್ನೊಂದು ಬಾರಿ ನಾನು ಕಾದಂಬರಿಯೊಂದನ್ನು ಬರೆದು ಸಿದ್ದಪ್ಪನಹಳ್ಳಿ ಅವರ ಹತ್ತಿರ ಹೋಗಿ ಧೈರ್ಯದಿಂದಲೇ "ಇದಕ್ಕೊಂದು ಮುನ್ನುಡಿ ಬರೆದುಕೊಡುತ್ತೀರ?" ಎಂದು ಕೇಳಿದೆ. "ಇಟ್ಟುಹೋಗಿ; ನೋಡುತ್ತೇನೆ" ಎಂದು ಹೇಳಿದರು. ಹಸ್ತಪ್ರತಿ ಇಟ್ಟು ಬಂದೆ. ಮುಂದೆ ಎರಡೇ ಎರಡು ದಿನದಲ್ಲಿ ತಮ್ಮ ಅಮೂಲ್ಯ ಮುನ್ನುಡಿ ಬರೆದು ಕೊಟ್ಟರು. ಆ ಪುಸ್ತಕವೇ 'ರವಿಶಂಕರ' ಎಂಬ ಪ್ರಗತಿಶೀಲ ಕಾದಂಬರಿ. ಅದಕ್ಕೆ ಆಗ ಒಳ್ಳೆಯ ಹೆಸರೂ ಬಂದಿತು. ಈಗ ನನ್ನಲ್ಲಿ ಆ ಪುಸ್ತಕದ ಒಂದು ಪ್ರತಿಯೂ ಇಲ್ಲ.

ಶರ್ಮಾಜಿ ಆಡಿದಂತೆ ಮಾಡುವ ಮಹಾಪುರುಷರ ಗುಂಪಿಗೆ ಸೇರಿದವರು. ಗಾಂಧಿ ಸಾಹಿತ್ಯ ಕುರಿತು ಅವರು ಮಾಡಿದ ಸೇವೆ ಶಬ್ದಕ್ಕೆ ನಿಲಕದುದು. ಮಲ್ಲೇಶ್ವರದಲ್ಲಿ ಗಾಂಧೀ ಸಾಹಿತ್ಯ ಸಂಘ ಅವರ ತಪಸ್ಸಿನ ಫಲ. ಅದೆಷ್ಟೋ ತ್ಯಾಗಶೀಲ ತರುಣರ ತಂಡವನ್ನು ಕಟ್ಟಿಕೊಂಡು ಸಮಾಜ, ರಾಷ್ಟ್ರ, ಸಾಹಿತ್ಯ ಸೇವೆಯನ್ನು ಅವರು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಮಾಡಿದವರು. ಅವರ ಅಗಾಧ ಸೇವೆಗೆ ಮನ್ನಣೆಯನ್ನು ನಮ್ಮ ಜನ ಹೇಗೆ ಮಾಡಬೇಕಾಗಿತ್ತೋ ಹಾಗೆ ಮಾಡಲಿಲ್ಲ. ಶರ್ಮಾಜಿಗೆ ಆ ಬಗ್ಗೆ ಅತೃಪ್ತಿಯಾಗಲೀ, ನೋವಾಗಲೀ ಕೊಂಚವೂ ಇಲ್ಲ. ಸೂರ್ಯನಾರಾಯಣ ನಿತ್ಯ ಬೆಳಗುತ್ತಾನೆ. ಆತನಿಗೆ ಯಾರ ಹೊಗಳಿಕೆಯಾಗಲೀ, ಪ್ರಶಸ್ತಿಪತ್ರಗಳಾಗಲೀ ಬೇಕಾಗಿಲ್ಲ. ಹಾಗೆ ಶರ್ಮರ ಸೇವೆ ನಾಡಿಗೆ ಸಂದಿದೆ.

ಶ್ರೀಮದ್ರಾಮಯಣವನ್ನು ಓದುವಾಗ ವಾಲ್ಮೀಕಿ ಮಹರ್ಷಿಗಳು ಮಹಾಮಹಿಮನಾದ ಶ್ರೀ ರಾಮಚಂದ್ರ ಪ್ರಭುವನ್ನು ಕುರಿತು ತುಂಬ ವೈದುಂಬಿ ಹಾಡಿದ್ದಾರೆ. ಆ ಶ್ಲೋಕಗಳಲ್ಲೆಲ್ಲ ನನಗೆ ಈ ಮಾತು ತುಂಬ ಪ್ರಿಯವಾಗಿವೆ:

ನಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ
ದೀನಾನುಕಂಪೀ ಧರ್ಮಜ್ಞೋ ನಿತ್ಯಂ ಪ್ರಗ್ರಹವಾನ್ ಶುಚಿಃ ||

(ನೂರು ಅಪಕಾರಗಳು ತನಗೆ ಆಗಿದ್ದರೂ ಅವುಗಳನ್ನು ನೆನೆಯುವುದೇ ಇಲ್ಲ. ಆತನು ದೀನರಲ್ಲಿ ಸಹಾನುಭೂತಿಯುಳ್ಳವನು; ಧರ್ಮವನ್ನು ತಿಳಿದವನು; ತನ್ನ ಮೇಲೆ ತನಗೇ ಹಿಡಿತವಿರಿಸಿಕೊಂಡವನು; ಶುಚಿಯುಳ್ಳವನು.)

ಮಹಾಪುರುಷನೂ ಸಾಕ್ಷಾತ್ ದೇವತಾಸ್ವರೂಪಿಯೂ ಆದ ಶ್ರೀ ರಾಮಚಂದ್ರನಲ್ಲಿದ್ದ ಈ ಗುಣಗಳನ್ನು ನಾನು ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರಲ್ಲಿ ಕಂಡಿದ್ದೇನೆ. ಅಂತೆಯೇ ಅವರ ವ್ಯಕ್ತಿತ್ವಕ್ಕೆ ನಾನು ಮಾರುಹೋಗಿದ್ದೇನೆ. ಶರ್ಮರು ಸಾಹಿತ್ಯ ನಿರ್ಮಾಣ ಮಾಡಿ ದೊಡ್ಡವರಾದವರಲ್ಲ. ಹುಟ್ಟಿನಿಂದಲೇ ಅವರು ದೊಡ್ಡವರು. ಭಾರತೀಯ ಸಂಸ್ಕೃತಿಯಲ್ಲಿ ಯಾವುದು ಸರ್ವ ಶ್ರೇಷ್ಠವೆನಿಸಿದೆಯೋ ಅದಕ್ಕೆ ರೂಪವನ್ನು–ಚೈತನ್ಯವನ್ನು ಕೊಟ್ಟಂತಿದೆ ಅವರ ವ್ಯಕ್ತಿತ್ವ. ಇಂಥ ಧೀಮಂತರನ್ನು ಪಡೆದ ನಾಡು ಧನ್ಯ. ಅವರ ಜೊತೆಗೆ ಕೆಲಸ ಮಾಡಿದ ನಾವೇ ಧನ್ಯರು.

# ಋಜು ಮಾರ್ಗಾವಲಂಬಿ

ತಿರುಮಲೆ ಶ್ರೀನಿವಾಸ ಆಚಾರ್ಯ

**ಶ್ರೀ** ಸಿದ್ಧವನಹಳ್ಳಿ ಕೃಷ್ಣಶರ್ಮರನ್ನು ನಾನು ಮೊದಲಬಾರಿಗೆ ಕಂಡು ಪರಿಚಯ ಮಾಡಿಕೊಂಡಿದ್ದು ಬಳ್ಳಾರಿಯಲ್ಲಿ 1926ರ ಕನ್ನಡ ಸಾಹಿತ್ಯ ಸಮ್ಮೇಳನದ ಕಾಲದಲ್ಲಿ. ಆಗ ಅವರು ಇನ್ನೂ ವಿದ್ಯಾರ್ಥಿ. ತಲೆಯಲ್ಲಿ ಕೂದಲು ಗಂಟು. ಆ ವೇಳೆಗೆ ಆಗಲೇ ಧಾರವಾಡದ ಗೆಳೆಯರ ಗುಂಪಿಗೆ ಸೇರಿದ್ದರು. "ಹರಟೇ ಮಲ್ಲ" ಗುಂಪಿನಲ್ಲಿ ಅವರ ಬಿರುದು. ಅವರ ಸಾಹಿತ್ಯಾರಾಧನೆ ಆಗಲೇ ಆರಂಭವಾಗಿತ್ತು. ಆ ಕಾಲಕ್ಕೆ ಹೆಸರುಗೊಂಡಿದ್ದ 'ಜಯ ಕರ್ನಾಟಕ' ಮಾಸ ಪತ್ರಿಕೆಗೆ ಬರೆಯುತ್ತಿದ್ದರು. ಬೆಟಗೇರಿ ಕೃಷ್ಣ ಶರ್ಮರ 'ಮುದ್ದನ ಮಾತು' ರಚನೆಯಾಗಿತ್ತು. ಸಮ್ಮೇಳನಕ್ಕೆ ಬಂದಿದ್ದ ಕುತೂಹಲಿಗಳಾದ ಕೆಲವು ಸಾಹಿತ್ಯ ಪ್ರೇಮಿಗಳ ಮುಂದೆ ಆ ಕಾವ್ಯ ಭಾಗಗಳನ್ನು ಸಿದ್ಧವನಹಳ್ಳಿಯವರು ಓದಿ ಅದರ ಕಾವ್ಯಗುಣವನ್ನು ಪ್ರಶಂಸೆ ಮಾಡಿದುದು ನೆನಪಿದೆ.

ಈ ಘಟನೆ ಸಿದ್ಧವನಹಳ್ಳಿಯವರ ವ್ಯಕ್ತಿತ್ವದ ಒಂದು ಮುಖದ ಪ್ರತೀಕ. ಇವರಿಗೆ ಸತ್ಕಾವ್ಯಗಳಲ್ಲಿ, ಸತ್ಕಾವ್ಯ ಪ್ರಚಾರದಲ್ಲಿ ಆಸಕ್ತಿ. ಅಂತೆಯೇ ಇವರ ಕಾವ್ಯ ಚೇತನ ಸ್ಫುರಣಗೊಂಡಂತೆ ಸದ್ಗ್ರಂಥ ರಚನೆಯಲ್ಲಿ ತೊಡಗಿದರು. ಇವರು ಕಟ್ಟಿ ಬೆಳೆಸಿದ ಸಂಸ್ಥೆಯಾದ ಮಲ್ಲೇಶ್ವರಂ ಗಾಂಧೀ ಸಾಹಿತ್ಯ ಸಂಘದಲ್ಲಿ ಎಷ್ಟೋ ಸದ್ಗ್ರಂಥಗಳ ಪ್ರವಚನವನ್ನು, ಅಧ್ಯಯನ ಗೋಷ್ಠಿಗಳನ್ನು ನಡೆಸಿದ್ದಾರೆ.

ಅವರನ್ನು ಮತ್ತೆ ನಾನು ಕಂಡುದು ಅವರು ಬೆಂಗಳೂರಿನಲ್ಲಿ ನೆಲಸಿದ ಮೇಲೆ. ಅವರ ಬಾಲ್ಯವಾಗಲಿ, ಹೈದರಾಬಾದಿನಲ್ಲಿ ಅವರ ರಾಜಕೀಯ ಮತ್ತು ಇತರ ಚಟುವಟಿಕೆಗಳಾಗಲಿ ನನಗೆ ತಿಳಿಯ ಬಂದಿರುವುದು ಬಲು ಕೊಂಚ.

ಇವರ ಚಿಕ್ಕಂದಿನ ಪ್ರೌಢಶಾಲೆ ವಿದ್ಯಾಭ್ಯಾಸ ನಡೆದುದು ಚಿತ್ರದುರ್ಗದಲ್ಲಿ. ಆಗ ಸಿದ್ಧವನಹಳ್ಳಿಯಿಂದ ಅವರು ಒಂಟೆತ್ತುಗಾಡಿ ಹೊಡೆದುಕೊಂಡು ಬರುತ್ತಿದ್ದರಂತೆ!

ಇವರ ಶಿಕ್ಷಣ ಇಂಟರ್ ಮೀಡಿಯಟ್ಟಿಗೆ ಮುಗಿಯಿತು. ಆಗ ಮೈಸೂರಲ್ಲಿ ವ್ಯಾಸಂಗ ಮಾಡುತ್ತಿದ್ದ ಇವರು ಪರೀಕ್ಷೆಗೆ ಹೋಗದೆ ಗಾಂಧೀಜೀ ಅವರ ಹಿಂಬಾಲಕರಾದರು. (1926) ಸುಮಾರು ಹನ್ನೆರಡು ವರ್ಷ ಕಾಲ, ಆಗ ಇನ್ನೂ ನೈಜಾಂ ಪ್ರಭುತ್ವದಲ್ಲಿದ್ದ ಹೈದರಾಬಾದು ಸಂಸ್ಥಾನದ ಬಗೆಬಗೆಯ ರಾಜಕೀಯ ಚಟುವಟಿಕೆಗಳಲ್ಲಿ ಆಸಕ್ತರಾಗಿದ್ದರು. ಖಾದಿಬಟ್ಟೆ ಮಾರಾಟ ಸಹ ರಾಜಕೀಯ ಚಟುವಟಿಕೆಗಳಲ್ಲಿ

ಗಣ್ಯವಾಗಿದ್ದ ಕಾಲ ಅದು. ಬೆಳಗ್ಗೆ ಮನೆ ಬಿಟ್ಟು ಹೊರಟರೆ ಹಿಂದಕ್ಕೆ ಬರುವುದು, ಸಂಜೆಯೋ ರಾತ್ರಿಯೊ, ನಡುವೆ 3 ಘಂಟೆಗೊ, 4 ಘಂಟೆಗೋ ಊಟ. ಎಲ್ಲಿಂದರೆ ಅಲ್ಲಿ. ಹಸಿವಿಲ್ಲ ಎಂದು ರಾತ್ರಿ ಊಟಮಾಡದಿರುವ ಪ್ರಸಂಗವೂ ಉಂಟು. ಯಾವುದನ್ನೂ ಗಣಿಸದ ಯೌವನದಲ್ಲಿ ಆಹಾರದ ಬಗ್ಗೆ ಈ ನಿರ್ಲಕ್ಷ್ಯ. ಈ ನಿಯಮರಾಹಿತ್ಯವೇ ಇಳಿವಯಸ್ಸಿನಲ್ಲಿ ಇವರ ಆರೋಗ್ಯ ಕೆಡಲು ಮುಖ್ಯ ಕಾರಣ ಎಂದು ಕಾಣುತ್ತೆ.

ನಾನು ಇವರನ್ನು ಮೊದಲ ಬಾರಿ ಕಾಣುವ ವೇಳೆಗೇ ಇವರು ಒರಟು ಖಾದಿಬಟ್ಟೆ ಹಾಕಿಕೊಳ್ಳುತ್ತಿದ್ದರೆಂದು ನೆನಪು. ಖಾದಿಧಾರಣೆ ಇವರ ಜೀವನದಲ್ಲಿ ಒಂದು ವ್ರತ ದಂತೆ ಸಾಗಿ ಬಂದಿದೆ.

ಇವರು ಬೆಂಗಳೂರಿಗೆ ಬಂದುದು 1940 ರಲ್ಲಿ. ಹೈದರಾಬಾದಿನಲ್ಲಿದ್ದ ವೇಳೆ ಎರಡು ವರ್ಷ ಒಂದು ಮೆಥಡಿಸ್ಟ್ ಶಾಲೆಯಲ್ಲಿ ಕೆಲಸ ಮಾಡಿದರಂತೆ. ರಾಜಕೀಯ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದರೆಂದು ಅಲ್ಲಿಂದ ಓಡಿಸಿದರು. ಈಕಡೆ ಬರುವುದಕ್ಕೆ ಮುಂಚೆ ಒಂದು ವರ್ಷ ಸೇವಾಗ್ರಾಮದಲ್ಲಿದ್ದರು. ಆರು ತಿಂಗಳ ಕಾಲ ನೆಹರೂ ಅವರ "ಆರ್ಗನೈಸಿಂಗ್ ಸೆಕ್ರೆಟರಿ" ಆಗಿದ್ದರಂತೆ.

ಬೆಂಗಳೂರಿಗೆ ಬಂದುದು ಪ್ರಮುಖವಾಗಿ 'ವಿಶ್ವಕರ್ನಾಟಕ' ಪತ್ರಿಕೆಗೆ ನೆರವಾಗಲು. ಇಲ್ಲಿಗೆ ಬಂದಮೇಲೆ, ಶುದ್ಧ ರಾಜಕೀಯದಲ್ಲಿ—ಸ್ವಾತಂತ್ರ್ಯ ಸಂಪಾದನೆಯ ಹೋರಾಟದಲ್ಲಿ ಇವರ ಚಟುವಟಿಕೆ ಕೊಂಚ ಕಡಿಮೆ ಎನ್ನುವಂತಿದೆ. ಈ ಹೋರಾಟ ದಲ್ಲಿ ಕೆಲಸಗಾರರಿಗೆ ಇವರು ಬಲುಮಟ್ಟಿಗೆ ಸಲಹೆಗಾರರಾಗಿದ್ದಂತೆ ಕಂಡುಬರುತ್ತೆ. ಇವರ ಕಾರ್ಯಕ್ಷೇತ್ರವಾದರೊ ಪತ್ರಿಕೋದ್ಯಮ. 'ಜೀವನ' ಪತ್ರಿಕೆ ಧಾರವಾಡದಲ್ಲಿ ಆರಂಭ ಆದಮೇಲೆ ಅಲ್ಲಿದ್ದರು. ಈ ಮಾಸಿಕವನ್ನು ಪೂಜ್ಯ ಮಾಸ್ತಿ ಅವರು ಸಂಪಾದಕ ಮಂಡಳಿಗೆ ವಹಿಸಿದ ಮೇಲೆ ಶ್ರೀ ಸಿ. ಕೆ. ಗೋಪಾಲಕೃಷ್ಣರಾಯರು ತೀರಿಕೊಂಡ ವೇಳೆ, ಇವರ ಸಂಪಾದಕತ್ವವನ್ನು ಸಿದ್ದವನಹಳ್ಳಿಯವರು ವಹಿಸಿಕೊಂಡರು. ಆದರೆ ಕೊಂಚ ಕಾಲದಲ್ಲೇ ಇವರ ದೇಹಾರೋಗ್ಯ ಕೆಟ್ಟಿತು.

ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿಯೂ ದುಡಿದಿದ್ದಾರೆ. ಮಲ್ಲೇಶ್ವರದಲ್ಲಿ ಗಾಂಧಿ ಸಾಹಿತ್ಯ ಸಂಘವನ್ನು ಹೇಗೆ ಕಟ್ಟಿದರು, ಹೇಗೆ ಬೆಳೆಸಿದರು, ಎಂಬುದು ಎಲ್ಲರಿಗೂ ತಿಳಿದ ವಿಷಯ. ಈ ಸಂಘ ಈಗ ಎಲ್ಲರ ಮೆಚ್ಚಿನ ಸಂಸ್ಥೆಯಾಗಿದೆ. ಇದರ ಮುಖ್ಯ ಆಕರ್ಷಣೆ ಒಳ್ಳೆಯ ಪುಸ್ತಕ ಭಂಡಾರ. ಈ ಬಗೆಯ ಗ್ರಂಥಾಲಯಗಳನ್ನು ಏರ್ಪಡಿಸುವುದರಲ್ಲಿ ಇವರಿಗೆ ಅಂದಿನಿಂದಲೂ ಆಸಕ್ತಿ. ಹೈದರಾಬಾದಿನಲ್ಲಿ ಸಾಹಿತ್ಯ ಮಂದಿರದ ಗ್ರಂಥಾಲಯದ ಏರ್ಪಾಡಿಗೆ ಇವರೇ ಮೂಲ.

ಪತ್ರಿಕೋದ್ಯಮದಲ್ಲಿ ಒಲವುಳ್ಳ ಇವರು ಕೆಲವು ಕಾಲ ಸಂಘದ ಮೂಲಕ "ಸರ್ವೋದಯ" ಎಂಬ ಮಾಸಿಕವನ್ನು ಹೊರಡಿಸುತ್ತಿದ್ದರು. ವಿನೋಬಾಜಿ, ದಾದಾ ಧರ್ಮಾಧಿಕಾರಿ ಮುಂತಾದ ಸರ್ವೋದಯ ತಲೆಯಾಳುಗಳ ಬರವಣಿಗೆಯನ್ನು ಕನ್ನಡ ಭಾಷೆಗೆ ತರ್ಜುಮೆ ಮಾಡಿ ಈ ಪತ್ರಿಕೆಯನ್ನು ಸಿದ್ಧಗೊಳಿಸುತ್ತಿದ್ದರು.

ಕೃಷ್ಣಶರ್ಮರ ಸಾಹಿತ್ಯದ ಬಲವನ್ನು ಈಗಾಗಲೆ ಸೂಚಿಸಲಾಗಿದೆ. ಕನ್ನಡ ಗದ್ಯ ಸಾಹಿತ್ಯದಲ್ಲಿ ಇವರ ಶೈಲಿಗೆ ಒಂದು ವಿಶಿಷ್ಟ ಸ್ಥಾನವುಂಟು. ಸಣ್ಣ ಸಣ್ಣ ವಾಕ್ಯಗಳು; ಸಾಕಷ್ಟು ಮಟ್ಟಿಗೆ ಆಡು ಮಾತು ಹೋಲುವ ಶೈಲಿ. ಅಂತೆ ವಿಸಂಧಿಯ ಬಳಕೆ ಹೆಚ್ಚು. 'ಉ', 'ಮು', 'ಯು', 'ವು' ಇತ್ಯಾದಿ ಪ್ರತ್ಯಯಗಳ ಬಳಕೆ ಬಲು ಕಡಿಮೆ.

ಬೆಂಗಳೂರಿಗೆ ಬರುವುದಕ್ಕೆ ಮುಂಚೆಯೇ "ವರ್ಧಾಯಾತ್ರೆ" ಬರೆದಿದ್ದರು. ತರುವಾಯ "ಪರ್ಣಕುಟಿ." ಈ ಗ್ರಂಥ ದೇವರಾಜ ಬಹದ್ದೂರ್ ಸನ್ಮಾನ (ರೂ. 500/-) ಪಡೆದಿದೆ. ಈಚೆಗೆ ಇವರು ಸಿದ್ಧಪಡಿಸಿದ "ರಾಮಾವತಾರ", "ಕೃಷ್ಣಾವತಾರ" ಅನೇಕರು ಬಲ್ಲರು. ರಾಮ ಕಥೆಯ ಮೇಲೆ ಇವರಿಗೆ ಚಿಕ್ಕಂದಿನಿಂದಲೂ ಅಭಿಮಾನ. ರಾಮಾಯಣದಲ್ಲಿ ಇವರು ಮೆಚ್ಚಿಕೊಂಡಿರುವುದು ನೀತಿಪರತೆ—ರಾಮನ ನಡತೆ, ಸತ್ಯಮಾರ್ಗ. ಕೃಷ್ಣನಲ್ಲಿ ಇವರಿಗೆ ನಾಟಿರುವುದು ಬುದ್ಧಿ—ಉಪಾಯ, ಸಮಯಸ್ಫೂರ್ತಿ—ಸಮಯಕ್ಕೆ ತಕ್ಕ ಉಪಾಯ. ಕೃಷ್ಣಾವತಾರ ಅನುವಾದ ಗ್ರಂಥ. ದಿ|| ಮುನ್ಷಿ ಅವರು ಬರೆದಿರುವಷ್ಟು ಕನ್ನಡಿಸಿದ್ದಾರೆ.

ಇವರು ಹೆಚ್ಚಾಗಿ ಆದರಿಸುವ ಧಾರ್ಮಿಕ ಗ್ರಂಥವೆಂದರೆ ಭಗವದ್ಗೀತೆ. ಅಂತೇ ಇವರದು ಪರಿಶುದ್ಧ ಜೀವನ, ನೀತಿಪರವಾದ ಜೀವನ. ತಮ್ಮ ಭಾವನೆಗಳಲ್ಲಿ, ಕೆಲಸಕಾರ್ಯಗಳಲ್ಲಿ ದೃಢವಾದ ನಿಷ್ಠೆ. ಈ ಬಗ್ಗೆ ಒಂದೆರಡು ಉದಾಹರಣೆ ಕೊಡಬಹುದು.

ಇವರು ಪಾದರಕ್ಷೆ ಬಳಸುತ್ತಿದ್ದುದನ್ನು ಅನೇಕರು ಕಾಣರು. ಬಾಪೂಜೀ ತೀರಿಹೋದ ವಾರ್ತೆ ಕೇಳಿದ ಕೂಡಲೆ ಮನೆಯಿಂದ ಹೊರಗೆ ಹೊರಟರಂತೆ. ಆ ತಳಮಳದಲ್ಲಿ ಪಾದರಕ್ಷೆ (ಚಪ್ಪಲಿ) ಮರೆತು ಬರಿಗಾಲಲ್ಲೇ ಹೋದರು. ಅಂದಿನಿಂದ ಮತ್ತೆ ಮೆಟ್ಟಲಿಲ್ಲ!

ಇಂಜನಿಯರಿಂಗ್ ಕಾಲೇಜುಗಳ ಪ್ರವೇಶಕ್ಕೆ ಮಿತಿಮೀರಿದ ಒತ್ತಡ ಇದ್ದ ವೇಳೆ. ಇವರು ಆಯ್ಕೆ ಸಮಿತಿಯ ಸದಸ್ಯರಾಗಿದ್ದರು. ಕೆಲವು ಸದಸ್ಯರ ಅನೀತಿಯಿಂದ ಬೇಸರಗೊಂಡು, ಈ ಋಜು ಮಾರ್ಗಾವಲಂಬಿಗಳು, ಸಮಿತಿ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟರು.

ಹೀಗೆ ನೀತಿಪರರಾದ್ದರಿಂದಲೇ ಹೈದರಾಬಾದಿನಲ್ಲಾಗಲಿ, ಬೆಂಗಳೂರಿನಲ್ಲಾಗಲಿ ಅನೇಕ ಸಾಂಸ್ಕೃತಿಕ ಚಟುವಟಿಕೆಗಳಿಗೆ ಚಂದಾ ಹಣಗಳನ್ನು, ಕೊಡುಗೆಗಳನ್ನು ಸುಲಭವಾಗಿ ಶೇಖರಿಸಲು ಇವರಿಗೆ ಸಾಧ್ಯವಾಯಿತು. ಮಲ್ಲೇಶ್ವರಂ ಗಾಂಧಿ ಭವನ ಇವರ ಋಜುಮಾರ್ಗಾವಲಂಬನದ ಪ್ರತೀಕ.

ಹಿರಿಯರನ್ನು ನಾವು ಮೆಚ್ಚಿಕೊಳ್ಳುವಾಗ, ಅವರು ಹಿರಿಯರಾಗುವಂತೆ ಸಹಕರಿಸಿದ ಅವರ ಮಡದಿಯರನ್ನು ನಾವು ಮರೆಯುವುದುಂಟು. ಕೃಷ್ಣಶರ್ಮರಿಗೆ ಮದುವೆ ಆದುದು, ಈಗಿನ ದೃಷ್ಟಿಯಿಂದ ಚಿಕ್ಕವಯಸ್ಸಿನಲ್ಲೇ. ಎಸ್. ಎಸ್. ಎಲ್. ಸಿ. ಆದ

ಕೂಡಲೆ ಮದುವೆ. ಅಂದಿನಿಂದ ಇವರ ಜೀವನದಲ್ಲಿ ಪಾಲುಗೊಂಡಿರುವವರು ಶ್ರೀಮತಿ ಪ್ರಮೀಳಮ್ಮ. ಈ ದಂಪತಿಗಳದು ದೊಡ್ಡ ಸಂಸಾರ—ಮೂವರು ಗಂಡು ಮಕ್ಕಳು, ಆರು ಮಂದಿ ಹೆಣ್ಣು. ಈ ಮಕ್ಕಳನ್ನು ಬೆಳೆಸಿದುದೇ ಒಂದು ಸಾಧನೆ. ಇದರ ಮೇಲೆ ಗೃಹಕೃತ್ಯದ ಬೇರೆ ಬೇರೆ ಕೆಲಸ. ಕೃಷ್ಣಶರ್ಮರು ಅಂತಹ ಅನುಕೂಲಸ್ಥರಲ್ಲದಿದ್ದರೂ ಉದಾರಿಗಳು. ವಿದ್ಯಾರ್ಜನೆಗಾಗಿ ಇವರ ಮನೆಯಲ್ಲಿ ಬಂಧು ಬಳಗದ ಹುಡುಗರು. ಅವರ ಆರೈಕೆಯೇನೂ ಸಾಮಾನ್ಯ ವಿಚಾರವಲ್ಲ. ಹೀಗೆ ಗೃಹಿಣಿಯಾಗಿ ಪತಿಗೆ ಯಾವ ಯೋಚನೆಯೂ ಇಲ್ಲದೆ ಸಂಸಾರವನ್ನು ನಿರ್ವಹಿಸುತ್ತ, ಪತಿಯ ಎಲ್ಲ ಚಟುವಟಿಕೆಗಳನ್ನೂ ಅರ್ಥಮಾಡಿಕೊಂಡು, ಅವರೊಡನೆ ಸಹಕರಿಸಿ, ಒಲವಿನಿಂದ ಅವರ ಶುಶ್ರೂಷೆ ಮಾಡುತ್ತ ಬಂದಿದಾರೆ; ಈಗಲೂ ಅದೇ ಶ್ರದ್ಧೆಯಿಂದ ಪತಿಸೇವೆಯನ್ನು ಮುಂದುವರಿಸುತ್ತಿದಾರೆ ಈ ಮಹಾತಾಯಿ.

ಗಾಂಧಿ ಸಾಹಿತ್ಯ ಸಂಘ ಕೃಷ್ಣಶರ್ಮರು ಬೆಳೆಸಿದ ಸಂಸ್ಥೆ ಎಂದೆ. ಈ ಸಂಸ್ಥೆಯ ಯಾವ ಕೆಲಸಗಾರರನ್ನಾಗಲಿ ಮರೆಯುಂತಿಲ್ಲ, ಇವರೆಲ್ಲ ಈ ಸಂಘದಲ್ಲಿ ಶರ್ಮರಿಂದ ಸ್ಫೂರ್ತಿ ಪಡೆದು ರೂಪುಗೊಂಡವರು. ತಮ್ಮ ಜೀವನದಲ್ಲಿ ಶರ್ಮರ ಆದರ್ಶಗಳನ್ನು ಅವಲಂಬಿಸಲು ಪ್ರಯತ್ನ ಮಾಡಿರುವಂಥವರು. ಇವರ ನಮ್ರತೆ, ಇವರ ತ್ಯಾಗ, ಸೇವಾಮನೋಭಾವ ಅಭಿನಂದನೀಯ. ಇಂಥವರನ್ನು ರೂಪಿಸುತ್ತಿರುವ ಒಂದು ಅಗ್ರಸಂಸ್ಥೆಯನ್ನು ಕಟ್ಟಿದ ಕೃಷ್ಣಶರ್ಮರು ಜೀವನದಲ್ಲಿ ಖಂಡಿತ ಸಾಫಲ್ಯ ಪಡೆದು ಕೊಂಡಿರುವವರು.

ಇವರ ಸಾಹಿತ್ಯಾರಾಧನೆಯನ್ನು ಈಗಾಗಲೆ ಸೂಚಿಸಲಾಗಿದೆ. ಕೃಷ್ಣಶರ್ಮರು ತೆಲುಗು ಕನ್ನಡಿಗರು. ಮನೆ ಮಾತು ಇಂದಿಗೂ ತೆಲುಗು. ಆದರೆ ಕನ್ನಡನಾಡಿನವರಾದ ಇವರು ಎಳಮೆಯಲ್ಲೇ ಕನ್ನಡದ ಪ್ರಭಾವಕ್ಕೆ ಸಿಕ್ಕಿದರು. ಕನ್ನಡ ಭಾಷೆಯಲ್ಲೇ ಸಾಹಿತ್ಯದೇವಿಯನ್ನು ಆರಾಧಿಸಿದರು. ತಮ್ಮ ವ್ಯಾಸಂಗದ, ಚಿಂತನೆಯ ಭಾವನೆಯ, ಅನುಭವದ, ಅವಲೋಕನದ ಫಲವನ್ನು ಕನ್ನಡಿಗರಿಗೆ ಒದಗಿಸಿದರು.

ಹೀಗೆ ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ ಅವರು ಸಾಹಿತ್ಯಪ್ರೇಮಿ, ರುಚಿ ಸಾಹಿತ್ಯದ ಪೋಷಕ, ಸಾಹಿತ್ಯ ನಿರ್ಮಾತೃ. ಋಜುಮಾರ್ಗಾವಲಂಬಿ, ಸರಳ ಜೀವಿ.

ಇವರಿಗೆ ಜಾತಕದಲ್ಲಿ ನಂಬಿಕೆ ಇಲ್ಲವಂತೆ, ದೇವರಲ್ಲಿ ನಂಬಿಕೆ. ಇವರು ನಂಬಿರುವ ದೇವರು, ಇವರು ಬೇಗ ಆರೋಗ್ಯವಂತರಾಗುವಂತೆ, ಇವರ ಲೋಕಸಂಗ್ರಹ ಕಾರ್ಯ ಮುಂದುವರಿಯುವಂತೆ ಕೃಪೆಗೈಯಲ್ಲಿ—ಅನುಗ್ರಹಿಸಲಿ.

# ಕೃಷ್ಣಶರ್ಮರು—ನನಗೆ ತಿಳಿದಂತೆ

ಡಿ. ವೇಣುಗೋಪಾಲಾಚಾರಿ

೧೯೩೫ ರ ಸುಮಾರು. ಒಮ್ಮೆ ಕೃಷ್ಣಶರ್ಮರು ಬೆಂಗಳೂರು ಹವ್ಯಾಸಿ ನಾಟಕ ಸಂಘದ ಸದಸ್ಯರೊಡನೆ ದಿವಂಗತ ಬಳ್ಳಾರಿ ರಾಘವ (ಮಹಾನಟರು) ಅವರ ಮನೆಗೆ ಬಂದರು. ನೀಲಿ ಸರ್ಜ್‌ಸೂಟು, ತಲೆಗೆ ಸಂಜೆ ಹ್ಯಾಟು, ಮಿರುಗುವ ಬಣ್ಣದ ಟೈ, ಕಾಲುಚೀಲ, ಷೂ, ನೀಟಾಗಿ ಬಾಚಿದ ಕೂದಲು, ಒಳ್ಳೆ ಠೀಕಾಗಿದ್ದ ಸಣ್ಣ ವ್ಯಕ್ತಿ. ಆಕಾರ ಸಣ್ಣಗಿದ್ದರೂ ನಡೆ ನುಡಿಯಲ್ಲಿ ಏನೂ ಕಡಿಮೆ ಇರಲಿಲ್ಲ. ಕನ್ನಡ, ತೆಲುಗು, ಇಂಗ್ಲೀಷಿನಲ್ಲಿ ಬಹು ಮಾತನಾಡಿದರು. ಎಲ್ಲರಲ್ಲೂ ಸತ್ವವಾದ ಚುರುಕಾದ ವಿಚಾರಧಾರೆ. ಯಾರ ಎದುರಿಗಾದರೂ ಸಾಟಿನಿಲ್ಲುವ ಕೆಚ್ಚು. ಕರ್ನಾಟಕದಲ್ಲಿ ಹೆಸರುವಾಸಿಯಾಗಿದ್ದ ಪಂಡಿತ ದಿವಂಗತ ತಾರಾನಾಥರ ವೈಭವದ ದಿನಗಳು ಅವು. ಆ ದಿನಗಳಲ್ಲಿ ಕೃಷ್ಣಶರ್ಮರನ್ನು ನೋಡಿದವರು, ಆ ಷೋಕಿಲಾಲ, ಅಹಂಭಾವ ಪೂರ್ಣ ತರುಣ, ಮುಂದೆ ಒಂದು ದಿನ ಬಹುದೊಡ್ಡ ಲೇಖಕ, ಸರ್ವೋದಯ ಕಾರ್ಯಕರ್ತನಾಗುತ್ತಾನೆಂದು ಕನಸಿನಲ್ಲಿಯೂ ಎಣಿಸಿರಲಾರರು.

ನಾವು ಬಳ್ಳಾರಿಯ ಕೆಲವರು ತಾರಾನಾಥರ ಶಿಷ್ಯರಾಗಿದ್ದೆವು. ನಮ್ಮ ಮಹಾ ಸಾಂಸ್ಕೃತಿಕ ಪರಂಪರೆ, ಭಾರತೀಯತತ್ವಗಳ ಬಗ್ಗೆ ಗುರು ತಾರಾನಾಥರ ಪಾದದಡಿ ಕುಳಿತು, ಕೇಳುತ್ತ ನಮ್ಮ ಜ್ಞಾನದಾಹವನ್ನು ತೀರಿಸಿಕೊಳ್ಳುತ್ತಿದ್ದೆವು. ನಾವು ಶ್ರೀ ಶರ್ಮರನ್ನು ಕಂಡದ್ದು ಈ ಹಿನ್ನೆಲೆಯಲ್ಲಿ. ಬಂದು ಹೋಗುವ ಅನೇಕ ಮೋಜುಗಾರರಂತೆಯೆ ಇವರೂ ಒಬ್ಬರು ಎಂದುಕೊಂಡಿದ್ದೆವು. ಆದರೆ ಅವರು ಕ್ರಾಂತಿಕಾರಿ ಎಂಬುದು ಆಗಲೇ ಸ್ಪಷ್ಟವಾಗಿತ್ತು. ಅವರು ನಮ್ಮ ಗುರುಗಳಲ್ಲಿ ಎಡೆಬಿಡದೆ ಪ್ರಶ್ನಿಸುತ್ತಾ ಗಂಟೆಗಟ್ಟಲೆ ವಾದಿಸುತ್ತಿದ್ದರು. ಮುಂದೆ ಅವರನ್ನು ನಾನು ಪ್ರೇಮಾಯತನದ ಆಶ್ರಮ (ತುಂಗಭದ್ರ–ಮಂತ್ರಾಲಯದ ರಸ್ತೆ)ದಲ್ಲಿ ವೈದ್ಯಶಾಸ್ತ್ರ ವಿದ್ಯಾರ್ಥಿಯಾಗಿ ಕಂಡೆ. ಅಲ್ಲಿ ಗುರು ತಾರಾನಾಥರು "ಪ್ರೇಮ" ವಿದ್ಯಾಪೀಠವೊಂದನ್ನು ಸ್ಥಾಪಿಸಿದ್ದರು. ಕೃಷ್ಣಶರ್ಮರಲ್ಲಿ ಎಂತಹ ಪರಿವರ್ತನೆ ಆಗಿತ್ತು! ಸೂಟು ಬೂಟುಗಳು ಮಾಯವಾಗಿದ್ದವು. ಆ ನಮ್ಮ ಅಜ್ಞ ತರುಣನಲ್ಲಿದ್ದ ಜಂಭ ಮಾಯವಾಗಿತ್ತು. ಒಂದು ಸಾಮಾನ್ಯ ಖದ್ದರ್ ಪಟ್ಟೆ ಪಂಚೆ ಮತ್ತು ಷರಟು ಇಷ್ಟೆ ಅವರ ಉಡುಪು! ಆಶ್ರಮದ ಅಡುಗೆ ಮನೆಯಲ್ಲಿ ಸಹಾಯ ಮಾಡುವುದು, ಬಂದ ಅತಿಥಿಗಳಿಗೆ ಬಡಿಸುವುದು

ಅವರ ಕೆಲಸ. ಸ್ವಲ್ಪ ತೆಳ್ಳಗಿದ್ದರು, ಆದರೆ ಹೆಚ್ಚು ಆರೋಗ್ಯವಂತರಾಗಿದ್ದರು. ಆದರೆ ಕ್ರಾಂತಿಕಾರೀ ಭಾವನೆಯ ಕಿಡಿ ಜ್ವಲಂತವಾಗಿತ್ತು. ನಮ್ರರಾಗಿ ಕಂಡರೂ, ಯಾರಿಗೂ ಡೊಗ್ಗು ಸಲಾಮು ಹಾಕುವವರಲ್ಲ. ಗುರುಗಳಲ್ಲಿ ಅವರಿಗೆ ತುಂಬ ಗೌರವ, ಪ್ರೀತಿ. ಅವರ ಸೇವೆ ಮಾಡುತ್ತಿದ್ದರು. ಅವರ ಬೋಧೆಯನ್ನು ಆಲಿಸುತ್ತಿದ್ದರು. ಆದರೆ ಇತರ ಶಿಷ್ಯರಂತೆ ಅವರು ಗುರುಗಳಿಗೆ ಅಡಿಯಾಳಾಗಿ ಎಲ್ಲಕ್ಕೂ "ಹೌದು" ಎಂದು ತಲೆಯಾಡಿಸುತ್ತಿರಲಿಲ್ಲ. ವೇದಾಂತ, ಮತ, ಸಂಸ್ಕೃತಿ ಇಲ್ಲವೆ ಸಾಹಿತ್ಯ ಮುಂತಾದುವುಗಳ ಮೂಲಭೂತ ವಿಷಯಗಳಲ್ಲೂ ಅವರು ಎದುರುವಾದಿಸಿ ಚರ್ಚಿಸುವರು.

ಆಶ್ರಮದಲ್ಲಿ ಕೃಷ್ಣಶರ್ಮರು ಹೆಚ್ಚು ಕಾಲ ಇರಲಿಲ್ಲ. ಬರೀ ಆಯುರ್ವೇದ ಕಲಿತು ದಿನವೆಲ್ಲಾ ಮದ್ದು ಅರೆಯುವ ಕೆಲಸದಲ್ಲಿ ಸೀಮಿತಗೊಳ್ಳುವುದು ಅವರ ಜಾಯಮಾನವಾಗಿರಲಿಲ್ಲ. ಅವರದು ಬೆಳೆಯುತ್ತಿರುವ ಲೋಕ, ಸಾಹಿತ್ಯ ಕಲೆಗಳ ಲೋಕ. ಅಹಿತಕರವಾದ ವಾತಾವರಣದಲ್ಲಿ, ಅದರಲ್ಲೂ ಅಡಿಗಡಿಗೆ ಗುರುಗಳು ಹೊರಗೆ ಹೋಗುತ್ತಿರುವಾಗ, ಅವರಿಗೆ ಆಶ್ರಮಕ್ಕೆ ಕಟ್ಟುಬೀಳುವುದು ಆಗಲಿಲ್ಲ. ಅಂತೆಯೇ ಅವರು ಅಲ್ಲಿಂದ ಹೊರಟರು. ಆದರೆ ಅವರು ಅನುಭವಿಸಿದ ಕಠಿಣ ಶಿಸ್ತು ಹಾಗೂ ಕ್ರಿಯಾಶೀಲರೂ ಪ್ರತಿಭಾನ್ವಿತರೂ ಆದ ಗುರುಗಳ ನಿಕಟ ಸಂಪರ್ಕ ಇವುಗಳೇ ಶರ್ಮರನ್ನು ಮಹಾ ಸೃಷ್ಟ್ಯಾತ್ಮಕ ಲೇಖಕವಾಗಿಯೂ ಮಹಾತ್ಮಾಜಿಯವರ ಸರ್ವೋದಯ ಆದರ್ಶದ ಪೂರ್ಣ ಶ್ರದ್ಧಾಳುವನ್ನಾಗಿಯೂ ರೂಪಿಸಿರಬೇಕು.

ಮತ್ತೆ ನಾನು ಅವರನ್ನು ಬಳ್ಳಾರಿಯಲ್ಲಿ ಕಂಡದ್ದು ೧೯೬೦-೬೧ ರಲ್ಲಿ ಇರಬಹುದು. ಆಗ ಅವರು ಸರ್ವೋದಯ ಕಾರ್ಯಕರ್ತರು. ಆಗ ಅಲ್ಲಿ ವಿಶ್ವಶಾಂತಿ ಆಚರಣೆಗಾಗಿ ಒಂದು ಸಮಾರಂಭ ಏರ್ಪಟ್ಟಿತ್ತು. ಅಲ್ಲಿ ಅವರು ವಿಶ್ವಶಾಂತಿಯ ಮಹಾ ಆದರ್ಶದ ಬಗ್ಗೆ ಹಾಗೂ ಮಹಾತ್ಮ ಗಾಂಧಿಯವರು ತಮ್ಮ ಅಂತರ್ದೃಷ್ಟಿಯಿಂದ ಕಂಡುಕೊಂಡು ಲೋಕಕ್ಕೆ ಸಾರಿದ್ದ ಶಾಂತಿ ಮತ್ತು ಸೋದರ ಭಾವಗಳ ಬಗ್ಗೆ ಅಮೋಘವಾಗಿ ಭಾಷಣ ಮಾಡಿದರು.

ಕೃಷ್ಣಶರ್ಮರೊಡನೆ ನನಗೆ ಇದ್ದ ಸಂಪರ್ಕದಲ್ಲಿ ಈ ಕೆಲಸ ಘಟನೆಗಳು ನನ್ನ ನೆನಪಿಗೆ ಸ್ಫುಟವಾಗಿ ನಿಂತಿವೆ. ಅವರೂ ನನ್ನ ಹತ್ತಿರದ ಸಂಬಂಧಿಯಾದ್ದರಿಂದ ಅವರನ್ನು ಮದುವೆ, ಔತಣ ಕೂಟ ಇತ್ಯಾದಿ ಅನೇಕ ಸಂದರ್ಭಗಳಲ್ಲಿ ಸಂಧಿಸಿದ್ದೇನೆ. ಆದರೆ ಅವರಲ್ಲಿ ನನಗೆ ಹೆಚ್ಚು ಬೆಲೆ ಬಾಳುವ ಅಂಶಗಳೆಂದರೆ ಅವರ ಭಯರಾಹಿತ್ಯ ಸವಿಯೂ ಪ್ರೇಮಲವೂ ಆದ ಸ್ವಭಾವ, ಸರ್ವೋದಯದ ಉನ್ನತಾದರ್ಶಗಳ ಉಜ್ವಲ ಪ್ರತಿಪಾದನೆ ಮತ್ತು ವ್ಯಕ್ತಿ ಹಾಗೂ ಸಮಸ್ಯೆಗಳ ವ್ಯವಹಾರದಲ್ಲಿನ ವಿಸ್ಮಯಕಾರಿ ಸಮತೂಕ ಹಾಗೂ ಸಮಚಿತ್ತತೆ.

ಅವರ ಬರವಣಿಗೆಗಳ ಬಗ್ಗೆ ನನಗೆ ಹೆಚ್ಚು ತಿಳಿಯದು. ಆದರೆ ಅವರ ವಿಶಿಷ್ಟ ವ್ಯಕ್ತಿತ್ವ ಇನ್ನೂ ನೆನಪಿದೆ ಮೋಜಿನ ವಾತಾವರಣದಲ್ಲಿ ಠಾಕು ಠೀಕಾಗಿ ರಂಗು ರಂಗಾಗಿ ಬೆಳೆದಿದ್ದ ಹುಡುಗ ಹೀಗೆ ಮುಂದೆ ಮಹಾ ಸಾಹಿತಿಯಾಗಿ, ಅದ್ಭುತ ವ್ಯಕ್ತಿತ್ವ ಹೊಂದಿ, ಪಲ್ಲವಿಸಿದ ಪ್ರೀತಿಪಾತ್ರನೂ ಪ್ರೇಮಲ ಸ್ವಭಾವಿಯೂ ಆಗಿ, ಎಲ್ಲರ ಗೌರವಕ್ಕೆ ಪಾತ್ರನಾದ, ಬಹಳ ನಮ್ರತೆಯಿಂದ ಕೂಡಿ, ಸರ್ವೋದಯ ಕ್ಷೇತ್ರದಲ್ಲಿ ಇಡೀ ಜೀವನವನ್ನು ಅರ್ಪಿಸಿದ, ಇತರರಿಗೆ ಸ್ಫೂರ್ತಿಯನ್ನು ಕೊಡುತ್ತಾ ತಾನೂ ಜೊತೆಯಲ್ಲಿ ಇದ್ದ ಎಂಬುದನ್ನು ಚೆನ್ನಾಗಿ ಬಲ್ಲೆ.

# ಸಿದ್ಧವನಹಳ್ಳಿ ಕೃಷ್ಣಶರ್ಮರ ಸಾಹಿತ್ಯ, ಜೀವನ

ಗೊರೂರು ರಾಮಸ್ವಾಮಿ ಅಯ್ಯಂಗಾರ್

ಶ್ರೀಮಾನ್ ಕೃಷ್ಣಶರ್ಮರು, ಕನ್ನಡ ನಾಡಿನ ಹಿರಿಯ, ದೀರ್ಘಕಾಲದಿಂದ ಸೇವೆ ಸಲ್ಲಿಸಿದ ಪ್ರಬಲ ಬರಹಗಾರರು. ಕನ್ನಡ ಇಂಗ್ಲಿಷ್ ತೆಲುಗು ತಮಿಳು ಹಿಂದಿ ಭಾಷೆಗಳನ್ನು ಚೆನ್ನಾಗಿ ಬಲ್ಲವರು. ಜೊತೆಗೆ ಧ್ಯೇಯಪೂರ್ಣವಾದ, ಗುರಿಪೂರ್ಣವಾದ, ಚೈತನ್ಯದಾಯಕವಾದ, ಉದಾತ್ತಮಾರ್ಗದರ್ಶಕವಾದ, ಸಾಹಿತ್ಯಸೃಷ್ಟಿಕರ್ತರು. ಅವರ ಬರವಣಿಗೆಗಳು, ಅವರು ನಾನಾಕ್ಷೇತ್ರಗಳಲ್ಲಿ ಮಾಡಿದ ಕಾರ್ಯಗಳ ಅನುಭವಗಳ ಫಲವಾಗಿ, ಅನುಭವಗಳಿಗೆ ಅಂಗವಾಗಿ, ಅನುಭವದ ಜೊತೆಯಲ್ಲಿಯೇ ಬೆಳೆದುವು. ಅವನ್ನು ಜೀವನಸಾಹಿತ್ಯವೆಂದು ಬೇಕಾದರೂ ಕರೆಯಬಹುದು. ಅಥವಾ ಅವರು ರಚಿಸಿದ ಸಾಹಿತ್ಯವೆಲ್ಲವೂ ಅವರ ಕಾರ್ಯರಂಗಕ್ಕೆ ಪೂರಿತವಾದುವು. ಕೃಷ್ಣಶರ್ಮರ ಸಾಹಿತ್ಯಕ್ಕೂ ಅವರು ನಡೆಸುತ್ತಿದ್ದ ಕಾರ್ಯ ಚಟುವಟಿಕೆಗಳಿಗೂ ತಾದಾತ್ಮ್ಯವೂ ನಿಕಟ ಸಂಬಂಧವೂ ಇದೆ. ಆ ಕಾರ್ಯಗಳಿಲ್ಲದೆ ಆ ಸಾಹಿತ್ಯವಿಲ್ಲ. ಆ ಸಾಹಿತ್ಯವಿಲ್ಲದೆ ಆ ಕಾರ್ಯಗಳಿಲ್ಲ. ತಾವು ಮಾಡುವ ಕಾರ್ಯಕ್ಕೂ ತಾವು ರಚಿಸುವ ಸಾಹಿತ್ಯಕ್ಕೂ ಇಂತಹ ಏಕತ್ವವನ್ನು ಸಾಧಿಸುವ ಲೇಖಕರು ವಿರಳ. ಒಂದು ದೃಷ್ಟಿಯಲ್ಲಿ ಕೃಷ್ಣಶರ್ಮರು ತಾವು ರಚಿಸಿದ ಸಾಹಿತ್ಯದಲ್ಲಿ ರೂಪಿತವಾದ ಬಾಳಿನ ಆದರ್ಶವನ್ನೇ ತಮ್ಮ ನಿತ್ಯ ಜೀವನದಲ್ಲಿ ಸಾಧಿಸಲು ಪ್ರಯತ್ನಪಟ್ಟಿದ್ದಾರೆ.

ಶ್ರೀಮಾನ್ ಕೃಷ್ಣಶರ್ಮರು ಪ್ರಾರಂಭದಿಂದಲೂ ಬಂಡಾಯಗಾರರು. ನಿರಂಕುಶ ಸರ್ಕಾರ, ಅರ್ಥರಹಿತ ಮೂಢನಂಬಿಕೆ, ಸಂಪ್ರದಾಯ, ಹಿಂಸಾಪ್ರವೃತ್ತಿ, ಅಶಿಸ್ತು ಜೀವನವನ್ನು ಒಂದೇ ಬಗೆಯ ವೈವಿಧ್ಯರಹಿತ ಪಡಿಯಚ್ಚಿಗೆ ಒಳಪಡಿಸುವ ಬಾಹ್ಯ ಕಟ್ಟುಪಾಡುಗಳನ್ನು ಪ್ರತಿಭಟಿಸುವವರು. ಮುಖ್ಯವಾಗಿ ಪಾರತಂತ್ರವಿರೋಧಿ. ಯಾವ ಸರ್ವಾಧಿಕಾರಿ ಪ್ರಭುತ್ವವೂ ಇಂಥವರನ್ನು ಸುಲಭವಾಗಿ ಸಹಿಸಲಾರದು. ಹಿಂದೆ ಹೈದರಾಬಾದು ಸರ್ಕಾರ, ಇವರನ್ನು ತಮ್ಮ ರಾಜ್ಯದಿಂದ ಗಡೀಪಾರುಮಾಡಿತ್ತು. ಅಲ್ಲಿಂದ ಇಲ್ಲಿಯವರೆಗೆ ಕೃಷ್ಣಶರ್ಮರು ಮನುಷ್ಯನ ಸ್ವಾತಂತ್ರ್ಯ ವ್ಯಕ್ತಿವಿಕಾಸ, ಪ್ರಾಮಾಣಿಕ ಅಭಿಪ್ರಾಯದ ಪ್ರಕಟನೆಗೆ ಅವಕಾಶ, ಗಾಂಧೀ ಮಾರ್ಗ ಸರ್ವೋದಯ ಸಮಾಜ ಇವುಗಳಿಗಾಗಿ ತಮ್ಮ ಲೇಖನಿಯಿಂದಲೂ ಆಚರಣೆಯಿಂದಲೂ ಸಮಸ್ತ ಶಕ್ತಿಯಿಂದಲೂ ಹೋರಾಡುತ್ತಿದ್ದಾರೆ.

ನಾನು ನೋಡಿದ ಕೃಷ್ಣಶರ್ಮರ ಮೊದಲ ಸಾಹಿತ್ಯಸೃಷ್ಟಿ, ಸುಮಾರು ಮೂವತ್ತೈದು ವರುಷಗಳ ಕೆಳಗೆ 'ಜಯ ಕರ್ನಾಟಕ' ಮಾಸ ಪತ್ರಿಕೆಯಲ್ಲಿ (ಆಗ ದಿವಂಗತ ಆಲೂರು ವೆಂಕಟರಾಯರು ಅದರ ಸಂಪಾದಕರಾಗಿದ್ದರು.) ಅವರ ಎರಡು ಲಘು ಪ್ರಬಂಧಗಳು, ಒಂದರ ಹೆಸರು "ಕೂದಲುಗಳ ಕೈಫಿಯತ್ತು," ಎರಡನೆಯದು "ಲಗ್ನಪತ್ರಿಕೆಗಳ ಸಮಾರಂಭ" ಎರಡೂ ನಗೆಬರಹಗಳೇ. ಕೂದಲುಗಳ ಕೈಫಿಯತ್ತು, ನಮ್ಮ ಸ್ತ್ರೀ ಪುರುಷರ ಕೇಶಗಳು ತಾವು ಕ್ಷೌರಕರ ಕೈಯ್ಯ ಕತ್ತಿಯಲ್ಲಿ ಛಿದ್ರಛಿದ್ರವಾಗಿ ಕತ್ತರಿಸಲ್ಪಟ್ಟು, ಬೋಳಿಸಲ್ಪಟ್ಟು, ತಲೆಯ ಮೇಲೆ ಕೆನ್ನೆಯ ಮೇಲೆ ಮೀಸೆಯ ಮೇಲೆ ನಾನಾ ರೂಪಗಳನ್ನು ಹೊಂದಿ, ಅನುಭವಿಸುತ್ತಿರುವ ಹಿಂಸೆ, ವಿಧವಿಧವಾದ ಆಕಾರ, ಜೊತೆಗೆ ಸ್ತ್ರೀಯರ ಕೋಮಲಕರ ಪಲ್ಲವಗಳಿಂದ ಕೇಶಾಲಂಕಾರ ಸುಗಂಧದ್ರವ್ಯ ಪರಿಮಳಭರಿತ ಪುಷ್ಪಗಳಿಂದ ಆದರಿಸಲ್ಪಟ್ಟು ಕೆಲವು ಕಾಲವಾದರೂ ಸುಖ ಸೌಖ್ಯಗಳನ್ನನುಭವಿಸುವ ಸೌಭಾಗ್ಯ, ಚಿಗುರು ಮೀಸೆ, ಪೊಣ್ಣೆ ಮೀಸೆ, ಚೂಜಿ ಮೀಸೆ, ನಿಂಬೆಹಣ್ಣು ಕುಣಿಸುವ ಮೀಸೆ, ಗಿರಲು ಮೀಸೆ, ಕಾಫೀ ಸೋದಿಸುವ ಮೀಸೆ, ಇಕ್ಕಳ ಮೀಸೆ, ಕತ್ತರಿ ಮೀಸೆ, ಇವುಗಳೆಲ್ಲವರ ಪರಸ್ಪರ ಸಂಭಾಷಣೆ ಇತಿಹಾಸ ವಿವರಣೆ. ಬಹಳ ಆಕರ್ಷಣೀಯವಾದ ತಿಳಿಹಾಸ್ಯ. ಎರಡನೆಯ ಬರವಣಿಗೆ "ಲಗ್ನಪತ್ರಿಕೆಗಳ ಸಮಾರಂಭ" ಹೇಗೆ ಒಬ್ಬ ದೊಡ್ಡಮನುಷ್ಯರು ತಮ್ಮ ಮನೆಯ ಮದುವೆಗೆ, ಬಹಳ ಸೊಗಸಾಗಿ ಚಿನ್ನದ ಶಾಯಿಯಲ್ಲಿ, ತುಂಬ ದೊಡ್ಡದಾಗಿ ಲಗ್ನಪತ್ರಿಕೆಗಳನ್ನು ಮಾಡಿಸಿ ಅವುಗಳನ್ನು ಅಸಂಖ್ಯಾತ ಸಂಖ್ಯೆಯಲ್ಲಿ ತಮ್ಮ ಎಲ್ಲ ಪರಿಚಿತರು, ಪರಿಚಿತರ ಪರಿಚಿತರು ಎಲ್ಲರಿಗೂ ಕಳುಹಿಸಿದರು. ಹೇಗೆ ಅವರೆಲ್ಲ ಮದುವೆಯ ದಿನ ಗೇರಾಯಿಸಿದಾಗ, ಅವರನ್ನು ಮದುವೆ ಮನೆಯಲ್ಲಿ ಕೇಳುವವರಾಗಲೀ, ಗುರುತಿಸುವವರಾಗಲೀ, ಕುಳಿತುಕೊ ಎನ್ನುವವರಾಗಲೀ ಇಲ್ಲದೆ, ಬಿಸಿಲಿನಲ್ಲಿ ಬಳಲಿ ಬೆಂಡಾಗಿ, ಹೋದ ದಾರಿಗೆ ಸುಂಕವಿಲ್ಲದೆ ಮನೆ ಸೇರಿದರು. ಈ ವಿಷಯಗಳನ್ನೆಲ್ಲ ಮನೋಜ್ಞವಾಗಿ ಆತ್ಮೀಯ ವಿನೋದ ಶೈಲಿಯಲ್ಲಿ ವಿವರಿಸಿದ್ದಾರೆ. ಆ ಬರಹಗಳನ್ನು ನೋಡಿದರೆ ಕೃಷ್ಣಶರ್ಮರದು ಎಂತಹ ಲಘುವಾದ ಅನಾಸಕ್ತವಾದ ಮೃದು ಸರಳ ಸ್ವಭಾವವೆಂಬುದು ಗೊತ್ತಾಗುತ್ತದೆ.

ಈ 45 ವರುಷಗಳಿಗಿಂತ ಹೆಚ್ಚಾಗಿಯೇ ಶ್ರೀ ಕೃಷ್ಣಶರ್ಮರು ಅವಿಶ್ರಾಂತವಾಗಿ ಸಾಹಿತ್ಯ ಸೇವೆಯನ್ನು ಮಾಡಿ ಅಸಂಖ್ಯಾಂತ ಗ್ರಂಥರಚನೆಗಳನ್ನು ಮಾಡಿದ್ದಾರೆ. ಸ್ವಾತಂತ್ರ್ಯ ಬರುವುದಕ್ಕೆ (1947) ಮುಂಚಿತವಾಗಿಯೇ ಇವರು ಬಹುಪಾಲು ಗಾಂಧೀ ಸಾಹಿತ್ಯವನ್ನು ಕನ್ನಡಕ್ಕೆ ತರ್ಜುಮೆ ಮಾಡುತ್ತಿದ್ದರು. ಗಾಂಧೀಜಿಯವರ ಬರವಣಿಗೆ ಇಂಗ್ಲಿಷು, ಗುಜರಾತಿ, ಹಿಂದಿಗಳಲ್ಲಿ ಪ್ರಕಟವಾಗುತ್ತಿದ್ದಂತೆಯೇ ಕನ್ನಡಕ್ಕೂ ಕೃಷ್ಣಶರ್ಮರು ಅನುವಾದಿಸುತ್ತಿದ್ದರು. ಇವರ ಕಾರ್ಯಕ್ಕೆ ಗಾಂಧೀಜಿ ಆಶೀರ್ವಾದ ಸಹ ದೊರಕಿತ್ತು. ಈ ದೃಷ್ಟಿಯಿಂದ ಸಹ ಅವರು ರಚಿಸಿದ ಸಾಹಿತ್ಯ ಧ್ಯೇಯಪೂರ್ಣವಾಗಿತ್ತು. ಗಾಂಧೀಜಿಯ ರಾಜಕೀಯ, ಬಾಳು, ಅಭಿಪ್ರಾಯಗಳು ಬೋಧನೆ

ಗಳನ್ನು ಅಲ್ಲಲ್ಲಿಯೇ, ಆಗಿಂದಾಗಲೇ ಜನತೆಗೆ ತಿಳಿಸುವುದು ಅವರ ಗುರಿಯಾಗಿತ್ತು. ಗಾಂಧೀ ಸಾಹಿತ್ಯ ಮಾಲೆಯ ಹೆಸರಿನಲ್ಲಿ ಹೀಗೆ ಗಾಂಧೀಜಿಯ ಬರವಣಿಗೆಗಳು ನಮ್ಮ ಜನತೆಗೆ ಸುಲಭ ಶೈಲಿಯಲ್ಲಿ ಕೈವಶವಾಗುತ್ತಿದ್ದವು. ಕೃಷ್ಣಶರ್ಮರೆಂದರೆ ಗಾಂಧೀ ಸಾಹಿತ್ಯ ಎಂಬಷ್ಟರ ಮಟ್ಟಿಗೆ ಅವರಿಗೆ ಅದರಲ್ಲಿ ತಾದಾತ್ಮ್ಯವಿತ್ತು. ಗಾಂಧೀ ಸಾಹಿತ್ಯ ಮಾಲೆಯ ಜೊತೆಯಲ್ಲಿಯೇ ಕೃಷ್ಣಶರ್ಮರು ಇನ್ನೂ ಒಂದು ಎರಡು ಗ್ರಂಥ ಮಾಲೆಗಳನ್ನು ಕೂಡ ನಡೆಸುತ್ತಿದ್ದರು.

ಶ್ರೀ ಕೃಷ್ಣಶರ್ಮರದು ಬಹುಮುಖ ಪ್ರತಿಭೆ ಮತ್ತು ವ್ಯಕ್ತಿತ್ವ. ಅವರ ಕಾರ್ಯ ಕ್ಷೇತ್ರಗಳೂ ವಿಶಾಲ. ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಅವರು ಗಣನೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಯಾವ ಪ್ರಶ್ನೆಯನ್ನೂ ಕೂಲಂಕಶವಾಗಿ ಚಿಂತಿಸಿ, ನಿರ್ಣಯಿಸಿ ಜನಹಿತ ದೃಷ್ಟಿಯಿಂದ ಮನಮುಟ್ಟುವಂತೆ ಬರೆಯುವುದು ಶ್ರೀ ಶರ್ಮರ ಹುಟ್ಟುಗುಣ. ಅವರ ಯಾವ ಬರವಣಿಗೆಯೂ ಪರಿಣಾಮಕಾರಿಯಾಗಿರುತ್ತದೆ. ಗಾಂಧೀ ಯುಗದ ಸಮಸ್ತ ಸಮಸ್ಯೆಗಳ ಮೇಲೆಯೂ ಅವರು ದೀರ್ಘಕಾಲ ಚಿಂತನೆ ಮಾಡಿರುತ್ತಾರೆ. ನಲವತ್ತೆರಡನೆಯ "ಭಾರತದಿಂದ ತೊಲಗಿ" ಸಂದರ್ಭದಲ್ಲಿ ಅವರ ಲೇಖನಿ ಚಳುವಳಿಯಷ್ಟೇ ಪರಿಣಾಮಕಾರಿ ಕೆಲಸಮಾಡಿತು. ಆಗ ವಾರ ಪತ್ರಿಕೆಯಾಗಿದ್ದ (ತಿರುಮಲೆ ತಾತಾಚಾರ್ಯರ ಮಾತಿನಲ್ಲಿ ನಮ್ಮದು ಯಾವಾಗಲೂ ವಾರ್ ಪತ್ರಿಕೆ. ಸರ್ಕಾರದ ಮೇಲೆ war) "ವಿಶ್ವಕರ್ಣಾಟಕ" ಸಂಪಾದಕತ್ವವನ್ನು ಶ್ರೀ ಕೃಷ್ಣಶರ್ಮರು ಕೆಲವು ಕಾಲ ವಹಿಸಿಕೊಂಡರು. ಅವರೂ ಶ್ರೀ ತಿರುಮಲೆ ತಾತಾಚಾರ್ಯ ಶರ್ಮರೂ ಸೇರಿದುದು ಗಾಳಿ ಬೆಂಕಿ ಸೇರಿದಂತಾಯಿತು. "ವಿಶ್ವ ಕರ್ಣಾಟಕ" ಸ್ವಾತಂತ್ರ್ಯಪ್ರತಿಪಾದನೆಯ ಲೇಖನಗಳನ್ನು ಸಿಡಿಲು ಗುಡುಗು ಮದ್ದು ಗುಂಡುಗಳ ಮಾತುಗಳಲ್ಲಿ ಉಗುಳತೊಡಗಿತು. ಶ್ರೀ ಕೃಷ್ಣಶರ್ಮರು ವೈಸರಾಯ್ ಲಿನ್‌ಲಿತ್‌ಗೋರವರ ನಿರಂಕುಶ ಪ್ರಭುತ್ವವನ್ನೂ ಸ್ವರಾಜ್ಯ ಚಳುವಳಿಯನ್ನು ಅದುಮಲು ಅವರು ಅನುಸರಿಸಿದ ಪಾಶವೀ ಕಾರ್ಯಮಾರ್ಗಗಳನ್ನೂ ನಿರ್ದಾಕ್ಷಿಣ್ಯವಾಗಿ ಖಂಡಿಸಿದರು. ಬ್ರಿಟಿಷ್ ಸರ್ಕಾರ ಚೇಳು ಕುಟುಕಿದ ಮಂಗನಂತೆ ಕೆರಳಿತು. ಪತ್ರಿಕೆಯನ್ನು ಮುಟ್ಟುಗೋಲು ಹಾಕಿಕೊಂಡಿತು. ಕೃಷ್ಣಶರ್ಮರನ್ನು ಸೆರೆಮನೆಗೆ ಅಟ್ಟಿತು. ಸ್ವರಾಜ್ಯ ಕರಗತವಾದ ಮೇಲೆ ಸಹ, ಕೃಷ್ಣಶರ್ಮರು ಅನೇಕ ಪ್ರಚಲಿತ ಸಮಸ್ಯೆಗಳ ಮೇಲೆ ಪತ್ರಿಕೆಗಳಲ್ಲಿ ಬರೆದ ಲೇಖನಗಳನ್ನು 'ಮಾತಿನ ಮಂಟಪ' ವೆಂಬ ಶಿರೋನಾಮೆಯಲ್ಲಿ ಪ್ರಕಟಿಸಿದ್ದಾರೆ. ಆ ಲೇಖನಗಳೆಲ್ಲ ತೀಕ್ಷ್ಣವಾಗಿ ನೇರವಾಗಿ ಬುದ್ಧಿ ಮತ್ತು ಭಾವನೆಗಳ ಸಮಪಾಕವಾಗಿ ವಾಚಕರ ಹೃದಯವನ್ನು ಮುಟ್ಟುತ್ತವೆ.

ಶ್ರೀ ಕೃಷ್ಣಶರ್ಮರ ಗಾಂಧೀ ಸಾಹಿತ್ಯ ವ್ಯವಸಾಯ ಸ್ವಾತಂತ್ರ್ಯಾನಂತರವೂ ಅವಿಚ್ಛಿನ್ನವಾಗಿ ಮುಂದುವರಿಯಿತು. ಗಾಂಧೀಜಿಯ ಬಹುಪಾಲು ಕೃತಿಗಳನ್ನು ಅವರು ಕನ್ನಡಿಸಿದ್ದಾರೆ. ಗಾಂಧೀ ಸ್ಮಾರಕ ನಿಧಿಯವರು, ಸಮಗ್ರ ಗಾಂಧೀ ಗ್ರಂಥಗಳನ್ನು ಕನ್ನಡದಲ್ಲಿ ಪ್ರಕಟಿಸಲು ಪ್ರೊ|| ಎಂ. ಯಾಮುನಾಚಾರ್ಯರ ಮುಖ್ಯ

ಸಂಪಾದಕತ್ವದಲ್ಲಿ ಒಂದು ಸಮಿತಿಯನ್ನು ನಿಯಮಿಸಿದ್ದರು. ಅದರಲ್ಲಿ ಶ್ರೀ ಕೃಷ್ಣ ಶರ್ಮರದು ಪ್ರಮುಖಪಾತ್ರವಾಗಿತ್ತು. ಈ ಲೇಖಕನೂ (ಸಮಗ್ರ ಗಾಂಧೀ ಗ್ರಂಥ ಮಾಲೆಗೆ ಈ ಲೇಖಕನು ಗಾಂಧೀಜಿಯ ಆತ್ಮಕಥೆಯೂ ಸೇರಿದಂತೆ ನಾಲ್ಕು ಗ್ರಂಥ ಗಳನ್ನು ಅನುವಾದ ಮಾಡಿಕೊಟ್ಟಿದ್ದಾನೆ.) ಸಹ ಆ ಸಮಿತಿಯ ಸದಸ್ಯನಾಗಿದ್ದನು. ಭಾರತದ ಪ್ರತಿಯೊಂದು ಪ್ರಾಂತದಲ್ಲಿಯೂ ಹೀಗೆ ಗಾಂಧೀಜಿಯವರ ಬರಹಗಳನ್ನೆಲ್ಲ ಆಯಾ ಪ್ರಾಂತ ಭಾಷೆಗೆ ಅನುವಾದಿಸಿ ಪ್ರಕಟಿಸಲು ಸಮಿತಿಗಳನ್ನು ನಿಯಮಿಸಿದ್ದರೂ ಕನ್ನಡ ಭಾಷೆಯ ಗ್ರಂಥಮಾಲೆಯು ಇಪ್ಪತ್ತು ಸಂಪುಟಗಳಲ್ಲಿ ಎಲ್ಲ ಭಾಷೆಗಳ ಗ್ರಂಥ ಗಳಿಗಿಂತ ಮುಂಚಿತವಾಗಿಯೇ ಪ್ರಕಟವಾಯಿತು. ಪ್ರೊ॥ ಎಂ. ಯಾಮುನಾ ಚಾರ್ಯರ ನೇತೃತ್ವದಲ್ಲಿ ಸಮಿತಿಯು ತುಂಬ ಚುರುಕಾಗಿಯೂ ವ್ಯವಸ್ಥಿತರೀತಿಯಲ್ಲಿಯೂ ಕೆಲಸ ಮಾಡಿತು. ಕೃಷ್ಣಶರ್ಮರಲ್ಲಿ ಯಾವ ಸಮಸ್ಯೆಯನ್ನೂ ಸುಲಭವಾಗಿ ಪರಿಹರಿ ಸುವ ಚಾತುರ್ಯವಿದ್ದಿತು. ಅನೇಕ ಗೊಂದಲ, ದೀರ್ಘಚರ್ಚೆ, ಮಾತುಗಳ ಬಾಹುಳ್ಯ ಇವುಗಳ ದೆಸೆಯಿಂದ ಗಂಟುಬಿದ್ದ ಸಮಸ್ಯೆಗಳ ಮೂಲವನ್ನು ಅವರು ಜೀರ್ಣಿಸಿಕೊಂಡು, ನಾಲ್ಕು ಮಾತುಗಳಲ್ಲಿ ವಿಷಯವನ್ನು ಪರಿಷ್ಕಾರವಾಗಿ ಮುಂದಿಟ್ಟು ಅದಕ್ಕೆ ಪರಿಹಾರವನ್ನೂ ಸೂಚಿಸುತ್ತಿದ್ದರು. ಅನುವಾದ ಕಾರ್ಯ ಮುಂತಾದುವು ಯಾರಿಂದ ವಿಳಂಬವಾದರೂ ಶರ್ಮರು ಆ ಹೊರೆಯನ್ನು ವಹಿಸಿಕೊಂಡು ಮುಗಿಸಿ ಕೊಡುತ್ತಿದ್ದರು.

ಕೃಷ್ಣಶರ್ಮರು ಉತ್ತಮ ವಾಗ್ಮಿಯೂ ಹೌದು. ದೊಡ್ಡ ಸಭೆಯಾಗಲೀ ಚಿಕ್ಕ ಸಮಿತಿಯಾಗಲೀ ಎಲ್ಲರಿಗೂ ಅರ್ಥವಾಗುವಂತೆ ಸರಳವಾದ ಶೈಲಿಯಲ್ಲಿ ಭಾಷಣ ಮಾಡುತ್ತಾರೆ. ಅವರ ಭಾಷಣವನ್ನು ಅನೇಕ ಸಾರಿ ಕೇಳುವ ಸುಯೋಗ ನನಗೆ ಲಭಿಸಿದೆ. ಅಸಹಕಾರದ ಪ್ರಾಬಲ್ಯದ ಕಾಲದಲ್ಲಿ ನಾನೂ ಅವರೂ ಚಿಕ್ಕಮಗಳೂರಿ ನಲ್ಲಿ ಒಂದು ಸಲ ಗಾಂಧೀ ಜಯಂತಿಯ ಭಾಷಣ ಕಾರ್ಯಕ್ರಮಕ್ಕಾಗಿ ಸೇರಿದೆವು. ಆಗ ಸಾಧಾರಣವಾಗಿಯೇ ಯಾವ ಊರಿನಲ್ಲಿಯೂ ಸ್ವಾತಂತ್ರ್ಯ ಭಾಷಣಕ್ಕೆ ಜನ ಬಹು ಹೆಚ್ಚಾಗಿ ಸೇರುತ್ತಿದ್ದರು. ಅದು ಚಳುವಳಿಯ ಕಾಲ. ಚಿಕ್ಕಮಗಳೂರಿನಂತಹ ಸಣ್ಣ (ಆಗ) ಊರಿನಲ್ಲಿಯೂ ಭಾಷಣ ಕೇಳಲು ಅನೇಕ ಸಾವಿರ ಜನ ಸೇರಿದರು. ಆಗ ಧ್ವನಿವಾಹಕ ಯಂತ್ರ ಮುಂತಾದ ಸೌಕರ್ಯಗಳಾವುವೂ ಇರಲಿಲ್ಲ. ನಮ್ಮ ಗಂಟಲ ಶಕ್ತಿಯ ಮೇಲೆಯೇ ನಾವು ಅವಲಂಭಿಸಬೇಕಾಗಿತ್ತು. ಕೃಷ್ಣಶರ್ಮರ ಗಂಟಲಶಕ್ತಿ ನನ್ನ ಕೂಗಿನಷ್ಟು ಬಲವಾದುದಲ್ಲ. ನಾನು ಕೂಗಿ ಭಾಷಣ ಮಾಡಿ ಮುಗಿಸಿ ಕುಳಿತೆ. ಅನಂತರ ಕೃಷ್ಣಶರ್ಮರು ಭಾಷಣವನ್ನು ಪ್ರಾರಂಭಿಸಿದರು. ಹೇಗಾದರೂ ನನ್ನಷ್ಟು ಕಿರಚಲು ಅವರಿಗೆ ಸಾಧ್ಯವಾಗಲಿಲ್ಲ. ಸಭೆಯಲ್ಲಿ ಅದರಲ್ಲಿಯೂ ಮುಂದುಗಡೆಯೇ ಗದ್ದಲ ಷುರುವಾಯಿತು. ಹಿಂದುಗಡೆ ಇನ್ನೂ ಹೆಚ್ಚಾಗಿತ್ತು. ಕೃಷ್ಣಶರ್ಮರು ಸ್ವಲ್ಪವೂ ವಿಚಲಿತರಾಗದೆ ನಿಧಾನವಾಗಿ ಮಿತವಾದ ಧ್ವನಿಯಲ್ಲಿ ಗಾಂಧೀಜೀವಿತದ ಒಂದೆರಡು ಘಟನೆಗಳನ್ನು ವಿವರಿಸಿದರು. ಅದು ಚೆನ್ನಾಗಿ ಕೇಳಿಸದುದರಿಂದಲೂ

ಸ್ವಾರಸ್ಯವಾಗಿದ್ದುದರಿಂದಲೂ ಮುಂದೆ ಕುಳಿತಿದ್ದವರೆಲ್ಲ ನಿಶ್ಶಬ್ದವಾಗಿ ಕುಳಿತು ಕೇಳಿ ಆನಂದಿಸುತ್ತಿದ್ದರು. ಮುಂದೆ ಯಾವಾಗ ನಿಶ್ಶಬ್ದವುಂಟಾಯಿತೋ ಆಗ ಹಿಂದೆಯೂ ಮೌನವಾಯಿತು. ಆರು ಏಳು ಸಾವಿರ ಜನತೆಗೆ ಬಯಲಿನಲ್ಲಿ ಕೃಷ್ಣಶರ್ಮರು ಒಂದು ಗಂಟೆ ಸೊಗಸಾಗಿ ಭಾಷಣ ಮಾಡಿದರು. ಯಾವ ಬಾಹ್ಯ ಉಪಕರಣಗಳ ಸಹಾಯವೂ ಇಲ್ಲದೆ, ಜನತೆ ತಮ್ಮ ಕಿವಿಗಳಿಂದಲೇ ಆ ಅನುಭವಪೂರ್ಣವೂ ಬೋಧಪ್ರದವೂ ಆದ ಭಾಷಣವನ್ನು ನಿಧಾನವಾಗಿ ನೆಮ್ಮದಿಯಿಂದ ಕುಳಿತು ಕೇಳಿ ತಮ್ಮ ಮನೆಗಳಿಗೆ ಹೋದರು.

ಯುವಜನರ ಮೇಲೆ, ಅಸಹಕಾರ ಚಳುವಳಿಯ ಕಾಲದಲ್ಲಿ ಕೃಷ್ಣಶರ್ಮರ ಪ್ರಭಾವ, ಬಹಳವಾಗಿತ್ತು. ಆಗ ಒಂದು ಸಲ ನಂಜನಗೂಡಿನಲ್ಲಿ ಮೈಸೂರು ದೇಶದ ವಿದ್ಯಾರ್ಥಿಗಳು, ಒಂದು ರಾಜಕೀಯ ಸಮ್ಮೇಳನವನ್ನು ನಡೆಸಿದರು. ಆ ಸಭೆಗೆ ಕೃಷ್ಣಶರ್ಮರೂ ನಾನೂ ಭಾಷಣಕ್ಕೆ ಆಹ್ವಾನಿತರಾಗಿದ್ದೆವು. ಮಹಾರಾಷ್ಟ್ರದ ಪಟವರ್ಧನ್‌ರವರು ಸಮ್ಮೇಳನವನ್ನು ಉದ್ಘಾಟಿಸಿದರು. ಭಾಷಣಗಳೆಲ್ಲ ಬಹಳ ಬೆಂಕಿ ಕಾರುತ್ತಿದ್ದವು. ವಿದ್ಯಾರ್ಥಿಗಳು ಉದ್ರೇಕಗೊಂಡು ಕ್ಷುಭಿತರಾಗಿದ್ದರು. ಅವರು ಎಲ್ಲಿ ಹಿಂಸಾಕೃತ್ಯದಲ್ಲಿ ತೊಡಗುತ್ತಾರೋ ಎಂದು ವ್ಯವಸ್ಥಾಪಕರಿಗೇ ದಿಗಿಲು ಉಂಟಾಗಿತ್ತು. ಸರ್ಕಾರದವರು ಪಟವರ್ಧನ್‌ರನ್ನು ಆ ರಾತ್ರಿಯೇ ಮೈಸೂರು ದೇಶ ದಿಂದ ಹೊರಕ್ಕೆ ಕರೆದುಕೊಂಡು ಹೋಗಿ ಗಡಿಯಾಚೆ ಬಿಟ್ಟುಬರಬೇಕೆಂದು ಆಜ್ಞೆ ಮಾಡಿದರು. ವಾತಾವರಣವೆಲ್ಲ ತುಂಬ ಗೊಂದಲಮಯವಾಗಿತ್ತು. ಆಗ ಕೃಷ್ಣ ಶರ್ಮರು ಪರಿಸ್ಥಿತಿಯನ್ನು ತಮ್ಮ ಹತೋಟಿಗೆ ತೆಗೆದುಕೊಂಡು, ವಿದ್ಯಾರ್ಥಿಗಳನ್ನು ಸಂಘಟಿಸಿ, ಅವರ ಉತ್ಸಾಹ ಆಕ್ರೋಶಗಳಿಗೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ಎಲ್ಲ ವಿದ್ಯಾರ್ಥಿಗಳಿಗೂ ಭಾಷಣಮಾಡಲು ಅವಕಾಶ ಕಲ್ಪಿಸಿಕೊಟ್ಟರು. ಯಾವ ಹಿಂಸಾಕೃತ್ಯಗಳೂ ನಡೆಯದೆ ಸಮ್ಮೇಳನ ಶಾಂತವಾಗಿ ಮುಕ್ತಾಯವಾಯಿತು. ತಾವು ಸಮ್ಮೇಳನವನ್ನು ಕರೆದುದೇ ವ್ಯರ್ಥವಾಯಿತೆಂದು ಹತಾಶೆಗೊಂಡಿದ್ದ ವಿದ್ಯಾರ್ಥಿಗಳು, ಸಮ್ಮೇಳನ ಚೆನ್ನಾಗಿ ನಡೆಯಿತೆಂದೂ ಮುಂದಲ ಕಾರ್ಯಕ್ರಮಗಳಿಗೆ ಸರಿಯಾದ ಮಾರ್ಗದರ್ಶನ ದೊರೆಕಿತೆಂದೂ ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿದರು. ಒಂದೇ ಒಂದು ಬಲ್ಬುಕೂಡ ಒಡೆಯಲಿಲ್ಲ.

ಕೃಷ್ಣಶರ್ಮರು ಬಹಳ ಪ್ರಬಲ ವಾಗ್ಮಿಗಳೆಂಬುದು ಎಲ್ಲರ ಅನುಭವ. ಅವರು ಮಾಡುವ ರಾಜಕೀಯ ಭಾಷಣಗಳೂ ಸಹ, ಬರಿಯ ಶುಷ್ಕಕಂಠಶೋಷಣೆ, ಪಕ್ಷದ ಘೋಷಣೆಗಳ ಪ್ರಚಾರವಾಗಿರದೆ ಅರ್ಥಪೂರ್ಣವೂ ಸ್ವಾರಸ್ಯವೂ ದೇಶಾಭಿಮಾನ ಪೂರಿತವೂ ಆಗಿರುತ್ತವೆ. ಅವರ ದೀರ್ಘ ಕಾಲದ ಅನುಭವದಿಂದ ಅವರಲ್ಲಿ ಬಹಳ ವೈವಿಧ್ಯದ ಸರಕುಗಳು ಸೇರಿಕೊಂಡಿವೆ. ಅವರು ತಮ್ಮ ವಯಸ್ಸಿನ ವೃದ್ಧರೊಂದಿಗೂ ತಮ್ಮ ಮಗನ ವಯಸ್ಸಿನ ಯುವಕರೊಂದಿಗೂ ಒಂದೇ ಸಮನಾದ ಸೌಲಭ್ಯ ಉತ್ಸಾಹದಿಂದ ಅವರವರಿಗೆ ಪ್ರಿಯವಾದ ವಿಷಯಗಳನ್ನು ಕುರಿತು ಸಂಭಾಷಿಸಬಲ್ಲರು.

ಒಂದುಸಲ ಗಾಂಧೀ ಗ್ರಂಥಮಾಲೆಯ ಒಂದು ಪುಸ್ತಕದ ಬಿಡುಗಡೆಯ ಸಮಾರಂಭದಲ್ಲಿ ಅವರೂ ನಾನೂ ಧಾರವಾಡದಲ್ಲಿ ಸೇರಿದೆವು. ಜೊತೆಗೆ ನಾವು ಅಲ್ಲಿ ಆ ಒಂದೇ ದಿನ ಇದ್ದುದರಿಂದ, ಐದು ಸಂಸ್ಥೆಗಳಲ್ಲಿ (ಹೈಸ್ಕೂಲು ಕಾಲೇಜುಗಳಲ್ಲಿ) ಭಾಷಣ ಮಾಡಲು ಆಹ್ವಾನಿತರಾಗಿದ್ದೆವು. ಒಂದು ಉಪಾಧ್ಯಾಯರ ಕಾಲೇಜಿಗೂ ಹೋಗಬೇಕಾಗಿತ್ತು. ಎರಡು ಕಡೆ ನನ್ನ ಭಾಷಣ, ಅವರ ಅಧ್ಯಕ್ಷತೆ. ಮತ್ತೆರಡು ಕಡೆ ಅವರ ಭಾಷಣ, ನನ್ನ ಅಧ್ಯಕ್ಷತೆ ಇತ್ತು. ಉಪಾಧ್ಯಾಯರ ಕಾಲೇಜಿನಲ್ಲಿ ಇಬ್ಬರ ಭಾಷಣವೂ ಇತ್ತು. ಶ್ರೀ ಶರ್ಮರು ಐದು ಕಡೆಗಳಲ್ಲಿಯೂ ಐದು ಪ್ರತ್ಯೇಕ ರೀತಿಯ ಭಾಷಣಗಳನ್ನೇ ಮಾಡಿದರು. ಒಂದು ಭಾಷಣದಂತೆ ಒಂದು ಇರಲಿಲ್ಲ. ಒಂದರಲ್ಲಿ ಹೇಳಿದ ಕಥೆ ಮತ್ತೊಂದರಲ್ಲಿರಲಿಲ್ಲ. ಎಲ್ಲ ಭಾಷಣಗಳೂ ಸ್ವಾರಸ್ಯವಾಗಿ ಇನ್ನೂ ಅಷ್ಟು ಕೇಳೋಣ ಎಂಬಂತೆ ಇದ್ದವು. ಹೀಗೆ ಸ್ವಲ್ಪವೂ ಪೂರ್ವಸಿದ್ಧತೆಯಿಲ್ಲದೆ ವಿವಿಧ ರೀತಿಯ ಶ್ರೋತೃಗಳ ಎದುರಿಗೆ ಅವರಿಗೆ ರುಚಿಸಬಹುದಾದ ಆಶುಭಾಷಣಗಳನ್ನು ಮಾಡಬೇಕಾದರೆ ಅವರು ಬಹುಶ್ರುತರೂ ಬಹುವಾಚಕರೂ ತುಂಬ ಅನುಭವಿಗಳೂ ಜ್ಞಾನಾರ್ಜನೆಯನ್ನು ಮಾಡಿದವರೂ ಆಗಿರಬೇಕೆಂಬುದು ಯಾರಿಗಾದರೂ ವ್ಯಕ್ತವಾಗುತ್ತದೆ.

ಗಾಂಧೀ ಬರಹಗಳ ಅನುವಾದ, ವಿನೋಬ ಲೇಖನಗಳು, ನೆಹರು, ರಾಜೇಂದ್ರ ಪ್ರಸಾದರ ಆತ್ಮಕಥೆಯ ಅನುವಾದ ಇವುಗಳಲ್ಲದೆ ಕೃಷ್ಣಶರ್ಮರು ವಾರ್ಧಾಯಾತ್ರೆ, ಪರ್ಣಕುಟಿ, ವಲ್ಲಬಾಯಿಪಟೇಲರ ಜೀವನ ಚರಿತ್ರೆ, ಕರ್ನಾಟಕದ ಮಹನೀಯರನ್ನು ಕುರಿತ ಒಂದು ಗ್ರಂಥ, ಜವಹರ್‌ಲಾಲ್ ನೆಹ್ರುರವರ ಪ್ರಪಂಚದ ಇತಿಹಾಸ (World History: ಜಗತ್ಕಥಾವಲ್ಲರಿ) ಕೃಷ್ಣಾವತಾರ, ರಾಮಾವತಾರ ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ. ವಾರ್ಧಾಯಾತ್ರೆ ಮತ್ತು ಪರ್ಣಕುಟಿ ಗಾಂಧೀಯವರ ಆಶ್ರಮ ಮತ್ತು ಗಾಂಧೀ ಗುಡಿಸಲನ್ನು ಚಿತ್ರಿಸುವ ಗ್ರಂಥಗಳು. ಇವು ಒಂದು ರೀತಿಯಲ್ಲಿ ಪ್ರವಾಸಿ ಸಾಹಿತ್ಯವಾದರೂ ಗಾಂಧೀಜಿಯವರ ಜೀವನ ಕಾರ್ಯರಂಗ, ಅವರ ಸಾನ್ನಿಧ್ಯದ ವಾತಾವರಣ, ಸುತ್ತಮುತ್ತಲ ಜನತೆಯ ಮೇಲೆ ಅವರ ಪ್ರಭಾವ–ಒಟ್ಟಿನಲ್ಲಿ ಈ ಪುಸ್ತಕಗಳ ಗುರಿ ಸಹ ಗಾಂಧೀಜಿಯ ಜೀವನಾನುಭವ ಪ್ರಭಾವಗಳ ದರ್ಶನವೆ. ಈ ಗ್ರಂಥಗಳಲ್ಲಿ ಕೃಷ್ಣಶರ್ಮರ ಗದ್ಯಶೈಲಿ ತುಂಬ ರಸವತ್ತಾಗಿ ಬಂದಿದೆ. ಕೃಷ್ಣಾವತಾರ ಕೆ. ಎಂ. ಮುನಶಿಯವರ ಗ್ರಂಥದ ಅನುವಾದ. ಇದೊಂದು ಬೃಹತ್ ಗ್ರಂಥ. ಶ್ರೀಕೃಷ್ಣ ಪ್ರಾರಂಭದಿಂದಲೂ ನಮ್ಮ ಜನರಿಗೆ ಪ್ರಿಯನಾದ ದೇವರು. ಇವನೊಬ್ಬ ಸಮಸ್ಯಾವ್ಯಕ್ತಿಯೂ ಹೌದು. ಅವನು ಮಾಡಿದ ಎಲ್ಲ ಕಾರ್ಯಗಳೂ ಚರ್ಚೆಗೆ ಆಸ್ಪದವನ್ನು ಕೊಟ್ಟವೆ. ಕೃಷ್ಣಾವತಾರದ ಕಾರ್ಯಗಳ ಮೇಲೆ ಹೊರಟಿರುವಷ್ಟು ಗ್ರಂಥಗಳು ಮತ್ತಾವ ಅವತಾರದ ಮೇಲೆಯೂ ಹೊರಟಿಲ್ಲವೆಂದು ಹೇಳಬಹುದು. ಕೆ. ಎಂ. ಮುನಶಿಯವರು ಈ ಅವತಾರವನ್ನು ಒಂದು ಕಾದಂಬರಿ ಅಥವಾ ಮಹತ್‌ವ್ಯಕ್ತಿಯ ಜನನ, ಬೆಳವಣಿಗೆ, ಶಕ್ತಿಗಳ ವಿಕಾಸ, ಸಂಘರ್ಷಣೆ, ಸಾಧನೆ, ಧ್ಯೇಯ ಸಾಧನೆ, ಸಿದ್ಧಿ ಈ ರೂಪದಲ್ಲಿ ಚಿತ್ರಿಸಿದ್ದಾರೆ. ಶ್ರೀ ಕೃಷ್ಣಶರ್ಮರ ಅನುವಾದ ಚೆನ್ನಾಗಿ ಬಂದಿದೆ.

ಕೃಷ್ಣಾವತಾರವನ್ನು ಅನುವಾದ ಮಾಡಿದ ನಂತರ ರಾಮಾವತಾರವನ್ನು ತಾನೇ ಸ್ವತಃ ಬರೆದುದು ಶ್ರೀ ಕೃಷ್ಣಶರ್ಮರ ಭಕ್ತಿಪೂರಿತ ಮನೋಭಾವನೆಯ ಗುರುತು. ರಾಮಾವತಾರವನ್ನು ಬರೆದಾಗ ಮನಸ್ಸಿಗೆ ಒಂದು ಬಗೆಯ ಅಸೀಮಶಾಂತಿಯುಂಟಾಯಿತೆಂದು ಅವರೇ ನನ್ನೊಂದಿಗೆ ಒಂದು ಸಲ ಹೇಳಿದರು. ಈ ಎರಡು ಗ್ರಂಥಗಳೂ ಸಹ ಕೃಷ್ಣಶರ್ಮರ ದೈವಭಕ್ತಿ ಸಾತ್ವಿಕಸ್ವಭಾವದ ಉದಾಹರಣೆಗಳೆನ್ನಬಹುದು. ಜವಹರ್‌ಲಾಲ್ ನೆಹ್ರುರವರ ಜಗತ್ಕಥಾವಲ್ಲರಿ (Glimpses of World History) ಎಂಬ ಗ್ರಂಥದ ಅನುವಾದವೂ ಸೊಗಸಾಗಿ ಬಂದಿದೆ.

ಕೃಷ್ಣಶರ್ಮರ ಸಾಹಿತ್ಯವನ್ನು ಪ್ರಾಮಾಣಿಕ ಸಾಹಿತ್ಯವೆಂದು ಕರೆಯಬಹುದು. ಪ್ರಾಮಾಣಿಕವೆಂದರೆ ಅವರು ಬರೆದಿರುವ ಪ್ರತಿಯೊಂದು ಅಂಶವನ್ನೂ ಅವರು ಮನಸ್ಸಿನಿಂದ ಅನುಭವಿಸಿ ಜೀವಿಸಿ ಚಿತ್ರಿಸಿದ್ದಾರೆ. ತಾವು ಬರೆದಿರುವುದನ್ನೆಲ್ಲ ತಮ್ಮ ಜೀವನದಲ್ಲಿ ಸಾಧಿಸಲು ಪ್ರಯತ್ನಿಸಿರುವುದರಿಂದಲೇ ಅದನ್ನು ಪ್ರಾಮಾಣಿಕ ಸಾಹಿತ್ಯವೆಂದು ಕರೆಯಬಹುದು. ಇವರ ಸಾಹಿತ್ಯ ರಚನೆಯ ಲಕ್ಷಣ ಮುಖ್ಯವಾಗಿ, ಸ್ಪಷ್ಟವಾದ ಧ್ಯೇಯ ಸಾಧನೆ. ಸರಳವಾಗಿ ಅರ್ಥವಾಗುವ ಸಣ್ಣ ಸಣ್ಣ ವಾಕ್ಯಗಳು, ಶೈಲಿಯಲ್ಲಿ ಒಂದು ಬಗೆಯ ಆತ್ಮೀಯತೆ, ವಾಚಕನನ್ನು ಒಲಿಸಿಕೊಳ್ಳುವ ಒಂದು ವ್ಯಕ್ತಿತ್ವಸ್ಪರ್ಶ, ನೇರವಾದ ನಿರೂಪಣೆ ತೀಕ್ಷ್ಣಬುದ್ಧಿಯ ಹೊಳಹು.

ತಮ್ಮ ಸಾಹಿತ್ಯದ ಧ್ಯೇಯವನ್ನು ಸಾಧಿಸುವುದಕ್ಕಾಗಿಯೇ ಅವರು ಗಾಂಧೀ ಸಾಹಿತ್ಯ ಸಂಘವನ್ನು ಸ್ಥಾಪಿಸಿ, ಅದಕ್ಕಾಗಿ ತುಂಬ ಕಷ್ಟನಷ್ಟ ಹೊಂದಿ, ಒಂದು ಗಾಂಧೀ ಭವನವನ್ನು ನಿರ್ಮಾಣ ಮಾಡಿದ್ದಾರೆ. ಅನೇಕ ಯುವಕರಿಗೆ ಮಾರ್ಗದರ್ಶಕರಾಗಿ ಅವರಲ್ಲಿ ಗಾಂಧೀ ಧ್ಯೇಯ, ಉತ್ತಮ ಸಾಹಿತ್ಯ ಸಂಸ್ಕೃತಿಗಳ ಪ್ರೀತಿ, ಒಳ್ಳೆಯ ಅಭಿರುಚಿ, ಕಾರ್ಯದಕ್ಷತೆ, ದೇಶಪ್ರೇಮ, ಇವನ್ನೆಲ್ಲ ಸ್ಫೂರ್ತಿಗೊಳಿಸುತ್ತಿದ್ದಾರೆ. ಹೀಗೆ ಕೃಷ್ಣಶರ್ಮರು ಒಂದು ವ್ಯಕ್ತಿ ಮಾತ್ರವಲ್ಲ ; ಸಂಸ್ಥೆಯೂ ಹೌದು.

ಗಾಂಧೀಜಿ, ವಿನೋಬಾರವರ ತತ್ವಪ್ರಚಾರಕ್ಕಾಗಿಯೇ ಅವರು 'ಸರ್ವೋದಯ' ವೆಂಬ ಮಾಸ ಪತ್ರಿಕೆಯನ್ನು, ತುಂಬ ಕಷ್ಟ ಮತ್ತು ಆರ್ಥಿಕ ಮುಗ್ಗಟ್ಟು ಇದ್ದರೂ ಅನೇಕ ವರುಷಗಳ ಕಾಲ ನಡಸಿದರು. ಅವರ ತೀಕ್ಷ್ಣಬುದ್ಧಿ ಮತ್ತು ಮೇಧಾಶಕ್ತಿಗೆ, ನನ್ನ ಅನುಭವದ ಒಂದು ಉದಾಹರಣೆಯನ್ನು ಹೇಳಬಹುದು. ಆಚಾರ್ಯ ವಿನೋಬ ಭಾವೆ ಅವರು, ತಮ್ಮ ಭೂದಾನ ಯಾತ್ರೆಯ ಸಂದರ್ಭದಲ್ಲಿ, ಬೆಂಗಳೂರಿಗೆ ಬಂದರು ; ಸೆಂಟ್ರಲ್ ಕಾಲೇಜು ಮೈದಾನದಲ್ಲಿ ಪ್ರಚಂಡ ಸಭೆ ನಡೆಯಿತು. ಭಾವೆಯವರು ಹಿಂದಿಯಲ್ಲಿ ಮಾಡಿದ ಭಾಷಣವನ್ನು ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು, ಕನ್ನಡಕ್ಕೆ ತರ್ಜುಮೆ ಮಾಡಿದರು. ಭಾವೆಯವರ ಭಾಷಣ, ತುಂಬ ಸ್ವಾರಸ್ಯವೂ ಭಾವಪೂರ್ಣವೂ ಹೃದಯವನ್ನು ತಳಮಳಗೊಳಿಸಿ ಬುದ್ಧಿಯನ್ನು ಪ್ರಚೋದನೆಗೊಳಿಸುವುದೂ ಆಗಿದ್ದಿತು. ಕೃಷ್ಣಶರ್ಮರ ಅನುವಾದ, ಭಾವೆಯವರ ಸುಸಂಸ್ಕೃತ ಶಕ್ತಿಪೂರಿತ ವಾಗ್ಝರಿ, ಹೃದಯ ತುಂಬಿದ ಅಂತಃಕರಣ, ತೀಕ್ಷ್ಣಮತಿತ್ವ, ಇವುಗಳೊಂದಿಗೆ

ತಾದಾತ್ಮ್ಯವನ್ನು ಹೊಂದಿ, ನೆರಳಿನಂತೆ ಅನುಸರಿಸುತ್ತಿದ್ದಿತು. ಭಾಷಣ ಮತ್ತು ಅನುವಾದದ ಪರಿಣಾಮ ಜನತೆಯ ಮೇಲೆ ಬಹಳ ಚೆನ್ನಾಗಿ ಆಯಿತು. ಕೊನೆಯಲ್ಲಿ ವಿನೋಬ ಭಾವೆಯವರು "ನಾನೂ ಕೃಷ್ಣಶರ್ಮರ ಅನುವಾದವನ್ನು ಅನುಸರಿಸಿದೆ. ಅನುವಾದ ಬಹಳ ಚೆನ್ನಾಗಿ ಬಂದಿತು. ಇದಕ್ಕೆ ಮುಖ್ಯಕಾರಣ, ಕೃಷ್ಣಶರ್ಮರೂ ನನ್ನಂತೆಯೇ ಈ ವಿಷಯದಲ್ಲಿ ಆಲೋಚನೆ ಮಾಡಿರುವುದು" ಎಂದರು.

ಶ್ರೀ ಕೃಷ್ಣಶರ್ಮರನ್ನು ಸಾಹಿತ್ಯದಲ್ಲಿ ಯಾವ ಭಾಗಕ್ಕೆ ಸೇರಿಸಬಹುದು. ಕವಿಯೇ ನಾಟಕಕಾರನೇ ವಿಮರ್ಶಕನೇ ಪ್ರಬಂಧಕಾರನೇ ಕಾದಂಬರಿಕಾರನೇ ಎಂದು ವಿನೋದವಾಗಿ ಅವರ ಎದುರಿಗೇ ಚರ್ಚಿಸುವುದುಂಟು. ಒಂದು ಸಲ, ಒಬ್ಬ ಕನ್ನಡ ಸಾಹಿತ್ಯ ಚರಿತ್ರಕಾರರು ಅವರಿಗೆ "ನಿಮ್ಮನ್ನು ಯಾವ ಭಾಗಕ್ಕೆ ಸೇರಿಸಬೇಕೆಂಬುದು ನನಗೆ ಸಮಸ್ಯೆಯಾಗಿದೆ" ಎಂದರು. ಶರ್ಮರು ನಗುತ್ತ "ನಾನು ಸಾಹಿತಿಯೇ ಅಲ್ಲ. ನಾನು ಹೇಗೂ ನಿಮ್ಮ ಕೈಗೆ ಸಿಕ್ಕುವವನಲ್ಲ. ನನ್ನ ಕೈಬಿಡಿ" ಎಂದರು. ಆದರೆ ನಮ್ಮ ಸಮಕಾಲೀನ ಸಾಹಿತ್ಯದಲ್ಲಿ ಅವರ ಹೆಸರು, ಪ್ರಭಾವ ಬರದೆ ಇರಲು ಸಾಧ್ಯವೇ ಇಲ್ಲ. ವಿಶ್ವಕೋಶದಲ್ಲಿಯೂ ಅವರ ಹೆಸರು ಬಂದೇ ಇದೆ.

ಕೃಷ್ಣಶರ್ಮರ ಜೀವನವೂ ಸಾಹಿತ್ಯವೂ ಒಂದೇ ವೃಕ್ಷದ ಎರಡು ಕೊಂಬೆಗಳು. ಅವು ಒಂದಕ್ಕೊಂದಕ್ಕೆ ಪೂರಿತವಾಗಿವೆ. ಈ ದೃಷ್ಟಿಯಿಂದ ನೋಡುವಾಗ ಈ ಬಾಳು ಆದರ್ಶವೂ ಸಾರ್ಥಕವೂ ಪೂರ್ಣವೂ ಆಗಿದೆಯೆಂದು ನಾವೆಲ್ಲ ಹೆಮ್ಮೆಪಡಬಹುದಾಗಿದೆ. ಈ ನೆಮ್ಮದಿಯಿಂದ, ಈ ಜೀವದ ಸಹವಾಸ ನಮಗೆ ಇನ್ನೂ ಅನೇಕ ವರ್ಷಗಳ ಕಾಲ ಲಭಿಸುವ ಶುಭವನ್ನು ದೇವರು ನಮಗೆ ಕರುಣಿಸಲಿ ಎಂದು ಪ್ರಾರ್ಥಿಸುವಂತಾಗುತ್ತದೆ.

# ಗಾಂಧೀ ಸಾಹಿತಿ

ಜಿ. ವಿ. ನಾರಾಯಣಮೂರ್ತಿ

**ಕನ್ನಡದ ಶರ್ಮತ್ರಯರು :**

ಕನ್ನಡದ ಹಿಂದಿನ ಪೀಳಿಗೆಯ ಲೇಖಕರಲ್ಲಿ ಶರ್ಮತ್ರಯರು ಪ್ರಸಿದ್ಧರು : ತಿರುಮಲೆ ತಾತಾಚಾರ್ಯ ಶರ್ಮ, ಸಿದ್ದವನಹಳ್ಳಿ ಕೃಷ್ಣಶರ್ಮ ಮತ್ತು ಬೇಟಗೇರಿ ಕೃಷ್ಣ ಶರ್ಮ ಇವರೇ ಆ ತ್ರಯರು. ಇವರುಗಳ ಪೈಕಿ, ತುಂಬು ವಯಸ್ಸಿನವರಾದರೂ ಯುವಕರನ್ನು ನಾಚಿಸುವ ಶ್ರದ್ಧೆ-ಉತ್ಸಾಹಗಳಿಂದ, ವಿಚಾರಪಟುತೆಯಿಂದ ಇನ್ನೂ ಕ್ರಿಯಾಶೀಲರಾಗಿದ್ದಾರೆ ತಿರುಮಲೆ ತಾತಾಚಾರ್ಯರು. ಬೇಟಗೇರಿಯವರು ತಮ್ಮ ಸೀಮಾರೇಖೆಯೊಳಗೆ ಕ್ರಿಯಾತತ್ಪರರಾಗಿದ್ದಾರೆ. ಸಿದ್ದವನಹಳ್ಳಿಯವರು ಅಪಾರ ದುಡಿದು, ತಮ್ಮದೇ ಒಂದು ವಿಶಿಷ್ಟ ಜಾಡನ್ನು ಸೃಷ್ಟಿಸಿ, ಅದರಲ್ಲಿ ಬದುಕಿನ ಒಂದು ಬಗೆಯ ಸಿದ್ಧಿಯನ್ನು ಕಂಡು, ಕ್ರಿಯಾರಂಗದಿಂದ ಈಗ ವಿರಮಿಸಿದ್ದಾರೆ; ಕಾಯದ ಅನಿವಾರ್ಯ ಕೋಟಲೆಗೆ ತುತ್ತಾಗಿ ಶುಲ್ಕ ತೆರುತ್ತಿದ್ದಾರೆ. ಕಾಯದ ಮುಸಲತ್ತು ಸದಾ ನಡೆದಿರುತ್ತದೆ; ಅದರೊಡನೆ ಸೆಣಸುವ ವೀರರು ಧೀರರೇ ಆಗಿರಬೇಕು. ಅಂಥ ಧೀರರಲ್ಲಿ ಒಬ್ಬರು ಸಿದ್ದವನಹಳ್ಳಿ ಕೃಷ್ಣಶರ್ಮರು.

ಈ ಮೂರು ಮಂದಿಯೂ ಭಾರತೀಯ ಸ್ವಾತಂತ್ರ್ಯ ಹೋರಾಟದ ನಿಸ್ಸೀಮ ಯೋಧರು; ಬಾಳನ್ನು ತಾವು ಕಂಡ ಆದರ್ಶದ ಸಾಧನೆಗೆ ಮೀಸಲಾಗಿ ಇಟ್ಟವರು. ಪತ್ರಿಕೋದ್ಯಮ ಇವರನ್ನು ತನ್ನ ಸೆಳೆತದ ಕಕ್ಷೆಯಲ್ಲಿ ಆತುಗೊಂಡಿತ್ತು. ಗಾಂಧೀ ಯುಗದ ಕರೆ ಇವರನ್ನು ತನ್ನ ಮೋಹದ ಬಲೆಯಲ್ಲಿ ಕಟ್ಟಿಹಾಕಿತ್ತು. ಒಬ್ಬೊಬ್ಬರ ಸಾಧನೆ ಮತ್ತು ಸಿದ್ಧಿ ಇಂದಿನ ಪೀಳಿಗೆಗೆ ಒಂದು ಸ್ಫೂರ್ತಿಯ ಕೇಂದ್ರ; ತ್ಯಾಗಭಾವಕ್ಕೆ, ನಿಷ್ಠೆಗೆ ನಿದರ್ಶನ.

ಪ್ರಕೃತ ಲೇಖನ ಸಿದ್ದವನಹಳ್ಳಿ ಕೃಷ್ಣಶರ್ಮರನ್ನು ಕುರಿತುದು.

**ಗಾಂಧೀ ವ್ಯಕ್ತಿತ್ವದ ಮೋಡಿ :**

ಭಾರತೀಯರ ಮೇಲೂ ಸಮಗ್ರ ನಾಗರಿಕ ಜಗತ್ತಿನ ಮೇಲೂ ಗಾಂಧೀಜಿಯ ವ್ಯಕ್ತಿತ್ವ ಬೀರಿದ ಮೋಡಿ ನ ಭೂತೋ ನ ಭವಿಷ್ಯತಿ. ಗಾಂಧೀಜಿ ೧೯೧೫ ರಲ್ಲಿ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಹಿಂದಿರುಗಿ ಬಂದ ಐದು ವರ್ಷಗಳಲ್ಲಿ ಆಸೇತು

ಹಿಮಾಚಲ ಪರ್ಯಂತ ವಿಸ್ತಾರದ ರಾಷ್ಟ್ರದಲ್ಲಿ ತ್ರಿವಿಕ್ರಮ ಮೂರ್ತಿಯಂತೆ ಮುಗಿಲೆತ್ತರಕ್ಕೆ ನಿಂತು, ಕೋಟ್ಯಂತರ ಮಂದಿಯನ್ನು ಸೂಜಿಗಲ್ಲಿನಂತೆ ತಮ್ಮೆಡೆಗೆ ಆಕರ್ಷಿಸಿಕೊಂಡರು.

ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಇತಿಹಾಸದಲ್ಲಿ ೧೯೨೪ರಲ್ಲಿ ನಡೆದ ಬೆಳಗಾವಿಯ ವಿಶೇಷ ಅಧಿವೇಶನ ತುಂಬ ಮಹತ್ವದ್ದು. ಆ ಅಧಿವೇಶನಕ್ಕೆ ಮಾತ್ರ ಅಧ್ಯಕ್ಷತೆ ವಹಿಸಿದ್ದ ಗಾಂಧೀಜಿ, ಕರ್ನಾಟಕ ಜನತೆಯ ಸೌಜನ್ಯ, ಉತ್ಸಾಹ ಇವುಗಳನ್ನು ಕಂಡು, 'ಕರ್ನಾಟಕ ನನ್ನ ಪ್ರಾಂತ' ಎಂದು ನುಡಿದುದು ಭಾಗ್ಯವೇ ಸರಿ. ಅವರ ಜೀವನ, ವಿಚಾರಧಾರೆ ಮತ್ತು ಕಾರ್ಯಕ್ರಮ ಕನ್ನಡದ ನಾಯಕರ, ಕನ್ನಡ ಜನದ ಮನೋಮಂದಿರದಲ್ಲಿ ನಿಂತು, ಧೀರ ಕೃತಿಗಳಲ್ಲಿ ತೊಡಗುವಂತೆ ಪ್ರೇರೇಪಿಸಿದುವು. ಕವಿಗಳು, ಲೇಖಕರು, ಕಲಾಭಿಜ್ಞರು, ಪ್ರತಿಭಾವಂತರು, ಸಾಮಾನ್ಯ ಜನ ಇವರೆಲ್ಲರ ಹೃದಯಗಳಲ್ಲಿ ಗಾಂಧೀಜಿಯ ವ್ಯಕ್ತಿತ್ವ ಅಚ್ಚೊತ್ತಿ ನಿಂತಿತು. ಎಲ್ಲ ಜನ ಏನೋ ಒಂದು ಸಮ್ಮೋಹನಕ್ಕೆ, ಗಾರುಡಿಗೆ, ಮೋಡಿಗೆ ಬದ್ಧರಾದಂತೆ ಆಯಿತು. ಗಾಂಧೀ ಊದಿದ ಸ್ವಾತಂತ್ರ್ಯದ ಕಹಳೆ, ಎಲ್ಲರಲ್ಲಿ ಮಾರ್ದನಿ ಕೊಟ್ಟಿತು; ಸ್ವಾತಂತ್ರ್ಯ ಹೋರಾಟದಲ್ಲಿ ಧುಮ್ಮಿಕ್ಕಿ, ಆ ದೈವೀಪುರುಷನ ಆಣತಿಯಂತೆ ಎಲ್ಲ ಬಗೆಯ ತ್ಯಾಗಕ್ಕೂ ಸಿದ್ಧವಾಗುವಂತೆ ಮಾಡಿತು.

ಅಹಿಂಸಕ ಅಸಹಕಾರ ಆಂದೋಲನ, ಸವಿನಯ ಶಾಸನೋಲ್ಲಂಘನ ನವನವೀನ ಸಮರತಂತ್ರವೆನಿಸಿತು. ಆ ಅದ್ಭುತ ಸಂಗ್ರಾಮ ವಿಧಾನ ಯಾರನ್ನೂ ಸುಮ್ಮನೆ ಕೂರಲು ಬಿಡುತ್ತಿರಲಿಲ್ಲ; ಅಂದು ರಾಷ್ಟ್ರವೇದಿಕೆಯ ಮೇಲೆ ಸೃಷ್ಟಿಯಾದ ಅಗ್ನಿಕುಂಡಕ್ಕೆ ತಮ್ಮ ಭಾಗದ ಹವಿಸ್ಸನ್ನು ಅರ್ಪಿಸಲು ಎಲ್ಲ ಅಣಿಯಾದರು.

ವಿದ್ಯಾರ್ಥಿ ಕೃಷ್ಣಶರ್ಮರು ಇಂಥ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲುಗೊಂಡುದು ಸಹಜವೇ ಆಯಿತು. ಈ ಶತಮಾನದ ಎರಡು, ಮೂರು ಮತ್ತು ನಾಲ್ಕನೆಯ ದಶಕಗಳ ಕಾಲ ಗಾಂಧೀ ನಾಯಕತ್ವದ ಸ್ವಾತಂತ್ರ್ಯ ಸಮರದ ಕಾಲ. ಕೃಷ್ಣಶರ್ಮರು ಈ ಸಮರದಲ್ಲಿ ಗಣನೀಯ ಪಾತ್ರ ವಹಿಸಿದರು. ಗಾಂಧೀ ವ್ಯಕ್ತಿತ್ವದ ಮೋಡಿ ಅವರನ್ನು ಹಲವಾರು ಬಗೆಗಳಲ್ಲಿ ಆಕರ್ಷಿಸಿತ್ತು.

## ನೆಲೆ ತಪ್ಪಿದ ಸ್ವಾತಂತ್ರ್ಯ ಯೋಧ:

ಗಾಂಧೀಜಿ ಸ್ವಾತಂತ್ರ್ಯ ಯೋಧರಿಗೆ ಆದರ್ಶ ಸೇನಾನಿಯಾಗಿದ್ದರು. ಅವರು ನಿಯೋಜಿಸಿ, ಸಂಯೋಜಿಸಿದ ಸಮರ ವಿಧಾನ, ನೈತಿಕ – ಧಾರ್ಮಿಕ ಸ್ವರೂಪದ್ದಾಗಿದ್ದಿತು. ಅಂದು ಕೊಂದು, ಕೊಲೆಯಾಗುವ ಸಮರವಲ್ಲ. ಕೈದುವೆತ್ತಿ ಮೇಲಡರಿ ಬಂದ ಶತ್ರುವಿಗೆ ಪ್ರೇಮದ ಸ್ವಾಗತವನ್ನೇ ಪ್ರತಿಯಾದ ಆಯುಧವನ್ನಾಗಿ ಬಳಸುವ ಸಮರ ವಿಧಾನ. ವಜ್ರಕಠೋರ – ಕರ್ಕಶ ಮನಸ್ಸಿನ ಏನನ್ನೂ ದಯಾಹೀನದಾರ್ಷ್ಟ್ಯ ದರ್ಪಗಳ ಪ್ರಭುತ್ವವನ್ನೂ ಪರಿವರ್ತಿಸುವ ಸಮರ.

ಇಂಥ ಸಮರ ಪಡೆಗೆ ಸ್ವೇಚ್ಛಾಪ್ರೇರಿತರಾಗಿ ಸೇರಿದ ಕೃಷ್ಣಶರ್ಮರು ಹೈದರಾಬಾದ್‌ನಲ್ಲಿ ತಮ್ಮ ಪ್ರಥಮ ಕಾರ್ಯರಂಗವನ್ನು ಕಂಡರು. ಜೀವವಿಮಾ ಏಜೆಂಟ್, ಪಂಡಿತ ಕೃಷ್ಣಶರ್ಮರು ಹೈದರಾಬಾದಿನ ಆಸಫ್ ಝಾಹೀ ಪ್ರಭುತ್ವಕ್ಕೆ ತಮ್ಮ ಬರಹ, ಮತ್ತು ಕ್ರಿಯೆಗಳಿಂದ ಆತಂಕದ ಶಕ್ತಿಯಾದರು; ಆಳರಸರಿಗೆ ನಿದ್ರಾಭಂಗ ಮಾಡಿ, ದುಸ್ಸ್ವಪ್ನಗಳನ್ನು ತಂದುಕೊಟ್ಟ ಶಕ್ತಿಯಾದರು. ಪ್ರಭುತ್ವ ಅವರನ್ನು ರಾಜ್ಯದಿಂದ ಹೊರದೂಡುವ ಆಜ್ಞೆಮಾಡಿತು. ಸ್ವಾತಂತ್ರ್ಯಯೋಧನಿಗೆ ನೆಲೆ ತಪ್ಪಿದರೂ, ವರ್ಧಾದಲ್ಲಿ ಆಶ್ರಯ ದೊರಕಿತು. ಗಾಂಧೀಜಿಯ ಸಾನ್ನಿಧ್ಯದಲ್ಲಿ ಅವರ ಆಪ್ತ ಪರಿವಾರದ ಮಹಾದೇವ ದೇಸಾಯಿ, ವಿನೋಬಾ, ಜೆ. ಜಿ. ಕುಮಾರಪ್ಪ, ಕಿ. ಘ. ಮಶ್ರೂವಾಲಾ, ವಿವಿಧ ನಿರ್ಮಾಣ – ವಿಧಾಯಕ ಕಾರ್ಯಗಳ ಅಧ್ವರ್ಯುಗಳು ಇವರೆಲ್ಲರ ಪರಿಚಯ, ಸ್ನೇಹ ಇವುಗಳನ್ನು ಪಡೆವ ಲಾಭ ಅವರಿಗಾಯಿತು. ಗಾಂಧೀ ವಿಚಾರ ಧಾರೆಯ ಬಗೆಗೆ, ಗಾಂಧೀಜಿಯಿಂದಲೋ ಅವರ ಪ್ರಧಾನ ಶಿಷ್ಯರಿಂದಲೋ ಅರಿತುಕೊಳ್ಳುವ ಸುವರ್ಣ ಅವಕಾಶ ಅವರಿಗೆ ದೊರಕಿತು. ಧ್ಯೇಯನಿಷ್ಠೆ, ಅದಮ್ಯ ಉತ್ಸಾಹ ಇವು ಅವರ ಬದುಕಿನ ಅಮೂಲ್ಯ ಬಂಡವಾಳವಾಯಿತು. ಅದು ವೆಚ್ಚ ಮಾಡಿದಷ್ಟೂ ಕಡಿಮೆಯಾಗದೆ ಅಧಿಕಾಧಿಕವಾಗಿ ಹೆಚ್ಚುವ ಬಂಡವಾಳವಾಯಿತು. ಸ್ವಾತಂತ್ರ್ಯಯೋಧ, ಗಾಂಧೀ ವಿಚಾರ ಪರನಾಗಿ ಲೇಖಣಿಯ ಯೋಧನಾಗಲು ಅವಕಾಶ ದೊರಕಿತು.

## ವೀರ ಪತ್ರಿಕೋದ್ಯಮಿ :

ಈ ಶತಕದ ಮೂರನೆಯ ದಶಕದ ವರ್ಷಗಳಲ್ಲಿ ಇನ್ನೂ ಐಕ್ಯಕಾಣದೆ, ಹರಿದು ಹಂಚಿ ಹೋಗಿದ್ದ ಕನ್ನಡಿಗರು ಸಂಘಟನೆಯ ಸನ್ನಾಹದಲ್ಲಿದ್ದರು. ಎಲ್ಲ ದೇಶೀಯ ಸಂಸ್ಥಾನಗಳಂತೆಯೇ ಮೈಸೂರು ರಾಜ್ಯದಲ್ಲಿಯೂ ಕಾಂಗ್ರೆಸ್ ಜವಾಬುದಾರಿ ಸರಕಾರದ ಸಾಧನೆಗಾಗಿ ವಿಪ್ಲವ ಹೂಡಿದ್ದ ಕಾಲ. ಗಾಂಧೀ ನಾಯಕತ್ವವೇ ಈ ಎಲ್ಲ ದೇಶೀಯ ರಾಜ್ಯಗಳ ಪ್ರಜೆಗಳಿಗೂ ಪರಮ ನಾಯಕತ್ವ ಆಗಿದ್ದಿತು.

ಈ ಸಮಯದಲ್ಲಿ ವೃತ್ತ ಪತ್ರಿಕೆಗಳ ಸ್ವಾತಂತ್ರ್ಯ ರಕ್ಷಣೆಗಾಗಿ ಮತ್ತು ಅವುಗಳ ಮೇಲಿನ ಕರಾಳ ಶಾಸನವನ್ನು ಪ್ರಭುತ್ವ ತೆಗೆದುಹಾಕುವವರೆಗೂ ಅಗ್ರಲೇಖನವನ್ನು ಬರೆಯುವುದಿಲ್ಲವೆಂದು ಭೀಷ್ಮಪ್ರತಿಜ್ಞೆ ಮಾಡಿದ್ದವರು ವಿಶ್ವಕರ್ಣಾಟಕ ಸ್ಥಾಪಕ-ಸಂಪಾದಕ ತಿರುಮಲೆ ತಾತಾಚಾರ್ಯ ಶರ್ಮರು. ಅವರು ಆಗಾಗ ಪ್ರಭುತ್ವದ ಗದಾ ಪ್ರಹಾರಕ್ಕೆ ತುತ್ತಾದರೂ, ಜಗ್ಗದ ಧೀರನಾಗಿ, ಸತ್ಯವಾಣಿಯನ್ನೇ ನುಡಿಯುತ್ತಾ ಏಕಾಂಗಿ ವೀರನಂತೆ ಸೆಣಸುತ್ತಿದ್ದರು. ಗಾಂಧೀ ವ್ಯಕ್ತಿತ್ವಕ್ಕೆ ಮಾರುಹೋಗಿದ್ದ ಶ್ರೀಯುತರು, ಬ್ರಿಟಿಷ್ ಭಾರತದಲ್ಲಿ ಸಾಮ್ರಾಜ್ಯ ಸರಕಾರದ ಕೋಪಾನಲಕ್ಕೆ ತುತ್ತಾಗಿ, ನುಗ್ಗಿನುರಿಯಾಗುತ್ತಿದ್ದ ಇಂಡಿಯನ್ ಎಕ್ಸ್‌ಪ್ರೆಸ್, ಫ್ರೀ ಪ್ರೆಸ್ ಜರ್ನಲ್, ಸ್ವರಾಜ್ಯ ಮೊದಲಾದ ಪತ್ರಿಕೆಗಳ ಸಂಪಾದಕರುಗಳಂತೆ ಮೈಸೂರು

ರಾಜ್ಯದಲ್ಲಿ ಸ್ವಾತಂತ್ರ್ಯದ ಸಂಜನ್ನು ಎತ್ತಿಹಿಡಿದು, ಸಾರ್ವಜನಿಕ ಪ್ರಜ್ಞೆಯನ್ನೂ ಸತ್ವವನ್ನೂ ಕಾಪಾಡಿಕೊಂಡು ಬಂದಿದ್ದರು. ಅವರು ವೈಯಕ್ತಿಕವಾಗಿ ಪಟ್ಟ ಕಷ್ಟ-ನಷ್ಟ ಹೇಳತೀರದು.

ವರ್ಧಾದಿಂದ ಬೆಂಗಳೂರಿಗೆ ಬಂದು ನೆಲೆಸಿದ ಕೃಷ್ಣಶರ್ಮರು ತಾತಾಚಾರ್ಯರಿಗೆ ಬಲಗೈ ಆಗಿ ನಿಂತರು. ಅವರೇ ಕೆಲವು ಕಾಲ ಪತ್ರಿಕೆಯ ಸಂಪಾದಕತ್ವ ವಹಿಸಿಕೊಂಡರು. ಅವರು ಬರೆಯುತ್ತಿದ್ದ ಟೀಕೆ-ಟಿಪ್ಪಣಿಗಳು, ಲಘು ಸಂಪಾದಕೀಯಗಳು, ಸರಕಾರದ ಅನ್ಯಾಯಗಳ ಬಗೆಗೆ ಎಸೆಯುತ್ತಿದ್ದ 'ಪ್ರಶ್ನೆಪೀಠಿಕೆ'ಗಳ ಸವಾಲುಗಳೂ ಅವರನ್ನು ರಾಜ್ಯದ ಲೇಖಕರ ಉನ್ನತ ಪಂಕ್ತಿಯಲ್ಲಿ ನಿಲ್ಲಿಸಿದುವು. ಮಾತುಗಾರರಾಗಿಯೂ ಕೃಷ್ಣಶರ್ಮರು ಇಡಿಯ ಕರ್ನಾಟಕದ ಗಮನವನ್ನೇ ಸೆಳೆದರು. ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳ ಪ್ರಚಾರ, ಪ್ರಗತಿ ವಿರೋಧಿಗಳ ಪ್ರತಿಗಾಮಿಗಳ ಸೋಲನ್ನು ನಿಲ್ಲಿಸಿ, ಅವರ ವಾಗ್ಬಂಧನವನ್ನೇ ಮಾಡುವಂಥ ಮಾತಿನ ಚಾತುರ್ಯ, ಸಾಮರ್ಥ್ಯ ಕೃಷ್ಣಶರ್ಮರ ವೈಶಿಷ್ಟ್ಯವಾಗಿತ್ತು. ಕನ್ನಡಕ್ಕೆ ಪ್ರಾಧಾನ್ಯತೆಯ ಪ್ರಶ್ನೆ ಬಂದಾಗ, ಅದರ ಬಗೆಗೆ ಓಜೋಯುಕ್ತವಾಗಿ, ವೀರತನದಿಂದ ಹೋರಾಡಿದ ಕಡುಗಲಿಗಳ ತಂಡದ ನಾಯಕರಲ್ಲಿ ಅವರಿಗೆ ಅಗ್ರಗಣ್ಯಸ್ಥಾನ ದೊರಕಿತು. ವಿಚಾರವಂತರೆಲ್ಲರ ಬಾಯಲ್ಲೂ ಕೃಷ್ಣಶರ್ಮರೇ. ಕನ್ನಡ, ಹಿಂದೀ, ತೆಲುಗು, ತಮಿಳು, ಉರ್ದು, ಸಂಸ್ಕೃತ, ಇಂಗ್ಲಿಷ್ ಈ ಭಾಷೆಗಳನ್ನೆಲ್ಲ ಕರತಲಾಮಲಕ ಮಾಡಿಕೊಂಡಿದ್ದ ಕೃಷ್ಣಶರ್ಮರ ಮಾತು ಬರಹ, ಸಂಭಾಷಣೆಯ ವೈಖರಿ ನಾಡಿನಲ್ಲೆಲ್ಲ ಪ್ರಸಿದ್ಧವಾಯಿತು.

ವೃತ್ತಪತ್ರಿಕಾ ಕ್ಷೇತ್ರದಲ್ಲಿ ಶರ್ಮರ ಕಾರ್ಯ ಶಿಖರಕ್ಕೆ ಏರಿದುದು 'ಹರಿಜನ' ಪತ್ರಿಕೆಯ ಕನ್ನಡ ಆವೃತ್ತಿಯನ್ನು ತರಲು ಯತ್ನಿಸಿದಾಗ. ಹರಿಜನ ಪತ್ರಿಕೆ ಗಾಂಧೀಜಿಯ ಸಮಗ್ರ ಪ್ರಯೋಗಗಳ ಮುಖವಾಣಿಯಾಗಿತ್ತು. ಅದು ಗಾಂಧೀ ವಿಚಾರದ ಕೇಂದ್ರ ಬಿಂದುವಾಗಿತ್ತು ; ಮಾರ್ಗದರ್ಶಕವಾಗಿತ್ತು. ಸ್ವಾತಂತ್ರ್ಯ ಹೋರಾಟಗಾರರಿಗೆ ಆತ್ಮ ಪರೀಕ್ಷೆ ಮಾಡಿಕೊಳ್ಳಲು ದರ್ಪಣದಂತಿತ್ತು. ಗಾಂಧೀ ಸಾಹಿತ್ಯವನ್ನು ಹೀಗೆ ಕನ್ನಡಕ್ಕೆ ತರುವ ಕೆಲಸ ಶರ್ಮರಿಂದ ಆರಂಭವಾಯಿತು. ಇದು ಅವರ ಸಂಚಿತ ಪುಣ್ಯಫಲ. ದೇಶಾಭಿಮಾನದ ಕಾರಂಜಿ ಪುಟಿದು ಅವ್ಯಾಹತವಾಗಿ ಹರಿಯಲು ಅವರಿಗೆ ನೆರವಾಯಿತು ; ಅವರ ಸಾಹಿತ್ಯ ನಿರ್ಮಾಣ ಶಕ್ತಿಗೆ ಒಂದು ಆಧಾರ ದೊರಕಿತು ; ಆದರ್ಶವೂ ದೊರಕಿತು.

ಗಾಂಧೀ ವ್ಯಕ್ತಿತ್ವಕ್ಕೆ, ವಿಚಾರ ಪಂಥಕ್ಕೆ ಅಂದಿನ ಸಾಹಿತಿಗಳು, ಲೇಖಕರು ಆಕರ್ಷಿತರಾದುದು ಸಹಜವೇ ಆಗಿದ್ದಿತು. ಆ ಮಹಾ ವ್ಯಕ್ತಿಯ ಸತ್ಯನಿಷ್ಠುರತೆ, ಅನ್ಯಾಯಕ್ಕೆ ದರ್ಪಕ್ಕೆ ಮಣಿಯದೆ ಸಾತ್ವಿಕತೆಯ ಆತ್ಮಶಕ್ತಿಯನ್ನು ಪಾಶವೀಶಕ್ತಿಯ ಎದುರಿಗೆ ನಿಲ್ಲಿಸಿದ ಅಮೋಘ ಸಾಹಸ ಅವರನ್ನು ಮಹಾವೀರನನ್ನಾಗಿ ಮಾಡಿದ್ದುವು. ಗಾಂಧೀ ಪಂಥದಲ್ಲಿ ಅಂದು ಪದಾರ್ಪಣೆ ಮಾಡಿದವರೆಲ್ಲ, ಆ ಮಹಾ ಜ್ಯೋತಿ ಹಚ್ಚಿದ

ಹಣತೆಯ ಬೆಳಕಿನಲ್ಲಿ ತಮ್ಮತನವನ್ನು ಅರಿತುಕೊಂಡು ಯಥಾಶಕ್ತಿ ಸೇವೆ ಸಲ್ಲಿಸು ತ್ತಿದ್ದರು.

ಗಾಂಧೀ ವಿಚಾರಗಳನ್ನು, ಬರಹಗಳನ್ನು ಕನ್ನಡದಲ್ಲಿ ತರುವ ಕೆಲಸ, ಕೆಲವರಿಂದ ಆತ್ಮತೃಪ್ತಿಗಾಗಿ, ದೇಶಸೇವೆಗಾಗಿ ಆಗಲೇ ಆರಂಭವಾಗಿದ್ದಿತು. ಉತ್ತರ ಕರ್ನಾಟಕ ದಲ್ಲಿ ದೇಶಭಕ್ತ ಹರ್ಡೇಕರ ಮಂಜಪ್ಪನವರು, ರಂಗನಾಥ ದಿವಾಕರರು ಇವರು ಗಳಿಂದಲೂ ಮೈಸೂರು ರಾಜ್ಯದಲ್ಲಿ ಬಹುಮಟ್ಟಿಗೆ ದಿವಂಗತ ದ. ಕೃ. ಭಾರದ್ವಾಜ ರಿಂದಲೂ ಈ ಕಾರ್ಯ ಆರಂಭವಾಗಿದ್ದಿತು. ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರೂ ನ. ಭದ್ರಯ್ಯನವರೂ ತಾತಾಚಾರ್ಯರೂ ನೆಲವನ್ನು ಹಸನುಮಾಡಿ ಬೀಜ ನೆಟ್ಟರು. ‘ಇಬ್ಬರು ಕನ್ನಡಿಗರು’ ಗಾಂಧೀಜಿಯ ಆತ್ಮಕಥೆಯನ್ನು ಕನ್ನಡಿಸಿದ್ದರು. ಆದರೆ ಗಾಂಧೀ ಸಾಹಿತ್ಯಕ್ಕಾಗಿಯೇ ತನ್ನ ತನು-ಮನ-ಹೃದಯಗಳನ್ನು ಅರ್ಪಿಸಿದ ವ್ಯಕ್ತಿ ಇನ್ನೂ ಬಂದಿರಲಿಲ್ಲ. ಸಿದ್ದವನಹಳ್ಳಿಯವರೇ ಆ ವ್ಯಕ್ತಿ ಆಗಬೇಕಾದ ಯೋಗವಿದ್ದಿ ತೇನೋ ! ಅವರಿಗೆ ತರಬೇತಿಯೂ ಆದಂತೆ ಆಗಿದ್ದಿತ್ತು. ಅವರು ಸೇವಾಗ್ರಾಮ ದಿಂದ ‘ಸ್ನಾತಕ ಪದವಿ’ ಪಡೆದಂತೆ ಇದ್ದರು.

## ವರ್ಧಾಯಾತ್ರೆ, ಪರ್ಣಕುಟಿ, ದೀಪಮಾಲೆ :

ಹೈದರಾಬಾದಿನಿಂದ ಗಡೀಪಾರಾಗಿ ವರ್ಧಾದಲ್ಲಿ ಕೆಲವು ಕಾಲ ನಿಲ್ಲುವ ಪುಣ್ಯಾವ ಕಾಶ ಶರ್ಮರಿಗೆ ದೊರಕಿತೆಂದು ಹಿಂದೆಯೇ ಹೇಳಿದೆ. ಆದುದರಿಂದ ಕೃಷ್ಣಶರ್ಮರಿಗೆ ಗಾಂಧೀ ಮಾನಸ, ಗಾಂಧೀ ಕ್ರಿಯಾರಂಗ, ಗಾಂಧೀ ಪರಿಸರ, ಗಾಂಧೀ ವಿಚಾರ ದೋಹನ ಇವುಗಳನ್ನು ಸಾಹಿತ್ಯದ ರೂಪದಲ್ಲಿ ವ್ಯಕ್ತಪಡಿಸುವ ಅವಕಾಶ ದೊರಕಿತು. ಮಾತಿನ ಬಣ್ಣಿಗ, ಜೀವಂತ ಚಿತ್ರಗಳ ರಚನಕಾರ ಆದ ಅವರ ಲೇಖಣಿಯಿಂದ ಜನಿಸಿ ಬಂದಿತು ವರ್ಧಾಯಾತ್ರೆ. ಅದನ್ನು ಓದುತ್ತಾ, ವರ್ಧಾದಲ್ಲಿ ನೆಲೆಸಿದ್ದ ಭಾರತದ ಅನಭಿಷಿಕ್ತ ಸಾಮ್ರಾಟ, ಅಹಿಂಸೆಯ ಪ್ರವಾದಿ, ಮಾನವ ಕಾರುಣ್ಯದ ಮೂರ್ತಿ ಬಾಪೂವಿನ, ಅವರ ಪರಿವಾರದವರ ಮತ್ತು ಆಶ್ರಮದ ಚಿತ್ರಗಳು ಸಾಕಾರವಾಗಿ ಸುತ್ತ ಸುಳಿದಾಡುತ್ತವೆ ; ರೋಮಾಂಚನಗೊಳಿಸಿ, ಮನಸ್ಸು ದೂರ ತೇಲಿಹೋಗಿ, ಕನಸಿ ನಲ್ಲೂ ಚಿತ್ರಗಳನ್ನು ಕಾಣುವಂತೆ ಮಾಡುತ್ತವೆ. ಈ ಲೇಖಕ ಅದನ್ನು ಓದಿ ಎಷ್ಟೋ ವರ್ಷಗಳಾದುವು. ಆದರೂ ವರ್ಧಾಗಂಜನಲ್ಲಿ ಗ್ರಾಮೋದ್ಯೋಗ ಸಂಘದ ಕೇಂದ್ರ, ಗೋಪುರಿಯ ಗ್ರಾಮಸೇವಾ ಮಂಡಲ, ವಿನೋಬಾ ಅವರ ಪವನಾರ್-ಪರಂಧಾಮ್, ಮಹಾರೋಗಿ ಸೇವಾಮಂಡಲ, ಮಹಿಳಾಶ್ರಮ, ಜಮನಾಲಾಲ್ ಬಜಾಜರ ಅಸಾ ಧಾರಣ ಶಿಷ್ಯತ್ವ, ಬಾಪೂ ಕಾರ್ಯವೆಸಗುತ್ತಿದ್ದ ರೀತಿ, ಇವುಗಳೆಲ್ಲ ಹೊಚ್ಚ ಹೊಸ ಚಿತ್ರಗಳಾಗಿ ಇಂದಿಗೂ ಕಣ್ಮುಂದೆ ತೇಲುತ್ತವೆ. ೧೯೫೩-೫೪ ರಲ್ಲಿ ಈ ಲೇಖಕ ಎಂಟು ತಿಂಗಳು ವರ್ಧಾದ ಬಜಾಜವಾಡಿಯ ಗಾಂಧೀ ವಿಚಾರ ಪರಿಷತ್ತಿನಲ್ಲಿ ಸಂಶೋ ಧಕ ಕಾರ್ಯಕರ್ತನಾಗಿ ಹೋಗುವ ಮುನ್ನ ಮನದ ಅಂಗಳದಲ್ಲಿ ಕಟ್ಟಿಕೊಂಡಿದ್ದ ಸೌಧ

ಅದು. ಅಲ್ಲಿಗೆ ಹೋದ ಮೇಲೆ ಒಂದೊಂದನ್ನೂ ಮೆಲಕು ಹಾಕಲು (ಬಾಪೂ, ಬಾ, ಮಹಾದೇವ ದೇಸಾಯಿ, ಜಮನಾಲಾಲ್, ಮಶ್ರೂವಾಲಾ, ಕುಮಾರಪ್ಪ ಇವರುಗಳ ಹೊರತು) ಉಳಿದ ಭೌತ ಸನ್ನಿವೇಶ ಎಷ್ಟೋ ಸಲ ನೆರವಾದುದುಂಟು.

ಕೃಷ್ಣಶರ್ಮರ ವರ್ಧಾಯಾತ್ರೆ ಕೃತಿಯಂತೆಯೇ ಪರ್ಣಕುಟಿ, ದೀಪಮಾಲೆ. ಈ ಪುಟ್ಟ ಗ್ರಂಥಗಳೂ ಅವರ ಸಾಹಿತ್ಯ ನಿರ್ಮಾಣ ಶಕ್ತಿಯ, ಸೃಜನಾತ್ಮಕ-ಶುದ್ಧ-ಹಿತ-ರೋಚಕ ಬರಹ ಶಕ್ತಿಯ, ಸ್ಫುಟವಾಗಿ ನಿಲ್ಲುವ ಪ್ರತಿಮೆಗಳ ದ್ಯೋತಕವಾಗಿವೆ.

ಪರ್ಣಕುಟಿ-ಸೇವಾಗ್ರಾಮದ ಜೀವಕಳೆ ತುಂಬಿದ ಚಿತ್ರ. ಅಹಮದಾಬಾದಿನ ಸತ್ಯಾಗ್ರಹಾಶ್ರಮವನ್ನು ತ್ಯಜಿಸಿ, ವರ್ಧಾಕ್ಕೆ ಬಂದು ನೆಲೆಸಿದ ಬಾಪೂ, ಕೆಲವು ಕಾಲದ ಮೇಲೆ ಅವರ ಲಕ್ಷಾಧೀಶ ಶಿಷ್ಯ (ಐದನೆಯ ಮಗನೆಂದು ಹೆಸರಾಂತ) ಜಮನಾಲಾಲರ ಕೈಂಕರ್ಯದ ಫಲವಾಗಿ 'ಶಿವಗ್ರಾಮ', 'ಸೇಗಾಂ', ಸೇವಾಗ್ರಾಮದಲ್ಲಿ ರೂಪುಗೊಂಡ ಪರ್ಣಕುಟಿಯಲ್ಲಿ ನೆಲೆಸಿದರು.

ಸೇವಾಗ್ರಾಮ, ಪರ್ಣಕುಟಿ, ವಿಶ್ವಕ್ಕೆಲ್ಲ ಶಾಂತಿ ಸಂದೇಶವನ್ನು ಸಾರಿದ, ಸಮತೆಯ, ಸಮರರಹಿತ ಮಾನವೀಭಾವ ಸಮಾಜ ರಚನೆಯ, ಸರ್ವೋದಯ ಋಷಿಯ ತಪೋತಾಣವಾಯಿತು. ಅಲ್ಲಿಗೆ ಜಗತ್ತಿನ ಹೇಮಾಹೇಮಿಗಳು ಬಂದು ಬಾಪೂ ದರ್ಶನ ಪಡೆಯುತ್ತಿದ್ದರು. ರಾಜಕಾರಣಿಗಳು, ಪತ್ರಕರ್ತರು, ರಾಷ್ಟ್ರದ ನಾಯಕರು ಅಲ್ಲಿಗೆ ಧಾವಿಸುತ್ತಿದ್ದರು. ಪರ್ಣಕುಟಿ ಹೊತ್ತಗೆ ಮೊದಲು ಪ್ರಕಟವಾದಾಗ ಅದು ಓದುಗರ ಮನಸ್ಸನ್ನು ಸೆರೆಹಿಡಿದ ರೀತಿ ಅನ್ಯಾದೃಶ. ಅದರಲ್ಲಿ ತುಂಬಿರುವುದು ಬಾಪೂ ಚೇತನದ ವ್ಯಕ್ತಸ್ವರೂಪ.

ದೀಪಮಾಲೆ ಕೃಷ್ಣಶರ್ಮರ ಇನ್ನೊಂದು ಉತ್ಕೃಷ್ಟ ಕೃತಿ. ಈ ಕೃತಿ ಶರ್ಮರ ಸಾಹಿತ್ಯ ಸಿದ್ಧಿಗೆ ಒಂದು ನಿದರ್ಶನ. ಪಳಗಿದ ಅವರ ಲೇಖಣಿ ಸುಂದರ ವ್ಯಕ್ತಿರೇಖಾ ಚಿತ್ರಗಳನ್ನು ಕೊಡುತ್ತದೆ. ಅದರಲ್ಲಿ ಇರುವುದು ಹದಿನಾಲ್ಕು ವ್ಯಕ್ತಿ ಚಿತ್ರಗಳು. ಈ ವ್ಯಕ್ತಿಗಳೆಲ್ಲ ಗಾಂಧೀ ಪ್ರಭಾವಳಿಯಲ್ಲಿ ರಾರಾಜಿಸಿದವರೇ. ಕವಯತ್ರಿ ಸರೋಜಿನೀ ದೇವಿ, ಸೇವಾಧುರೀಣ ಠಕ್ಕರ್ ಬಾಪಾ, ಆಚಾರ್ಯ ವಿನೋಬಾ, ಆಂಧ್ರದ ಬಾದೂ ರಾಜಾರಾವ್, ಮೌಲಾನಾ ಅಜಾದ್, ಜಮನಾಲಾಲ್ ಬಜಾಜ್, ರಾಜೇನ್ ಬಾಬೂ, ಡಾ. ಪಟ್ಟಾಭಿ, ತತ್ವವೇತ್ತ ರಾಧಾಕೃಷ್ಣನ್, ಮಶ್ರೂವಾಲಾ, ವಲ್ಲಭಭಾಯಿ, ಕೃಪಲಾನಿ, ಅಮಾತ್ಯ ರಾಜಗೋಪಾಲಾಚಾರಿ, ಇವರುಗಳೇ ಅಲ್ಲಿ ರಂಜಿಸುವ ವ್ಯಕ್ತಿಗಳು. ಎಲ್ಲರ ಗುಣ ವೈಶಿಷ್ಟ್ಯ ಶಕ್ತಿಸಾಮರ್ಥ್ಯ ಈ ಕುಂದಣದ ಕೆಲಸದಲ್ಲಿ ಎದ್ದು ಕಾಣುತ್ತವೆ. ಇವು ಗಾಂಧೀಯುಗದ ಚಿರಪರಿಚಿತ ನಾಯಕರುಗಳ ವ್ಯಕ್ತಿತ್ವ ಪರಿಚಯವಾದರೂ ಬೇರೆ ಬೇರೆ ವರ್ಣದ ಬಲ್ಬುಗಳನ್ನು ಗಾಂಧೀ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಪೋಣಿಸಿ ಕೊಟ್ಟಂತಿದೆ. ಒಂದೊಂದನ್ನೂ ನೋಡುವಾಗ ಅದರದೇ ಆದ ವರ್ಣವೈಖರಿ. ಎಲ್ಲಕ್ಕೂ ಹಿಂಬದಿಯಲ್ಲಿ ಅಗೋಚರವಾಗಿ ನಿಂತಿದೆ. ಗಾಂಧೀ ಸತ್ವ, ಅದರ ಅಲೌಕಿಕ ಅಮರ ಪ್ರಭೆಯ ರೂಪದಲ್ಲಿ.

**ಅನುವಾದ ನಿಪುಣತೆ :**

ಕೃಷ್ಣಶರ್ಮರು ಸೃಷ್ಟಿಸಿದ ಸಾಹಿತ್ಯ ಬಹುದೊಡ್ಡ ಪ್ರಮಾಣದಲ್ಲಿ ಗಾಂಧೀ ಸಾಹಿತ್ಯವೇ. ಇವು ಬಹುತೇಕ ಅನುವಾದಗಳೇ ಆಗಿವೆ. ಆದರೆ, ಅನುವಾದ ಕಲೆಯಲ್ಲಿ ಅವರದು ಎತ್ತಿದ ಕೈ. ಅವರದು ಭಾವಾನುವಾದ, ರಸಾನುವಾದ; ಕೇವಲ ಶಬ್ದಕ್ಕೆ ಶಬ್ದವಿಡುವ ನೀರಸ ಭಾಷಾಂತರವಲ್ಲ. ಈ ಕಾರ್ಯದಲ್ಲಿ ಅವರು ಗಳಿಸಿದ ಸಿದ್ಧಿ ಕೊಟ್ಟ ಪಾಕ, ಬಹಳ ಅಪರೂಪ. ಅವರ ಅನುವಾದ ವಿಧಾನ ಅನುವಾದ ಕಲೆ ಕಲಿಯುವವರಿಗೆ ಒಂದು ಶ್ರೇಷ್ಠ ನಿದರ್ಶನ. ಮೂಲದ ಸ್ವಾರಸ್ಯ, ಅರ್ಥ ಸಂಪತ್ತು ಅವರ ಲೇಖಣಿಯ ಮೂಲಕ ಹೊರಬಂದು ಗ್ರಂಥಕರ್ತನ, ಮೂಲ ಲೇಖಕನ ಲೋಕವನ್ನೇ ತದ್ವತ್ ರೂಪಿಸುವ ನಿಪುಣತೆ ಅಲ್ಲಿ ಕಾಣುತ್ತದೆ. ಈ ಒಂದು ಲಕ್ಷಣದಿಂದ ಮೂಲಕ್ಕೆ ಎಳ್ಳಷ್ಟೂ ಅಪಚಾರವಾಗದೆ, ಗುಣ ಕೆಡದೆ ಅನುವಾದ ಸುಂದರವಾಗಿ ರೂಪುಗೊಳ್ಳುತ್ತದೆ.

ಗಾಂಧೀಜಿ ಹಿಂದೀಯಲ್ಲಾಗಲೀ, ಗುಜರಾತಿಯಲ್ಲಾಗಲೀ ಇಂಗ್ಲಿಷಿನಲ್ಲಾಗಲೀ ಯಾವ ಭಾಷೆಯಲ್ಲಿ ಬರೆದರೂ ಅದು ಸರಳತೆಯಿಂದಲೇ ಅಸಾಧಾರಣ ಚೆಲುವನ್ನು ಪಡೆಯುತ್ತಿತ್ತು, ನಿರಾಭರಣ ಸುಂದರಿಯಂತೆ. ಸುಲಭವಾಗಿ ಅರ್ಥವಾಗುವ, ಬಳಕೆಯಲ್ಲಿರುವ ಮಾತು, ನೇರ ನಿರೂಪಣೆ ಇವುಗಳಿಂದ ಅದು ಹೃದಯಂಗಮ; ಸಿದ್ಧಾನ್ನ. ಸಿದ್ದವನಹಳ್ಳಿಯವರ ಬರವಣಿಗೆಗಳಲ್ಲಿಯೂ ಇದೇ ಗುಣಗಳು ಎದ್ದು ಕಾಣುತ್ತವೆ.

ಸಿದ್ದವನಹಳ್ಳಿಯವರು ಮಾಡಿದ ಅನುವಾದ ಕೃತಿಗಳು ಗಾಂಧೀಜಿಯ 'ಹಿಂದ್ ಸ್ವರಾಜ್ಯ' ಕೃತಿಯಿಂದ ಆರಂಭವಾಗಿ ನವಜೀವನದವರು ಪುಸ್ತಕಗಳ ರೂಪದಲ್ಲಿ ಪ್ರಕಟಿಸಿದ ಹಲವಾರು ಹೊತ್ತಗೆಗಳ ಅನುವಾದದಿಂದ ಕೂಡಿವೆ. ಅವರು ಸ್ಥಾಪಿಸಿದ ಗಾಂಧೀ ಸಾಹಿತ್ಯ ಸಂಘವೇ ಹಲವಾರು ಪುಸ್ತಕಗಳನ್ನು ಪ್ರಕಟಿಸಿದೆ. ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸಂಚಾಲಕರಾಗಿದ್ದಾಗ ಅವರು ಹಲವಾರು ಕೃತಿಗಳನ್ನು ಅನುವಾದ ಮಾಡಿ, ಇತರರಿಂದಲೂ ಮಾಡಿಸಿ ಅವುಗಳನ್ನು ಬೆಳಕಿಗೆ ತಂದರು. ಕನ್ನಡ ಗಾಂಧೀ ಗ್ರಂಥಮಾಲೆಯ ಇಪ್ಪತ್ತು ಸಂಪುಟಗಳ ಪೈಕಿ ಸಂಕ್ಷಿಪ್ತ ಆತ್ಮಕಥೆ, ಗೀತಾಮಾತೆ, ಜೀವನ ಶಿಕ್ಷಣ, ಇತ್ಯಾದಿ ಸಂಪುಟಗಳು ಅವರ ಅವಿರತ ಶ್ರಮದ ಫಲವಾಗಿವೆ.

ದಿವಂಗತ ಕೆ. ಎಂ. ಮುನ್ಷಿಯವರ 'ಕೃಷ್ಣಾವತಾರ' ಮೂರು ಸಂಪುಟಗಳಲ್ಲಿ ಅನುವಾದ ಕಂಡಿತು ಶರ್ಮರ ಲೇಖಣಿಯಿಂದ. ವಾಲ್ಮೀಕಿ ರಾಮಾಯಣವನ್ನು ಕನ್ನಡ ವಚನದಲ್ಲಿ ೧೫೦೦ ಪುಟಗಳ ೩ ಸಂಪುಟಗಳಲ್ಲಿ ರಚಿಸಿದ ಕೀರ್ತಿ ಇವರದೇ. 'ರಾಮಾವತಾರ' ಎಂಬ ಹೆಸರಿನ ಈ ಕೃತಿ ಶರ್ಮರಿಗೆ ಆತ್ಮತೃಪ್ತಿ ತಂದುಕೊಟ್ಟಿರಬೇಕು. ಮೂಲ ರಾಮಾಯಣದ ಮೇಲೆ ಪ್ರಕಟವಾದ ಹಲವಾರು ಗ್ರಂಥಗಳನ್ನು ವ್ಯಾಸಂಗಮಾಡಿ, ರಸ-ಅರ್ಥ ಇವುಗಳಿಗೆ ಭಂಗ ಬರದಂತೆ ತಮ್ಮ ಮೋಹಕ, ಭಾವ ಪೋಷಕ ಶೈಲಿಯಲ್ಲಿ ಒಂದು ರಸಗಂಗೆಯನ್ನೇ ಸೃಷ್ಟಿಸಿದಾರೆ. ಮದರಾಸಿನ ದೇವ

ಶಿರೋಮಣಿ ಅಳಸಿಂಗಾಚಾರ್ಯರ ರಾಮಾಯಣಾನುವಾದ ಮೂಲದಲ್ಲಿ ಇರುವಂತೆ ಸಂಸ್ಕೃತಮಯ. ಒಂದೇ ಸಂಪುಟದಲ್ಲಿ ಪ್ರಕಾಶನವಾಗಿರುವ ಕುವೆಂಪು ಅವರ 'ಜನಪ್ರಿಯ ರಾಮಾಯಣ' ಇನ್ನೊಂದು ರೀತಿ. ತ. ಸು. ಶಾ. ಅವರ ರಾಮಾಯಣ ಕಥೆಯೂ ಮತ್ತೊಂದು ಬಗ್ಗೆ. ಆದರೆ ಸಿದ್ಧವನಹಳ್ಳಿಯವರ 'ವಚನ ರಾಮಾಯಣ' ತನ್ನದೇ ಆದ ಶೋಭೆಯಿಂದ ಕೂಡಿದೆ; ವೈಖರಿಯಿಂದ ಕೂಡಿದೆ. ಅಕ್ಷರ ಬಲ್ಲವನೂ ಬಾಲಕನೂ ಇದನ್ನು ಓದಿ ಅನುಭವಿಸಬಹುದು. ಮಹಾತ್ಮನ, ಸಂತನ, ಭಗವದಾಜ್ಞಾಧಾರಕನ ವಿಚಾರ ಸಂಪತ್ತನ್ನು ಕನ್ನಡ ಸಾರಸ್ವತ ಭಂಡಾರಕ್ಕೆ ತುಂಬಿಕೊಟ್ಟ ಶರ್ಮರು ತಮ್ಮ ಆರಾಧ್ಯದೇವತೆ ರಾಮನ, ಮಾನವನ ಆದರ್ಶವೆನಿಸಿಕೊಂಡು, 'ಧರ್ಮವಿಗ್ರಹ' ಎನಿಸಿಕೊಂಡ ಭಗವಂತನ ಅವತಾರ ಪುರುಷ ರಾಮಚಂದ್ರನ ಕಥೆಯನ್ನು ಕನ್ನಡಿಸಿ ಕೊಟ್ಟಿರುವುದು ಕ್ರಮಪ್ರಾಪ್ತವಾಗಿದೆ. ದೇವ ಮಾನವನ ಆತ್ಮಸಂಪತ್ತಿನ ಚಿತ್ರವನ್ನು ರಚಿಸಿದ ಮೇಲೆ ದೇವದೇವನನ್ನು ಕುರಿತು, ಅವನ ರಮ್ಯಕಥೆಯನ್ನು ಮನೋಜ್ಞವಾಗಿ ಹೇಳಿದ್ದಾರೆ. ಇದು ಬರಹಗಾರ ಶರ್ಮರ ಉನ್ನತ ವಿಕಾಸದ ಚಿಹ್ನೆ. 'ನರ'ನ ಪ್ರಶಂಸೆ 'ನಾರಾಯಣ'ನ ಪ್ರಶಂಸೆಯಲ್ಲಿ ಪರ್ಯವಸಾನವಾದಾಗಲೇ ಆತ್ಮಸೊಗಸು.

### ವಿನೋಬಾ-ಸರ್ವೋದಯ ಸಾಹಿತ್ಯ :

ಗಾಂಧೀಜಿಯ ತರುವಾಯ ಗಾಂಧೀ ವಿಚಾರದ, ಸರ್ವೋದಯ ವಿಚಾರದ, ಆಚಾರದ ಮೂರ್ತಸ್ವರೂಪರಾದರು ವಿನೋಬಾ. ಅವರ ಸಾಹಿತ್ಯವನ್ನೂ ಅನುವಾದ ರೂಪದಲ್ಲಿ ಕೊಟ್ಟಿದ್ದಾರೆ ಕೃಷ್ಣಶರ್ಮರು. ಕೆಲವು ವರ್ಷಗಳು 'ಸರ್ವೋದಯ' ಎಂಬ ಪತ್ರಿಕೆಯನ್ನು ನಡಸಿ, ನಿಲ್ಲಿಸಿದರು. ಗಾಂಧೀ ಪರಿವಾರದಲ್ಲಿ ಪ್ರಮುಖರೆನಿಸಿದ್ದ ಮಶ್ರೂವಾಲಾ, ಜೆ. ಸಿ. ಕುಮಾರಪ್ಪ, ದಾದಾ ಧರ್ಮಾಧಿಕಾರಿ, ಇವರುಗಳ ವಿಶ್ಲೇಷಣಾತ್ಮಕ ಸಮಾಲೋಚನೆಗಳ ಕೃತಿಗಳನ್ನು ಕನ್ನಡಕ್ಕೆ ತಂದಿದಾರೆ.

ವಿನೋಬಾಜೀ ಅವರ 'ಗೀತಾ ಪ್ರವಚನ'ದ ಕನ್ನಡ ಅನುವಾದ ಒಂದು ಅಮೋಘ ಕೃತಿ. ಶರ್ಮರ ಭಾಷಾಂತರ ಸಾಮರ್ಥ್ಯಕ್ಕೆ, ಸೊಗಸಿಗೆ ಸಾಟಿಯಿಲ್ಲದ ನಿದರ್ಶನವನ್ನು ಇಲ್ಲಿ ಕಾಣಬಹುದು. ಕೃಷ್ಣ ಅರ್ಜುನನಿಗೆ ಯೋಗಯುಕ್ತನಾಗಿ ಬೋಧಿಸಿದ, ವಿನೋಬಾಜೀ ಯೋಗಯುಕ್ತರಾಗಿ ಪ್ರವಚನ ನೀಡಿದರು. ಕೃಷ್ಣಶರ್ಮರೂ ಯೋಗಯುಕ್ತರಾಗಿ ಅನುವಾದ ಮಾಡಿದಾರೆ. ಇದರಲ್ಲಿ ಒಸರುವ ಗೀತಾಮೃತ ಓದುಗರ ಹೃದಯದೊಳಗೆ ಇಳಿದು, ಪುನೀತರನ್ನಾಗಿ ಮಾಡುವ ಶಕ್ತಿಯಿಂದ ಕೂಡಿದೆ.

### ರಸಭರಿತ ಶೈಲಿ :

ಇಂಗ್ಲಿಷ್ ಸಾಹಿತ್ಯಮೀಮಾಂಸೆಯಲ್ಲಿ 'ಶೈಲಿ ವ್ಯಕ್ತಿಯನ್ನು ಸೂಚಿಸುತ್ತದೆ' (The Style is the man) ಎಂಬ ಒಂದು ಮಾತು ಪ್ರಸಿದ್ಧವಾಗಿದೆ. ಕಥೆ,

ವಿಚಾರ, ವಸ್ತು ಒಂದೇ ಇದ್ದರೂ ಅದನ್ನು ಪಾಠಕರ ಮನಂಬುಗುವಂತೆ ರಚನೆ ಮಾಡುವುದು ಬರಹಗಾರನ ಶೈಲಿಯನ್ನು ಅವಲಂಭಿಸಿರುತ್ತದೆ. ಪ್ರತಿಯೊಂದು ಭಾಷೆಯಲ್ಲಿಯೂ ಒಬ್ಬೊಬ್ಬ ಪ್ರಸಿದ್ಧ ಲೇಖಕ ಒಂದೊಂದು ಬಗೆಯ ಶೈಲಿಯನ್ನು ಹೊಂದಿರುತ್ತಾನೆ. ಅದು ಅವನ ವೈಶಿಷ್ಟ್ಯ, ವಿಚಾರದ ಅಭಿವ್ಯಕ್ತಿಯಲ್ಲ. ಇಂಗ್ಲಿಷ್ ಸಾಹಿತ್ಯದಲ್ಲಿ ಮಿಲ್ಟನ್ನನದು ಒಂದು ಶೈಲಿಯಾದರೆ, ಜಾನ್‌ಸನ್‌ದು ಇನ್ನೊಂದು ಬಗೆ. ಆಲಿವರ್ ಗೋಲ್ಡ್‌ಸ್ಮಿತ್‌ನದು ಮತ್ತೊಂದು ಬಗೆ ಶೈಲಿ. ಹೀಗೆ ಅವರವರು ಬಳಸುವ ಶೈಲಿ ಅವರ ಸಿದ್ಧಿಯ, ಸಾಧನಾಪೂರ್ಣತೆಯ ಕುರುಹು. ಕೃಷ್ಣ ಶರ್ಮರು ಕನ್ನಡದಲ್ಲಿ ಬರಹ ಶೈಲಿಗೆ ಒಂದು ಹೊಸ ಜಾಡನ್ನೇ, ಮೇಲ್ಪಂಕ್ತಿಯನ್ನೇ ಹಾಕಿದ್ದಾರೆ.

ಪತ್ರಿಕೋದ್ಯಮದಲ್ಲಿ ತೊಡಗಿದ ಕೃಷ್ಣಶರ್ಮರ ಲೇಖಣಿ ಆ ಉದ್ಯಮಕ್ಕೆ ಅಗತ್ಯ, ಅರ್ಹ, ಎನಿಸಿದ ಬರಹ ಶೈಲಿಯಿಂದ ಪಳಗಿತು. ಸರಳತೆ, ಸ್ಪಷ್ಟತೆ, ಅತಿಯಿಲ್ಲದ, ಕೊರತೆಯಿಲ್ಲದ ನಿಜ ಚಿತ್ರದ ನಿರೂಪಣೆ, ತರ್ಕಭರಿತವಾಗಿದ್ದು ಹೃದಯಂಗಮ. ಓದಲು, ಅರ್ಥ ಮಾಡಿಕೊಳ್ಳಲು ಅನಾಯಾಸ. ಕಲ್ಪನೆ ಅಲ್ಲಲ್ಲೇ ಗರಿಗೆದರಿನಿಂದು, ಭಾವದ ಜೆನ್ನಮೇಲೆ ಲಾಸ್ಯವಾಡುತ್ತದೆ. ವಚನ ಸಾಹಿತ್ಯದ ಗಾಂಭೀರ್ಯ, ಅರ್ಥವೃಷ್ಟಿ, ಭಾವೋನ್ನತ್ಯ, ಇವುಗಳನ್ನು ಅದರಲ್ಲಿ ಕಾಣಬಹುದು. ಆಧುನಿಕ ಕನ್ನಡಕ್ಕೆ ಶರ್ಮರ ಬರಹದ ಧಾಟಿ ಒಂದು ಅನರ್ಘ್ಯ ಕಾಣಿಕೆ. ಅದು ಇದರಲ್ಲಿ ಸುವ್ಯಕ್ತ.

ಕೃಷ್ಣಶರ್ಮರು 'ಚಿಂತನ-ಮಂಥನ'ವನ್ನೇ ಬರೆಯಲಿ, ಪ್ರಸಿದ್ಧವಾದ 'ಮಾತಿನ ಮಂಟಪ'ವನ್ನೇ ಬರೆಯಲಿ, ವ್ಯಕ್ತಿ ಜೀವನದ ಸತ್ವಪೂರ್ಣ ರೇಖೆಗಳನ್ನೇ ಬಿಡಿಸಲಿ ಗಾಂಧೀ-ಸರ್ವೋದಯ ವಿಚಾರವನ್ನು ಅನುವಾದ ಮಾಡಿಕೊಡಲಿ, ವಿನೋಬಾ ಅವರ ಸಾಮ್ಯಯೋಗ ತತ್ವವನ್ನೇ ನಿರೂಪಿಸಲಿ ಎಲ್ಲದರಲ್ಲಿಯೂ ಅವರ ಈ ನುಡಿ-ಶಿಲ್ಪದ ಸೌಭಾಗ್ಯ, ಶೈಲಿಯ ಅಪರೂಪ ಗುಣವಾಗಿ ಎದ್ದು ಕಾಣುತ್ತದೆ. ಈ ಗುಣ ವಿಶೇಷವಾಗಿ ಗಾಂಧೀ ಬರಹ ಶೈಲಿಯ ಗುಣ. ಸತ್ಯವನ್ನು ನುಡಿಯುವಾಗ ಅದಕ್ಕೇಕೆ ಮಿರುಗಿನ ಮೇಲು ಹೊದಿಕೆ? ಸರಳವಾಗಿ, ನೇರವಾಗಿ ಹೇಳುವುದರಲ್ಲಿಯೇ ಅದರ ಸೌಂದರ್ಯ, ಅದರಲ್ಲಿಯೇ ಅದರ ಇಂಪು, ಕಾವ್ಯ, ಸಾಂಗತ್ಯ ಎಲ್ಲವೂ ಅಡಕವಾಗಿರುತ್ತವೆ. ಗಾಂಧೀಜಿಯ ಪ್ರಭಾವಕ್ಕೆ ಪೂರ್ಣವಶರಾಗಿದ್ದ ಶರ್ಮರು ಇದಕ್ಕೆ ಅಪವಾದವಾಗಲು ಸಾಧ್ಯವಾಗಲಿಲ್ಲ. ಅವರ ಬರಹದಲ್ಲಿ ಗಂಟು, ಗೂನು, ಅಡ್ಡ-ಬಳಸಿಕೆ ಯಾವುದೂ ಇಲ್ಲ. ಕೆಲವು ನಿದರ್ಶನಗಳನ್ನು ನೋಡೋಣ.

'ವರ್ಧಾಯಾತ್ರೆ'ಯಲ್ಲಿ ಸರದಾರ್ ಪಟೇಲರ ಗುಣವರ್ಣನೆ ಹೀಗೆ ಬಂದಿದೆ: "ಸರದಾರರು ನಿಜವಾಗಿಯೂ ಹಳ್ಳಿಗಾಡಿನವರು. ಅವರ ಮಾತಿನಲ್ಲಿ ಆ ಸರಳತೆ ಇದೆ; ಅದರಲ್ಲಿ ಆ ಮೊನೆ ಇದೆ. ಅವರು ದ್ರಾವಿಡ ಪ್ರಾಣಾಯಾಮ ಮಾಡುವುದಿಲ್ಲ. ನೇರಾಗಿ ಮಾತನಾಡುತ್ತಾರೆ. ವಿನೋದಕ್ಕಾಗಿ ಅವರು ಹರಟೆ ಹೊಡೆಯುವುದು

ಕಡಮೆ. ನಮ್ಮ ಮುಂದಿನ ಕೆಲಸವೆಷ್ಟೋ ಅಷ್ಟು ಮಾತು. ಮಾತಿಲ್ಲದ ಕೆಲಸ ನಡೆಯುವುದಾದರೂ ಅದೇ ಸರಿ." ಇದೊಂದು ಸಮಗ್ರ ಚಿತ್ರ.

'ದೀಪಮಾಲೆ'ಯಲ್ಲಿ ಗಾಂಧೀಜಿಗೂ ಸರದಾರರಿಗೂ ಇದ್ದ ಸಂಬಂಧ ಸಾಂಗತ್ಯವನ್ನು ವರ್ಣಿಸಿರುವ ವೈಖರಿ ಹೀಗಿದೆ : "ಗಾಂಧೀಜಿಗೆ ಸರದಾರರೆಂದರೆ ಪಂಚಪ್ರಾಣ. ಅವರ ಬಗ್ಗೆ ಗಾಂಧೀಜಿಗೆ ಅಷ್ಟು ಬೆಲೆ, ಅಭಿಮಾನ. ಅದನ್ನು ಅವರು ಹತ್ತಾರು ಸಲ ಆಡಿ ತೋರಿಸಿದ್ದಾರೆ. ಸರದಾರರ ಬಗೆಗೆ ಸಾವಿರ ದೂರು ಬಂದಿವೆ. ಸರದಾರರನ್ನು ಕೆಳಗೆಳೆಯಲು ಕಾಂಗ್ರೆಸ್ಸಿನಲ್ಲಿ ಬಹಳ ಪ್ರಯತ್ನ ನಡೆದಿದೆ. ಗಾಂಧೀಜಿಯವರದು ಇದಕ್ಕೆಲ್ಲ ಒಂದೇ ಉತ್ತರ : 'ಸರದಾರರ ತಪ್ಪು ನನ್ನ ತಪ್ಪು, ಗೆದ್ದರೂ ಸೋತರೂ ನಾನು ಸರದಾರರ ಜತೆಯಲ್ಲಿಯೆ'...."

ಸರೋಜಿನೀದೇವಿಯ ಬಗೆಗಿನ ಈ ವರ್ಣನೆ ಎಷ್ಟೊಂದು ಕಾವ್ಯಮಯ! "ಸರೋಜಿನೀದೇವಿ ಭಾರತ ಕಾವ್ಯಂಬರದ ಬೆಳುದಿಂಗಳು ; ಹಿಂದೂಸ್ತಾನದ ಕವಿ ಚೂತವನ ಕೋಕಿಲೆ. ಆಕೆಯ ವಾಣಿ ವೇಣುಗಾನ, ಭಾಷಣ ರಸಗಂಗೆ. ಆಕೆಯ ಜೀವನ ನಿರಂತರ ಸೌಂದರ್ಯೋಪಾಸನೆ."

ಇದು 'ಪರ್ಣಕುಟಿ'ಯಲ್ಲಿ ಗಾಂಧೀಜಿಯ ವ್ಯಕ್ತಿತ್ವದ ಚಿತ್ರಣ. ಇದರ ಸೊಗಸು ಮಾತಿಗೆ ಮೀರಿದುದು. "ಗಾಂಧೀಜಿ ಎಂದರೆ, ಒಂದು ವ್ಯಕ್ತಿಯಲ್ಲ. ಅದು ಒಂದು ಪಂಥ. ಶಿಲ್ಪದಲ್ಲಿ ಜಕಣಾಚಾರಿ ಇದ್ದಂತೆ. ಜಕಣಾಚಾರಿ ಎಂಬ ವ್ಯಕ್ತಿ ಇದ್ದಿರಬಹುದು. ನಮಗೆ ಆ ನಾಮರೂಪಗಳಲ್ಲಿ ಈಗ ರುಚಿ ಇಲ್ಲ. ಜಕಣಾಚಾರಿ ಒಂದು ಶಿಲ್ಪದ ಹಾದಿ." ಈ ಐದು ವಾಕ್ಯಗಳ ಪರಿಮಿತಿಯಲ್ಲಿ ಗಾಂಧೀಜಿಯ ಅವಿಸ್ಮರಣೀಯ ರೇಖೆ ಮೂಡಿ ಬಂದಿದೆ. ಪುಟ್ಟ ಕಂಸದಲ್ಲಿ ಮಹಾಸಾಧನೆ ಇದು ; ಹೆಸರು ಕಾಳಿನ ಗಾತ್ರದಲ್ಲಿ ಅಂಬಾರಿಯ ಮೇಲೆ ಕುಳಿತ ಸವಾರನ ಸಹಿತವಾದ ಆನೆಯನ್ನು ಬಿಡಿಸಿದಂತೆ. ಇಲ್ಲಿ ಜೀವ ತುಂಬಿ ತುಳುಕುತ್ತದೆ; ಭಾವ ಮಿಡಿಯುತ್ತದೆ; ಅರ್ಥ ಮುಗಿಲಿಗೇರುತ್ತದೆ. ಇದು ಪರಿಣತಮತಿಯ ವ್ಯಕ್ತರೂಪ. ಇಂಥದು ಅಪರೂಪವೋ ಅಪರೂಪ !

ಗಾಂಧೀಜಿ ಗೀತೆಯಲ್ಲಿ ಅನಾಸಕ್ತಿಯ ಕನಸನ್ನು ಕಂಡರು. ಅವರ ಬದುಕು ಅದಕ್ಕೆ ಮೀಸಲಾಯಿತು. ವಿರಸದಲ್ಲಿ ಸರಸತೆ ಕಾಣುವ ಧಾಟಿ ಅವರದು. ಸಮನಿಸಿಕೊಂಡು ಹೋಗುವ ಸ್ವಭಾವ ಅವರದು. ಈ ಸ್ವಭಾವದ ವಿವರಣೆ ಎಂಥ ಚೇತೋಹಾರಿಯಾಗಿದೆ! "ಅವರ ಸಮನಿಸಿಕೊಂಡು ಹೋಗುವ ಸ್ವಭಾವ (Compromising nature) ಅನಾಸಕ್ತಿಯ ಮನಃಸ್ವರೂಪ. ಅನಾಸಕ್ತಿಗೆ ತನ್ನದೇ ಸರಿಯೆಂಬ ಹಟವಿಲ್ಲ. ಯಾತರ ಹೂವಾದರೇನು, ನಾತರದು ಸಾಲದೇ ಎಂಬ ವೈಶಾಲ್ಯವಿದೆ. ಹರಿಯ ಸೇರಲು ಹಲವು ದಾರಿ ಎಂಬ ಅರಿವು ಇದೆ. ಇಂದು ಅಸಹಕಾರ ಮಾಡು ಎಂದವರು ನಾಳೆ ಸಹಕಾರ ಮಾಡು ಎಂದರು. ಹೇಗೆ ಅಂದಾಗಲೂ ಎರಡೂ ಎರಡು ದಾರಿ ಸಿದ್ಧಿಗೆ. ಗಾಂಧೀಜಿ ಇಂಥ ವಿರೋಧಗಳ ಕೊಡಲಿ."

ಗಾಂಧೀಜಿ ಚಿಕ್ಕೆಗಳ ಚಂದ್ರಾಮ. ಮಕ್ಕಳೇ ಚಿಕ್ಕೆಗಳು ಅವರ ಭಾಗಕ್ಕೆ. ಈ ವರ್ಣನೆ ಅಸದೃಶ: "ನಗೆಯ ಹಾಗೇ ಮಕ್ಕಳು. ಮಕ್ಕಳ ಆಟದ ಆನಂದ ನಿರ್ಮಲ. ವಿನೋದದ ಸುಖವಿದ್ದ ಹಾಗೆ. ಬಾಳಿನಲ್ಲಿ ಬೇಸಗ ಬಂದಾಗ ಎರಡೂ ಮದ್ದೇ ಮೈಯನ್ನೂ ಮನಸ್ಸನ್ನೂ ಮುತ್ತಿದ ಜಡತೆಯನ್ನೂ ಕಳೆದು ಹೊಸ ಚೈತನ್ಯವನ್ನು ತುಂಬುತ್ತವೆ." ಇದು ಬರಹದ ರಸಸಮಯವಲ್ಲದೆ ಮತ್ತೇನು? ಕೃಷ್ಣಶರ್ಮರ ರಸಿಕ ಜೀವ ಭಾವ ತುಂಬಿ ಹರಿದಿದೆ ಇಲ್ಲಿ.

**ಕೊನೆ ಮಾತು :**

ಪತ್ರಿಕೋದ್ಯಮಿಯಾಗಿ, ಗಾಂಧೀ ಸಾಹಿತಿಯಾಗಿ, ಸಾಹಿತಿಯಾಗಿ ಸಿದ್ಧವನಹಳ್ಳಿಯವರು ಬರೆದುದು ಅಪಾರವಾಗಿದೆ.

ನಾಲ್ಕು ದಶಕಗಳ ಕಾಲ ಅವರ ಜೀವನ ತಪಸ್ಸು ಗಾಂಧೀಗಾಗಿ, ಗಾಂಧೀ ವಿಚಾರಕ್ಕಾಗಿ, ಸ್ವಾತಂತ್ರ್ಯ ಹೋರಾಟಕ್ಕಾಗಿ, ಹೊಸ ನಾಡಿನ ಭವ್ಯತೆಯ ನಿರ್ಮಾಣಕ್ಕಾಗಿ, ಜನತೆಯನ್ನು ವಿಚಾರಪರರನ್ನಾಗಿ ಮಾಡಿ ಜಾಗ್ರತಗೊಳಿಸಲು ಅವರ ಲೇಖಣಿಯ ಮೂಲಕ ಅಕ್ಷಯವಾಗಿ ಸಾಗಿತು. ಅವರ ಬರಹಗಳನ್ನು ಓದಿದ, ಅವರ ಮಾತನ್ನು ಕೇಳಿದ ಸಹಸ್ರಾರು ಜನರ ಹೃದಯಗಳಲ್ಲಿ ಗಾಂಧೀ ಬಗೆಗೆ ಇದ್ದ ಪೂಜ್ಯ ಭಾವ ಪರಮಪೂಜ್ಯವಾಯಿತು. ಕಾಲದ ಅಲೆಯ ಮೇಲೆ ಅಲೆ ಅಪ್ಪಳಿಸಿ ಹೊಡೆದು ನೆನಪು ಮಸಕಾದರೂ ಕನ್ನಡದ ದಿವ್ಯ ಕಣಜವನ್ನು ತೆಗೆದು ನೋಡಿದವರಿಗೆ ಗಾಂಧೀಜಿಯ ಭವ್ಯ ಆತ್ಮಸಂಪತ್ತನ್ನು ಹಾಗೂ ವಿಚಾರಸಂಪತ್ತನ್ನು ಕಣ್ ಕೋರೈಸುವಂತೆ, ಕಾಂತಿಯುಕ್ತವಾಗಿ ಇರುವಂತೆ ಮಾಡಿರುವ ಶರ್ಮರು ಧನ್ಯರು; ಅವರು ಕನ್ನಡಮ್ಮನ ವಾತ್ಸಲ್ಯದ ಪುತ್ರರಲ್ಲಿ ಒಬ್ಬರು. ಅವರು ಸೃಷ್ಟಿಸಿದ ಸಾಹಿತ್ಯ ಎಂದೂ ಹಳಸದು; ನಿತ್ಯನೂತನವಾಗಿ ನಿಲ್ಲಬಲ್ಲ ಅವರ ಶಕ್ತಿ, ಅವರ ಬರಹ ಶೈಲಿಯ ವರಪ್ರಸಾದ.

# ಕುಶಲ ಕುಂಚದ ಕಲಾತ್ಮಕ ಕೃತಿ 'ಪರ್ಣಕುಟಿ'

ಮಿರ್ಜಿ ಅಣ್ಣಾರಾಯ

ಇಂದಿಗೆ ಸುಮಾರು ಮೂವತ್ತು ವರ್ಷಗಳ ಹಿಂದಿನ ಕಾಲ. 'ಮಾಡು ಇಲ್ಲವೆ ಮಡಿ' ಎನ್ನುವ ಭಾವನೆಯನ್ನು ಭಾರತದಲ್ಲೆಲ್ಲ ಪ್ರಚುರಗೊಳಿಸುವ ಸಂದರ್ಭ. 'ಚಲೇ ಜಾವ್' ಚಳುವಳಿಯನ್ನು ಪ್ರಚೋದಿಸುವ ಸಂಕ್ರಾಂತಿ ಕಾಲ. ಆಗ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರ ಪರಿಚಯ ನನಗಾಯಿತು. ಅದು ವ್ಯಕ್ತಿಪರಿಚಯ ವಲ್ಲ; ವ್ಯಕ್ತಿತ್ವದ ಪರಿಚಯ. ಅದು 'ವರ್ಧಾಯಾತ್ರೆ', 'ಪರ್ಣಕುಟಿ' ಹಾಗೂ 'ಜೀವನ' ಮಾಸಪತ್ರಿಕೆಯಲ್ಲಿಯೂ ಇನ್ನಿತರ ಪತ್ರಿಕೆಗಳಲ್ಲಿಯೂ ಪ್ರಕಟವಾಗು ತ್ತಿರುವ ಶರ್ಮರ ಚಮತ್ಕಾರಿಕ ಶೈಲಿಯಲ್ಲಿ ಮೂಡಿ ನಿಂತ ಭಾರತದ ಮುಖಂಡರ ವ್ಯಕ್ತಿಚಿತ್ರಗಳ ಮೂಲಕವೂ ಆದ ಪರಿಚಯವದು. ಅದು ನನ್ನ ಮನಸ್ಸಿನ ಮೇಲೆ ತುಂಬ ಪ್ರಭಾವವನ್ನು ಬೀರಿತು.

ಆಗ ನನಗೆ ಇಪ್ಪತ್ತೈದು ವರ್ಷ. ಇದೀಗ ಕನ್ನಡದಲ್ಲಿ ಅಲ್ಪಸ್ವಲ್ಪ ಬರೆಯಲು ಪ್ರಾರಂಭಿಸಿದ್ದೆ. ತುಂಬ ಓದುವ ಅಭಿರುಚಿ. ಧ್ಯೇಯವಾದದ ಕಲ್ಪನಾವಿಲಾಸದಲ್ಲಿ ಸುತ್ತುವ ಭಾವಮುಗ್ನತೆ. ದೇಶ, ದೇಶದ ಸ್ವಾತಂತ್ರ್ಯಗಳಲ್ಲಿ ಆಸಕ್ತಿ. ಆ ವಿಷಯ ದಲ್ಲಿ ನಾವೂ ಏನಾದರೂ ಮಾಡುವಂತಿದ್ದರೆ ಮಾಡೇ ತೀರೋಣ ಎನ್ನುವ ಮನೋ ನಿರ್ಧಾರ. ಅದು ಗಾಂಧೀ ಯುಗದ ಪ್ರಭಾವ. ದಿನಾಲು ಸ್ವಂತ ನೂಲುವುದು, ಅದರಿಂದಲೇ ಸಿದ್ಧಗೊಳಿಸಿದ ಬಟ್ಟೆ ತೊಡುವುದು, ಯುವಕರನ್ನು ಕೂಡಿಕೊಂಡು ದೇಶದ ಸ್ಥಿತಿಗತಿಗಳನ್ನು ಚರ್ಚಿಸುವುದು ಇವು ನಮ್ಮ ನಿತ್ಯದ ಜೀವನಕ್ರಮಗಳಾಗಿ ದ್ದುವು. ಆಗ ಶರ್ಮರು 'ವಿನೋಬಾ' ಅವರ ವಿಷಯದಲ್ಲಿ ಬರೆದ ವ್ಯಕ್ತಿಚಿತ್ರ ವೊಂದು ಪತ್ರಿಕೆಯಲ್ಲಿ ಪ್ರಕಟವಾಗಿ ಬಂತು. ವಿನೋಬಾ ಅವರು ಮುಂಬಯಿಗೆ ಪರೀಕ್ಷೆಗೆ ಹೋದವರು ಹಾಗೆಯೇ ಗಾಂಧೀಜಿಯ ಆಶ್ರಮಕ್ಕೆ ಓಡಿದರೆಂಬ ಸಂಗತಿ ಅದರಲ್ಲಿ. 'ಅವರಂತೆ ನಾವೂ ಏಕೆ ಮಾಡಬಾರದು?' ಎಂಬ ತುಡಿತ ನಮ್ಮಲ್ಲಿ. ಅಷ್ಟು ಮಹಾತ್ಮರ ಪ್ರಭಾವ ನಮ್ಮ ಮೇಲೆ ಆಗಿತ್ತು. ಅದು ಆ ಮೊದಲು— ಸುಮಾರು ೧೯೩೪-೩೫ ರ ಸುಮಾರಿನಲ್ಲಿ ಈ ಭಾಗದಲ್ಲಿ ಮಹಾತ್ಮರು ಸಂಚರಿಸು ವಾಗ - ಕಂಡ ವ್ಯಕ್ತಿದರ್ಶನ, ಅವರ ಆತ್ಮಕಥೆ - ಸತ್ಯಶೋಧನ - ಓದಿ ಮನನ ಮಾಡಿದುದರ ಪರಿಣಾಮವಾಗಿರಬೇಕು. ಅದರಲ್ಲಿ ನವನವೀನ ಸ್ಫೂರ್ತಿಯನ್ನು

ತುಂಬಲು ಕಾರಣವಾದುವು ಸಿ. ಕೃಷ್ಣಶರ್ಮರ 'ವರ್ಧಾಯಾತ್ರೆ', 'ಪರ್ಣಕುಟಿ' ಕೃತಿಗಳು. ಇವು ಕೆಲವು ದಿನ ನಮ್ಮ ಯುವಕ ಮಂಡಲಿಯಲ್ಲಿ ಪಾರಾಯಣ ಗ್ರಂಥಗಳೇ ಆಗಿದ್ದುವು. ಈಗಲೂ ಕೂಡ ಸುತ್ತಲಿನ ಜೀವನದಲ್ಲಿ ಸಾಮಾಜಿಕ ಹಾಗೂ ರಾಜಕೀಯ ಭ್ರಷ್ಟಾಚಾರವನ್ನು ಕಂಡಾಗ, ಮನಸ್ಸನ್ನು ನಿರುತ್ಸಾಹದ ಕಾವಳ ಮುತ್ತಿದಾಗ 'ಪರ್ಣಕುಟಿ' ಯನ್ನು ಪ್ರವೇಶಿಸುವ ಹಂಬಲವಾಗುತ್ತದೆ. ಅಲ್ಲಿ ಹೋದಾಗ

ಕರುಣಾಳು ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ,
ಕೈಹಿಡಿದು ನಡಸೆನ್ನನು

ಎಂದು ಮೊದಲಾಗಿ ಪ್ರಾರ್ಥಿಸುವಂತಾಗುತ್ತದೆ. ಆಗ

ಕಷ್ಟದಡವಿಯ ಕಳೆದು, ಬೆಟ್ಟ ಹೊಳೆಗಳ ಹಾದು,
ಇರುಳನ್ನು ನೂಕದಿಹೆಯಾ?
ಬೆಳಗಾಗ ಹೊಳೆಯುವದೇ ಹಿಂದೊಮ್ಮೆ ನಾನೊಲಿದು
ಈ ನಡುವೆ ಕಳಕೊಂಡ ದಿವ್ಯಮುಖ ನಗುತ?

ಎಂಬ ಆಶ್ವಾಸನವೂ ಲಭಿಸುತ್ತದೆ. ಅಂಥ ಗುಣ ಸಿ. ಕೃಷ್ಣಶರ್ಮರ 'ಪರ್ಣಕುಟಿ' ಯಲ್ಲಿ ಏನಿದೆ? ಅದು ಹೇಗೆ ಕಲಾತ್ಮಕವಾಗಿ ವ್ಯಕ್ತವಾಗಿದೆ? ಕಾವ್ಯಮಯವಾಗಿ ರೂಪುಗೊಂಡಿದೆ?—ಇವೇ ಮೊದಲಾದ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಸ್ಥೂಲ ವಾಗಿ ನಿರೀಕ್ಷಿಸುವ ಪ್ರಯತ್ನವಿದು.

ಮಹಾತ್ಮಾ ಗಾಂಧೀಜಿಯವರ ವ್ಯಕ್ತಿತ್ವವು ಆಕಾಶದಂತೆ ವಿಶಾಲವಾದುದು. ಅದನ್ನು ಚಿತ್ರಿಸುವುದು ಈ ಲೇಖಕನ ಶಕ್ತಿಗೆ ಮೀರಿದುದು. ಅದಕ್ಕಾಗಿ ಸಿ. ಕೃಷ್ಣ ಶರ್ಮರು 'ಗಾಂಧೀಜಿಯವರ ವ್ಯಕ್ತಿಚಿತ್ರವಿದು.' ಎಂದು ಹೇಳುವ ಸಾಹಸಕ್ಕೆ ಇಳಿದಿಲ್ಲ. ಅದು ವ್ಯಕ್ತಿಚಿತ್ರವೇ ಆದರೂ 'ಪರ್ಣಕುಟಿ'. ಅಂದರೆ ಕೃಷ್ಣಶರ್ಮರ ನಿಡುನೋಟ ಗಾಂಧೀಜಿಯವರನ್ನು ಕಂಡ ಬಗೆಯು ಇಲ್ಲಿದೆ. ಇದು ಕೇವಲ ಮಹಾತ್ಮರನ್ನು ಒಮ್ಮೆ ಕಂಡು ಬಂದು, ಒಂದು ಸಂದರ್ಶನ ಪಡೆದು ರಚಿಸಿದ ಕೃತಿಯಲ್ಲ. ಸುಮಾರು ಇಪ್ಪತ್ತು ವರ್ಷಗಳವರೆಗೆ ಆಗಾಗ ಒದಗಿದ ಗಾಂಧೀಜಿ ಯವರ ಸಹವಾಸ, ಅವರ ಸಾಹಿತ್ಯದ ಅಭ್ಯಾಸ, ನಿಧಿಧ್ಯಾಸ, ತತ್ವಚಿಂತನೆ, ಹಲವಾರು ಜನರ ಅನುಭವ ಕಥನ ಇವೆಲ್ಲವುಗಳೂ ಸೇರಿ 'ಪರ್ಣಕುಟಿ'ಯು ರೂಪುಗೊಂಡಿದೆ. ಕ್ರಿ. ಶ. ೧೯೧೯ ರಿಂದ ೧೯೪೭ ರ ವರೆಗೆ ಭಾರತದ ಇತಿಹಾಸದಲ್ಲ ಗಾಂಧೀಜಿಯವರ ಪಾತ್ರ ಬಹಳ ಹಿರಿದಾದುದು. ಈ ಕಾಲಾವಧಿಯ ಮಹಾತ್ಮರ ಚಿತ್ರಣ ಇಲ್ಲಿ ರೂಪು ಪಡೆದಿದೆ. ಅದು ಕೃಷ್ಣಶರ್ಮರ ಕುಶಲ ಕುಂಚದಿಂದ ಕಲಾತ್ಮಕವಾಗಿದೆ, ರಸಾತ್ಮಕವಾಗಿದೆ. " 'ಪರ್ಣಕುಟಿ'ಯು ಮುಖ್ಯವಾಗಿ ೧೯೩೮– ೪೯ ರಲ್ಲಿ ನನ್ನ ಮನಸ್ಸಿನಲ್ಲಿ ಮೂಡಿದ ಭಾವಗಳ, ಭಾವನೆಗೆ ಬಂದ ಬಣ್ಣಗಳ ಚಿತ್ರ." ಎಂದು ಲೇಖಕರು ಹೇಳಿದ್ದರೂ ಆ ಚಿತ್ರ ಲೇಖನಕ್ಕೆ ಬಹುದಿನಗಳ ಅಭ್ಯಾಸ,

ತಪಸ್ಸಿನ ಹಿನ್ನೆಲೆಯಿದೆ. ಭಾವನೆಗಳ ಉತ್ಪತ್ತಿಗೂ ಕೂಡ ಅನುಭವಗಳ ಹಿನ್ನೆಲೆಗಳ ಆವಶ್ಯಕತೆಯೂ ಇದ್ದೇ ಇದೆ. ಸಾಹಿತ್ಯ ಸೃಜನ ಸಹಜವಾಗಿ ನಡೆಯುವ ಕ್ರಿಯೆಯಲ್ಲ. ಲೇಖಕನ ತಪಸ್ಸಿನ ದೀಪ್ತಿಯಿಂದ ವ್ಯಕ್ತವಾಗುವ ಪ್ರತಿಭಾಲೋಕವದು. ಅಂಥ ಲೋಕ, ಅವಲೋಕನಗಳ ಪುಂಜವಾಗಿದೆ 'ಪರ್ಣಕುಟಿ'.

ಈ ಪರ್ಣಕುಟಿಯಲ್ಲಿ ಗಾಂಧೀಜಿಯವರ ವ್ಯಕ್ತಿತ್ವವನ್ನು ರೂಪಿಸುವಾಗ, ಕಂಡರಿಸುವಾಗ ಕೃಷ್ಣಶರ್ಮರು 'ಗಾಂಧೀಜಿ ಅನಂತರೂಪಿ' ಎಂಬುದನ್ನು ಮೊಟ್ಟಮೊದಲು ಅರಿತುಕೊಂಡಿದ್ದಾರೆ. ಅದರಂತೆ ಅವರನ್ನು ಬೇರೆಬೇರೆಯಾಗಿ ಗುರುತಿಸಿಕೊಂಡವರಿದ್ದಾರೆಂಬ ಕಲ್ಪನೆಯೂ ಅವರಿಗಿದೆ. ತಾವು "ರಾಜಕಾರಣದಲ್ಲಿ ಸಲಹೆ ಕೇಳಲೆಂದೇ ಹೋಗಿದ್ದರೂ ಮನಸಿನ ಮೇಲೆ ಮುದ್ರಿತವಾದುದು ಅವರ ಧಾರ್ಮಿಕ ಜೀವನ, ಅವರ ಸಂಸ್ಕೃತಿ. ಪರ್ಣಕುಟಿಯ ಅಂಗಳದಲ್ಲಿ ನಡೆದ ಪ್ರಾರ್ಥನೆಯೇ ಆ ಗುಡಿಯ ಮಹಾದ್ವಾರ. ಅಲ್ಲಿಂದ ಒಳಹೊಕ್ಕು ವಿಶಾಲವಾದ ಪ್ರಾಕಾರದಲ್ಲಿ ಅಲೆದಾಡಿದ್ದೇನೆ. ಅಲ್ಲಿ ಕಂಡು ಬಂದ ಬೇರೆ ಬೇರೆ ಪ್ರತಿಮೆಗಳನ್ನು ನೋಡಿದ್ದೇನೆ." ಈ ಮಾತುಗಳಲ್ಲಿ 'ಪರ್ಣಕುಟಿ'ಯ ರಚನಾ ವಿನ್ಯಾಸವನ್ನು ಬಹು ಸೊಗಸಾಗಿ ಲೇಖಕರು ಸೂಚಿಸಿದ್ದಾರೆ.

ಇದನ್ನು ಇನ್ನಿಷ್ಟು ವಿವರಿಸುತ್ತ ಪ್ರಾರ್ಥನೆಯು ಬಲದ ಮೇಲೆ ನಿಂತ ಗಾಂಧೀಜಿಯ ಬಾಳಿನಲ್ಲಿ ದರಿದ್ರನಾರಾಯಣನೇ ಆರಾಧ್ಯ ದೇವತೆ. ಖಾದಿಯೇ ಆ ದೇವತೆಯ ಪೂಜಾವಿಧಾನ. ಗಾಂಧೀಜಿಯ ಮಹಾನ್ ಜೀವನ ಪಥದ 'ತಳಹದಿ' ಯಾವುದು, ಅವರು 'ಧರ್ಮಸಾರಥಿ'ಯಾಗಿ ಹೇಗೆ ಮುನ್ನಡೆದಿದ್ದಾರೆ ಎಂಬುದನ್ನೂ ಅವಲೋಕಿಸುವಾಗ ಅವರ ಜೀವನವೇ ಒಂದು ಕಲೆಯೆಂಬುದನ್ನು ನಾವು ಗುರುತಿಸುವಂತಾಗುತ್ತದೆ. ಆ ಕಲೆಯಲ್ಲಿ ಹುದುಗಿದ ಅಂತಃಕರಣದ ರಸಿಕತೆಯನ್ನು ನಾವು ಕಾಣುತ್ತೇವೆ. ಆ ರಸಿಕತೆಯು ಸಾಮಾನ್ಯವಲ್ಲ. ಅದು ಸತ್ಯದಿಂದ ಹುಟ್ಟಿ ಸತ್ಯದಿಂದ ಬೆಳೆದು ಬಂದುದು. ಹೀಗೆಯೇ ಕತೆಯ ಕಣ್ಣಿನಿಂದ ಕೃಷ್ಣಶರ್ಮರು ಮುಂದೆ ಗಾಂಧೀಜಿಯವರನ್ನು ಕಂಡಿದ್ದಾರೆ. ಆ ಕಲಾಪುರುಷನಾದ ಗಾಂಧೀಜಿಯು ಹೆಂಗಸರೊಡನೆ, ಮಕ್ಕಳೊಡನೆ, ತನ್ನ ಕುಟುಂಬದೊಡನೆ ಹೇಗೆ ಮಾನವಿಕ ಸಂಬಂಧವನ್ನು ಬೆಳೆಯಿಸಿದ್ದರೆಂಬ ಚಿತ್ರವನ್ನು ಕೊಟ್ಟಿದ್ದಾರೆ. ಇದು 'ಸಾಹಿತಿ ಗಾಂಧಿ', 'ಚಿಕ್ಕೆಗಳ ಚಂದ್ರಾಮ', 'ನಗೆಗಾರ ಗಾಂಧಿ', 'ಅಹಿಂಸೆಯ ಅವತಾರ' ಮೊದಲಾದ ಪ್ರಕರಣಗಳಲ್ಲಿ ವಿಸ್ತಾರಗೊಂಡಿವೆ.

ಮುಂದೆ ಮಹಾತ್ಮರ ಆರಾಧಕರಾದ ಕೃಷ್ಣಶರ್ಮರು ಕಂಡ ಬಗೆ ಹೀಗಿದೆ : ಗಾಂಧೀಜಿಯ ಆ ತಲೆಗೆ, ಆ ಸಾಹಿತ್ಯಕ್ಕೆ, ಆ ವಿನೋದದ ರುಚಿಗೆ, ಆ ಸಲಿಗೆಯ ಸ್ವಭಾವಕ್ಕೆ, ವಿಶ್ವಕುಟುಂಬದ ಭಾವನೆಗೆ–ಎಲ್ಲಕ್ಕೂ ಆ ಸತ್ಯದೃಷ್ಟಿಯೇ ಆಧಾರ. ಎಲ್ಲಕ್ಕೂ ಸತ್ಯಶೋಧನೆಯ ಹದ ಇದೆ. ಕಸ್ತೂರಿಬಾರೊಡನೆ ಅವರು ನಡೆಸಿದ ಸಂಸಾರದಲ್ಲಿಯೂ ಅದೇ ಹೆಜ್ಜೆ. ವಿಶ್ವಕುಟುಂಬಿಯಾಗಿ ದರಿದ್ರ ನಾರಾಯಣನನ್ನು

ಆರಾಧಿಸಿದ್ದಾರೆ. ದರಿದ್ರನಾರಾಯಣ ಅವರ ವ್ಯವಹಾರ ದೇವತೆಯಾದರೆ ಸತ್ಯನಾರಾಯಣ ಅವರ ಅಂತರಂಗದ ಇಷ್ಟದೇವತೆ. ಈ ದೇವತೆಯ ಸ್ಪಷ್ಟವಾದ ಕಲ್ಪನೆಯು ಅವರಿಗಿದೆ. ಅದರ ಆರಾಧನೆಯೇ ಅವರ ಜೀವನ ಸರ್ವಸ್ವ. ಆ ಸತ್ಯದ ಬೆಳಕು ಅವರಿಗೆ ಗೀತೆಯಲ್ಲಿ ತಂದಿದೆ. ಅನಾಸಕ್ತಿಯೋಗದ ಕನಸು ಮನದಲ್ಲಿ ಒಳಗೂ ಹೊರಗೂ ಮೂಡಿನಿಂತಿದೆ. ಹೀಗೆ 'ಪರ್ಣಕುಟಿ'ಯಲ್ಲಿ ಸತ್ಯಾರಾಧಕನಾದ ಮಹಾಕವಿ, ಕುಲರಸಿಕನ ಮೂರ್ತಿಯು ಪ್ರತಿಷ್ಠಿತಗೊಂಡಿದೆ. ಅದರ ಪ್ರತಿಷ್ಠಾಚಾರ್ಯರು ಸಿ. ಕೃಷ್ಣಶರ್ಮರು.

'ಗಾಂಧೀಜಿ ಎಂದರೆ ಒಬ್ಬ ವ್ಯಕ್ತಿಯಲ್ಲ. ಅದು ಒಂದು ಪಂಥ.' ಎಂಬ ಭಾವನೆಯಿಂದ ಕೃಷ್ಣಶರ್ಮರು ಮಹಾತ್ಮರ ಜೀವನ ಚಿತ್ರವನ್ನು ರೂಪಿಸಲು ತೊಡಗಿದ್ದಾರೆ. ಗಾಂಧೀಜಿಯವರ ಹೆಸರು ಭಾರತದಲ್ಲಿ ಹೇಗೆ ಮನೆಮನೆಗೆ ಪಸರಿಸಿದೆ, ಅದು ಜಗತ್ತಿನ ಮೂಲೆ ಮೂಲೆಗೂ ಹೇಗೆ ಮುಟ್ಟಿದೆ ಎಂಬ ವಿವರವನ್ನು ವಿವಿಧ ಸಂದರ್ಭಗಳಿಂದ ಚಿತ್ರಿಸಿದ್ದಾರೆ. ಕೊನೆಗೆ ಗಾಂಧೀಜಿಯನ್ನು ಯಾರು ಕಂಡರೂ 'ಅವರೆಲ್ಲರೂ ಆನೆಯನ್ನು ಮುಟ್ಟಿದವರೇ ?' ಎಂದು ಎಲ್ಲರ ಕಾಣ್ಕೆ ಅಪೂರ್ಣ ಎಂಬ ಮಾತನ್ನು ಸೊಗಸಾಗಿ ಸೂಚಿಸಿದ್ದಾರೆ. ಗಾಂಧೀಜಿಯ ಈ ಅವರ್ಣನೀಯ ಪ್ರಾರ್ಥನೆಯಲ್ಲಿದೆ. ರಾಮಧುನ್‌ದ

'ರಘುಪತಿ ರಾಘವ ರಾಜಾರಾಮ್
ಪತಿತಪಾವನ ಸೀತಾರಾಮ್'

ಎಂಬ ಧ್ವನಿಯು ಪ್ರಾರ್ಥನೆಯಲ್ಲಿ ಒಮ್ಮೆ ಭಾಗವಹಿಸಿದ ಯಾರಿಗೂ ಅವರ ಜೀವಮಾನದಲ್ಲಿ ಎಂದಿಗೂ ಮರವಾಗುವಂತಿಲ್ಲ. ಕಿವಿಯಲ್ಲಿ ಸದಾ ದುಮದುಮಿಸುತ್ತಿರುತ್ತದೆ. ಮನಸ್ಸಿನಲ್ಲಿ ಶಾಂತಿಯ ಭಾವನವನ್ನು ತುಂಬುತ್ತದೆ.

ಗಾಂಧೀಜಿಯ ಜೀವನಕ್ಕೆ ಈ ಪ್ರಾರ್ಥನೆಯೊಂದು 'ತಳಹದಿ'ಎಂದು ವಿವರಿಸುತ್ತ ಲೇಖಕರು 'ಪ್ರಾರ್ಥನೆ ಇಲ್ಲದೆ ಗಾಂಧೀಜಿಗೆ ದಿನ ಬೆಳಗಾಗುವುದಿಲ್ಲ' ಎಂದು ಖಂಡಿತವಾಗಿ ಹೇಳಿ ಬಿಡುತ್ತಾರೆ. ಇಷ್ಟೇ ಅಲ್ಲ, ಪ್ರಾರ್ಥನೆಯ ವಿಷಯದಲ್ಲಿ ಇರುವ ಮಹಾತ್ಮರ ಭಾವನೆಗಳನ್ನು ರೂಪಿಸಲು ಯತ್ನಿಸಿದ್ದಾರೆ, ಅವರ ನುಡಿಗಳಿಂದಲೇ. ಪ್ರಾರ್ಥನೆ ಭಿಕ್ಷೆ ಬೇಡುವುದಲ್ಲ. ಅದು ಆತ್ಮನ ಕಾಮನೆ. ನಮ್ಮ ದೌರ್ಬಲ್ಯ ಅಸಹಾಯತೆಗಳ ನೆನಪು....ಬಾಳು ಬೇಸರವಾದಾಗ ದೇವರ ನೆನಪು ಆಗುವುದು. ಅದೇ ಪ್ರಾರ್ಥನೆ ?' ಇದಕ್ಕೆ ಪಾಂಡಿತ್ಯ ಬೇಕಾಗಿಲ್ಲ. ಬುದ್ಧಿಯ ಕಸರತ್ತು ಇಲ್ಲಿಲ್ಲ. ಅಂತಲೇ ಉಪಾಸನೆ ಪ್ರಾರ್ಥನೆಗಳು ಬರಿಯ ಮಾತಿನ ಮಾಲೆಯಲ್ಲ. 'ವಾಣೀ ವೈಭವವಲ್ಲ. ಅದರ ಹುಟ್ಟು ನಾಲಗೆಯಲ್ಲಿಲ್ಲ, ಹೃದಯಾಂತರಾಳದಲ್ಲಿ. ಹೃದಯದ ವೈಲಿನೆಯಲ್ಲ ತೊಳೆದು ಭಕ್ತಿಯನ್ನು ತುಂಬಿ ಪರಿಶುದ್ಧವಾಗಿಸಿದರೆ, ಎಲ್ಲ ತಂತಿಗಳನ್ನೂ ಶ್ರುತಿ ಮಾಡಿಟ್ಟರೆ ಅಶ್ರುತ ವೀಣಾರವ ಹೊರಟೀತು....' ಎನ್ನುತ್ತಾರೆ ಗಾಂಧೀಜಿ. ಇದಕ್ಕೂ ಮುಂದೆ ಹೋಗಿ '....ಪ್ರಾರ್ಥನೆ ಎಂದರೆ ನನ್ನೊಳಗಿನ ದೇವರನ್ನು ಎಚ್ಚರಗೊಳಿಸುವುದು....'

ನಾವು ಪುರುಷೋತ್ತಮನಾದರೆ ನಾನು ದೇವರು ಅಲ್ಲಿಯೇ ಇದ್ದಾನೆ. ಹೃದಯ ದಲ್ಲಿಯೇ ಇದ್ದಾನೆ. ಈ ವಿಷಯದಲ್ಲಿ ಗಾಂಧೀಜಿಯವರು 'ನಾನು ಬಹಳ ಅದೃಷ್ಟ ಶಾಲಿ. ಆತ ಎಂದೂ ಕೈಕೊಡದೆ ಹೋಗಿಲ್ಲ. ವಿಪತ್ತು ಘೋರವಾದಾಗಂತೂ ಆತ ಅತಿ ಸಮೀಪದಲ್ಲಿ ಕಂಡಿದ್ದಾನೆ. ನನ್ನ ಬಾಳಿನಲ್ಲಿ ನಾನು ದೇವರಿಂದ ಪರಿತ್ಯಕ್ತನಾದೆ ಎಂಬ ಅನುಭವ ನನಗೆ ಒಂದೇ ಒಂದು ಗಳಿಗೆಯಾದರೂ ಬಂದಿಲ್ಲ' ಈ ಅನುಭವ ಸಾಮಾನ್ಯರಿಗೆ ಲಭಿಸೀತೆ ?

'ರಾಟೆಯೇ ಸ್ವರಾಜ್ಯದ ದಾರಿ' ಎಂದು ಹೇಳಿದವರು ಗಾಂಧೀಜಿಯವರು. ರಾಟೆಯೇ ಜನರ ಸರ್ವಸ್ವ. ಅದು ಮಾಯವಾದಾಗಲೇ ಜನರ ಸ್ವಾತಂತ್ರ್ಯ ಮಾಯವಾಯಿತೆಂದು ಅವರು ಸಾರಿದರು. ಹಿಂದುಸ್ತಾನದ ಹಳ್ಳಿಗಳಲ್ಲಿ ಹಿಂದು ಸ್ತಾನದ ಸಂಸ್ಕೃತಿಯು ಇದೆ. ಈ ಸಂಸ್ಕೃತಿಯಲ್ಲಿ ದೊಡ್ಡ ದೊಡ್ಡ ಯಂತ್ರಗಳಿಗೆ ಸ್ಥಾನವಿಲ್ಲ. ಆದರಿಂದ ದೊಡ್ಡ ದೊಡ್ಡ ಕಾರ್ಖಾನೆಗಳಿಗೂ ಅವಕಾಶವಿಲ್ಲ. ಗಾಂಧೀಜಿಗೆ ಅಹಿಂಸೆಯೇ ಧರ್ಮ. ಭಾರೀ ಕಾರ್ಖಾನೆಗಳು ಅಹಿಂಸೆಯ ಹಾದಿಗೆ ಹೊಂದುವುದಿಲ್ಲ. ಕಾರ್ಖಾನೆಗಳ ತಳಪಾಯವೇ ಹಿಂಸೆ, ಆಕ್ರಮಣ. ಈ ಅವಸ್ಥೆಯೇ ನಾನು ಬೇಡ ಎನ್ನುವುದು. ಎಲ್ಲರಿಗೂ ಹೊಟ್ಟೆತುಂಬ ಹಿಟ್ಟು, ಮೈತುಂಬ ಬಟ್ಟೆ, ತಕ್ಕ ಮಟ್ಟಿಗೆ ವಿದ್ಯೆ—ಇಷ್ಟಾದರೆ ಸಮೃದ್ಧಿ. ಈ ಮಂತ್ರೋಪದೇಶವು ಭಾರತಕ್ಕೆ ಮಾತ್ರವಲ್ಲ; ಇಡೀ ಜಗತ್ತಿಗೇ ಗಾಂಧೀಜಿಯವರು ಸಾರಿದ್ದಾರೆ. ಆದರಿಂದ ಕೇವಲ ಸ್ವರಾಜ್ಯದ ಹೋರಾಟಕ್ಕೆ ಶಸ್ತ್ರವೆಂದು ಖಾದೀ ಬಂದುದಲ್ಲ. ಅಹಿಂಸೆ ಸತ್ಯಗಳ ತಳ ಹದಿಯ ಮೇಲೆ ಕಟ್ಟಿದ ಮಾನವ ಜೀವನದ ಕುರುಹು ಅದು. ಗಾಂಧೀ ಧರ್ಮಕ್ಕೆ ಅದು ಸಾರಥಿ.

ಕಲೆಯ ವಿಷಯದಲ್ಲಿಯೂ ಗಾಂಧೀಜಿಗೆ ಅವರದೇ ಆದ ಒಂದು ದರ್ಶನವಿದೆ. ಸತ್ಯವನ್ನು ಕಾಣಬೇಕೆಂಬುದಕ್ಕಿಂತ ಕಂಡದ್ದೇ ಸತ್ಯ ಎನ್ನುವ ಪಂಥ ಅವರಿಗೆ ಸೇರು ವುದಿಲ್ಲ. ಜೀವಿಗೆ ತನ್ನ ಅಂತರಾತ್ಮ ದರ್ಶನ ಮಾಡಿಕೊಡಲು ನೆರವಾಗದ ಕಲೆ ಕಲೆಯಲ್ಲ. ಪ್ರಕೃತಿಯ ವಿವಿಧ ದೃಶ್ಯಗಳೆಲ್ಲವೂ ಕಲಾಕೃತಿಗಳೇ ಅಲ್ಲವೇ ? ಮಾನ ವನ ಕಲಾಕೃತಿಗೆ ಬೆಲೆ ಸಿಕ್ಕಬೇಕಾದರೆ ಅವು ಆತ್ಮವಿಕಾಸಕ್ಕೆ ಸಹಾಯಕವಾಗಬೇಕು. ಕಲೆ ಇಂದ್ರಿಯಾನುಭೂತಿಯಲ್ಲ, ಭಾವಾನುಭೂತಿ. ರೂಪವಲ್ಲ ಕಲೆಯ ರಾಜ್ಯ, ಗುಣ. ಕಲಾದೇವಿ ಮೂರು ಮೊಗದಾಕೆ. ಸತ್ಯ, ಶಿವ, ಸುಂದರ ಮೂರು ಮುಖಗಳು. ನಡುವಿನ ಮುಖ ಸತ್ಯ. ಆದಸಲ್ಲೂ ಗಾಂಧೀಜಿಯವರಿಗೆ 'ಜೀವನವು ಸಮಸ್ತ ಕಲೆಗಳಿಗಿಂತ ಶ್ರೇಷ್ಠವಾದುದು. ಯಾರು ಉತ್ತಮ ರೀತಿಯಿಂದ ಬಾಳಬಲ್ಲನೋ ಅವನೇ ಉತ್ತಮ ಕಲಾಕಾರ.' ಅವನ ಜೀವನವೇ ಒಂದು ರಸಕಾವ್ಯ. 'ಗಾಂಧೀಜೀ ಸ್ವತಃ ಅದಕ್ಕೊಂದು ಉದಾಹರಣೆ' ಗಾಂಧೀಜಿಯ ಕಲೆಯನ್ನು ಕೃಷ್ಣಶರ್ಮರು ಅರ್ಥಮಾಡಿಕೊಂಡ ರೀತಿಯಿದು.

ಇದೇ ದೃಷ್ಟಿಯಿಂದ ಗಾಂಧೀಜಿಯು ಶ್ರೇಷ್ಠಸಾಹಿತಿಯೂ ಆಗಿದ್ದಾರೆ. ಅವರ ಸಾಹಿತ್ಯದ ಬಗೆಯೇ ಬೇರೆ. ಅವರಿಗೆ ಅದರಿಂದ ಕೀರ್ತಿಯೂ ಬೇಕಾಗಿಲ್ಲ. ಹಣವೂ ಬೇಕಾದುದಲ್ಲ. ಅವರ ಸ್ಫೂರ್ತಿ ಜನಪದ ಸಾಹಿತ್ಯ, ದಾಸರು ಶರಣರು ನಮ್ಮ ನಾಡಿಗೆ ದಾನ ಮಾಡಿದ ಸಂಸ್ಕೃತಿಯಿಂದ ಹುಟ್ಟಿದುದು. ಗಾಂಧೀಜೀ ಸಾಹಿತ್ಯದ ಬಾಗಿಲಿಗೆ ಬಂದದ್ದು ಸತ್ಯದ ದಾರಿಯಿಂದ. ಅನಾಸಕ್ತ ಕರ್ಮದ ಹಾದಿ ಅವರದು. ಅದರಿಂದ ಸಾಹಿತ್ಯ ಅವರಿಗೆ ಸಾಧನೆಯೇ ಹೊರತಾಗಿ ಗುರಿಯಲ್ಲ. ಅವರ ಬರವಣಿಗೆ ಯಲ್ಲಿ ಕಂಡು ಬರುವ ಹದ, ಹರಿತ ಉತ್ತಮ ಸಾಹಿತ್ಯದ ಗುರುತಾಗಿವೆ. ಅವರೇ ಹೇಳುವಂತೆ 'ಭಾವವು ತುಂಬಿದ ಕೊಡದ ಹಾಗೆ. ಭಾಷೆ ಅದನ್ನು ಮೇಲೆಳೆಯುವ ಹಗ್ಗ.' 'ಅನುಭವವಿಲ್ಲದ ಅಪ್ರಮಾಣವಾದ ಮಾತು ಎಷ್ಟು ಉದಾತ್ತವಾದರೂ ಅದರಲ್ಲಿ ಜೀವವಿಲ್ಲ, ಅದು ಜನರ ಮನಸ್ಸಿಗೆ ಹಿಡಿಸದು; ಅವರ ಎದೆಗೆ ತಟ್ಟದು. ಅದೇ ಅನುಭವದಿಂದ ಬಂದ ಮಾತು, ಪ್ರಮಾಣಕ್ಕೆ ತಿಳಿದ ಸತ್ಯ. ಅದು ಫಲಕಾರಿ.' ಅದರಿಂದ ಸಾಹಿತ್ಯವು ಹಣವಂತರಿಗೆ ಮಾತ್ರ ಸಿಗುವ ಕೇಸರಿ ಕರ್ಪೂರ ಬೆರಸಿದ ದೇವರ ತೀರ್ಥವಾಗಬಾರದು. 'ಜಗತ್ತಿನ ಇಡೀ ಚರಾಚರ ಜೀವ ಕೋಟಿಗೇ ತಂಪು ಕೊಡುವ ಮಳೆ ನೀರಿನಂತೆ' ಆಗಬೇಕು. ಅದೇ ಸಾಹಿತ್ಯದ ಪರಮ ಸತ್ಯ; ಆಗಲೇ ಅದರ ಸಾರ್ಥಕತೆ. ಅದು ಗಾಂಧೀಜಿಯ ಗುರಿ.

ಗಾಂಧೀಜಿಯ ಸಾಹಿತ್ಯಕ್ಕೆ ಆ ದುರ್ವಾರ ಶಕ್ತಿಯು ಬರಲು ಅವರ ಹಾಸ್ಯ ಪ್ರವೃತ್ತಿಯೇ ಕಾರಣ. ಹೂವಿಗೆ ತಂಪು ಇದ್ದಹಾಗೆ ನಗೆ ಅವರಿಗೆ. 'ಆತ್ಮಕತೆ' ಓದದೆ ಗಾಂಧೀಜಿಯ ಹಾಸ್ಯದ ಬಲ ನಮಗೆ ತಿಳಿಯುವುದಿಲ್ಲ. ಅದರಲ್ಲೂ ಬರಹಕ್ಕಿಂತ ಮಾತಿನಲ್ಲಿ ಹಾಸ್ಯದ ಹೊಳೆಯು ಇನ್ನೂ ಹೆಚ್ಚಾಗಿ ಹರಿಯುತ್ತದೆ. ಅವರ ನಗೆಯಲ್ಲಿ ದಿಟ್ಟತನವಿದ್ದರೂ ಮನಃ ಪ್ರಸಾದವಿರುತ್ತದೆ. ಗಾಂಧೀಜಿಯ ಹಾಸ್ಯ ಪ್ರವೃತ್ತಿಯು ಅವರ ವಾಙ್ಮಯ ತವದ ಜೀವಾಳವೇ ಆಗಿದೆ. ನಗೆಯ ಹಾಗೇ ಅವರಿಗೆ ಮಕ್ಕಳು. ಮಕ್ಕಳನ್ನು ಕಂಡರೆ ಗಾಂಧೀಜಿಗೆ ಬಹಳ ಪ್ರೀತಿ. ಮಕ್ಕಳಿಗೂ ಕೂಡ ಬಾಪೂನ್ನ ಕಂಡರೆ ಬಹಳ ಆಸೆ, ಅಕ್ಕರೆ. ಮಕ್ಕಳು ನಕ್ಷತ್ರಗಳಿದ್ದಂತೆ ಅವರಿಗೆ. ಅದರಿಂದ ಅವರನ್ನು ಕೃಷ್ಣ ಶರ್ಮರು 'ಚಿಕ್ಕೆಗಳ ಚಂದ್ರಾಮ' ಎಂದು ಕರೆದಿದ್ದಾರೆ. ಮಕ್ಕ ಳೊಡನೆ ಮಗುವಾಗಿ ಗಾಂಧೀಜಿಯವರು ವರ್ತಿಸಿದ ವಿವಿಧ ಪ್ರಸಂಗಗಳನ್ನು ಆಯ್ದು ಸುಂದರವಾಗಿ ಹೆಣೆದಿದ್ದಾರೆ ಇಲ್ಲಿ. ಒಳ್ಳೆಯ ಹೂವಿನ ಗುಚ್ಛವಿದು.

ಇನ್ನು ಹೆಣ್ಣಿನ ವಿಷಯದಲ್ಲಿ ಗಾಂಧೀಜಿಯ ಮನೋಭಾವವನ್ನು ವಿವರಿಸುತ್ತ ಶರ್ಮರು 'ಹೆಣ್ಣಿನ ಸಹಕಾರಕ್ಕೆ ಗಾಂಧೀಜೀ ಕೊಟ್ಟಷ್ಟು ಬೆಲೆ ಬೇರೆ ಯಾವ ಅವತಾರ ಪುರುಷನೂ ಕೊಟ್ಟಿಲ್ಲ'ವೆಂದು ಧಾರಾಳವಾಗಿ ಹೇಳಿದ್ದಾರೆ. ಹೆಣ್ಣು ಅಹಿಂಸೆಯ ಅವತಾರ ಗಾಂಧಿಜೀಯವರಿಗೆ. ಅಹಿಂಸೆ ಎಂದರೆ ಕೊನೆ ಇಲ್ಲದ ಒಲವು ತಾನೆ? ಗಾಂಧೀಜಿಯವರು ವಿವಿಧ ಪ್ರಸಂಗಗಳಲ್ಲಿ ವಿವಿಧ ತರಗತಿಯ ಸ್ತ್ರೀಯರ ಮಧ್ಯದಲ್ಲಿ ವರ್ತಿಸಿದ ರೀತಿಗಳನ್ನು ಪ್ರಸಂಗ ಕಥನದ ರೀತಿಯಲ್ಲಿ ಇಟ್ಟುಕೊಟ್ಟಿದ್ದಾರೆ. ಕೊನೆಗೆ

ಡಾಕ್ಟರ್ ಮಾಡ್‌ರಾಯಡನ್ ಅವರು ಗಾಂಧೀಜಿಗೆ ಸ್ತ್ರೀಲೋಕದ ಕೃತಜ್ಞತೆಯನ್ನು ಸಲ್ಲಿಸುತ್ತ ಹೇಳಿದ ಮಾತನ್ನು ಉಲ್ಲೇಖಿಸಿ ಈ 'ಅಹಿಂಸೆಯ ಅವತಾರ'ವನ್ನು ಕಳೆಗಟ್ಟಿದ್ದಾರೆ. ಇದು ಬಹು ಮನೋಹರವಾದ ಚಿತ್ರಗಳ ಸಾಲಿನದಾಗಿದೆ. ಇದರಲ್ಲಿ 'ಕಸ್ತೂರಬಾ' ಅಧ್ಯಾಯವೊಂದು ವಿಶಿಷ್ಟ ಚಿತ್ರವಾಗಿ ಮುಂದೆ ನಿಂತಿದೆ. ಜೀವಮಾನದುದ್ದಕ್ಕೂ ಗಾಂಧೀಜಿಯ ಸಹವಾಸದಲ್ಲಿ ಕಳೆದ ಹೆಣ್ಣಿನ ಚಿತ್ರವಿದು. ಮಹಾತ್ಮರ ಹೆಂಡತಿಯಾಗಿ ಸಹಧರ್ಮಿಣಿಯಾಗಿ ಬಾಳುವುದು ಎಷ್ಟು ಕಷ್ಟಕರವೆಂಬುದರ ಅರಿವು ನಮಗೆ ಮೂಡುವಂತೆ ಆಗುತ್ತದೆ. 'ಗಾಂಧೀಜಿ–ಕಸ್ತೂರಬಾ ದಂಪತಿಗಳು ದಾಂಪತ್ಯವನ್ನು ಕಾಮದ ಕೆಸರಿನಿಂದ ಎತ್ತಿ, ವೈರಾಗ್ಯದ ತಳಹದಿಯ ಮೇಲೆ ನಿಲ್ಲಿಸಿ, ನಿಜವಾದ ಧರ್ಮ ಪ್ರೇಮಗಳಿಂದ ಕಟ್ಟಿ ಹಿಂದೆಂದೂ ಕಾಣದ ಸೊಬಗನ್ನು ಬೀರುತ್ತಿದ್ದಾರೆ' ಇಲ್ಲಿ ಗಾಂಧೀಜಿಯ ದೃಷ್ಟಿಯಲ್ಲಿ ಹೆಣ್ಣಿನ ಸ್ಥಾನ–ಮಾನಗಳ ಸ್ಪಷ್ಟ ಕಲ್ಪನೆಯು ನಮಗೆ ಆಗುತ್ತದೆ.

'ಬಾಪೂ ವಿಶ್ವಕುಟುಂಬಿ. ಎಲ್ಲವೂ ಬೇಕು, ಎಲ್ಲರೂ ಬೇಕು.' ಎಂದಿದ್ದಾರೆ ಕೃಷ್ಣಶರ್ಮರು. ಇಲ್ಲಿ ಗಾಂಧೀಜಿ ಎಂದು ಅವರು ಹೇಳಲಿಲ್ಲ. 'ಬಾಪೂ' ಎಂದಿದ್ದಾರೆ. ಅದರಲ್ಲಿ ಒಂದು ಔಚಿತ್ಯವಿದೆ. ಇಂಥ ಔಚಿತ್ಯ ಕೃಷ್ಣಶರ್ಮರ ಸಾಹಿತ್ಯದಲ್ಲಿ ಎಲ್ಲೆಡೆಗೂ ನಾವು ಕಾಣುತ್ತೇವೆ. ಇದೇ ರೀತಿಯಾಗಿ ಮುಂದುರಿದು ವಿಶ್ವಕುಟುಂಬಿಯ ಚಿತ್ರವನ್ನು ನಮ್ಮ ಕಣ್ಣಿಗೆ ಕಟ್ಟುವಂತೆ ರೂಪಿಸಿದ್ದಾರೆ. ಗಾಂಧೀಜೀ ಅನಾಸಕ್ತಿ ಮಾರ್ಗದ ಕರ್ಮಯೋಗಿ. ಅವರಿಗೆ ಮನಸ್ಸು ಹಾಗೆ. ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮೋಕ್ಷ. ಒಂದು ಗಳಿಗೆಯೂ ದೇವರನ್ನು ಬಿಟ್ಟಿರದ ಜೀವವದು. ಅವರಿಗೆ ಬರುವ ಹಲವಾರು ಪತ್ರಗಳಿಗೆ ಉತ್ತರಿಸುವ ಬಗೆಯಿಂದಲೂ ವಿವಿಧ ಸಂದರ್ಭ ಕಥನದಿಂದಲೂ ಅವರ ವಿಶ್ವಕುಟುಂಬಿತನವನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ.

ಈ ಅನಾಸಕ್ತಿಯ ಕನಸುಗಾರನಿಗೆ ಭಗವದ್ ಗೀತೆಯೇ ಸರ್ವಸ್ವ. ಇಡೀ ಜಗತ್ತು ಒಂದು ತೂಕ; ಗೀತೆ ಒಂದೇ ಒಂದು ತೂಕ. ಅನಾಸಕ್ತಿ ನಿಷ್ಕಾಮ ಬುದ್ಧಿ ಅಂದರೆ ಬರಿಯ ಬಾಯಿ ಮಾತಾಗಲಾರದು. ಇದು ಬರಿಯ ಬುದ್ಧಿಗೆ ಸಿಗುವುದಲ್ಲ. ಹೃದಯ ಮಥನಬೇಕು. ಅನಾಸಕ್ತಿಗೆ ತನ್ನದೇ ಸರಿ ಎಂಬ ಹಟವಿಲ್ಲ. ಅವರದು ರಾಗದ್ವೇಷವಿಲ್ಲದ ಅನಾಸಕ್ತ ಪ್ರೇಮ. ಅದು ಶುದ್ಧ ಪ್ರೇಮ. ಇದರಿಂದ ಕ್ಷುದ್ರಮಾನವನು ದೇವ ದೇವನಾಗಬಲ್ಲ. ಕೀಳು ಮನುಷ್ಯನಲ್ಲೂ ಮಹಾಪುರುಷ ಅಡಗಿದ್ದಾನೆ. ಆ ಪುರುಷೋತ್ತಮನ ಇರವಿನ ಅರಿವು ಮುಕ್ತಿ. ಇದಕ್ಕೆ ಆತ್ಮಶುದ್ಧಿ. 'ಆತ್ಮಶುದ್ಧಿ ಆತ್ಮವತ್ ಸರ್ವಭೂತಾನಿಯ ಐಕ್ಯ ಸಾಧನೆ ಇಲ್ಲವೇ ಇಲ್ಲ. ಆತ್ಮಶುದ್ಧಿ ಇಲ್ಲದೆ ಅಹಿಂಸಾಧರ್ಮ ಇಲ್ಲ. ಪರಮಾತ್ಮ ದರ್ಶನವೂ ಇಲ್ಲ.' ಆತ್ಮಶುದ್ಧಿ ಎಂದರೆ ನಿರ್ವಿಕಾರ. ಕಾಯಾ ವಾಚಾ ಮನಸಾ ರಾಗದ್ವೇಷ ನಿಗ್ರಹ. ಅಂದರೆ ಅನಾಸಕ್ತಿ. ಆತ್ಮ ಮೋಕ್ಷಕ್ಕಾಗಿ ಆತ್ಮ ಶುದ್ಧಿ. ಜಗದ್ಧಿತಕ್ಕಾಗಿ ಸ್ವಾರ್ಥತ್ಯಾಗ. ಇದು ಗಾಂಧೀಜಿಯ ಅನಾಸಕ್ತಿಯ ಕನಸು. ಈ ಕನಸು ನನಸಾಗಬೇಕಾದರೆ ಅವರು

ದೇವರಲ್ಲಿ ಇಟ್ಟ ಶ್ರದ್ಧೆಯೇ ಕಾರಣ. ಗಾಂಧೀಜಿಯವರು ದೇವರನ್ನು ಗುರುತಿಸಿಕೊಳ್ಳದ ಗಳಿಗೆಂಬುದೇ ಇಲ್ಲ. ಅವರ ಸರ್ವಬಲವೂ ಅವನೇ. ಇಂಥ ಗಾಢ ಭಕ್ತಿಗೆ ಅಚಲ ವಿಶ್ವಾಸವೇ ಪೀಠಿಕೆಯಾಗಿದೆ. ದೇವನ ಇರವು ಅವರಲ್ಲಿ ಅಂತರ್ವಾಣಿಯಾಗಿ ನುಡಿದು, ಜೀವನದಲ್ಲಿ ಮಾರ್ಗದರ್ಶನ ಮಾಡದ ಸಂದರ್ಭಗಳೇ ಇಲ್ಲ. ಇಂಥ ಹಲವಾರು ಸಂದರ್ಭಗಳನ್ನು 'ಕರುಣಾಳು ಜೀಳಕೆ' ಎಂಬ ಅಧ್ಯಾಯದಲ್ಲಿ ಕೃಷ್ಣ ಶರ್ಮರು ಬಹು ಮನೋಜ್ಞವಾಗಿ ನಿರೂಪಿಸಿದ್ದಾರೆ.

ಮುನ್ನುಡಿಯಲ್ಲಿ ಪೂಜ್ಯರೂ ಹಿರಿಯರೂ ಆದ ಶ್ರೀ ಮಾಸ್ತಿಯವರು ನುಡಿದಂತೆ "ಈ ಗ್ರಂಥ ಮಹಾತ್ಮರ ಜೀವನದ ಅಂತಸ್ಸತ್ವವನ್ನೇ ತಿಳಿಸಿಕೊಡಬಲ್ಲದಾಗಿದೆ." ಅವರು ಆಶೀರ್ವದಿಸಿದಂತೆಯೇ "ಇಂಥ ಉತ್ಕೃಷ್ಟ ವಿಷಯವನ್ನು ಕುರಿತು ಇಷ್ಟು ಉತ್ಕೃಷ್ಟ ರೀತಿಯ ಈ ಗ್ರಂಥವನ್ನು ರಚಿಸಿದ ಬಗ್ಗೆ ನಾನು ಕೃಷ್ಣಶರ್ಮರವರನ್ನು ಅಭಿನಂದಿಸುತ್ತೇನೆ...." ಅಭಿನಂದಿಸುತ್ತೇನೆನ್ನುವುದು ನಮಗೆ ಈ ಸಂದರ್ಭದಲ್ಲಿ ಉಚಿತವಾಗಿದೆ. ಅವರ 'ಸಿದ್ಧ ಹಸ್ತ' ಈ 'ಪರ್ಣಕುಟಿ'ಯಲ್ಲಿ ಗಾಂಧೀಜಿಯವರ ದಿವ್ಯ ಮೂರ್ತಿಯನ್ನು ಅತ್ಯಂತ ಕಲಾತ್ಮಕವಾಗಿ ಕಂಡರಿಸಿದೆ. ಇಂಥ ಕಲಾಕೃತಿಗಾಗಿ ಶ್ರೀ ಸಿ. ಕೃಷ್ಣಶರ್ಮರು ಕನ್ನಡಿಗರೆಲ್ಲರಿಂದಲೂ ಅಭಿವಂದ್ಯರಾಗಿದ್ದಾರೆ. ಕನ್ನಡದ ಭಾಗ್ಯವೆನಿಸಿದ್ದಾರೆ.

# ‘ಪರ್ಣಕುಟಿ’ಯಲ್ಲಿ ಪಕ್ವಫಲ

ಕೃಷ್ಣಮೂರ್ತಿ ಪುರಾಣಿಕ

ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರ ನೆನಪಿನೊಂದಿಗೆ ಅವರ ‘ಪರ್ಣಕುಟಿ’, ‘ಪಥಯಾತ್ರೆ’ ‘ಮಾತಿನ ಮಂಟಪ’ಗಳು ಕಣ್ಣಮುಂದೆ ಸುಳಿಯುತ್ತವೆ. ಈ ಪುಸ್ತಕಗಳಲ್ಲಿ ಕನ್ನಡ ಗದ್ಯ ತನ್ನದೇ ಆದ ಸರಳ ಸುಂದರ ಶೈಲಿಯಲ್ಲಿ ವಿಜೃಂಭಿಸಿದೆ. ಈ ಎಲ್ಲ ಪುಸ್ತಕಗಳ ವಸ್ತು ರಾಜಕೀಯವಾಗಿದ್ದರೂ ವಿಚಾರಕ್ರಾಂತಿಯನ್ನು ಬಡಿದೆಬ್ಬಿಸುವ ಸಾಹಿತ್ಯದ ರಸಬುಗ್ಗೆಗಳಾಗಿವೆ.

ಶ್ರೀ ಶರ್ಮರ ಸಾಹಿತ್ಯಸೃಷ್ಟಿಯಲ್ಲಿ ನಿರೂಪಣಾಶೈಲಿಗೆ ಕಳಸವಿಟ್ಟಂತೆ ‘ಪರ್ಣಕುಟಿ’ ಮೂಡಿ ಬಂದಿದೆ. ಸಾಹಿತ್ಯ ವೃಕ್ಷದ ಹಂದರದ ಮೇಲೆ ಹರಿಬಿಟ್ಟ ಬಳ್ಳಿಯ ಪಕ್ವಫಲವೇ ಈ ಶ್ರೇಷ್ಠ ಕೃತಿ. ಇದು ಇಂದಿನ ಕನ್ನಡ ಸಾಹಿತ್ಯಯುಗದ ಅತ್ಯುತ್ತಮ ಗದ್ಯಕೃತಿಯೆಂದು ನಿರ್ವಿವಾದವಾಗಿ ಹೇಳಬಹುದು.

ಮಾತಿಗೆ ಮಾತು ಚಿಮ್ಮಿಸುವ ಧೀಮಂತ ಶೈಲಿ ಶರ್ಮರದು. ಇವರು ಬರೆದ ವ್ಯಕ್ತಿ ಚಿತ್ರಗಳನ್ನು ಮೀರಿಸಬಲ್ಲ ಬೇರೆ ಪುಸ್ತಕಗಳು ಕಡಮೆಯೆಂದೇ ಹೇಳಬೇಕು. ಈ ಚಿತ್ರಗಳ ಜೀವ ಜೀವಾಳವಾಗಿ ಶರ್ಮರ ವ್ಯವಹಾರಿಕ ಪ್ರಜ್ಞೆ ದೃಗ್ಗೋಚರವಾಗುತ್ತದೆ. ಶೈಲಿಯಲ್ಲಿ ಸೊಗಸಾದ ಹರಟೆಯ ಮಾರ್ಗವಿದೆ. ಆದರೆ ಈ ಹರಟೆ ಜೊಳ್ಳು ಹರಟೆಯಲ್ಲ ; ಸಾಹಿತ್ಯದ ತಿರುಳು.

ಗಾಂಧೀಜಿಯನ್ನು ಅತ್ಯಂತ ಸಮೀಪದಲ್ಲಿ ನೋಡಿದ ಇವರು ಆ ಮಹಿಮಾವಂತನ ಬಗ್ಗೆ ಬರೆಯುವಾಗ ಅದೆಂತಹ ಸೊಗಸಾದ ಶೈಲಿಯನ್ನು ಬಳಸುತ್ತಾರೆ. ಸರಳತೆಗೆ ಸರಳತೆಯ ಪಾಠ ಕಲಿಸುವ ರೀತಿ ಇದು. ಈ ಶೈಲಿಯಲ್ಲಿ ಒಂದು ಮೋಡಿ ಇದೆ. ಮೂಡಿಸಬೇಕಾದ ಚಿತ್ರ ಸ್ಫುಟವಾಗಿ ಮೂಡುತ್ತದೆ. ಇಲ್ಲಿ ನೋಡಿ ಶರ್ಮರು ಬರೆದ ಸುಂದರ ಗದ್ಯದ ಮಾದರಿ. “....ಪಕ್ಕದಲ್ಲಿ ಪರ್ಣಕುಟಿ, ಸುತ್ತಲೂ ಶಿಷ್ಯವರ್ಗ –ಅಥವಾ ಜೊತೆಗಾರರು. ನಡುವೆ ಪದ್ಮಾಸನದಲ್ಲಿ ಬಾಪೂಜಿ. ಆಶ್ರಮದ ಗುಡಿಸಲಾಗಲಿ ದೂರದ ಗಿಡ ಮರಗಳಾಗಲಿ ಕಾಣವು. ಗಾಂಧೀಜಿಯ ಮೋರೆ ಪೂರಾ ಅರಳಿದ ಕಮಲದ ಹೂವಿನಂತೆ ವರ್ಣಿಸಲು ಬಾರದ ಒಂದು ಆನಂದದಿಂದ ತುಂಬಿದೆ. ಪ್ರಕಾಶಮಾನವಾದ ವಿದ್ಯುದೀಪದ ಬೆಳಕಿನ ಕಾಂತಿ ಸುತ್ತಲೂ ಹರಡಿದಂತೆ ಆ ಆನಂದದ ತೆರೆಗಳು ಸುತ್ತಲೂ ಹೊಳೆ ಹೊಳೆವ ರೂಪಿನಿಂದ ಹರಿದಿವೆ. ಅಲ್ಲಿ ನೆನಪು–

ತಿಳಿವು ಇದ್ದೂ ಇಲ್ಲದಂತೆ ಕರಗಿಹೋಗಿದೆ. ಆಟವಾಡಿ ಸೋತು ನಿದ್ದೆಗೆ ಬಂದ ಮಗುವಿನ ಮೈಮೇಲೆ ತಾಯಿ ಹೊದಿಸಿದ ತನ್ನ ಸೆರಗಿನಂತೆ ಅಖಂಡ ಶಾಂತಿಯ ಒಂದು ಭಾವ ತುಂಬ ಕವಿದಿದೆ.

ನೂರಾರು ಮೈಲು ದಾಟಿ ಈಗಲೂ ಕೇಳಿಸುತ್ತಿದ್ದ ಹಾಗೆ ಅನಿಸುತ್ತದೆ. ಅದೇ ಧ್ವನಿ. ಅದೇ ಗಾಂಭೀರ್ಯ.

‘ ರಘುಪತಿ ರಾಘವ ರಾಜಾರಾಂ
ಪತಿತ ಪಾವನ ಸೀತಾರಾಂ.’

ಓದುವ ಮುಂದೆ ಗಾಂಧೀಜಿ ಪದ್ಮಾಸನದಲ್ಲಿ ಕಣ್ಣಮುಂದೆ ಸುಳಿಯುತ್ತಾರೆ. ಕರಜೋಡಿಸಬೇಕೆನಿಸುತ್ತದೆ.

ಇದು ಕೃಷ್ಣಶರ್ಮರ ಗದ್ಯಶೈಲಿ. ಕನ್ನಡ ಇವರ ಕೈಯಲ್ಲಿ ತುಸುದಾಗಿ ಅರಳಿತು.

ಪರ್ಣಕುಟಿಯಲ್ಲಿ ಕನ್ನಡ ಗದ್ಯದ ಪಕ್ವಫಲ ರಸದುಂಬಿತು.

ಮಾತಿನ ಮಂಟಪದಲ್ಲಿ ಶರ್ಮರು ಶಾಂತಿವಿಜ್ಞಾನ, ಅರ್ಥವಿಚಾರ, ಪ್ರಜಾತಂತ್ರ ಹಾಗೂ ತತ್ವಚಿಂತನೆಗಳ ವಿಭಾಗ ಮಾಡಿ ವಿವೇಚಿಸಿದ್ದಾರೆ. ಇಂದಿನ ಹದಗೆಟ್ಟ ಪ್ರಜಾಪ್ರಭುತ್ವದ ಮುಂದೆ ಹಿಡಿದ ಕನ್ನಡಿ ಅದು. ಕೇವಲ ಟೀಕೆಯಲ್ಲ. ಪರಿಹಾರವನ್ನು ಸೂಚಿಸುವ ಧೀಮಂತಿಕೆ ಈ ಬರಹದಲ್ಲಿದೆ. ದಾರ್ಶನಿಕ ದೃಷ್ಟಿಯನ್ನು ಪಡೆದುಕೊಂಡ ಶ್ರೀಯುತರು ಇಂಥವುಗಳನ್ನು ಅಧಿಕೃತವಾಗಿ ಹೇಳಬಲ್ಲರು. ಪ್ರಜಾಪ್ರಭುತ್ವದಲ್ಲಿ ಪ್ರಜ್ಞೆ ಮೂಡಿಸುವದೇ ಜೀವನದ ಹಿರಿಮೆಯಾದ ಈ ವ್ಯಕ್ತಿಗೆ ಸಾಮಾಜಿಕ ದರ್ಶನವು ಸಾಕ್ಷಾತ್ಕಾರವಾಗಿಯೇ ನಿಂತಿದೆ. ಈ ಬರಹಗಳಲ್ಲಿ ಕಳಕಳಿ ತುಂಬಿ ನಿಂತಿದೆ. ಬದುಕಿನ ದಾರಿಗೆ ಪ್ರಯೋಜನವಾಗಬೇಕೆಂಬ ದೃಷ್ಟಿ ಈ ಬರಹಗಳಲ್ಲಿ ಪಾವನವಾಗಿ ಹರಿದಿದೆ.

ಶ್ರೀ ಶರ್ಮರ ಈ ಆಣಿಮುತ್ತುಗಳನ್ನು ನೋಡಿದರೆ ಅವರ ಹೃದಯ ವಿಸ್ತಾರದ, ಸಂಸ್ಕಾರದ ಹಿರಿಮೆ ಕಾಣುವದು. ಎದೆಯ ಹದ, ಭಾಷೆಯ ಹದ, ಶೈಲಿಯ ಹದ ಮುಮ್ಮಡಿಯಾಗಿ ಬಂದ ನುಡಿಮುತ್ತುಗಳಿವು.

“....ಮನುಷ್ಯನ ಗತಿ ಬೆಳೆಯಿತು; ಆದರೆ ಮನುಷ್ಯನ ಮನೆ ಬೆಳೆಯಲಿಲ್ಲ. ಭೌತಿಕ ಪ್ರಗತಿ ಆಯಿತು. ಸಾಮಾಜಿಕ ಸನ್ಮತಿ ಬರಲಿಲ್ಲ....

“....ವಿಜ್ಞಾನ ಅಹಿಂಸಕವಾಗಬೇಕು. ಅಹಿಂಸೆ ವೈಜ್ಞಾನಿಕವಾಗಬೇಕು.

“ಮಾನವ ಜೀವನದ ಪರಮ ಸಾಮಾಜಿಕ ಸತ್ಯ--ಶಾಂತಿ.

“ಅಹಿಂಸೆಯಿಲ್ಲದೆ ಶಾಂತಿ ಇಲ್ಲ, ಅಭೇದವಿಲ್ಲದೆ ಅಹಿಂಸೆಯಿಲ್ಲ. ವಿಶ್ವಮಾನವ ಭಾವವಿಲ್ಲದೆ ಅಭೇದವಿಲ್ಲ, ಸರ್ವವ್ಯಾಪಿ ಆತ್ಮಭಾವನೆ ಇಲ್ಲದೆ ವಿಶ್ವಮಾನವ ಭಾವವಿಲ್ಲ.

ಈ ಭಾವನೆಯೇ ಸರ್ವೋದಯ. ಸರ್ವೋದಯ ದೃಷ್ಟಿ ಇಲ್ಲದೆ ಶಾಂತಿ ಇಲ್ಲ.
(ಶಾಂತಿ ವಿಜ್ಞಾನ)

* * * * *

'ದಂಡು ಮುಂಡ; ಸರಕಾರ ರುಂಡ;

'ಅಹಿಂಸೆಯನ್ನು ಪ್ರತಿಷ್ಠಿಸದೆ ವೈರತ್ಯಾಗ ಸಾಧ್ಯವಿಲ್ಲ.
(ಪರಸ್ಪರ ವೈರದ ಸಂಘಟನೆ)

'ವಿಜ್ಞಾನವನ್ನು ಪಳಗಿಸಬೇಕು. ಪಳಗಿಸದಿದ್ದರೆ ಅದು ಕಾಡುಕೋಣ.
ಪಳಗಿಸಿದರೆ ಸಾಧು ಪ್ರಾಣಿ.

'ಬೆಂಕಿ ಸುಡುತ್ತದೆ ಎಂಬುದು ವಿಜ್ಞಾನ.
ನಮ್ಮ ಮಾತು ಕೇಳದವರಿಗೆ ಬರೆಹಾಕು ಎಂಬುದು ವಿಜ್ಞಾನವಲ್ಲ.
(ವಿಚಾರ ಕ್ರಾಂತಿಯ ಜೊತೆ ವಿಜ್ಞಾನವಿದ್ದು.)

'—'ಪ್ರೇಮ' ಕೂಡಿಸುತ್ತದೆ; 'ಲೋಭ' ಒಡೆಯುತ್ತದೆ.

ಇಂಥ ಅನೇಕ ನುಡಿಮುತ್ತುಗಳನ್ನು 'ಮಾತಿನ ಮಂಟಪ'ದಲ್ಲಿ ಮೆಲಕು ಹಾಕಬಹುದು.

ಶ್ರೀ ಕೃಷ್ಣಶರ್ಮರ ಹೃದಯ ಸುಸಂಸ್ಕೃತ ಹೃದಯ. ಜೀವನದ ವಿವಿಧ ಸಂಸ್ಕಾರಗಳಿಂದ ಪುಟಹಾಕಿದ ಚಿನ್ನವಾಗಿದೆ ಈ ಹೃದಯ. ಇಲ್ಲಿ ಅಲ್ಪತೆಗೆ ಅವಕಾಶ ವಿಲ್ಲ. ನಾವು ದೊಡ್ಡವರಾಗಬೇಕೆಂಬ ಮನೋಧರ್ಮದ ಭೂಮಿಕೆಯಲ್ಲಿ ಸತ್ವ ಪೂರ್ಣವಾದ ಸಾಹಿತ್ಯ ಸೃಷ್ಟಿಯಾಗಿದೆ. ದೇಶಭಕ್ತಿ ಇಲ್ಲಿ ಪ್ರೇರಣೆ, ಸಾಮಾಜಿಕ ಸದ್ಭಾವನೆ ಇಲ್ಲಿ ಸುಸಂಸ್ಕೃತಿ.

ಈ ಬರಹ ರಂಜನೆಗಾಗಿ ಅಲ್ಲ; ಮನೋರಂಜನೆಯ ದೃಷ್ಟಿಯೇ ಇಲ್ಲ. ಮಾನವ ವಿಶ್ವಮಾನವನಾಗಿ ಭಾರತದ ಶ್ರೇಷ್ಠ ಪುತ್ರನಾಗಬೇಕೆಂಬ ಹೆಬ್ಬಯಕೆ ಇಲ್ಲಿ ಹೃದಯದಿಂದ ಹೊರಬಿದ್ದು ಹೃದಯಕ್ಕೆ ತಲಪುತ್ತದೆ.

ಸಾಹಿತ್ಯ ದೃಷ್ಟಿಯ ಸಾರ್ಥಕತೆ ಈ ಜೀವನ ದೃಷ್ಟಿಯಲ್ಲಿಯೇ ಪಾವನವಾಗುತ್ತದೆ ಎಂಬುದಕ್ಕೆ ಈ ವ್ಯಕ್ತಿ ನಿದರ್ಶನ.

ಡಿ. ವಿ. ಜಿ. ಹೇಳಿದಂತೆ,

ಕಷ್ಟ ಜೀವದ ಪಾಕ; ಕಷ್ಟ ಧರ್ಮವಿವೇಕ ।
ಎಷ್ಟೆಷ್ಟು ನೀತಿಯುಕ್ತಿಗಳ ಬಗೆದಡೆಯುಂ ॥
ಇಷ್ಟನಿಷ್ಟ ನಿಸ್ಕೊಳ್ ಒಳತಿಳಿವಿಲ್ಲದಿರೆ ನಷ್ಟ ।
ದೃಷ್ಟಿ ಸೂಕ್ಷ್ಮತೆಗತಿಯೋ – ಮಂಕುತಿಮ್ಮ ॥
(ಮಂಕುತಿಮ್ಮನ ಕಗ್ಗ ೯೩೩)

ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರು 'ಒಳತಿಳಿವು' ಅರಿತವರು.
ಕನ್ನಡ ಲೋಕಕ್ಕೆ ಎಂದೆಂದಿಗೂ ಪರಿಚಿತರು.

# 'ಕನ್ನಡ ಕಣ'ದ ಕೃಷ್ಣಶರ್ಮರು

ಸಿ. ಕೆ. ನಾಗರಾಜರಾವ್

ನನಗೂ ಸಿದ್ದವನಹಳ್ಳಿ ಕೃಷ್ಣಶರ್ಮರಿಗೂ ಕೆಲವು ದಶಕಗಳ ಪರಿಚಯ ಇದೆ.

ಬರವಣಿಗೆಗಳ ಮೂಲಕ ಆರಂಭವಾದ ಪರಿಚಯ ಅವರು ಬೆಂಗಳೂರಿಗೆ ಬಂದು 'ವಿಶ್ವಕರ್ನಾಟಕ' ದಿನಪತ್ರಿಕೆಗೆ ಸೇರಿದಮೇಲೆ ನಿಕಟವಾಯಿತು. ಆಗಾಗಲೇ ವಿಶ್ವ ಕರ್ನಾಟಕ ಬಿಚ್ಚುಮನಸ್ಸಿನ ಪತ್ರಿಕೆ ಎಂಬ ಖ್ಯಾತಿಯನ್ನು ಪಡೆದಿತ್ತು. ಬರವಣಿಗೆ ಯಲ್ಲಿ ರೊಚ್ಚು ಎದ್ದು ಕಾಣುತ್ತಿತ್ತು. 'ವೀರಕೇಸರಿ'ಗಿಂತ ಒಂದು ಡಿಗ್ರಿ ಕಡಿಮೆ ಅಷ್ಟೆ. ಸಿದ್ದವನಹಳ್ಳಿಯವರು ಬಂದಮೇಲೆ ರೊಚ್ಚಿನ ಸ್ಥಾನವನ್ನು ಮಾತಿನ ಮೊನಚು ಆಕ್ರಮಿಸಿಕೊಂಡಿತು. ಅದು ಜನಪ್ರಿಯವಾಯಿತು. ಕನ್ನಡ ಪತ್ರಿಕೆಗಳ ಬಗೆಗೆ ಹೇಳುವಾಗ ಕೃಷ್ಣಶರ್ಮರ ಈ ಸಾಧನೆಯನ್ನು ಹೇಳದಿದ್ದರೆ ತಪ್ಪಾಗುತ್ತದೆ.

ಕೃಷ್ಣಶರ್ಮರು ಕುಳ್ಳು. ಬಣ್ಣಮಾತ್ರ ಕೃಷ್ಣವಲ್ಲ. ಅವರ ಆಳುತನದಂತೆಯೇ ಅವರ ವಾಕ್ಯಗಳು ಮೊಟುಕಾದವು. ಆದರೂ ಪ್ರಭಾವಯುತವಾದವು. ವಾಸ್ತವ ವಾಗಿ ಕನ್ನಡದಲ್ಲಿ ಅವರ ಶೈಲಿ ಅವರದಾಗಿಯೇ ಉಳಿದಿದೆ. ಆ ಶೈಲಿಯನ್ನು ಬೇರಾರೂ ರೂಢಿಸಿಕೊಂಡಿಲ್ಲ ಎನ್ನಬಹುದು. ಎಂತಲೇ ಅವರು 'ಸಿದ್ಧಹಸ್ತ'ರು.

ಚಿತ್ರದುರ್ಗ ಜಿಲ್ಲೆ ನನ್ನ ತಾಯಿಯ ತವರುಮನೆ. ಬೊಂಬಾಯಿ ಕರ್ನಾಟಕ ದಲ್ಲಿ (ಬೈಲಹೊಂಗಲ, ಹುಬ್ಬಳ್ಳಿ, ಸಂಕೇಶ್ವರ, ಕೊಲ್ಹಾಪುರ) ನನ್ನ ತಂದೆಯವರು ಉದ್ಯೋಗದಲ್ಲಿದ್ದುದರಿಂದ ನಾನು ನನ್ನ ತಾತನವರ (ತಾಯಿಯ ತಂದೆ) ಮನೆಯಲ್ಲಿ ನನ್ನ ಬಾಲ್ಯಕಳೆದೆ. ನಮ್ಮ ತಂದೆ ಉದ್ಯೋಗದಲ್ಲಿದ್ದೆಡೆಗಳಲ್ಲಿ ನಾನೂ ಇದ್ದಿದ್ದರೆ ನನಗೆ ಕನ್ನಡ ಕಲಿಕೆ ಸಮರ್ಪಕವಾಗಿ ಆಗುತ್ತಿರಲಿಲ್ಲವೆಂಬ ಕಾರಣದಿಂದ ಈ ವ್ಯವಸ್ಥೆ ಆಯಿತು. ಅದರ ಫಲವಾಗಿ ಲೋವರ್ ಸೆಕೆಂಡರಿ (ಆಗ ಐದು ರೂಪಾಯಿ ಪರೀಕ್ಷೆ ಎಂದು ಕರೆಯುತ್ತಿದ್ದರು) ವರೆಗೆ ಚಿತ್ರದುರ್ಗದ ಗಾಳಿ ಕುಡಿದೆ. ಅಲ್ಲಿಯ ಕಲ್ಲು ಬಂಡೆ ಗಳು, ಬೆಟ್ಟ ಗುಡ್ಡ ಬತೇರಿಗಳ ಮೇಲೆ ಕುಣಿದು ಕುಪ್ಪಳಿಸಿದೆ. ಸಿದ್ದವನಹಳ್ಳಿ ಕೃಷ್ಣ ಶರ್ಮರೂ ಅದೇ ಜಿಲ್ಲೆಯವರು. ನಿಂತ ನೆಲ ಸಮಾನಧರ್ಮಕ್ಕೆ ಎಡೆ ಮಾಡಿ ಕೊಡುತ್ತದೆಯೇನೋ ! ವಿಚಾರಧಾರೆಯಲ್ಲಿ ಮನೋಭಾವದಲ್ಲಿ ಒಂದುತನ ಕಂಡು ಬಂದಾಗ ಸಹಜಸ್ನೇಹ ಅಂಕುರಿಸುತ್ತದೆ. ಸ್ವಾತಂತ್ರ್ಯ ಹೋರಾಟ, ಕರ್ನಾಟಕ ಏಕೀಕರಣಚಳುವಳಿ ಇವುಗಳಲ್ಲಿ ಸಮಾನ ಶ್ರದ್ಧಾಸಕ್ತಿಗಳಿದ್ದ ನಮಗೆ ಪರಸ್ಪರ ಗೌರವ ಭಾವ ತಾಳುವುದು ಸಹಜವೆನಿಸಿತು.

ಸಾಹಿತ್ಯ ಪರಿಷತ್ತಿನಲ್ಲಿ ಪದಾಧಿಕಾರಿಗಳಾಗಿ ನಾವು ಜೊತೆಗೆ ಕೆಲಸ ಮಾಡಿದ್ದೇವೆ. ಕಾಂಗ್ರೆಸ್ ವಾರ್ಡಕಮಿಟಿಗಳಲ್ಲಿ, ಸಿಟಿಕಾಂಗ್ರೆಸ್ ಕಾರ್ಯಕರ್ತರ ಸಭೆಯಲ್ಲಿ ಜೊತೆಗೆ ಕೆಲಸ ಮಾಡಿದ್ದೇವೆ. ವೈಯಕ್ತಿಕವಾದ ಅನೇಕ ವಿಚಾರಗಳನ್ನು ಬರೆಯಲು ಅವಕಾಶವುಂಟು. ಆದರೆ ನನಗೆ ಅದಕ್ಕಿಂತ ಮುಖ್ಯ ಅವರ ವಿಚಾರಧಾರೆ. ಅವರ ಬರವಣಿಗೆಯ ರೀತಿ. ಅದರಿಂದ ಆ ಬಗೆಗೆ ಬರೆಯಲು ಆಸಕ್ತಿ.

‘ಕನ್ನಡ ಕಣ’ ಎಂಬ ಶಿರೋನಾಮೆಯಲ್ಲಿ ಅವರು ಬರೆದ ಕೆಲವು ಲೇಖನಗಳ ಸ್ಮರಣೆಯನ್ನು ನಾನು ಈ ಪುಟ್ಟ ಲೇಖನದಲ್ಲಿ ಮಾಡುತ್ತಿದ್ದೇನೆ.

‘ವಾಣಿ’ ಎಂಬ ಉತ್ತಮ ಕನ್ನಡ ಮಾಸ ಪತ್ರಿಕೆಯನ್ನು ನಾನು 1946-47 ರಲ್ಲಿ ಸಂಪಾದಕನಾಗಿ ಪ್ರಕಾಶಕನಾಗಿ ನಡೆಸಿದೆ. ಆಗಿನ ಕಾಲಕ್ಕೆ ಅದು ವೈವಿಧ್ಯ ಪೂರ್ಣ ಮಾಸಪತ್ರಿಕೆ ಆಗಿತ್ತು. ಕಾಗದ ನಿಯಂತ್ರಣದ ಕಾರಣದಿಂದ ನಮಗೆ ದೊರೆಯುತ್ತಿದ್ದುದು ಬಫ್ ಪ್ರಿಂಟಿಂಗ್ ಪೇಪರ್. ಆದುದರಿಂದ ಬಿಳಿಹಾಳೆ ಕಪ್ಪು ಮಸಿಯ ಸುಂದರ ಪುಟಗಳು ಕಾಣುವಂತಿರಲಿಲ್ಲ. ಆದರೂ ಆದಷ್ಟು ಸುಂದರವಾಗಿ ಪತ್ರಿಕೆಯನ್ನೂ ರಕ್ಷಾಕವಚವನ್ನು ಆರ್ಟ್ ಪೇಪರ್ (ಅದೂ ಇಮಿಟೇಷನ್) ಮೇಲೆ ಮೂರು ಬಣ್ಣಗಳಲ್ಲಿಯೂ ಒಳಗೆ ಸಾಧ್ಯವಿದ್ದೆಡೆಯಲ್ಲೆಲ್ಲ ಎರಡು ಬಣ್ಣಗಳಲ್ಲಿಯೂ ಚಿತ್ರಯುಕ್ತವಾಗಿ ಪ್ರಕಟಿಸಲಾಗುತ್ತಿತ್ತು. ಆಗಿನ ಕಾಲಕ್ಕೆ ಅದು ಸಾಹಸದ ಮಾತೇ ಆಗಿತ್ತು.

ಆ ಸಂದರ್ಭದಲ್ಲಿ ಕೃಷ್ಣಶರ್ಮರು ‘ವಾಣಿ’ಗಾಗಿ ‘ಕನ್ನಡ ಕಣ’ ಎಂಬ ಶಿರೋನಾಮೆಯಲ್ಲಿ ಪ್ರಚಲಿತ ವಿಚಾರ ಮಂಥನವನ್ನು ಮಾಸಮಾಸವೂ ಮಾಡುವುದಾಗಿ ಹೇಳಿದರು. ಸಂಭಾವನೆ ಸ್ವೀಕರಿಸದೆ ಲೇಖನಗಳನ್ನು ಅವರು ನಮಗೆ ಕಾಲಕ್ಕೆ ಸರಿಯಾಗಿ ನೆನಪು ಮಾಡಿಸಿಕೊಳ್ಳದೆ ಮುಟ್ಟಿಸುತ್ತಿದ್ದರು.

ಫೆಬ್ರವರಿ 1946 ರಲ್ಲಿ ಅವರ ಮೊದಲ ಲೇಖನ ಅಚ್ಚಾಯಿತು. ಅದರಲ್ಲಿ ಕನ್ನಡ ಮಾಧ್ಯಮದ ಬಗೆಗೆ ಮತ್ತು ಧ್ವಜದ ಬಗೆಗೆ ಬರೆದರು. ನಂಜನಗೂಡಿನಲ್ಲಿ, ತುಮಕೂರಿನಲ್ಲಿ ವಿದ್ಯಾರ್ಥಿಗಳು ಚಳುವಳಿ ನಡೆಸಿದ್ದನ್ನು ಪ್ರಸ್ತಾಪಿಸುತ್ತಾ, “ಮೂವತ್ತು ವರ್ಷದಿಂದ ಕನ್ನಡನಾಡಿನ ಹಿರಿಯರು ಮಾಡಿದ ಪರಿಶ್ರಮದ ಫಲವಾಗಿ ಇಂದು ಕಣ್ಣು ಬಿಡುತ್ತಿದೆ. ಕನ್ನಡ ಜನಕ್ಕೆ ಒಂದು ದಿಕ್ಕು ದೆಸೆ ಸಿಕ್ಕಂತಾಗಿದೆ. ಇನ್ನೇನು ಬಂತು ಎನ್ನುವ ಹಾಗೆ ಇರುವ ಭಾರತ ಸ್ವಾತಂತ್ರ್ಯದ ಛಾಯೆಯಲ್ಲಿ ಕರ್ನಾಟಕ ಏಕೀಕರಣ ಸಾಧ್ಯವಾಗದಿದ್ದರೂ ಕನ್ನಡ ಪ್ರಾಂತ್ಯ ರೂಪಗೊಳ್ಳಬಹುದೆಂಬ ಆಸೆ ಹುಟ್ಟುತ್ತಿದೆ” ಎಂದು ನುಡಿದು ಏಕೀಕರಣದ ಬಗೆಗೆ ಅಂಕಿ ಅಂಶಗಳನ್ನು ಕೊಟ್ಟು, ‘ಅಲ್ಲೊಂದು ಗೆರೆ, ಇಲ್ಲೊಂದು ಗೆರೆ ಹಾಕಿ ಎಲ್ಲೆ ಸೂಚಿಸಿದರೆ ಅದು ಏಕೀಕರಣವಾಗುವುದಿಲ್ಲ. ಶುದ್ಧಾಂಗವಾಗಿ ಅಪೂರ್ಣವಾಗುತ್ತದೆ. ಅದರಿಂದ ಪ್ರಯೋಜನವಾಗುವುದಿಲ್ಲ. ನಮಗೆ ಬೇಕಾದುದು ಪೂರ್ಣ ಏಕೀಕರಣ ಅಂದರೆ ಎಲ್ಲ ಕನ್ನಡ ಜನ ಒಂದು ಆಡಳಿತಕ್ಕೆ ಒಳಪಡುವುದು’ ಎಂದೆಲ್ಲ ಹೇಳಿ ಅದರ ಸಾಧನೆಗೆ ಇರುವ ಎಡರು

ತೊಡರುಗಳು ಯಾವುವು ಎಂಬುದನ್ನು ವಿಮರ್ಶಿಸಿ "ಆದ್ದರಿಂದ ಕರ್ನಾಟಕದ ರಾಜರೆಲ್ಲ ರಾಜ್ಯತ್ಯಾಗ ಮಾಡಿಬಿಡುವುದೊಂದೇ ಕರ್ನಾಟಕ ಪ್ರಾಂತಕ್ಕೆ ದಾರಿ. ಈ ರೀತಿಯಾದ ರಾಜಕೀಯವನ್ನು ಮಾತನಾಡಿದಾಗ ಏಕೀಕರಣದ ಮಾತನ್ನು ಆಡಿದಂತೆ. ಅಲ್ಲಿಯ ವರೆಗೆ ಏಕೀಕರಣದ ಮಾತು ಬರೀ ಭಾಷಾಭಿಮಾನ, ಬರೀ ಗುಡುಗು ; ಮಿಂಚು. ಕರ್ನಾಟಕವನ್ನು ಹರಿದು ಹಂಚಿಕೊಂಡವರು ಈ ರಾಜರು ; ಇನ್ನಾರು ಅಲ್ಲ. ಈಗ ಕರ್ನಾಟಕ ಒಂದಾಗಬೇಕಾದರೆ ಈ ರಾಜರೆಲ್ಲ ಮಾಯವಾಗಬೇಕು" ಎಂದು ಸ್ಪಷ್ಟ ವಾಗಿ ಮೀನಮೇಷ ಎಣಿಸದೆ ಗೆರೆ ಕೊಯ್ದ ಹಾಗೆ ಉದ್ಘೋಷಿಸಿದರು. ಆ ಮಾತನ್ನು ಅಷ್ಟು ಧೈರ್ಯವಾಗಿ ಹೇಳುವ ಕೆಚ್ಚು ಮತ್ತು ಅಷ್ಟೇ ಧೈರ್ಯವಾಗಿ ಅಚ್ಚುಮಾಡುವ ಜನ ಆಗ ವಿರಳವಾಗಿದ್ದರು ಎಂದಾಗ ಅದರ ಮಹತ್ವ ಅರ್ಥವಾಗುತ್ತದೆ.

ಹಾಗೆಯೇ ಬಾವುಟಗಳ ಬಗೆಗೆ ಚರ್ಚಿಸಿದರು. ಕನ್ನಡದ ಬಾವುಟ, ಮೈಸೂರು ರಾಜಮನೆತನದ ಗಂಡಭೇರುಂಡ ಬಾವುಟ, ಕಾಂಗ್ರೆಸ್ಸಿನ ತ್ರಿವರ್ಣ ಧ್ವಜ ಇವುಗಳ ಬಗೆಗೆ ವಾದ ವಿವಾದ ಹುಟ್ಟಿತು. ಯಾವ ಬಾವುಟವನ್ನು ಹಾರಿಸುವುದು ಸರಿ ಎಂಬ ಬಗೆಗೆ ಸಾರ್ವಜನಿಕವಾಗಿ ಜಿಜ್ಞಾಸೆ ಜರುಗಿತು. ಅವನ್ನೆಲ್ಲ ವಿಮರ್ಶಿಸಿ " ಬಾವುಟಗಳು ವಿವಾದಕ್ಕೆಡೆಗೊಡುವುದು ದುರ್ದೈವ " ಎಂದು ಕಳಕಳಿಯಿಂದ ಹೇಳಿ ದರು. ಇನ್ನಾದರೂ ನಮಗೆ ಬಾವುಟದ ಸಾಂಕೇತಿಕ ಮಹತ್ವ ಗೊತ್ತಿಲ್ಲ. ಅದನ್ನು ತುಳಿಯುತ್ತೇವೆ, ಹರಿಯುತ್ತೇವೆ, ಏನೇನೋ ಮಾಡುತ್ತೇವೆ. ಎಂದಾಗ ಆ ದುರ್ದೈವ ಈಗಲೂ ನಮ್ಮನ್ನು ಆವರಿಸಿಕೊಂಡಿದೆಯಲ್ಲವೆ?

ಭಾಷಾ ವ್ಯಾಮೋಹದ ಬಗೆಗೆ ಬರೆಯುತ್ತಾ " ಯಾರೇ ಮಾತನಾಡಲಿ ಹಿಂದೂ ಸ್ಥಾನಿಯಲ್ಲಿ ಮಾತನಾಡಿ, ಇಲ್ಲವೆ ನಿಮ್ಮ ತಾಯಿನುಡಿಯಲ್ಲಿ ಮಾತನಾಡಿ. ಇಂಗ್ಲಿಷ್ ಬೇಡ" ಎಂಬ ಗಾಂಧಿಯವರ ವಾದವನ್ನು ಕೃಷ್ಣಶರ್ಮರು ಅನುಷ್ಠಾನಕ್ಕೆ ತರಬೇಕೆಂದು ಹೇಳಿದರು. ಇಂಗ್ಲಿಷಿನ ಮೇಲಿನ ನೂರೈವತ್ತು ವರ್ಷಗಳ ವ್ಯಾಮೋಹ ಸುಲಭವಾಗಿ ತೊಲಗುವ ಶನಿಯಲ್ಲ. ಅದು ತೊಲಗದೆ ಕನ್ನಡಕ್ಕೆ ಮೋಕ್ಷವಿಲ್ಲ ಎಂಬ ವಿಚಾರ ಪ್ರತಿಪಾದನೆ ಮಾಡುತ್ತ " ಕನ್ನಡಕ್ಕೆ ಇಂಗ್ಲಿಷು ಹಗೆಯಲ್ಲ (ಹಾಗೆಂದು ಕೆಲವರು ವಾದ ಮಾಡಿದ್ದರು) ಎಂಬ ಭಾವನೆಯೇ ನಮ್ಮನ್ನು ಹಾಳುಮಾಡುತ್ತಿರುವುದು. ಇಂಗ್ಲಿಷು ರಾಜಭಾಷೆಯಾಗಿರುವುದು ಹೋಗದೆ ಕನ್ನಡಕ್ಕೆ ಮೋಕ್ಷವಿಲ್ಲ. ಕನ್ನಡಂ ಗೆಲ್ಗೆ ಎಂದು ಕೊರಲೆತ್ತಿ ಕೂಗಿ ಇಂಗ್ಲೀಷ್ ಗೀತೆ ಹಾಡಿದರೆ ಅದು 'ಕನ್ನಡಂ ಗೆಲ್ಗೆ' ಅಲ್ಲ 'ಕನ್ನಡಂ ಗಲ್ಗೆ' ಎಂದು ತುಂಬಾ ಮಾರ್ಮಿಕವಾಗಿ ವಿಶ್ಲೇಷಿಸಿದ್ದಾರೆ. ಅವರು ತಮ್ಮ ಸಹಿಯನ್ನು ಕನ್ನಡ ಬಿಟ್ಟು ಅನ್ಯಲಿಪಿಯಲ್ಲಿ ಮಾಡುವುದಿಲ್ಲ ಎಂಬುದು ಇಲ್ಲಿ ಸ್ಮರಣಾರ್ಹ. ಇನ್ನಾದರೂ ಈ ವ್ಯಾಮೋಹ ಹೋಗಿಲ್ಲ. ಕನ್ನಡಕ್ಕೆ ನುಗ್ಗಿಬರು ತ್ತಿರುವ ನವ್ಯ, ಅಸಂಗತ, ದಿಗಂಬರ ಸಾಹಿತ್ಯ ಪ್ರಕಾರಗಳು ಆ ಅತಿವ್ಯಾಮೋಹದ ಪ್ರತೀಕ. ಈ ಸಂದರ್ಭದಲ್ಲಿ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಪ್ರಕಟವಾದ 'ಚಿನ್ನದ ಬೆಳಸಿ'ನಲ್ಲಿನ ಕೆಲವು ವಿಷಯ ಇಲ್ಲಿ ಸೂಚಿಸು

ವುದು ಅಪ್ರಕೃತವಾಗಲಾರದು. ಏಕೆಂದರೆ ಅವು ಈ ವ್ಯಾಮೋಹದಿಂದ ಕುಡಿ ಚಿಗುರಿದ ರೀತಿ.

"ಈಗ ತಾನೆ ಪ್ರಗತಿಯ ಹೆಜ್ಜೆಯಲ್ಲಿ ಕಾಲಿಟ್ಟಿರುವ....ಸಾಹಿತಿ ಹಲವು ಬಾರಿ 'ಕೃತಿಚೌರ್ಯ'ದ ಅಪವಾದಕ್ಕೆ ಗುರಿಯಾಗಿದ್ದಾರೆ. ಆಂಗ್ಲ ಕಾದಂಬರಿಗಳ ಪಾತ್ರಗಳನ್ನು ಅಪಹರಿಸಿ ಅವುಗಳಿಗೆ ನಮ್ಮ ಉಡುಪು ತೊಡಿಸುವ ಕೆಲಸ - ಖಂಡನೀಯ. ಇತ್ತೀಚೆಗೆ ಈ 'ಕೃತಿಚೌರ್ಯ' ಹೆಚ್ಚುತ್ತಿದೆ. ಈ 'ಅಪಹೃತ' ಕೃತಿಗಳ ಪಟ್ಟಿಯನ್ನೇ ತಯಾರಿಸುವಷ್ಟು ಬೆಳೆದಿದೆ. ಇದು ಕನ್ನಡ ಸಾಹಿತ್ಯಕ್ಕೆ ಮಸಿ ಬಳಿಯುತ್ತಿದೆ."

ವಿಚಾರವಂತರ, ಅನುಭವಿಗಳ ಮುನ್ನೆಚ್ಚರಿಕೆಯ ಮಾತಿಗೆ ಬೆಲೆ ಕೊಡದೆ ಹೋದಾಗಲೆಲ್ಲ ಹೀಗೆತಾನೆ ಆಗುವುದು.

ಅನುಚಿತ ವ್ಯಾಮೋಹದ ಫಲದಿಂದ ಸಾಹಿತ್ಯದಲ್ಲಿ ಏನೇನೋ ಪ್ರಕಾರಗಳು ದಾಳಿ ಮಾಡಿವೆ. ಕೃಷ್ಣಶರ್ಮರು ಸಾಹಿತ್ಯದ ಬಗೆಗೂ ಆಗ ಬರೆದರು. ಅದರ ನಿರೂಪಣೆ ಸಹ ಅವರದೇ ರೀತಿಯಲ್ಲಿ ಆಗಿದೆ.

"ವ್ಯಾಪಾರ, ವ್ಯವಹಾರ ಪ್ರಧಾನವಾದ ವಿಲಾಯಿತಿ ಜನಕ್ಕೆ ಶಾಸ್ತ್ರ, ಸಂಗತಿ ಮುಖ್ಯ. ಅದಕ್ಕೆ ಅವರಲ್ಲಿ ಈಗ 'ಸದ್ಯಃ ಪರನಿರ್ವೃತಿ' ಕೊಡುವ ಕಾವ್ಯಕ್ಕಿಂತ 'ಸದ್ಯಃಫಲ' ಕೊಡುವ ಶಾಸ್ತ್ರ ಇತಿಹಾಸ ಮುಖ್ಯವಾಗಿವೆ. ಕಾವ್ಯಕ್ಕೆ ಅವರ ಜೀವನದಲ್ಲಿ ಸ್ಥಾನವೇ ಹೋಗಿ ಶಾಸ್ತ್ರಕ್ಕೆ ಪ್ರಾಧಾನ್ಯ ಬರುತ್ತಿದೆ. ವ್ಯವಹಾರಪ್ರಧಾನರಾದ ಪ್ರವೃತ್ತಿಪರರಾದವರ ರೀತಿಯೇ ಹಾಗೆ. ಆದ್ದರಿಂದ ಅವರಲ್ಲಿ ಶಾಸ್ತ್ರವೇ ಸಾಹಿತ್ಯವಾಗಿದೆ.

"ಸಂಸ್ಕೃತದಲ್ಲಿ ವಾಙ್ಮಯ, ಸಾಹಿತ್ಯ ಎರಡು ಶಬ್ದಗಳಿವೆ. ಇವೆರಡನ್ನೂ ನಾವು ಸಮಾನಾರ್ಥ ಪದಗಳಂತೆ ಈಗ ಬಳಸುತ್ತಿದ್ದೇವೆ. ಇದು ಸರಿಯಲ್ಲವೆಂದು ನನಗನ್ನಿಸುತ್ತದೆ. ಸಾಹಿತ್ಯ ಆನಂದಪರ್ಯವಸಾಯಿ. ವಾಙ್ಮಯ ಕೇವಲ ಜ್ಞಾನಪರ್ಯವಸಾಯಿ.

"ಸಾಹಿತ್ಯದ ಆನಂದಕ್ಕೆ ರಸಾನುಭೂತಿಯೇ ಆಧಾರ. ರಸಸಿದ್ಧಾಂತವನ್ನು ಒಪ್ಪದೆ ಸಾಹಿತ್ಯಗುಣವೇ ಇಲ್ಲ. ಆದ್ದರಿಂದ ಸಾಹಿತ್ಯಕ್ಕೆ ಸಹೃದಯತೆ, ರಸಿಕತೆ ಅತ್ಯಗತ್ಯ. ವಾಙ್ಮಯಕ್ಕೆ ಸಹೃದಯತೆ ಅಗತ್ಯವಿಲ್ಲ. ವಿಷಯಗ್ರಹಣಬುದ್ಧಿ ಸಾಕು. ಪದ್ಯದಲ್ಲಿ ಬರೆದರೂ ಶಕುನಶಾಸ್ತ್ರ ಕಾವ್ಯವಾಗಲಾರದು. ಗದ್ಯದಲ್ಲಿ ಬರೆದರೂ ಹರಟೆ ರಮಣೀಯವಾಗಿದ್ದರೆ ಅದು ಕಾವ್ಯ. ಕಾವ್ಯಕ್ಕೆ ಛಂದ ಬಂಧ ಅಗತ್ಯವಿದ್ದರೂ ಅದು ಕಾವ್ಯದ ಪ್ರಾಣವಲ್ಲ. ರಸ ರಮಣೀಯ ಕಥೆಗಳು ಅದರ ಪ್ರಾಣ."

ಇದು ಸಾಹಿತ್ಯದ ಬಗೆಗೆ ಅವರ ವಿಚಾರಲಹರಿಯ ರೀತಿ.

ಆಗ, ಅಂದರೆ ಸ್ವಾತಂತ್ರ್ಯ ಪೂರ್ವದಲ್ಲಿ, ಅದು ದೊರೆತೇ ದೊರೆಯುತ್ತದೆ ಎಂದು ಆಶೆ ಮೂಡಿದಾಗ, ಕರ್ನಾಟಕ ಪ್ರಾಂತವಾದರೂ ಕೊಡಗು ಬೇರೆಯಾಗಿಯೇ ಉಳಿಯಬೇಕೆಂದು ಕೊಡಗರು ವಾದ ಮಂಡಿಸಿದರು. ಯಾವ ಬಗೆಯ ಕೊಣೆ

ಗಾರಿಕೆಯೂ ಇಲ್ಲದೆ, ಎಲ್ಲಾ ಲಾಭಗಳನ್ನೂ ಆ ಪ್ರಾಂತ (ಕೊಡಗು) ಆಗ ಭಾರತ ಸರ್ಕಾರದಿಂದ ಪಡೆಯುತ್ತಿತ್ತು. ಆ ಆರ್ಥಿಕ ಸೌಕರ್ಯ ಕಡಿಮೆಯಾಗುತ್ತದೆಯೆಂಬ ಕಾರಣದಿಂದ ಅವರ ವಾದ ಆ ರೀತಿಯಲ್ಲಿ ಇತ್ತು. ಆದರೆ ಕೊಡಗಿನಲ್ಲಿ ವಾಸವಾಗಿದ್ದ ಕನ್ನಡಿಗರು ಸಂಖ್ಯಾಬಲದಲ್ಲಿ ಕೊಡಗರಿಗೆ ದುಪ್ಪಟ್ಟು ಇದ್ದರು. ಅವರು ಕೊಡಗು ಕರ್ನಾಟಕದಲ್ಲಿ ವಿಲೀನವಾಗಬೇಕೆಂಬ ವಾದ ಮಂಡಿಸಿದರೂ ಅವರಿಗೆ ರಾಜಕೀಯ ಪುಷ್ಟಿ ಸಿಗಲಿಲ್ಲ. ಆಗ ಕೃಷ್ಣಶರ್ಮರು ಆ ವಿಷಯವನ್ನು ಸಮಗ್ರವಾಗಿ ಚರ್ಚಿಸಿದರು ಮತ್ತು "ನಮ್ಮ ರಾಜಕೀಯ ಈಗಿದ್ದ ಹಾಗೆ ಮುಂದೆ ಸರ್ವಸಾಮಾನ್ಯವಾಗಿ ಕೊಟ್ಟವನು ಕೊಟ್ಟ, ತಿಂದವನು ತಿಂದ ಎಂಬಂತೆ ಆಗುವುದಿಲ್ಲ. ಕೊಡಗಾಗಲಿ, ಸೊಂಡೂರಾಗಲಿ, ಕರ್ನಾಟಕದ ಯಾವ ಚಿಕ್ಕ ಭಾಗವೇ ಆಗಲಿ, ತಾನು ಪ್ರತ್ಯೇಕವಾಗಿರಬಲ್ಲೆನೆಂಬ ಅಂಥ ವಿಶ್ವಾಸ ಬಿಡಬೇಕು" ಎಂದು ಘೋಷಿಸಿದರು. ಅದೇ ಸಂದರ್ಭದಲ್ಲಿ ಅಂದರೆ ಜೂನ್ ೧೯೪೬ ರಲ್ಲಿ 'ವಾಣಿ'ಯ ಸಂಪಾದಕೀಯದಲ್ಲಿ ನಾನು ಈ ರೀತಿ ಬರೆದೆ:

"ಕನ್ನಡನಾಡು, ಕನ್ನಡ ಜನಾಂಗ, ಅಖಂಡ ಕರ್ನಾಟಕವಾಗಿ ಒಂದೇ ಆಡಳಿತಕ್ಕೆ ಸೇರಬೇಕು. ಕನ್ನಡ ನಾಡನ್ನು ಬ್ರಿಟಿಷ್ ಕರ್ನಾಟಕ, ಕರ್ನಾಟಕ ಎಂದು ಬೇರೆ ಮಾಡದೆ ಇಂದೇ ರಾಜ್ಯಸೂತ್ರದಲ್ಲಿ ತರಬೇಕು. ಕಾಲವಿಳಂಬ ಮಾಡದೆ ಆದಷ್ಟು ಬೇಗ ಈ ವಿಚಾರದಲ್ಲಿ ನಮ್ಮ ಸಂಸ್ಥಾನದ ಕಾಂಗ್ರೆಸ್ ಸಮಿತಿ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿ ಮತ್ತು ಕರ್ನಾಟಕ ಏಕೀಕರಣ ಸಂಘ ಕೂಡಿ ಪ್ರಯತ್ನ ಪಡುವುದರಲ್ಲಿ ಮಹತ್ವವಿದೆಯೆಂದೂ ಈ ಸಂಸ್ಥೆಗಳು ಕೂಡಿ ಯೋಚಿಸಬೇಕೆಂದೂ ಒತ್ತಿ ಹೇಳಿದರೆ ಅಪ್ರಕೃತವಾಗಲಾರದು."

ಕನ್ನಡ ಭಾಷಾಭಿವೃದ್ಧಿ ಮತ್ತು ಜ್ಞಾನವೃದ್ಧಿಗೆ ಬೇಕಾದ ಗ್ರಂಥ ರಚನೆ, ಕೋಶಗಳ ರಚನೆ ಇವುಗಳ ಬಗೆಗೆ ಸಹ ಆಗ 'ಕನ್ನಡ ಕಣ'ದಲ್ಲಿ ಚರ್ಚಿಸಿದ್ದಾರೆ. ತಮ್ಮ ನಿಲುವು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಜ್ಞಾನಕೋಶ, ವಿಶ್ವಕೋಶಗಳು ಇತರ ಅನೇಕ ಭಾರತೀಯ ಭಾಷೆಗಳಲ್ಲಿ ಆಗಲೇ ಸಿದ್ಧವಾಗತೊಡಗಿದ್ದರೂ ಕನ್ನಡದಲ್ಲಿ ಮಾತ್ರ ಇನ್ನೂ ಯಾವ ಬಗೆಯ ಪ್ರಯತ್ನವೂ ಆಗಲಿಲ್ಲವೆಂದು ಚಿಂತಿತರಾಗಿದ್ದಾರೆ. ಜ್ಞಾನವನ್ನು ಹಂಚಿಕೊಡುವ ವಿಶ್ವಕೋಶ ಕನ್ನಡಕ್ಕೆ, ಕನ್ನಡ ಜನತೆಗೆ ಬೇಕು, ನಿಜ. ಆದರೆ, "ಇದನ್ನು ಹೇಗೆ ಸಾಧಿಸಬೇಕು? ಈ ಮಹತ್ಕಾರ್ಯವನ್ನು ಸಾಧಿಸುವ ಪಟ್ಟುಗಾರಿಕೆ, ಸಹನೆ, ಸಹಕಾರ ಬುದ್ಧಿ ನಮಗೆ ಇದೆಯೆ?" ಎಂಬ ಪ್ರಶ್ನೆ ಮುಂದಿಟ್ಟು ಕನ್ನಡಿಗರ ಆತ್ಮಶೋಧನೆಗೆ ದಾರಿ ಮಾಡಿಕೊಟ್ಟಿದ್ದಾರೆ. ಮತ್ತು "ಕನ್ನಡ ಸಾಹಿತ್ಯ ಪರಿಷತ್ತು ಈ ಕಾರ್ಯ ಮಾಡಿದರೆ ಹಿತ. ನಿಜವಾಗಿ ಈ ಕಾರ್ಯ ಅವರದೇ" ಎಂದು ಒತ್ತಿಹೇಳಿ ಕನ್ನಡ ಸಾಹಿತ್ಯ ಪರಿಷತ್ತಿನ ಗಮನ ಅದರ ಕರ್ತವ್ಯದ ಕಡೆ ಸೆಳೆದಿದ್ದಾರೆ. ಅವರ ಪರಿಷತ್ತಿನ ಕೆಲಸದ ತಾಮಸ ಪ್ರವೃತ್ತಿಯನ್ನು ಟೀಕಿಸಿದ್ದುಂಟು. 1946ರ ಜೂನ್

ತಿಂಗಳಿನಲ್ಲಿ "ಚಿಕ್ಕ ನಿಘಂಟಿಗೇ ಪರಿಷತ್ತಿನಲ್ಲಿ ಕಾರ್ಯವೇಗ ಸಾಕಷ್ಟಿಲ್ಲ. ಅಮೆಯಂತೆ ನಿಧಾನವಾಗಿ ಯುಗಕ್ಕೊಂದು ಹೆಜ್ಜೆಯಾಗಿ ನಡೆಯುತ್ತಿದೆ ಕೆಲಸ" ಎಂದು ಮನಸ್ಸಿನಿಂದ ಟೀಕಿಸಿದರೂ ಮಹತ್ವದ ಕೆಲಸವನ್ನು ಪರಿಷತ್ತು ಸಾಧಿಸಬೇಕು ಎಂಬ ಅವರ ಆಂತರಂಗಿಕ ಮಿಡಿತ ಸದಾಕಾಲದ್ದು. ಅವರೆಂದಂತೆ ನಿಘಂಟಿನ ಕೆಲಸ ಇನ್ನೂ ಮುಗಿದಿಲ್ಲ. ವಿಶ್ವಕೋಶವಂತೂ ಕನ್ನಡ ಸಾಹಿತ್ಯ ಪರಿಷತ್ತಿನಿಂದ ದೂರವೇ ಉಳಿಯಿತು.

ಹೀಗೆ ಕೃಷ್ಣಶರ್ಮರು ಸಾಹಿತ್ಯ, ರಾಜಕೀಯ ಎರಡರಲ್ಲಿಯೂ ಎಲ್ಲಾ ಕಾಲದಲ್ಲಿಯೂ ಸ್ಪಷ್ಟವಾದ ಅಭಿಪ್ರಾಯವನ್ನು ಕೊಡುತ್ತ ಬಂದವರು. ಸ್ಪಷ್ಟ ಅಭಿಪ್ರಾಯ, ಅಸ್ಪಷ್ಟತೆಯ ಜಾಣತನದಲ್ಲಿ ಸ್ವಾರ್ಥ ಸಾಧಿಸುವವರಿಗೆ ಹೇಗೆ ಪಥ್ಯವಾದೀತು. ಸ್ವಾರ್ಥಿಗಳ ಸಂಖ್ಯಾಬಲದ್ದೇ ಮೇಲುಗೈಯಲ್ಲವೆ ? ಅದೇ ನಮಗೀಗ ದೊರೆತಿರುವ ಪ್ರಜಾಪ್ರಭುತ್ವವಲ್ಲವೆ ?

# ಕೃಷ್ಣಶರ್ಮರ 'ಗೀತಾ ಪ್ರವಚನ'

ಮ. ಗ. ಶೆಟ್ಟಿ

ಬಾಳಿನ ಬೇಗುದಿಯಲ್ಲಿ ಬಳಲಿ ಬೆಂಡಾದವನಿಗೂ ಗೀತೆಯಲ್ಲಿ ಒಂದಲ್ಲ ಒಂದು ಶ್ಲೋಕವು ಧೈರ್ಯವನ್ನು ಕೊಟ್ಟು ಬಾಳಲು ಉತ್ಸಾಹವನ್ನು ತುಂಬುತ್ತದೆ. ಈ ಗೀತೆಯನ್ನು ಹೇಳಿದವನು ಶ್ರೀಕೃಷ್ಣ. ಈ ಮಹಾ ಉಪದೇಶ ಪಡೆದ ಭಕ್ತ ಅರ್ಜುನ ಅದರಲ್ಲಿಯೇ ಬೆರೆತುಹೋದುದರಿಂದ ಅವನೂ ಕೃಷ್ಣನಾದ. ಪಾಂಡವರಲ್ಲಿ ತಾನೇ ಧನಂಜಯ ಎಂದು ಕೃಷ್ಣನೇ ಹೇಳಿಕೊಂಡಿದ್ದಾನೆ. ಭಗವಂತ-ಭಕ್ತರ ಹೃದ್ಗತವನ್ನು ಪ್ರಕಟಪಡಿಸುವಾಗ ವ್ಯಾಸದೇವ ಪೂರಾ ಕರಗಿ ಹೋಗಿದ್ದಾನೆ. ಲೋಕ ಆತನನ್ನೂ ಕೃಷ್ಣನೆಂದು ಕರೆವಮಟ್ಟಿಗೆ ಆಗಿದೆ.

ಹೇಳುವವನು ಕೃಷ್ಣ, ಕೇಳುವವನು ಕೃಷ್ಣ, ಕಟ್ಟುವವನು ಕೃಷ್ಣ-ಈ ಮಹತ್ತ್ವಾದ ಗೀತಾಪ್ರವಚನವನ್ನು ತನ್ಮಯತೆಯಿಂದ ಪ್ರಾಸಾದಿಕ-ಮಾತಿನಿಂದ ಕನ್ನಡಿಸಿದವನೂ ಕೃಷ್ಣ-ಹೀಗೆ ಕನ್ನಡದ ಗೀತಾ ಪ್ರವಚನಕ್ಕೆ ನಾಲ್ಕು ಕೃಷ್ಣರ ಏಕಾಗ್ರತೆಯ ಫಲ ದೊರೆತಿದೆ. ಅದರಿಂದಲೇ ಕನ್ನಡನಾಡಿನ ಒಂದು ಲಕ್ಷಕ್ಕಿಂತಲೂ ಹೆಚ್ಚು ಮನೆಗಳಲ್ಲಿ ಈ ಚತುರ್ವಿಧ ಪುರುಷಾರ್ಥ ಸಾಧಕವಾದ ಗೀತಾ ಪ್ರವಚನ ದೇವಪೀಠಕ್ಕೇರಿದೆ.

ಗೀತೆಯ ಹದಿನೆಂಟು ಅಧ್ಯಾಯಗಳಲ್ಲಿ ಮುಖ್ಯವಾದ ಮಾತು ಮೊದಲಿನ ಐದು ಅಧ್ಯಾಯಗಳಲ್ಲಿಯೇ ಮುಗಿಯುತ್ತದೆ. ಆರರಿಂದ ಹದಿನೇಳನೆಯ ಅಧ್ಯಾಯದವರೆಗೆ ನಿಷ್ಕಾಮಕರ್ಮದ ಸಿದ್ಧಿಗಾಗಿ ಭಿನ್ನ ಭಿನ್ನ ಸಾಧನಗಳನ್ನು ತಿಳಿಯಪಡಿಸುತ್ತವೆ. ಹದಿನೆಂಟನೆಯ ಅಧ್ಯಾಯದಲ್ಲಿ ಇವೆಲ್ಲವುಗಳ ಸಮಾರೋಪವಿದೆ. ಆರನೆಯ ಅಧ್ಯಾಯದಿಂದ ಎಂಟರವರೆಗೆ ಪ್ರಧಾನವಾಗಿ ಅವ್ಯಕ್ತೋಪಾದನೆ ಇದ್ದರೆ ಒಂಭತ್ತರಿಂದ ಹನ್ನೆರಡರವರೆಗೆ ವ್ಯಕ್ತೋಪಾಸನೆ ಇದೆ. ಸಗುಣದಲ್ಲಿ ನಿರ್ಗುಣ ಬರುತ್ತದೆ; ನಿರ್ಗುಣದಲ್ಲಿ ಸಗುಣವೂ ಸೇರಿಹೋಗುತ್ತದೆ-ಇದು ಗೀತೆಯ ದೃಷ್ಟಿ. ಒಂಭತ್ತನೆಯ ಅಧ್ಯಾಯ ತಾಯಿಯಾದರೆ ಹತ್ತು ಹನ್ನೆರಡು ಅದರ ಮಕ್ಕಳು. ಒಂಭತ್ತನೆಯ ಅಧ್ಯಾಯ ಸಾಧು ಸಂತರಿಗೆ ಅತ್ಯಂತ ಪ್ರಿಯವಾದುದು. ಜ್ಞಾನದೇವ ಅದನ್ನು ಕೇಳುತ್ತಲೇ ಸಮಾಧಿಸ್ಥನಾದನಂತೆ. ಹದಿಮೂರು, ಹದಿನಾಲ್ಕು ಮತ್ತು ಹದಿನೈದನೆಯ ಅಧ್ಯಾಯಗಳಲ್ಲಿ ಜ್ಞಾನಮಾರ್ಗದ ವಿವೇಚನೆ ಇದೆ. ಜ್ಞಾನಮಾರ್ಗ ಮತ್ತು ಭಕ್ತಿ ಮಾರ್ಗ ಬೇರೆ ಬೇರೆಯಾದರೂ ಗೀತೆಯ ಜ್ಞಾನಮಾರ್ಗದಲ್ಲಿ ಭಕ್ತಿಮಾರ್ಗವೂ

ಜಿಸೆದಿದೆ. ಸಮಾಜದ ವ್ಯಕ್ತಿಗಳ ಶುಭವೃತ್ತಿ ಅರ್ಥಾತ್ ಸದ್ಗುಣ (ಅಧ್ಯಾಯ ೧೬) ಅದಕ್ಕೆ ಅನುರೂಪವಾದ ಶುಭಕೃತ್ಯ–ಸಾತ್ವಿಕ ಯಜ್ಞದಾನ, ತಪ (ಅಧ್ಯಾಯ ೧೭) ಗಳೇ ಸಮಾಜ ಶಾಸ್ತ್ರಕ್ಕೆ ಸರ್ವಾಧಾರ.

ಸಮರ್ಪಣವಿಧಿ ಭಕ್ತಿ ಮಾರ್ಗದ ಆತ್ಮ, ಹಾಗೆಂದ ಮಾತ್ರಕ್ಕೆ ಸಮರ್ಪಣ ವೆಂದರೆ ಮನಬಂದದ್ದನ್ನೆಲ್ಲ ಸಮರ್ಪಿಸುವುದಲ್ಲ. ಶುದ್ಧ ಸಾತ್ವಿಕವಾದುದನ್ನೇ ಸಮರ್ಪಣ ಮಾಡಬೇಕೆಂದು ಹದಿನೇಳನೆಯ ಅಧ್ಯಾಯ ಹೇಳುತ್ತದೆ. ವಿನೋಬಾ ಭಾವೆಯವರು ಹದಿನೇಳನೆಯ ಅಧ್ಯಾಯಕ್ಕೆ ಆಶ್ರಮ ದೃಷ್ಟಿಯಿಂದ 'ಕಾರ್ಯಕ್ರಮ ಯೋಗ' ವೆಂಬ ಹೆಸರನ್ನು ಕೊಟ್ಟಿದ್ದಾರೆ. ಬೆಳಿಗ್ಗೆ ಎದ್ದು ಮೊದಲು ಪ್ರಾರ್ಥನೆ ಮಾಡಿ (ಶ್ರದ್ಧಾ) ಆಮೇಲೆ ಉಪಹಾರ ಮಾಡಿ (ಆಹಾರ), ಸೇವಾಕಾರ್ಯ (ಯಜ್ಞ, ದಾನ, ತಪ) ಪ್ರಾರಂಭಿಸಬೇಕು. ಕಡೆಯಲ್ಲಿ ಸಂಜೆಯ ಪ್ರಾರ್ಥನೆಯಲ್ಲಿ ಇವೆಲ್ಲ ವನ್ನೂ ಸಮರ್ಪಣ ಮಾಡಬೇಕು. (ಓಂ ತತ್‌ಸತ್)

ಗೀತೆಯ ಮೊದಲನೆಯ ಐದು ಅಧ್ಯಾಯಗಳ ಮುಖ್ಯ ವಿಷಯಗಳಿಂದಲೇ ಹದಿನೆಂಟನೆಯ ಅಧ್ಯಾಯ ಪ್ರಾರಂಭವಾಗಿದೆ. ಈ ಅಧ್ಯಾಯದಲ್ಲಿ "ಅರ್ಜುನಾ ಮೋಹ ಹೋಯಿತೆ?" ಎಂದು ಕೃಷ್ಣ ಕೇಳಿದಾಗ "ದೇವ ಮೋಹ ನಾಶವಾಯಿತು. ಸ್ವಧರ್ಮದ ಅರಿವಾಯಿತು" ಎಂದು ಅರ್ಜುನ ಹೇಳುತ್ತಾನೆ.

ಸ್ವಧರ್ಮಕ್ಕೆ ಅಡ್ಡಿಬರುವ ಮೋಹವನ್ನು ಕಳೆಯುವುದೇ ಗೀತೆಯ ಜನ್ಮದ ಉದ್ದೇಶ. ಅರ್ಜುನ ಧರ್ಮಸಮ್ಮೂಢನಾದ, ಅರ್ಥಾತ್ ಮೋಹಪರವಶನಾದ. ಆ ಮೋಹ, ಮಮತೆ, ಆಸಕ್ತಿಯನ್ನು ದೂರಮಾಡುವುದೇ ಗೀತೆಯ ಮುಖ್ಯಕಾರ್ಯ. ಈ ಉಪದೇಶ ಗೀತೆಯದಷ್ಟೇ ಅಲ್ಲ, ಮಹಾಭಾರತದ್ದೂ ಅಹುದು. ಆದರಿಂದಲೇ "ಲೋಗರ ಮನಸ್ಸಿನ ಮೋಹವನ್ನು ದೂರ ಮಾಡಲೆಂದೇ ನಾನು ಈ ಇತಿಹಾಸ ಪ್ರದೀಪವನ್ನು ಹತ್ತಿಸುತ್ತಿದ್ದೇನೆ" ಎಂದು ವ್ಯಾಸರು ಮಹಾಭಾರತದ ಆದಿಯಲ್ಲಿ ಹೇಳಿದ್ದಾರೆ.

ಅಂತರ್ಯಾಮಿಯ ರೂಪದಿಂದ ಕೃಷ್ಣ ಪ್ರತಿಯೊಬ್ಬರ ಹೃದಯದಲ್ಲೂ ವಿರಾಜಮಾನನಾಗಿದ್ದಾನೆ. ಅವನೇ ನಮಗೆ ಅತಿ ಸಮೀಪದವ. ನಮ್ಮ ಹೃದಯದ ಎಲ್ಲ ಕಳವಳವನ್ನೂ ಅವನ ಎದುರಿಗೆ ತೆರೆದಿಟ್ಟು 'ದೇವಾ, ನಾ ನಿನಗೆ ಶರಣು ಬಂದೆ, ನೀನು ನನಗೆ ಅನನ್ಯ ಗುರು, ನನಗೆ ದಾರಿ ತೋರು. ನೀ ತೋರಿದ ದಾರಿಯಲ್ಲಿ ನಾ ನಡೆವೆ' ಎಂದು ಎನ್ನೋಣ.

ಗೀತೆಯ ಆದಿಯಲ್ಲಿ ಭಗವಂತ ಬಾಳಿನ ಮಹಾಸಿದ್ಧಾಂತವನ್ನು ಹೇಳಿದ್ದಾನೆ. ಒಂದು, ಆತ್ಮದ ಅಮರತೆ, ಅಖಂಡತೆ; ಎರಡು, ದೇಹದ ಕ್ಷುದ್ರತೆ; ಮೂರು— ಸ್ವಧರ್ಮದ ಅಬಾಧಿತತೆ. ಸ್ವಧರ್ಮವು ನಿಸರ್ಗಪ್ರಾಪ್ತವಾದುದು, ಹುಡುಕಿಕೊಂಡು ನಾವು ಹೋಗಬೇಕಾಗಿಲ್ಲ. ನಾವು ಹುಟ್ಟುವ ಮೊದಲು ಸಮಾಜವಿತ್ತು; ತಾಯಿ ತಂದೆ ಇದ್ದರು. ನಮ್ಮ ಹುಟ್ಟಿನ ಜೊತೆಗೆ ಸ್ವಧರ್ಮವೂ ಇರುತ್ತದೆ. ಸ್ವಧರ್ಮದ

ಆಸರೆಯಲ್ಲಿ ನಾವು ಮುಂಬರಿಯಲು ಸಾಧ್ಯ. ಅದರಿಂದಲೇ ಅದನ್ನು ಯಾರೂ ಯಾವಾಗಲೂ ಬಿಡಬಾರದು. ಇದು ಒಂದು ಜೀವನದ ಮೂಲಸೂತ್ರ.

ಸ್ವಧರ್ಮದ ದಾರಿಯಲ್ಲಿ ಮುಳ್ಳು ಚಲ್ಲುವ ಮೋಹದ ರೂಪ ಅಸಂಖ್ಯ. ನಾನು, ನನ್ನದು ಎನ್ನುವವನು ಶರೀರವನ್ನು ಮಾತ್ರ ನೋಡುತ್ತಾನೆ. ಇದರ ಪರಿಣಾಮವಾಗಿ ಸ್ವಧರ್ಮರೂಪ ಆರೋಗ್ಯದ ನಾಶವಾಗುತ್ತದೆ.

ಸ್ವಧರ್ಮ ನಿಷ್ಠೆಯ ಜೊತೆಗೆ ಈ ಸಾವುಗುಳಿ ಮೈ ನಾನಲ್ಲವೆಂದೂ, ನಾನು ಎಂದಿಗೂ ಸಾಯದ ಅಖಂಡ ವ್ಯಾಪಕ – ಆತ್ಮ ಎಂಬುದನ್ನು ಅರಿಯಬೇಕು. ಇವೆಲ್ಲವೂ ಸೇರಿದಾಗಲೇ ಪೂರ್ಣ ತತ್ವಜ್ಞಾನ.

ಮೈಯ್ಯ ಮಹತ್ವವನ್ನು ತಗ್ಗಿಸಿ, ಆತ್ಮದ ಮಹತ್ವವನ್ನು ಹೆಚ್ಚಿಸುವ ಕಲೆಯನ್ನು ನಾವು ಕಲಿಯಬೇಕು. ದೇಹಾಸಕ್ತಿ ಅಳಿದ ಬಳಿಕವೇ ಈ ದೇಹವು ಸೇವೆಯ ಸಾಧನ ಎಂಬುದರ ಅರಿವಾಗುವುದು. ಸ್ವಧರ್ಮ ಆಚರಣೆಗಾಗಿ ಮೈಯ್ಯನ್ನು ಕಾಪಾಡಬೇಕು, ಅದಕ್ಕೆ ತಿನ್ನಲಿಕ್ಕೂ ಕುಡಿಯಲಿಕ್ಕೂ ಕೊಡಬೇಕು. ಬಡಿಸುವ ಸೌಟಿಗೆ ರುಚಿ ಗೊತ್ತಾಗದ ಹಾಗೆ ನಾಲಗೆಗೂ ಆಗಬೇಕು. ದೇಹವನ್ನು ಉಪಕರಣವೆಂದು ಬಳಸದೆ ನಾವು ಮೈಯ್ಯನ್ನು ದೊಡ್ಡದು ಮಾಡಿ ಅದರಲ್ಲಿ ಮುಳುಗಿ, ಆತ್ಮವನ್ನು ಕುಗ್ಗಿಸುತ್ತೇವೆ. ಇದು ನಿಲ್ಲಬೇಕು.

ಸಾರಾಂಶ (೧) ಸ್ವಧರ್ಮದ ಸೆರಗನ್ನು ಎಂದೂ ಬಿಡಬಾರದು. (೨) ದೇಹವು ಕ್ಷಣಭಂಗುರವೆಂದು ತಿಳಿದು ಅದನ್ನು ಸ್ವಧರ್ಮಕ್ಕಾಗಿ ಬಳಸಬೇಕು. (೩) ಆತ್ಮವು ಅಖಂಡ, ವ್ಯಾಪಕ – ಎಂಬುದನ್ನು ಸದಾ ಜಾಗ್ರತವಾಗಿಟ್ಟುಕೊಂಡು ಮನಸ್ಸಿನಿಂದ ಸ್ವಪರಭೇದವನ್ನು ಕಿತ್ತೊಗೆಯಬೇಕು.

ಈ ಮಾತು ನಮ್ಮ ಧರ್ಮದಲ್ಲಿ ಎಂದಿನಿಂದಲೂ ಇದ್ದದ್ದೇ. ಆದರೆ ಈ ಸಿದ್ಧಾಂತವನ್ನು ಆಚರಿಸುವುದು ಹೇಗೆ ಎಂದು ಗೀತೆ ಹೇಳಿಕೊಡುತ್ತದೆ. ಫಲತ್ಯಾಗ ಮಾಡು ಎಂದು, ಫಲೇಚ್ಛೆ ಇಲ್ಲದವನಿಗೆ ಕರ್ಮ ಮಾಡಲು ಪ್ರತಿಕ್ಷಣವೂ ದೊರೆಯುತ್ತದೆ. ಫಲೇಚ್ಛೆ ಇಲ್ಲದ ಹೊಳೆಗೆ ಬಿಡುವೆಲ್ಲಿ? ಗಾಳಿಗೆ ತೆರವೆಲ್ಲಿ? ಸೂರ್ಯನಿಗೆ ಸದಾ ಬೆಳಗುವದೊಂದೇ ಗೊತ್ತು. ಕರ್ಮವನ್ನೇ ತಿನ್ನು, ಕರ್ಮವನ್ನೇ ಕುಡಿ, ಕರ್ಮವನ್ನು ಅರಗಿಸಿಕೋ. ಕರ್ಮ ಮಾಡುವುದರಲ್ಲೇ ಎಲ್ಲವೂ ಬಂತು. ಹುಡುಗ ಆಟದ ಆನಂದಕ್ಕೆ ಆಡುತ್ತಾನೆ. ಆದರಿಂದ ವ್ಯಾಯಾಮದ ಫಲ ಸಿಕ್ಕೇ ಸಿಗುತ್ತದೆ. ವಾಸನಾಮುಕ್ತಿಯೆ ಮೋಕ್ಷ.

### ಸ್ಥಿತಪ್ರಜ್ಞ

ಎರಡನೆಯ ಅಧ್ಯಾಯದ ಕೊನೆಯ ಹದಿನೆಂಟು ಶ್ಲೋಕಗಳು ಹದಿನೆಂಟೂ ಅಧ್ಯಾಯಗಳ ಸಾರ ಸರ್ವಸ್ವವೆಂದು ಹೇಳಬಹುದು. ಸ್ಥಿತಪ್ರಜ್ಞನೆ ಗೀತೆಯ ಆದರ್ಶಮೂರ್ತಿ. ಐದನೆಯ ಅಧ್ಯಾಯದಲ್ಲಿ ಜೀವನ್ಮುಕ್ತನ, ಹನ್ನೆರಡರಲ್ಲಿ ಭಕ್ತನ, ಹದಿನಾಲ್ಕರಲ್ಲಿ ಗುಣಾತೀತನ, ಹದಿನೆಂಟರಲ್ಲಿ ಜ್ಞಾನನಿಷ್ಠನ ವರ್ಣನೆ ಬಂದಿದೆ.

ಸ್ಥಿತಪ್ರಜ್ಞ ಎಂದರೆ ಸ್ಥಿರಬುದ್ಧಿಯುಳ್ಳ, ಸಂಯಮಿ. ಸರ್ವೇಂದ್ರಿಯಗಳಿಗೂ ಕಡಿವಾಣಹಾಕಿ–ಅವನ್ನು ಕರ್ಮಯೋಗಿಯಲ್ಲಿ ಓಡಿಸುವವನು ಸ್ಥಿತಪ್ರಜ್ಞ. ಇದಕ್ಕೆ ಬಹಳ ಪ್ರಯತ್ನ ಮತ್ತು ಜ್ಞಾನಬೇಕು. ಆದರೆ ಸಾಧಕ ನಿರಾಶನಾಗಬಾರದು. ಸಾಧಕ ಎಲ್ಲ ಉಪಾಯಗಳನ್ನೂ ಮಾಡಿ ಕಡಿಮೆ ಬಿದ್ದಾಗ ಭಕ್ತಿಯನ್ನು ಜೋಡಿಸಬೇಕು.

ಇತರರು ಎಚ್ಚೆತ್ತಾಗ ಕರ್ಮಯೋಗಿಗೆ ನಿದ್ರೆ, ಅವರು ಮಲಗಿದಾಗ ಇವನಿಗೆ ಎಚ್ಚರ. ಹೊಟ್ಟೆಗೆ ಸಿಕ್ಕೀತೋ ಇಲ್ಲವೋ ಎಂದು ನಾವು ಜಾಗರೂಕರಾದರೆ ಕರ್ಮಯೋಗಿಗೆ ತನ್ನ ಕರ್ಮದಲ್ಲಿ ಒಂದು ಕ್ಷಣವೂ ವ್ಯರ್ಥವಾಗಬಾರದು. ನಿಷ್ಕಾಮ ಕರ್ಮದಲ್ಲಿ ಅದ್ಭುತ ಸಾಮರ್ಥ್ಯವಿದೆ. ನಿಷ್ಕಾಮತೆ ಮನಸ್ಸಿನ ಧರ್ಮ. ಇದು ಆರಳಲು ಸ್ವಧರ್ಮಾಚರಣೆಯ ಜೊತೆಗೆ ಉಳಿದ ಸಾಧನೆಯನ್ನೂ ಮಾಡಬೇಕು. ಬರೀ ಎಣ್ಣೆಯಿಂದ ದೀಪ ಉರಿಯಲಾರದು. ಅದಕ್ಕೆ ಬೆಂಕಿ, ಬೆಳಕು ಎಲ್ಲವೂ ಬೇಕು. ಭಕ್ತಿಯೋಗದಲ್ಲಿ ಹೊರಗೆ ತಪಸ್ಸನ್ನು ಹೇಳಿದರೆ ಒಳಗೆ ಜಪವನ್ನು ಸೂಚಿಸಿದ್ದಾರೆ. ಹೊರಗೆ ಉಪವಾಸಾದಿ ತಪಸ್ಸು ನಡೆದಾಗ ಒಳಗೆ ಜಪಾದಿಕ್ರಿಯೆ ನಡೆಯದಿದ್ದರೆ ಎಲ್ಲವೂ ವ್ಯರ್ಥವಾಗುತ್ತದೆ. ಕರ್ಮಕ್ಕೆ ಅಂತರಂಗ ಮೇಳವಿಸಿದರೆ ಆ ಕರ್ಮ ವಿಶಿಷ್ಟವಾಗುತ್ತದೆ. ಬಾಹ್ಯದಲ್ಲಿ ಸ್ವಧರ್ಮಾಚರಣೆ, ಅಂತರಂಗದಲ್ಲಿ ಮನಸ್ಸಿನ ವಿಕರ್ಮ ಎರಡೂ ಬೇಕು. ವಿಕರ್ಮದ ಸಹಾಯದಿಂದ ಮನಸ್ಸನ್ನು ಅಳಿದು ಹೃದಯವನ್ನು ಸುರಿದು ಮನುಷ್ಯ ಕರ್ಮ ಮಾಡಿದರೆ ಆ ಕರ್ಮ ಕರ್ಮವಾಗಿ ಉಳಿಯದು. ಅದು ಅಕರ್ಮವಾಗುತ್ತದೆ. ಅದರಲ್ಲಿ ಕ್ಲೇಶ ಕಟ್ಟೆ ಅಡ್ಡ ತಿಡ್ಡ ಏನೂ ಇಲ್ಲ. ಸೂರ್ಯನಿಗೆ ಬೆಳಕು ಸಹಜಗುಣ. ಬೆಳಕಿನ ಹೊರತು ಆತನಲ್ಲಿ ಏನೂ ಇಲ್ಲ. ಬೆಳಕು ಬೀರುವದು ಆತನಿಗೆ ಕಷ್ಟವೆನಿಸುವುದಿಲ್ಲ. ಮಾಡಿದರೂ ಮಾಡಿದಂತೆ ಅನಿಸದು ಎಂಬ ಸ್ಥಿತಿಯೇ ಸನ್ಯಾಸ. ಮಾಡಿದರೂ ಅದರ ಲೇಪ ಅಂಟದಂಥ ಯುಕ್ತಿಯಿಂದ ಅದು ಯೋಗ. ಏನೂ ಮಾಡದಂತೆಯೇ ಅನಿಸುವುದರಿಂದ ಅದು ಸನ್ಯಾಸ. ಶುಕ ಜನಕರಂತೆ ಸನ್ಯಾಸಿ, ಯೋಗಿ ಇಬ್ಬರೂ ಒಂದೇ–ಒಬ್ಬ ಮಾಡದೆ ಮಾಡುವವನು ಇನ್ನೊಬ್ಬ ಮಾಡಿ ಮಾಡಿದವನು. ಸನ್ಯಾಸಿ, ಯೋಗಿ ಇಬ್ಬರೂ ಲೋಕ ಸಂಗ್ರಹ ಮಾಡುತ್ತಾರೆ. ಹೊರಗೆ ಕರ್ಮತ್ಯಾಗದಂತೆ ಕಂಡರೆ ಕೆಲವು ಸಲ ಆ ತ್ಯಾಗದಲ್ಲಿ ಕರ್ಮ ತುಂಬಿರುತ್ತದೆ. ಜ್ಞಾನಿ ಸನ್ಯಾಸಿ, ಜ್ಞಾನಿ ಕರ್ಮಯೋಗಿ ಇಬ್ಬರೂ ಒಂದೇ ಸಿಂಹಾಸನದಲ್ಲಿ ಕೂಡುವವರು. ಸಾಧಕನಿಗೆ ಕರ್ಮಯೋಗ ದಾರಿ, ನೆಲೆಯೂ ಹೌದು. ಸನ್ಯಾಸ ದಾರಿಯಲ್ಲ ನೆಲೆ. ಕರ್ಮಯೋಗ ಎರಡೂ ಹೌದು. ಪೂರ್ಣ ಕರ್ಮಯೋಗವೆ ಸನ್ಯಾಸ, ಪೂರ್ಣ ಸನ್ಯಾಸವೇ ಕರ್ಮಯೋಗ; ಏನೂ ಭೇದವಿಲ್ಲ.

ಆದರೆ ಸಾಧಕನಿಗೆ ಕರ್ಮಯೋಗ ಸುಲಭ. ಎಲ್ಲ ಕೃತ್ಯಗಳಿಗೂ ಪರಮೇಶ್ವರನ ಸಂಬಂಧ ಜೋಡಿಸಬೇಕು. ಸ್ವಚ್ಛವೂ, ಪವಿತ್ರವೂ, ಸೇವಾಮಯವೂ ಆಗಿದ್ದರೆ ಆಯಿತು. ಆ ಕರ್ಮ ಯಜ್ಞರೂಪಿಯೆ. ಕರ್ಮಮಾಡುವುದು ಅದರ ಫಲವನ್ನು

ತ್ಯಜಿಸದೆ ಈಶ್ವರನಿಗರ್ಪಿಸುವುದು ರಾಜಯೋಗ. ಕರ್ಮಯೋಗಕ್ಕೂ ಮುಂದಿನ ಹೆಜ್ಜೆ ಇದು. "ಕರ್ಮಮಾಡಿ, ಫಲಬಿಟ್ಟುಬಿಡಿ, ಫಲದ ಆಸೆ ಇಟ್ಟುಕೊಳ್ಳಬೇಡಿ" ಎಂದು ಕರ್ಮಯೋಗ ಹೇಳುತ್ತದೆ. ಅಲ್ಲಿಗೆ ಕರ್ಮಯೋಗ ಮುಗಿಯಿತು. "ಕರ್ಮದ ಫಲವನ್ನು ತ್ಯಜಿಸಬೇಡಿ, ಎಲ್ಲ ಕರ್ಮಗಳನ್ನೂ ದೇವರಿಗರ್ಪಿಸಿ. ಒಂದು ಕಡೆಯಿಂದ ಭಕ್ತಿ ಹೀಗೆ ಸಂಯೋಗವಮಾಡಿ ಬಾಳನ್ನು ಸುಂದರಗೊಳಿಸಿರಿ. ಫಲದ ತ್ಯಾಗಮಾಡ ಬೇಡಿ. ಅದನ್ನು ದೇವರೊಂದಿಗೆ ಕೂಡಿಸಿ' ಎನ್ನುತ್ತದೆ ರಾಜಯೋಗ.

**ಸರ್ವಾರ್ಥಸಾರ**

ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಈ ಕೆಳಗಿನ ಶ್ಲೋಕವನ್ನು ಸರ್ವಾರ್ಥ ಸಾರ, ಗೀತೆಯ ಸರ್ವಸಾರ ಎಂದು ಹೇಳಿದ್ದಾರೆ.

"ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ |
ನಿರ್ವೈರಃ ಸರ್ವ ಭೂತೇಷು ಯಃ ಸ ಮಾಮೇತಿ ಪಾಂಡವ ||"

ಲೋಕದಲ್ಲಿ ಯಾರೊಂದಿಗೂ ವೈರವಿಲ್ಲದವ; ತಟಸ್ಥನಾಗಿದ್ದುಕೊಂಡು ನಿರಪೇಕ್ಷ ಬುದ್ಧಿಯಿಂದ ಜಗತ್ತಿನ ಸೇವೆ ಮಾಡುವವ, ಮಾಡಿದುದನ್ನೆಲ್ಲ ಅರ್ಪಿಸುವವ, ನನ್ನ ಭಕ್ತಿಯಿಂದ ತುಂಬಿದವ, ಕ್ಷಮಾವಂತ, ನಿಸ್ಸಂಗ, ವಿರಕ್ತ ಪ್ರೇಮಲಭಿತ್ತ-ಇಂಥವನು ಪರಮಾತ್ಮನ ಕೈಯ್ಯಲ್ಲಿಯ ಆಯುಧವಾಗುತ್ತಾನೆ. ಇದೇ ಆ ಸಾರಸರ್ವಸ್ವ.

ಅರ್ಜುನನಿಗೆ ದೇವದೇವನ ಪೂರ್ಣರೂಪವನ್ನು ಕಾಣಬೇಕೆಂಬ ಆಸೆಯಾಗು ತ್ತದೆ. ಮೂರು ಕಾಲಗಳಲ್ಲಿ, ಮೂರು ಸ್ಥಳಗಳಲ್ಲಿ-ಭೂತ ಭವಿಷ್ಯ ವರ್ತಮಾನಗಳಲ್ಲಿ; ಮೇಲೆ ಕೆಳಗೆ, ಇಲ್ಲಿ ಎಲ್ಲೆಲ್ಲೂ ತುಂಬಿಕೊಂಡಿರುವ ಆ ವಿರಾಟ್ ಪರಮಾತ್ಮ ಒಮ್ಮೆಲೆ, ಒಂದೇ ಕಾಲಕ್ಕೆ, ಕಾಣಿಸಬೇಕೆಂಬುದು ಅರ್ಜುನನ ಅಪೇಕ್ಷೆ. ಅರ್ಜುನನಿಗೆ ದಿವ್ಯ ದೃಷ್ಟಿ ಕೊಟ್ಟು, ದಿವ್ಯರೂಪ ದರ್ಶನದ ಅವನ ಅಪೇಕ್ಷೆಯನ್ನು ಭಗವಂತ ನಡೆಯಿಸಿ ಕೊಟ್ಟ.

ಸಿದ್ಧವನಹಳ್ಳಿ ಕೃಷ್ಣಶರ್ಮರು ವಿನೋಬಾ ಸಾಹಿತ್ಯದ ಅನುವಾದದ ಮೂಲಕ, ಗಾಂಧೀ ಜೀವನ ದರ್ಶನದ ಮೂಲಕ, ಧರ್ಮಸಮನ್ವಯ ಸಾಹಿತ್ಯದ ಮೂಲಕ, ಇನ್ನಿ ತರ ಸಾಹಿತ್ಯ ಸಂಪಾದನೆಯ ಮೂಲಕ ವಿಶ್ವರೂಪದರ್ಶನ ಮಾಡಿಸಿದ್ದಾರೆ. ಕನ್ನಡಿ ಗರಿಗೆಲ್ಲ ಪ್ರೇಮದ ಪ್ರಸಾದ ಹಂಚಿದ್ದಾರೆ. ಈ ಪ್ರೇಮದ ಪ್ರಸಾದವನ್ನುಂಡು ನಮ್ಮ ಜನ ಪ್ರತಿಯೊಂದು ಕ್ರಿಯೆಯನ್ನೂ ಈಶ್ವರನೊಂದಿಗೆ ಕೂಡಿಸಿ ತಮ್ಮ ಬಾಳಿನಲ್ಲಿ ಅದ್ಭುತ ಶಕ್ತಿ ಉತ್ಸಾಹವನ್ನು ಪಡೆಯಲಿ. ಅವರ ಬದುಕು ರಮಣೀಯವೂ ನಮ ನೀಯವೂ ಆಗಲಿ.

# ಕೃಷ್ಣಶರ್ಮರ ಅನುವಾದ ಸಾಹಿತ್ಯ

ಚಿ. ಗೋ. ರಮೇಶ್

ಭಾಷಾಂತರ ಒಂದು ಕಲೆ. ಅದು ಯಾಂತ್ರಿಕವಲ್ಲ. ಹಾಗಾಗಿಲ್ಲದೆ ಇರುವ ಆ ಕೆಲಸ ಸುಲಭವೂ ಅಲ್ಲ. ಯಾವುದೋ ಒಂದು ಭಾಷೆಯಲ್ಲಿ ಸಿದ್ಧಪಡಿಸುವುದನ್ನು ಇನ್ನೊಂದು ಭಾಷೆಗೆ ತರ್ಜುಮೆ ಮಾಡಿದರಾಯಿತು ಎನ್ನುವಂತಲ್ಲ. ಇಲ್ಲವೇ ಸ್ವಂತ ಮಾಡುವುದಾದರೂ ಇಲ್ಲಿ ಏನಿದೆ ಎಂದು ಹೇಳುವುದೂ ಅಲ್ಲ. ಅನುವಾದ ಮಾಡ ಹೊರಟವನಿಗೆ ಇರುವ ಆಶಯವೆಂದರೆ ತಾನು ಓದಿಕೊಂಡ ಕೃತಿಯು ಉತ್ತಮವೆಂದು ತಿಳಿದು ತನಗೆ ಅದು ಕೊಟ್ಟ ತಿಳುವಳಿಕೆ, ರಂಜನೆಗಳನ್ನು ಇತರ ತನ್ನವರಿಗೂ ತಿಳಿಸ ಬೇಕೆಂಬುದು. ಅದೂ ಇತರ ಭಾಷೆಯಲ್ಲಿದ್ದಾಗ. ಈ ಕೆಲಸ ಮಾಡಬೇಕಾದಲ್ಲಿ ಅನುವಾದಕನು ಮೂಲಕೃತಿಯ ಧ್ವನಿ, ಅರ್ಥ, ಭಾವ, ಶೈಲಿ, ಅಲಂಕಾರ ಈ ಎಲ್ಲ ವನ್ನೂ ಸಮಗ್ರವಾಗಿ ಗ್ರಹಿಸಿರಬೇಕಾಗುತ್ತದೆ. ಜತೆಗೆ ಅನುವಾದಿಸ ಹೊರಟ ವಿಷಯದ ಮೇಲೆ ಪ್ರಭುತ್ವ, ಅಭಿರುಚಿ ಹಾಗೂ ಭಾಷಾ ಪ್ರಭುತ್ವ ಇರಬೇಕು. ಈ ಸಿದ್ಧತೆ ಇದ್ದವನಿಗೆ ಮಾತ್ರ ಅದು ಸಾಧ್ಯ, ಪರಿಪೂರ್ಣ. ಅನುವಾದ ಒಂದು ರೀತಿ ಪರಕಾಯ ಪ್ರವೇಶ ಇದ್ದಹಾಗೆ. ಆಯಾ ಭಾಷೆಗಳ ಸ್ವರೂಪ, ಸ್ವಾರಸ್ಯ ಗೊತ್ತೇ ಇರಬೇಕು.

ಇಂತಹ ಕಲೆಯಲ್ಲಿ ಸಿದ್ಧಿಗಳಿಸಿರುವರು ಸಿದ್ಧಹಸ್ತ ಕೃಷ್ಣಶರ್ಮರು. ಅವರು ಅನು ವಾದಿಸದ, ಭಾಷಾಂತರಿಸದ ವಿಷಯವಿಲ್ಲ. ಆಯ್ದುಕೊಂಡ ಕೃತಿಗಳೂ ಅಲ್ಪವಲ್ಲ, ೧೨೦ಕ್ಕೂ ಹೆಚ್ಚು. ಅನುವಾದಿಸಿದ ಕೃತಿಗಳ ಮೂಲಭಾಷೆಗಳು ಇಂಗ್ಲಿಷ್, ಹಿಂದಿ, ತೆಲುಗು, ಸಂಸ್ಕೃತ, ಉರ್ದು ಮತ್ತು ಮರಾಠಿ. ಒಬ್ಬ ವ್ಯಕ್ತಿ ತನ್ನ ಪರಿಮಿತಿಯಲ್ಲಿ ಸ್ವಂತ ಕೃತಿಗಳ ರಚನೆಯ ಹಾಗೂ ಸಾಂಘಿಕ ಚಟುವಟಿಕೆಗಳ ಜತೆಗೆ ಇಷ್ಟು ಭಾಷೆ ಗಳಿಂದ ಸುಮಾರು ೧೨೦ಕ್ಕೂ ಮಿಕ್ಕಿ ಕೃತಿಗಳನ್ನು ಕನ್ನಡ ಭಾಷೆಯಲ್ಲಿ ಕೊಟ್ಟಿರುವುದು ಅತಿಶಯವೇ. ಈ ಕೃತಿಗಳು ಯಾವ ದೃಷ್ಟಿಯಿಂದ ನೋಡಿದಾಗ್ಯೂ ಸತ್ವ ಉಳ್ಳವು. ಕನ್ನಡ ಹೃದಯದಿಂದಲೇ ಮೊದಲಬಾರಿಗೆ ಮೂಡಿ ಬಂದವೋ ಎನ್ನುವಂತಹವು. ಮೂಲಕೃತಿಗಳಿಗೆ ಯಾವ ಅಪಚಾರವೂ ಆಗದಂತಹ ಹಾಗೂ ಕೃತಿಕಾರನ ರಸಜ್ಞತೆ, ಆಶಯ, ಶೈಲಿ, ಧೋರಣೆಗಳಿಗೆ ಭಂಗತರದಂತಹ ರಚನೆಗಳು. ಒಟ್ಟಾರೆ ಅವನ್ನು ರಸಾನುವಾದಗಳು ಎನ್ನಬಹುದು.

**ವೈವಿಧ್ಯತೆ :**

ಭಾಷಾಂತರಕಾರ ಸಾಮಾನ್ಯವಾಗಿ ಒಂದು ಭಾಷೆಯ ಮೇಲೆ ಪ್ರಭುತ್ವವಿದ್ದ ಮಾತ್ರಕ್ಕೆ ಯಾವ ವಿಷಯಕ್ಕಾಗಲೀ ಕೈಹಾಕುವುದು ತೊಡಕಾಗುವುದು. ಆರಿಸಿ ಕೊಂಡ ವಿಷಯದ ಬಗೆಗೆ ಏನಾದರೂ ತಿಳಿದಿದ್ದಾಗ ಮಾತ್ರ ಅವನಿಗೆ ಅರ್ಥಜ್ಞಾನ ಲಭಿಸಿರುವುದು. ಕೃಷ್ಣಶರ್ಮರು ಇಂತಹ ಪಾಂಡಿತ್ಯ ಸಂಪಾದಿಸಿಕೊಂಡವರು. ಆಧ್ಯಾತ್ಮ, ರಾಜಕೀಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಜೀವನಚರಿತ್ರೆ, ಸಾಹಿತ್ಯ, ವಿಜ್ಞಾನ, ಇತಿಹಾಸ, ಹೀಗೆ ಎಲ್ಲ ವಿಷಯಗಳಲ್ಲೂ ಅವರ ಹದಗೊಂಡ ಶಕ್ತಿಯುತ ಲೇಖನಿಯ ಉಪಯೋಗವಾಗಿದೆ. ಶರ್ಮರು ಗಾಂಧೀ, ವಿನೋಬಾ, ಸರ್ವೋದಯ ಸಾಹಿತ್ಯವನ್ನು ಕನ್ನಡಕ್ಕೆ ಕೊಟ್ಟಿದ್ದಾರೆ. ಮೋತಿಲಾಲ್ ನೆಹರೂ, ರಾಜೇಂದ್ರ ಪ್ರಸಾದ್ ಮೊದಲಾದ ಮಹಾನ್ ವ್ಯಕ್ತಿಗಳನ್ನು ಅನುವಾದದ ಮೂಲಕ ಪರಿಚಯ ಮಾಡಿಕೊಟ್ಟಿದ್ದಾರೆ. ಉಪನಿಷತ್ ವಿಷಯಗಳು, ಉರ್ದು ಕಥೆಗಳು, ರಾಮಾಯಣ, ಕೃಷ್ಣನ ಅವತಾರ ಮಹಿಮೆಗಳನ್ನು ಅನುವಾದಿಸಿದ್ದಾರೆ. ಹೀಗೆ ಅವರ ಅನುವಾದ ವೈವಿಧ್ಯಮಯ.

**ಭಾಷಾಂತರದ ಉದಾಹರಣೆಗಳು :**

ಗಿಲ್ಬರ್ಟ್ ಮರ‍್ರೆ ಎಂಬಾತ ಹೇಳಿದಂತೆ ಭಾಷಾಂತರವನ್ನು ಅಕ್ಷರಶಃ ಮಾಡು ವುದಕ್ಕಿಂತಲೂ ಭಾವದ ಸತ್ವವನ್ನೆ ಹಿಡಿದು ಮೂಡಿಸುವುದು ಮುಖ್ಯ. ಒಂದು ರೀತಿ ಯಲ್ಲಿ ಪ್ರತಿಬಿಂಬ (Image) ಎನ್ನುವಂತೆ. ಕೃಷ್ಣಶರ್ಮರದಾದರೂ ಅಕ್ಷರಶಃ ಅನುವಾದವಲ್ಲ. ಅದು ಭಾವಾನುವಾದ; ಅವರಿಗೆ ಅದು ದೈವದತ್ತ. ಅವರ ರಚನೆ ಗಳು ರಸಿಕರ ಮನಸ್ಸಿನಲ್ಲಿ ನಲಿದಾಡುವಂತಹುದು. ಅದು ಹೇಗೆ, ಹೇಗಿರುತ್ತದೆ ಎಂಬುದಕ್ಕೆ ಇಲ್ಲಿ ಕೆಳಗೆ ಕೊಡಲಾಗಿರುವ ಹಲವು ವಿಧದ ಉದಾಹರಣೆಗಳೇ ಸಾಕ್ಷಿ:

ಕನ್ನಡಕ್ಕೆ ಗಾಂಧೀ ಸಾಹಿತ್ಯವನ್ನೊದಗಿಸಿಕೊಟ್ಟವರಲ್ಲಿ ಶರ್ಮರ ಹೆಸರು ದೊಡ್ಡದು. ಅವರ ಪರ್ಣಕುಟಿ, ವರ್ಧಾಯಾತ್ರೆಗಳನ್ನು ಓದದವರಾರು? ಸ್ವಕೃತಿ ಗಳ ಜತೆಗೆ ಗಾಂಧೀಜೀಯವರ ಹಾಗೂ ಅವರಿಗೆ ಸಂಬಂಧಿಸಿದ ಸುಮಾರು ೨೦ ಕೃತಿ ಗಳನ್ನು ಶರ್ಮರು ಅನುವಾದಿಸಿದ್ದಾರೆ. 'ಅನಾಸಕ್ತಿಯೋಗ' ಗಾಂಧೀಜಿಯವರು ಭಗವದ್ಗೀತೆಗೆ ರಚಿಸಿದ ವ್ಯಾಖ್ಯಾನ--ಟೀಕೆಯ ಅನುವಾದವಾದರೆ, 'ಆರೋಗ್ಯ ರಹಸ್ಯ' ಗಾಂಧೀಜಿಯವರ Key to Health ಪುಸ್ತಕದ ಅನುವಾದ. ಗಾಂಧೀಜಿಯವರ Hind Swaraj ಕೃತಿಯಲ್ಲಿ ಒಂದು ಕಡೆ ಅವರ ಅನುವಾದ ಶೈಲಿ ಹೇಗಿದೆ ನೋಡಿ. ಈ ಗ್ರಂಥ ಸಂವಾದ ರೂಪದಲ್ಲಿದೆ.

[ಮೂಲ: Hind swaraj by M. K. Gandhi
ಕನ್ನಡದಲ್ಲಿ : ಹಿಂದ್ ಸ್ವರಾಜ್ಯ]

"ಸ್ವಲ್ಪ ತಾಳ್ಮೆಯಿರಲಿ. ನಾಗರಿಕತೆಯ ಕೆಡುಕಿನ ನಿಜ ಸ್ವರೂಪ ತಿಳಿಯಲು ಸ್ವಲ್ಪ ಕಷ್ಟವೇ ಆದೀತು. ಒಬ್ಬ ಕ್ಷಯರೋಗಿ ಸಾಯುತ್ತಿರುವಾಗಲೂ ಜೀವದಾಸೆ ತೋರಿಸುತ್ತಾನೆ ವೈದ್ಯ. ಕ್ಷಯರೋಗದಲ್ಲಿ ಮೇಲೆ ನೋಡಲು ಏನೂ ದುಷ್ಪರಿಣಾಮ ಕಾಣುವುದೇ ಇಲ್ಲ. ರೋಗಿಯ ಮುಖದ ಮೇಲೆ ಒಂದು ಕಳೆ, ಒಂದು ಬಣ್ಣ ಕಾಣಿಸಿಕೊಂಡು ಗುಣವಾಗುತ್ತಿದೆಯೆಂದು ಅನಿಸುವ ಹಾಗೆಯೂ ಆಗುತ್ತದೆ. ಕಡೆಗೆ ಪ್ರಾಣ ನಾಶವೇ. ನಾಗರೀಕತೆ ಕಣ್ಣಿಗೆ ಕಾಣದ ಕ್ಷಯರೋಗವಿದ್ದಂತೆ. ಬಹಳ ಜೋಕೆಯಾಗಿರಬೇಕು."

ಈ ಅನುವಾದದಲ್ಲಿ ಮೂಲದಷ್ಟೆ ಸೊಗಸಿದೆ. ಗಾಂಧೀಜಿಯವರಿಗೆ ಪ್ರಾರ್ಥನೆ ಬಿಟ್ಟಿರಲಾಗುತ್ತಿರಲಿಲ್ಲ. ಅದರಲ್ಲೂ ರಾಮನಾಮದಲ್ಲಿ ಅವರದು ದೃಢಭಕ್ತಿ. ಇದರ ಅನುಭವ ಮನುಬೆನ್ ಗಾಂಧಿಯವರಿಗೆ ಆದಾಗ ಅವರು ಹೀಗೆ ವರ್ಣಿಸುತ್ತಾರೆ.
[ಮೂಲ : Bapu My Mother by Manu Gandhi.
ಕನ್ನಡದಲ್ಲಿ ಮಾತಾಗಾಂಧಿ]

"ರಾಮನಾಮದಲ್ಲಿ ಅಚಂಚಲ ದೃಢಭಕ್ತಿ ಕಡೆಯ ಉಸಿರಿನವರೆಗೂ ಅವರಲ್ಲಿ ಇತ್ತು. ಒಂದು ವರ್ಷದ ತರುವಾಯ ರಾಮಾ, ರಾ .. ಮಾ ಎನ್ನುತ್ತಾ ಆ ಮಹಾ ಜೀವ ನಮ್ಮನ್ನಗಲಿ ಹೋಗುವ ಹೃದಯವಿದಾರಕ ಅನುಭವ ನಮಗಾದೀತು ಎಂದು ಆಗ ನನಗೆ ಅನಿಸಲಿಲ್ಲ. ದೇವರ ಲೀಲೆ ಅದ್ಭುತ, ಗುಹ್ಯ, ಗೂಢ !"

Mysterious ಎನ್ನುವ ಪದಕ್ಕೆ ಇಲ್ಲಿ ಅದ್ಭುತ, ಗುಹ್ಯ, ಗೂಢ ಎಂಬ ಅರ್ಥಗಳನ್ನು ಬಳಸಿರುವ ಔಚಿತ್ಯವನ್ನು ನಾವು ಇಲ್ಲಿ ಕಾಣಬಹುದಾಗಿದೆ. ಮನೂ ಗಾಂಧಿಯವರು ಗಾಂಧೀಜಿಯವರು ತಮಗೆ ತಾಯಿ ಸಮಾನರಾಗಿದ್ದರು ಎನ್ನುತ್ತಾರೆ. ಅಲ್ಲಿನ ಅಂತಃಕರಣ ಅಂತಹುದು. ತಾಯಿ ಹೃದಯದ ಹಿರಿಮೆ ಸೂಸಲು ಮನೂ ಗಾಂಧಿಯವರು ಇದೇ Bapu, my Mother ಪುಸ್ತಕದಲ್ಲಿ ಒಂದು ಗುಜರಾತಿ ಕವನದ ಇಂಗ್ಲೀಷ್ ರೂಪವನ್ನು ಕೊಟ್ಟಿದ್ದಾರೆ. ಅದರ ಅನುವಾದವಾದರೂ ಎಷ್ಟು ಸರಳ, ಅರ್ಥಪೂರ್ಣ. ಮೂಲದ ಹಿರಿಮೆಗೆ ಅನುವಾದದ ಪೋಷಣೆ ಆಗಿದೆ.

ಗಂಗಾಮಾತೆ ಪರಮಪೂತೆ
ಗಂಗೆಗುಂಟು ಏರು ಇಳಿತ
ಒಲವಿಗುಂಟು ಸದಾ ಮಮತೆ
ಇಲ್ಲ ಸಾಟಿ ತಾಯ ಮಮತೆ.

ಮನೂ ಗಾಂಧಿಯವರಿಗೆ ಗಾಂಧಿ ತಾಯಿ ಹೇಗಾದರು? ಗಾಂಧಿಯವರೇ ಅದನ್ನು ಹೇಳಿದ್ದಾರೆ. ಅಲ್ಲಿನ ಅನುವಾದದ ಸೊಬಗನ್ನು ಸೂಚಿಸಲು ಅದೊಂದು ಉದಾಹರಣೆಯನ್ನು ಇಲ್ಲಿ ಬಳಸಲಾಗಿದೆ.

"ನಾನು ನಿನ್ನ ತಾಯಿ ಆಗಿಲ್ಲವೆ ? ಅನೇಕರಿಗೆ ನಾನು ತಂದೆಯಾಗಿರುವೆ. ಆದರೆ ನಿನ್ನೊಬ್ಬಳಿಗೆ ಮಾತ್ರವೇ ತಾಯಿ ನಾನು–ಗಾಂಧೀ."

ಗಾಂಧಿಯವರ Key to Health ಕನ್ನಡದಲ್ಲಿ 'ಆರೋಗ್ಯ ರಹಸ್ಯ' ಆಯಿತು. ಪ್ರಕೃತಿ ಚಿಕಿತ್ಸೆಯಲ್ಲಿ ನಂಬಿಕೆ ಇಟ್ಟಿದ್ದ ಮಹಾತ್ಮಾ ಗಾಂಧೀಜಿಯವರ ಪ್ರಕೃತಿ ಚಿಕಿತ್ಸೆ ಕುರಿತ ಬರಹದ ಕನ್ನಡ ಅನುವಾದ ಇಲ್ಲಿ ಸ್ಪಷ್ಟ, ನೇರ. ಆರೋಗ್ಯ ಪ್ರಿಯ ರಿಗೆ ಉತ್ತಮ ಸಾಹಿತ್ಯ. ಅಂತಹ ಸಾಹಿತ್ಯ ಕನ್ನಡದಲ್ಲಿಲ್ಲವಾಗಿದ್ದಾಗ ಶರ್ಮರ ಅನುವಾದ ಆ ಕೊರತೆಯನ್ನು ದೂರಮಾಡಿತು.

ಮಹಾತ್ಮ ಗಾಂಧೀ ಅವರಿಗೆ ಸತ್ಯ, ಅಹಿಂಸೆಗಳೆರಡೂ ನಾಣ್ಯದ ಎರಡು ಮುಖ ಗಳಿದ್ದಂತೆ. ಆವರ ಅನುಯಾಯಿಗಳಾದರೂ ಅಹಿಂಸೆಯ ಅರ್ಥವನ್ನು ತಿಳಿದವರಾಗಿ ದ್ದರು. ಅವರಲ್ಲಿ ಕಿಶೋರ್ ಲಾಲ್ ಮಶ್ರೂವಾಲಾ ಅವರು ಮುಖ್ಯರು. ಅವರ Practical Non-violence ಎಂಬ ಕಿರುಗ್ರಂಥವು 'ವ್ಯಾವಹಾರಿಕ ಅಹಿಂಸೆ' ಎಂಬ ಶೀರ್ಷಿಕೆಯಲ್ಲಿ ಅನುವಾದಿಸಲ್ಪಟ್ಟಿದೆ. ಅನುವಾದ ಶರ್ಮರದು. ಇಲ್ಲಿನ ತರ್ಜುಮೆ ಬಹು ಕ್ಲಿಷ್ಟ ವಿಷಯವನ್ನು ಸುಲಭವಾಗಿ ಬಿಡಿಸಿ ಹೇಳುವಂತಹದು. ಅಹಿಂಸೆಯ ವ್ಯಾಖ್ಯೆಯನ್ನು ಎಷ್ಟು ಸರಳವಾಗಿ ಇಲ್ಲಿ ಹೇಳುತ್ತಾರೆ.

"..... ಅಂದರೆ ಅಶುಭವಲ್ಲದೆ, ಕಿಂಚಿತ್ ಶುಭ ಮಿಶ್ರವಾದ ನ್ಯಾಯಪೂರ್ಣ ಸ್ವಾರ್ಥವು ಅಹಿಂಸೆಯ ವ್ಯಾವಹಾರಿಕ ಲಕ್ಷಣ."

ಇದೇ ಗ್ರಂಥದಲ್ಲಿ ಒಂದು ಸಂಸ್ಥೆಯ, ಸಂಘದ ವ್ಯವಸ್ಥಾಪಕರ ಲಕ್ಷಣಗಳನ್ನು ಕುರಿತ ಕೆಲವು ನುಡಿಗಳು ಹೀಗಿವೆ.

"ಎಲ್ಲೂ ನಾವು ಹೆಚ್ಚೆಂಬ ಹೆಮ್ಮೆ, ತಾವು ಕೀಳೆಂಬ ಕಿರಿಮೆ ಇರಬಾರದು. ಯಾರ ಪುಂಡತನಕ್ಕೂ ಬಗ್ಗಬಾರದು, ಹಲ್ಲು ಕಿರಿಯಬಾರದು, ಯಾರಿಗೂ ಅವಮಾನ ಮಾಡಬಾರದು, ಅಪಮಾನ ಸಹಿಸಬಾರದು ; ಕಾಪಟ್ಯ, ಮೋಸ, ಮುಖಸ್ತುತಿ ಕೂಡದು ; ಇದು ಯಾವುದರಲ್ಲೂ ಬಲಾತ್ಕಾರ ಕೂಡದು. ಕವಾಯಿತಿನಲ್ಲೇ ಅಲ್ಲ, ಅಧಿಕಾರಿಗಳೊಡನೆ ವ್ಯವಹಾರದಲ್ಲೂ ಸೆಟ್ಟಿಗೆ ನಿಲ್ಲುವಂತೆ, ದಿಟ್ಟತನ ತೋರುವಂತೆ, ಜನಕ್ಕೆ ಕಲಿಸಬೇಕು."

ಆಚಾರ್ಯ ವಿನೋಬಾ ಅವರ 'ಗೀತಾ ಪ್ರವಚನ' ಎಂಬ ಮರಾಠೀ ಗ್ರಂಥದ ಅನು ವಾದ ಮೊಟ್ಟ ಮೊದಲಿಗೆ ಆದದ್ದು ಕನ್ನಡದಲ್ಲಿಯೇ. ಅದನ್ನು ಕೃಷ್ಣ ಶರ್ಮರು ಬಸವ ರಾಜ ಕಟ್ಟೀಮನಿಯವರ ಸಹಕಾರದಿಂದ ಅನುವಾದಿಸಿಕೊಟ್ಟಿದ್ದಾರೆ. ಅಧ್ಯಾತ್ಮ ಪ್ರಧಾನವಾದ ಈ ವ್ಯಾಖ್ಯಾನರೂಪದ ಗ್ರಂಥದಲ್ಲಿ ಶರ್ಮರು ವಿನೋಬಾ ಅವರ ಸರಳ ವಾಕ್ಯಗಳಂತೆಯೇ ಗಹನವಾದ ವಿಷಯಗಳನ್ನು ಕನ್ನಡದಲ್ಲೂ ಅಷ್ಟೇ ಸಮಂಜಸವಾಗಿ ಹೇಳಿದ್ದಾರೆ. 'ಸರ್ವೋದಯ ಯಾತ್ರೆ', 'ಭೂದಾನ ಯಾತ್ರೆ', 'ರಾಮನಾಮ', 'ಆಶ್ರಮ ಜೀವನ', 'ಬೆಂಗಳೂರಿನಲ್ಲಿ ವಿನೋಬಾ' ಮುಂತಾದ ಹಲವಾರು ಚಿಕ್ಕ ಚಿಕ್ಕ ಹೊತ್ತಗೆಗಳಲ್ಲಿ ಶರ್ಮರು ಅನುವಾದ ಕಾರ್ಯವನ್ನು ಬಹು ಯಶಸ್ವಿಯಾಗಿ ಮಾಡಿದ್ದಾರೆ.

ಜೆ. ಸಿ. ಕುಮಾರಪ್ಪ ಅವರ Economy of Permonence ಅನ್ನು "ಶಾಶ್ವತ ಅರ್ಥಶಾಸ್ತ್ರ" ಎಂದು ಕರೆದು ಅನುವಾದಿಸಿದ್ದಾರೆ. ಇದೊಂದು ವಿಚಾರ ಪೂರ್ಣ ಗ್ರಂಥ. ಅರ್ಥಶಾಸ್ತ್ರ ಹೇಳುವುದರೊಂದಿಗೆ ವ್ಯಕ್ತಿಯ ಜೀವನ ಸೌಕರ್ಯ ಗಳ ಬಗ್ಗೆ ಗಮನ ನೀಡಲಾಗಿದೆ. ಅಲ್ಲಿನ ಒಂದೆರಡು ಉದಾಹರಣೆಗಳನ್ನು ನೋಡೋಣ.

"ವ್ಯಕ್ತಿಯ ಜೀವನವನ್ನಷ್ಟೆ ನೋಡಿದರೆ ಅದು ತತ್ಕಾಲದ್ದು. ಅದಕ್ಕೆ ಅದೇ ಗುರಿ. ಆದರೆ ಒಬ್ಬನ ಬದುಕು ಹಲವರ ಬಾಳಿನೊಳಕ್ಕೆ ಚಾಚಿಕೊಂಡಿರು ತ್ತದೆ. ಮನುಷ್ಯ ತನ್ನ ಮನಸ್ಸಿಗೆ ಬಂದಂತೆ ನಡೆಯಲಾರ. ಇತರರ ಯೋಗ ಕ್ಷೇಮದ ದೃಷ್ಟಿಯಿಂದ ಅವನ ನಡೆನುಡಿ ಸಂಯಮಿತವಾಗಬೇಕು. ಆದುದರಿಂದ ಪ್ರತಿಯೊಬ್ಬ ವ್ಯಕ್ತಿಯ ನಡತೆ, ಅವನ ಅಭ್ಯಾಸ, ಅವನ ಆರೋಗ್ಯ, ಅವನ ವಸತಿ, ಎಲ್ಲವೂ ಸುತ್ತಲಿನ ಸನ್ನಿವೇಶಕ್ಕೆ ಸಂಬಂಧಿಸಿವೆ."

ಮತ್ತೊಂದು ಉದಾಹರಣೆ, ಒಂದು ಬ್ಯಾಂಕಿನ ಉದ್ದೇಶ ಕುರಿತದ್ದು. ಇಲ್ಲಿಯು ಅನುವಾದದ ವಿಶೇಷ, ತಾಂತ್ರಿಕ ಪದಗಳ ಜೋಡಣೆಯ ಚಂದ.

"ವ್ಯಾಪಾರ ಉದ್ದೇಶಗಳ ರಥದ ಚಕ್ರ ಸರಾಗವಾಗಿ ತಿರುಗುವಂತೆ, ಸುಲಭವಾಗಿ ಕಿರ್‍ಕ್ಕಾಟವಿಲ್ಲದಂತೆ. ಮುಂದೆ ಉರುಳುವಂತೆ ಕೀಲೆಣ್ಣೆ ಸವರುವುದೇ ಬ್ಯಾಂಕುಗಳ ಕೆಲಸ. ಸಹಕಾರ ಸಂಸ್ಥೆಯಾದರೆ ಈ ಕೆಲಸವನ್ನು ಮಾಡುವುದಾದರೆ ಜೊತೆಗೆ ಇಡೀ ಆರ್ಥಿಕ ರಚನೆಯಲ್ಲಿನ ಬೇರೆ ಬೇರೆ ಅಂಗಗಳೆಲ್ಲಾ ಪರಸ್ಪರ ಸಹಕರಿಸುವಂತೆಯೂ ಮಾಡ ಬೇಕು."

ಇದೇ ರೀತಿಯಲ್ಲಿ ಶರ್ಮರು ಕೃಪಲಾನಿ ಅವರ Basic Education–The Latest fad ಕೃತಿಯನ್ನು "ಮೂಲ ಶಿಕ್ಷಣ–ಹೊಚ್ಚಹೊಸಗೀಳು" ಎಂಬು ದಾಗಿಯೂ, ಶ್ರೀಮನ್ನಾರಾಯಣ ಅಗರವಾಲಾ ವಿರಚಿತ ಪುಸ್ತಕವನ್ನು "ಶಿಕ್ಷಣ ಯಾವ ನುಡಿಯಲ್ಲಿ" ಎಂಬುದಾಗಿಯೂ ಪಟ್ಟಾಭಿ ಸೀತಾರಾಮಯ್ಯನವರ Hindu Home Rediscovered" ಅನ್ನು "ಹಿಂದೂ ಕುಟುಂಬ ಪುನರ್ದರ್ಶನ" ಎಂಬುದಾಗಿಯೂ ಅನುವಾದ ಮಾಡಿದ್ದಾರೆ. ಪಟ್ಟಾಭಿಯವರ ಕೃತಿಯಲ್ಲಿ ಮದುವೆ, ಮಗ, ಮಗಳು, ಕುಟುಂಬ, ತಂದೆ, ತಾಯಿ, ಸೊಸೆ ಈ ಎಲ್ಲ ವಿಷಯ ಗಳೂ ಬರುತ್ತವೆ. ಮದುವೆ ಒಂದು ಗಂಭೀರ ಸಮಸ್ಯೆ. ಸಮಾಜದ ಮುಖ್ಯ ಪ್ರಶ್ನೆ. ಹಿಂದೂ ಸಮಾಜದಲ್ಲಿ ಅದಕ್ಕೆ ಯಾವ ಬೆಲೆ ಎಂಬುದನ್ನು ಮೂಲ, ಅನುವಾದ ಗಳಲ್ಲಿ ಗಮನಿಸೋಣ. ಮತ್ತೆ ಶರ್ಮರ ಅನುವಾದ ಶೈಲಿ ಇಲ್ಲಿ ಹಿಡಿ ತಪ್ಪುವುದಿಲ್ಲ. ಇದರಿಂದ ವಿಷಯದ ಬಗ್ಗೆ ಅವರ ಆಸಕ್ತಿ, ವಿಚಾರ ತಿಳಿಸುವ ಹಂಬಲ ನಮಗೆ ಗೊತ್ತಾಗುವುದು.

"ಹಿಂದೂಸ್ಥಾನದಲ್ಲಿ, ಹಿಂದೂಗಳಿಗಂತೂ, ಮದುವೆ ಅನಿವಾರ್ಯ. ಮದುವೆಯಿಲ್ಲದ ಗಂಡುಗೋವಿಗೆ ಅಪಕೀರ್ತಿ ತಪ್ಪಿದ್ದಲ್ಲ. ನಪುಂಸಕ, ಗತಿಯಿಲ್ಲದವ, ಹುಚ್ಚ, ಇತ್ಯಾದಿ. ಉತ್ತಮ ಸಂಸ್ಕಾರ, ನಿಸ್ಸಂಗತ್ವ, ತ್ಯಾಗಗಳಿಂದ ಶಂಕರಾಚಾರ್ಯರಂಥ ಒಬ್ಬಿಬ್ಬರಿಗೆ

ಮಾತ್ರ ಮದುವೆಯಾಗದೆಯೆ ಸನ್ಯಾಸ ತೆಗೆದುಕೊಳ್ಳುವುದು ಸಾಧ್ಯ. ಸಾಧಾರಣ ಜನರಿಗೆ ಮದುವೆ ಅನಿವಾರ್ಯ ಎನ್ನುವುದು ಇದರಿಂದಲೇ ಸ್ಪಷ್ಟವಾಗುತ್ತಿದೆ. ಗಂಡಸಿಗೂ ಅಷ್ಟೆ ಹೆಂಗಸಿಗೂ ಅಷ್ಟೆ. ಕುರುಡಿಯಿರಲಿ, ಮೂಕಿಯಿರಲಿ, ಕಿವುಡಿಯಿರಲಿ, ಮದುವೆಯಾಗದ ಹುಡುಗಿಯೇ ಹಿಂದೂ ಸಮಾಜದಲ್ಲಿಲ್ಲ. ಗಂಡನ ಮನೆಗೆ ಹೋಗದೆಯೇ ಇರಬಹುದು. ಆದರೆ ಮದುವೆ ಮಾತ್ರ ತಪ್ಪಿದ್ದಲ್ಲ. ಹುಡುಗಿ ಬೆಳೆದುನಿಂತು ಮದುವೆಯಾಗದೆ ಇದ್ದರೆ ವಂಶಕ್ಕೆ ಕಲಂಕ, ನರಕಕ್ಕೆ ದಾರಿ."

ಹೀಗೆ ಶರ್ಮರು ವಿಷಯ ವೈವಿಧ್ಯ ಉಳ್ಳ ಅನೇಕ ಗ್ರಂಥಗಳನ್ನು ಅನುವಾದ ಮಾಡಿದ್ದಾರೆ. ಎಫ್. ಜ. ಪಿಯರ್ಸ್ ಅವರ Foot Prints on Sands of Time ಅನ್ನು 'ಗತಕಾಲದ ಗುರುತುಗಳು' ಎಂಬುದಾಗಿ ಅನುವಾದಿಸಿಕೊಟ್ಟಿದ್ದಾರೆ. ಇದು ಹಲವು ಕಾಲ ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವಾಗಿತ್ತು. ಅಂತೆಯೇ ಡಡ್ಲಿ ಸ್ಟ್ಯಾಂಪ್ ಅವರ ಭೂಗೋಳ. ಕನ್ನಡ ಅನುವಾದಗಳು ಇಲ್ಲಿ ರಮ್ಯ. ಮಿನು ಮಸಾನಿ ಅವರ Our India ಅನ್ನು 'ನಮ್ಮ ಹಿಂದೂಸ್ಥಾನ' ಎಂದು ಅನುವಾದ ಮಾಡಿದ್ದಾರೆ. ಇದೇ ಅಲ್ಲದೆ ಮೆಸೊಪೊಟೇಮಿಯೊ, ಈಜಿಪ್ಟ್ ದೇಶಗಳ ಪ್ರಾಚೀನ ಸಾಹಿತ್ಯ ಚರಿತ್ರೆಯ ಪರಿಚಯ ಕೂಡ ಮಾಡಿದ್ದಾರೆ.

ನಮ್ಮ ಕೇಂದ್ರ ಪಾರ್ಲಿಮೆಂಟ್ ಬಗ್ಗೆ ಅನಂತಶಯನಂ ಅಯ್ಯಂಗಾರ್ಯರ Our Parliment ಗ್ರಂಥವನ್ನು ಕನ್ನಡಕ್ಕೆ ತಂದಿದ್ದಾರೆ. ಪ್ರವಾಸದ ಕಥನದಂತಿರುವ ಈ ಪುಸ್ತಕ ನಮ್ಮ ಮಕ್ಕಳಿಗೆ ತುಂಬ ಹಿಡಿಸುವಂಥದು.

**ಆತ್ಮಕಥೆಗಳು, ಪುರಾಣಕಥೆಗಳು, ಜೀವನಚರಿತ್ರೆಗಳು :**

ಪರಿಪೂರ್ಣ ಜೀವನ ನಡೆಸುವ ಮಹಾನ್ ವ್ಯಕ್ತಿಗಳ ಭವ್ಯಜೀವನ ಉಳಿದವರಿಗೆ ಆದರ್ಶವಿದ್ದಂತೆ. ಭರತಖಂಡದಲ್ಲಿ ಇಂತಹ ವ್ಯಕ್ತಿಗಳು ಕಡಿಮೆಯೇನಿಲ್ಲ. ದೊರೆಗಳು, ಕವಿಗಳು, ನಾಟಕಕಾರರು, ರಾಷ್ಟ್ರಪತಿಗಳು ಹೀಗೆ ಅನೇಕರು. ಒಬ್ಬರ ಜೀವನ ಚಿತ್ರವನ್ನು ಮತ್ತೊಬ್ಬ ಅವರ ಪ್ರೇಮಿಗಳೇ ಬರೆಯುವುದಾದರೆ ಅದೂ ಭಾಗ್ಯವೇ. ಅಷ್ಟೇ ಅಲ್ಲದೆ ಆ ಮಹಾನ್ ವ್ಯಕ್ತಿಯೇ ತಮ್ಮ ಕಥೆಯನ್ನು ಸ್ವತಃ ತಾವೇ ಬರೆದಿತ್ತರೆ ಅದೂ ಭಾಗ್ಯವೇ. ಹೀಗೆ ಬರೆಯುವವರು ತಮಗೆ ಹತ್ತಿರವಾದ ಭಾಷೆಯಲ್ಲಿ ಬರೆಯಬಹುದಾದರೆ ಅದು ಇತರರಿಗೆ ತಿಳಿಯಬೇಕಲ್ಲವೇ ? ಆ ಕೆಲಸವನ್ನು ಅನುವಾದಕರು ಮಾಡಬೇಕು. ಎಷ್ಟು ಅನುವಾದಕರಿಗೆ ಈ ಕೆಲಸ ಸಾಧ್ಯ ? ಮಹಾನ್ ವ್ಯಕ್ತಿಯ ಪ್ರತಿ ನಡವಳಿಕೆಗೂ ಅನುವಾದಕನಿಗೂ ಅಲ್ಪಸ್ವಲ್ಪ ಸಾಮರಸ್ಯವಿರಬಹುದಾದರೆ ಅದು ಸಾಧ್ಯವೇ. ಹಾಗೆ ಒಂದು ಪರಿಮಿತಿಯ ಸಂಬಂಧ ಬೆಳೆಸಿಕೊಂಡವರು ಶ್ರೀ ಕೃಷ್ಣ ಶರ್ಮರು. ಅವರ ರಾಜೇಂದ್ರಪ್ರಸಾದರ ಆತ್ಮಕಥೆ, ಮಹಾತ್ಮಾ ಗಾಂಧೀಯವರ ಆತ್ಮಕಥೆಗಳ ಅನುವಾದಗಳೇ ಇದಕ್ಕೆ ಸಾಕ್ಷಿ. ಶರ್ಮರು ಡಾ|| ರಾಜೇಂದ್ರ ಪ್ರಸಾದರು ಹಿಂದಿ ಭಾಷೆಯಲ್ಲಿ ಬರೆದ ಆತ್ಮಕಥೆಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ರಾಜೇಂದ್ರಪ್ರಸಾದರು ನಮ್ಮ ದೇಶದ ಪ್ರಥಮ ರಾಷ್ಟ್ರಪತಿಗಳು. ಸಾರ್ಥಕ ಜೀವನ ನಡೆಸಿದ ರಾಷ್ಟ್ರಭಕ್ತರು. ಅವರು ರಚಿಸಿರುವ ಆತ್ಮಕಥೆಯಲ್ಲಿ ಒಂದುಕಡೆ ತಮ್ಮ ಹಳ್ಳಿಯ ಬಾಳಿನ ಬಗೆಗೆ ತಿಳಿಸುತ್ತಾರೆ. ಅಲ್ಲಿ ಅವರ ವಿಶಾಲ ಮನೋಭಾವ ವನ್ನು ನಾವು ಕಾಣಬಹುದಾಗಿದೆ. ಜತೆಗೆ ಅನುವಾದದಿಂದ ಶರ್ಮರು ಹಿಂದಿಯಿಂದ ಕನ್ನಡಕ್ಕೆ ಹೇಗೆ ತರಬಲ್ಲರು ಎಂಬುದನ್ನು ಗಮನಿಸಬಹುದಾಗಿದೆ.

"ಕಥೆ, ಪುರಾಣ, ರಾಮಲೀಲೆ, ರಾಮಾಯಣ ಮುಂತಾದ ವ್ರತ ಹಬ್ಬಗಳಿಂದ ಜೂರಿನಲ್ಲಿ ಧಾರ್ಮಿಕ ಜೀವನ ಯಾವಾಗಲೂ ಜಾಗ್ರತವಾಗಿರುತ್ತಿತ್ತು. ಇವಲ್ಲದೆ, ಮೊಹರಂನಲ್ಲಿ ತಾಜಿಯಾ ಇಡುವ ರೂಢಿಯೂ ಇತ್ತು. ಇದರಲ್ಲಿ ಹಿಂದೂ ಮುಸಲ್ಮಾನ ರಿಬ್ಬರೂ ಭಾಗವಹಿಸುತ್ತಿದ್ದರು. ಜೀರಾದೇಯಿ ಜಮಾಪುರಗಳಲ್ಲಿ ಹಿಂದೂಗಳಲ್ಲಿಯ ಕೆಲವರು ಭಾಗ್ಯವಂತರು. ಆದರಿಂದ ಬಡ ಮುಸಲ್ಮಾನರ ತಾಜಿಯಾಕ್ಕಿಂತ ಇವರ ತಾಜಿಯಾ ದೊಡ್ಡದು, ಹೆಚ್ಚು ವೈಭವಪೂರ್ಣವಾಗಿಯೂ ಆಗಿರುತ್ತಿತ್ತು. ಮೊಹರಂ ನಲ್ಲಿ ಬಹುಶಃ ಪ್ರತಿದಿನವೂ ದೊಣ್ಣೆ, ಲಾಠಿ, ಅಲಗು ಮುಂತಾದ ಆಟದ ವರಸೆ ನಡೆಯುತ್ತಿದ್ದವು. ನೀರು ಮುಳುಗುವ ದಿನ ಬಹಳ ನೆರವಿ. ಊರೂರಿನ ತಾಜಿಯಾ ವನ್ನು ಕರ್ಬಲಾದ ವರೆಗೆ ಸಾಗಿಸಬೇಕು. ದಾರಿಯುದ್ದಕ್ಕೂ ಯಾ ಅಲೀ, ಯಾ ಇಮಾಂ ಘೋಷಣೆಯೇ. ದೊಣ್ಣೆ ವರಸೆ ಬೇರೆ. ಬಹಳ ಉತ್ಸಾಹ ಜನಕ್ಕೆ. ಹಿಂದೂ ಮುಸಲ್ಮಾನ್ ಭೇದ ಯಾವುದೂ ಇಲ್ಲ. ಮಿಠಾಯಿ ತಂಬಿಟ್ಟು ಹಂಚುತ್ತಿದ್ದರು. ಎಲ್ಲರೂ ಅದನ್ನು ತೆಗೆದುಕೊಂಡು ತಿನ್ನುತ್ತಿದ್ದರು. ಆದರೆ ಹಿಂದೂಗಳು ಮುಸಲ್ಮಾನ ರನ್ನು ಮುಟ್ಟಿಕೊಂಡು ನೀರು ಪಾನಕ ಕುಡಿಯುತ್ತಿರಲಿಲ್ಲ. ಇದನ್ನು ಮುಸಲ್ಮಾನರು ತಪ್ಪಾಗಿ ತಿಳಿಯುತ್ತಿರಲಿಲ್ಲ. ಇದು ಹಿಂದೂಗಳ ಧರ್ಮವೆಂದು ತಾವೇ ಸರಿದು ನಿಲ್ಲುತ್ತಿದ್ದರು."

ಕೃಷ್ಣಶರ್ಮರು ಮಹಾತ್ಮಾ ಗಾಂಧೀಜಿಯವರ ಆತ್ಮಕಥೆಯನ್ನು ಅನುವಾದಿಸಿ ದ್ದಾರೆ. ಇದರಲ್ಲಿ "ಸಂಕ್ಷಿಪ್ತ ಆತ್ಮಕಥೆ" ಮತ್ತು "ಹಿಂದ್ ಸ್ವರಾಜ್ಯ" ಶರ್ಮರ ಅನುವಾದ. ಮತ್ತೆ ಆತ್ಮಕಥೆಯ ಕೆಲವು ಭಾಗಗಳನ್ನು ಶರ್ಮರು ಕನ್ನಡಿಸಿದ್ದಾರೆ. ಈ ಅನುವಾದ ಗ್ರಂಥಗಳನ್ನು ಪ್ರಕಟಿಸುವಾಗ ಅದರ ಸಂಪಾದಕರು ಹೀಗೆನ್ನುತ್ತಾರೆ: "ಗಾಂಧೀಜಿಯವರ ಸರಳ ಮತ್ತು ರಸವತ್ತಾದ ಬರಹಗಳನ್ನು ಭಾಷಾಂತರಿಸುವುದು ಎಷ್ಟು ಕಷ್ಟವೆಂಬುದನ್ನು ಹೇಳಬೇಕಾಗಿಲ್ಲ. ಆದರೂ ಈ ಅನುವಾದಕರು ಗಾಂಧೀಜಿ ಯವರ ಮನೋಗತವನ್ನು ಅರಿತವರು ಆಗಿರುವುದರಿಂದ ಈ ಅನುವಾದಗಳು ಜನ ಪ್ರಿಯವಾಗಬಲ್ಲವೆಂದು ಆಶಿಸಲಾಗಿದೆ." ಈ ಮಾತಾದರೂ ಸತ್ಯಕ್ಕೆ ಹೊರತಲ್ಲ. ಶರ್ಮರ ಅನುವಾದಗಳೂ ಆ ಜನಪ್ರಿಯತೆಯನ್ನು ಗಳಿಸಿವೆ.

ಪುರಾಣಕಥೆಗಳೆಂದೊಡನೆ ರಾಮಾಯಣ, ಮಹಾಭಾರತಗಳು ತಕ್ಷಣ ನೆನಪಿಗೆ ಬರುತ್ತವೆ. ಕನ್ನಡದಲ್ಲಿ ಅನೇಕ ರಾಮಾಯಣ, ಮಹಾಭಾರತದ ಕಥೆಗಳು ಹೊರ ಬಂದಿವೆ. ರಾಮಾಯಣವನ್ನು ಶರ್ಮರು "ರಾಮಾವತಾರ" ಭಾಗ-೧, ೨, ೩ ಗಳಲ್ಲಿ

ನಮಗೆ ಕನ್ನಡಿಸಿಕೊಟ್ಟಿದ್ದಾರೆ. ಇದನ್ನು ಅವರು ಕನ್ನಡಿಸುವುದು ನಮ್ಮ ಸೌಭಾಗ್ಯ ಎಂದು ಪೇಜಾವರ ಮಠದ ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳವರು ಅಭಿಪ್ರಾಯ ಪಟ್ಟಿದ್ದರು. "ರಾಮಾವತಾರ" ಸರಳ, ಸುಂದರ, ರಸವತ್ತಾದ ಅನುವಾದ ಗ್ರಂಥ. ಅಂತೆಯೇ ಅವರ "ಕೃಷ್ಣಾವತಾರ"(ಒಟ್ಟು ಆರು ಭಾಗಗಳಲ್ಲಿ)ಕೂಡ. ಡಾ|| ಕೆ. ಎಂ. ಮುನ್ಷಿಯವರ ಇಂಗ್ಲಿಷ್ ಅವತರಣಿಕೆಯ ಕೃಷ್ಣಾವತಾರವನ್ನು ಮೊದಲಿಗೆ ಶರ್ಮರು ಕನ್ನಡದಲ್ಲಿ 'ಸಂಯುಕ್ತ ಕರ್ನಾಟಕ' ಪತ್ರಿಕೆಯ ವಾರದ ವಿಭಾಗದಲ್ಲಿ ಪ್ರಕಟಿಸಿದರು. ಶ್ರೀ ಕೃಷ್ಣನ ದಿವ್ಯಲೀಲೆಗಳನ್ನು ಅಷ್ಟು ಸುಂದರವಾಗಿ ಶರ್ಮರೊಬ್ಬರೇ ಅನುವಾದಿಸ ಬಲ್ಲರು. ಅಲ್ಲಿಯ ಒಂದು ಉದಾಹರಣೆಯನ್ನು ಗಮನಿಸೋಣ.

"ಹುಡುಕುವವರ ಗಡಿಬಿಡಿಯನ್ನು ನೋಡಿ ತಾನು ಗಹಗಹಿಸಿ ನಗಬೇಕು, ಕುಣಿಯಬೇಕು. ಕೃಷ್ಣನಿಗೆ ಇವೆಲ್ಲವೂ ವಿನೋದ.

ಯಶೋದೆಗೂ ಅವರ ಬಳಗದವರಿಗೂ ಆಳುಗಳಿಗೂ ಇದು ವಿನೋದ ಅಲ್ಲ, ಗಂಡಾಂತರ. ದಿಕ್ಕೆಟ್ಟು ಎಲ್ಲೆಲ್ಲೂ ಹುಡುಕಿ ಹುಡುಕಿ ನೋಡಿದ ಮೇಲೆ ಅಲ್ಲೇ ಪಕ್ಕದಲ್ಲೆ ಇದಾನೆ ಕೃಷ್ಣ. ತಮ್ಮನ್ನು ಗೇಲಿ ಮಾಡುತ್ತಿದಾನೆ. ಅವರು ನಾಚಿ ನೀರಾಗುತ್ತಿದ್ದರು.

'ಕೃಷ್ಣ ಕಂದ ಎಲ್ಲಿದ್ದೀಯಪ್ಪ? ಎಲ್ಲಿದ್ದೆ? ಹೆದರಿ ಹೆದರಿ ಸತ್ತೆನಲ್ಲ ನಾನು' ಎನ್ನುತ್ತಿದ್ದಳು ಯಶೋದೆ.

'ಇಲ್ಲೆ ಇದ್ದೆನಲ್ಲಮ್ಮ' ಎನ್ನುತ್ತ ಏನೂ ತಿಳಿಯದವನ ಹಾಗೆ ನಗುತ್ತ ತಾಯಿಯ ಮಡಿಲನ್ನು ಸೇರುತ್ತಿದ್ದ, ಆಕೆಯ ಕಷ್ಟಕ್ಕೆ ತಕ್ಕ ಫಲ ಎನ್ನುವಂತೆ.

ಕೃಷ್ಣನ ಈ ಚೇಷ್ಟೆಗಳಿಗೆ ನಂದನ ಮನೆಯಲ್ಲಿ ಯಾರು ಸಮರಲ್ಲ. ಗಳಿಗೆ ಗಳಿಗೆಗೂ ಹೊಸ ಹೊಸ ಚೇಷ್ಟೆ. ಅವನಿಗೆ ಚೆಲ್ಲಾಟ, ಇವರಿಗೆ ಪ್ರಾಣಸಂಕಟ."

ಹಲವರ ಜೀವನಚರಿತ್ರೆಗಳನ್ನು ಶರ್ಮರು ಕನ್ನಡಿಸಿದ್ದಾರೆ. ಬಿ. ಆರ್. ನಂದಾ ಅವರ The Nehru's, ರೊಮರೋಲಾ ಹಾಗೂ ನೆಹರೂ ಅವರು ರಚಿಸಿರುವ Mahatma Gandhi ಅವರ ಜೀವನ ಚರಿತ್ರೆಗಳನ್ನು, ಸತಿ ಕಸ್ತೂರಿಬಾ ಅವರ ಜೀವನ ಚರಿತ್ರೆ ಗ್ರಂಥವನ್ನು ಶರ್ಮರು ಹೊರತಂದಿದ್ದಾರೆ. ಕಣ್ಣಿಗೆ ಕಟ್ಟು ವಂತೆ ಶರ್ಮರು ಬಣ್ಣಿಸುತ್ತಾರೆ. ಇದು ಅನುವಾದವೋ ಇಲ್ಲವೇ ಕನ್ನಡದ ಮೂಲವೋ ಎನ್ನುವಂತೆ ಚಿತ್ರಿಸುತ್ತಾರೆ. ಪಂಡಿತ್ ಜವಹರ್‌ಲಾಲ್ ನೆಹರೂ ಅವರು ಮಗಳಿಗೆ ಪತ್ರರೂಪದಲ್ಲಿ ಬರೆದ Glimpses of World Historyಯನ್ನು "ಜಗತ್ಕಥಾ ವಲ್ಲರಿ" (ಭಾಗ-೧) ಎಂಬುದಾಗಿ ಅನುವಾದಿಸಿರುವರು. ಇದು ಇತಿಹಾಸದ ಪುರಾಣ ವಲ್ಲ. ನೆಹರೂ ಅವರ ವ್ಯಕ್ತಿತ್ವದ ಪರಿಚಯವೂ ಹೌದು.

ಬಿ. ಆರ್. ನಂದಾ ಅವರ The Nehru's ನ ಆರಂಭದ ಅನುವಾದ ಮೂಲದಷ್ಟೇ ಸೊಬಗಿನಿಂದ ಕೂಡಿದೆ. ಮೋತಿಲಾಲರ ಚಿತ್ರ ಕಣ್ಣಿಗೆ ಕಟ್ಟುತ್ತದೆ.

"ಚರ್ಚ್‌ರಸ್ತೆ, ಅಲಹಾಬಾದ್. ವಿಶಾಲವಾದ ಅರಮನೆಯಂಥ ಮನೆ. ಸೊಗಸಾದ ಸಲಕರಣೆ–ಸಾಮಗ್ರಿ, ವಿಸ್ತಾರವಾದ ಹುಲ್ಲು ಬಯಲುಗಳು, ಹಣ್ಣಿನ ತೋಟಗಳು, ಹೊಳೆಹೊಳೆವ ಕಾರಂಜಿಗಳು, ಈಜುವ ಕೊಳಗಳು, ಟೆನ್ನಿಸ್ ಆಟದ ಅಂಕಣಗಳು, ಕುದುರೆಗಳು, ಗಾಡಿಗಳು, ಮೋಟಾರುಗಳು, ಜೀಕಾದಷ್ಟು ಆಳುಗಳು. ಇದನ್ನೆಲ್ಲ ನೋಡಿದಾಗ ಬ್ರಿಟಿಷ್ ಶ್ರೀಮಂತರ ಒಳನಾಡಿನ ಸೌಧಗಳು ನೆನಪು ಆಗುತ್ತಿದ್ದುವು. ವಿಶಿಷ್ಟ ಪೋಷಾಕಿನ ಸೇವಕರು ಕಾದು ನಿಂತಿರಲು ಉತ್ತಮಾಶ್ವಗಳೆರಡನ್ನು ಹೂಡಿಕೊಂಡು ಅತಿ ಸೊಗಸಾದ ಕುದುರೆಗಾಡಿಯಲ್ಲಿ ಕೂತು ದಿನವೂ ಬೆಳಗ್ಗೆ ಹೈಕೋರ್ಟಿಗೆ ಹೋಗುತ್ತಿದ್ದ ಈ ಮನೆಯ ಯಜಮಾನ ಪಂಡಿತ ಮೋತಿಲಾಲ್ ನೆಹರೂ ಎಂದರೆ ಎಲ್ಲರಿಗೂ ಕಣ್ಮಣಿ."

ಈ ಅನುವಾದ ಗ್ರಂಥ ಪ್ರಕಟಿಸಿದ ಪ್ರಕಾಶಕರು ತಮ್ಮ ಮಾತಿನಲ್ಲಿ ಹೀಗೆ ಹೇಳುತ್ತಾರೆ: "ಈ ಮಹದ್ ಗ್ರಂಥವನ್ನು ಅನುವಾದಿಸಿದವರು ಕನ್ನಡದಲ್ಲಿ ಒಂದು ವಿಶಿಷ್ಟ ಶೈಲಿಗೆ ಹೆಸರಾದ ಶ್ರೀ ಕೃಷ್ಣಶರ್ಮರು. ಅವರ ಈ ಶೈಲಿ ಮೂಲ ಕೃತಿಯ ಘನತೆಯನ್ನು ಕನ್ನಡದಲ್ಲಿ ಇನ್ನೂ ಹೆಚ್ಚಿಸಿದೆ ಎಂಬಲ್ಲಿ ಸಂದೇಹವಿಲ್ಲ." ಈ ಮಾತು ಒಪ್ಪಬೇಕಾದ್ದೆ.

ಒಟ್ಟಿನಲ್ಲಿ ಭಾಷಾಂತರವೆಂದರೆ ಏನೋ ಭಾಷೆ ಬದಲು ಮಾಡುವ ಕಾರ್ಯ ಮಾತ್ರ ಅಲ್ಲ. ಅದೂ ಒಂದು ಕಲೆ. ಅಲ್ಲದೆ ವಿಶ್ವದ ವಿವಿಧ ಮುಖಗಳನ್ನು ಪರಿಚಯ ಮಾಡಿಕೊಡುವ ಶಾಸ್ತ್ರ ಎಂಬುದನ್ನು ಸಿದ್ಧವನಹಳ್ಳಿ ಕೃಷ್ಣಶರ್ಮರ ಅನುವಾದ ಗ್ರಂಥಗಳಿಂದ ತಿಳಿದುಕೊಳ್ಳಬಹುದಾಗಿದೆ. ಇನ್ನು ಮುಂದಿನ ಈ ಕಡೆಯ ಎರಡು ಉದಾಹರಣೆಗಳನ್ನು ಗಮನಿಸಿ. ಅವನ್ನು ಅನುವಾದಗಳು ಎಂದೆನ್ನುವುದೇ ಕಷ್ಟ. ಆದರೆ ಅವೂ ಅನುವಾದಗಳೇ. ಮೊದಲನೆಯದು 'ಜಗತ್ಕಥಾವಲ್ಲರಿ' (ಭಾಗ–೧)ಯಿಂದಲೂ, ಎರಡನೆಯದನ್ನು 'ಸಂಕ್ಷಿಪ್ತ ಆತ್ಮಕಥೆ'ಯಿಂದಲೂ ಉದ್ಧರಿಸಲಾಗಿದೆ.

೧. ಚರಿತ್ರೆಗಳಲ್ಲಿ ಜನಾಂಗಗಳ ಜೀವನದ ಮಹಾ ಘಟ್ಟಗಳನ್ನು ಕುರಿತು ಓದುತ್ತೇವೆ ; ಮಹಾಸ್ತ್ರೀಪುರುಷರನ್ನು ಕುರಿತು ಅವರು ಮಾಡಿದ ಮಹತ್ಕಾರ್ಯಗಳನ್ನು ಕುರಿತು ಓದುತ್ತೇವೆ. ಒಮ್ಮೊಮ್ಮೆ ಕನಸು ಕಾಣುತ್ತ ವೈಮರೆತು ನಾವೂ ಆ ಕಾಲದವರಾಗಿ, ಅಂದಿನ ವೀರರಂತೆ, ವೀರ ನಾರಿಯರಂತೆ ಮಹತ್ಕಾರ್ಯಗಳನ್ನು ಮಾಡುತ್ತೇವೆ..........................................ಸಾಧಾರಣ ಪುರುಷರು ಸಾಧಾರಣ ಸ್ತ್ರೀಯರು ವೀರರಲ್ಲ. ಅನ್ನ, ಬಟ್ಟೆ, ಹೆಂಡತಿ ಮಕ್ಕಳು, ಉಪ್ಪು ಮೆಣಸಿನಕಾಯಿ. ಸದಾ ತಾಪತ್ರಯವೇ ಅವರಿಗೆ. ಆದರೆ ಕಾಲ ಬರುತ್ತದೆ. ಮಹತ್ಕಾರ್ಯ ಸಾಧನೆಗಾಗಿ ಜನ ಜನಾಂಗವೇ ಶ್ರದ್ಧೋತ್ಸಾಹದಿಂದ ಏಳುತ್ತದೆ. ಆಗ ಕೇವಲ ಸಾಮಾನ್ಯ ಗಂಡಸರೂ ಹೆಂಗಸರೂ ವೀರಪುರುಷರಾಗುತ್ತಾರೆ. ವೀರ ರಮಣಿಯರೆನಿಸುತ್ತಾರೆ.

೨. ....ಹರಿಶ್ಚಂದ್ರ ನಾಟಕ, ನನ್ನ ಮನಸ್ಸನ್ನು ಆ ನಾಟಕ ಸೆಳೆಯಿತು. ಎಷ್ಟುಸಲ ನೋಡಿದರೂ ಮತ್ತೆ ಮತ್ತೆ ಅದನ್ನು ನೋಡಲು ಮನಸ್ಸಾಗುತ್ತಿತ್ತು.

ಆದರೆ ಎಷ್ಟುಸಲ ಹೋಗಗೊಟ್ಟಾರು ? ನನ್ನ ಮನಸ್ಸಿನಲ್ಲಿಯೇ ನಾನು ಹರಿಶ್ಚಂದ್ರ ನಾಟಕವನ್ನು ನೂರಾರು ಸಲ ಆಡಿರಬೇಕು. ಕನಸಿನಲ್ಲಿಯೂ ಅದೇ. ಹರಿಶ್ಚಂದ್ರ ನಂತೆ ಎಲ್ಲರೂ ಸತ್ಯವಾದಿಗಳಾಗಿರಬಾರದೇಕೆ ? ಎಂಬುದೇ ಚಿಂತೆ ಹಗಲೂ ಇರುಳೂ.

# ಶರ್ಮಾಜಿ ಅವರ 'ಕನ್ನಡ ಸಮಸ್ಯೆ'

ಹಂಪ. ನಾಗರಾಜಯ್ಯ

ಸಿದ್ದವನಹಳ್ಳಿ ಕೃಷ್ಣಶರ್ಮರ ಮಾತು ಬರೆಹಗಳಲ್ಲಿ ತಾಳ ತಕ್ಕ ಮೇಳ ಉಂಟು. ಅಂಕುಡೊಂಕು ಅವರ ಜಾಯಮಾನಕ್ಕೆ ಒಗ್ಗಲಿಲ್ಲ. ಋಜುತ್ವ ಅವರ ಸ್ವಭಾವ. ನೇರ ಅವರ ಹುಟ್ಟುಗುಣ. ಅದರಂತೆ ಅವರ ಮಾತು ಕೃತಿ ಚಿಕ್ಕದು, ಆಕಾರದಲ್ಲಿ. ಆದರೆ ಅಳತೆಯಲ್ಲಿ ತ್ರಿವಿಕ್ರಮ. ಅವರದು ಚಿಕ್ಕ ಮಾತು, ಚೊಕ್ಕ ಬರೆಹ. ಕೇಳುಗರ, ಓದುಗರ ಹೃದಯವೇ ಗಮ್ಯಸ್ಥಾನ. ಅವರ ಪುಟ್ಟ ವಾಕ್ಯಗಳು ಅರ್ಥ ನಿಕ್ಷಿಪ್ತ ಶುಕ್ತಿಕೆಗಳು. ಹಸಿಯ ಗೋಡೆಯ ಮೇಲೆ ಎಸೆದ ಕಲ್ಲಿನಂತೆ ಅವರ ವಾಕ್ಯಗಳು ಓದುಗರ ಎದೆಯಲ್ಲಿ ನಾಟುತ್ತವೆ. ಪುಟ್ಟ ವಾಕ್ಯಗಳಾದರೂ ಎಷ್ಟು ಶಕ್ತಿಯುತವಾಗಿರುತ್ತವೆಂದರೆ ಅವು ಕಮ್ಮಟದ ಕಿಡಿಗಳಂತೆ ಸಿಡಿಯುತ್ತವೆ. ಬರೆಯಲು ಆರಿಸಿಕೊಂಡ ವಿಷಯ, ಸಮಸ್ಯೆ ಎಷ್ಟೇ ಗಂಭೀರ ಕ್ಲಿಷ್ಟವಿದ್ದರೂ ಅವರ ಬರೆಹದ ಓಘಕ್ಕೆ ಚ್ಯುತಿಯಿಲ್ಲ. ಬರೆಹ ಕುಂಟುವುದಿಲ್ಲ. ಸಂಸ್ಕೃತ ಶಬ್ದ ಸಮಾಸಗಳಿಂದ ವಾಕ್ಯಗಳು ಪೆಡಸಾಗುವುದಿಲ್ಲ. ಸಂಸ್ಕೃತ ಕುಂದಣದಲ್ಲಿ ಕನ್ನಡವನ್ನು ಕೀಲಿಸುವುದಿಲ್ಲ. ಕನ್ನಡದ ಮನೆಗೆ ಸಂಸ್ಕೃತದ ತೋರಣ ಕಟ್ಟುತ್ತಾರೆ.

ಕನ್ನಡ ಭಾಷೆ ಯಾವುದೇ ಗಹನವಾದ ವಿಚಾರ ಪ್ರತಿಪಾದನೆಗೆ ಮಾಧ್ಯಮವಾಗಬಲ್ಲ ಕಸುವು ಪಡೆದಿದೆಯೆಂಬುದನ್ನು ಮನಗಾಣಬೇಕಾದರೆ ಅವರ, ಅಂಥವರ ಬರವಣಿಗೆ ಓದಬೇಕು. ಆ ಸಲೀಸುತನ ವಿಚಾರವಂತಿಕೆ ಚಿಂತನ ಮಂಥನ ಮನನ ಹೊಸಬರಿಗೆಲ್ಲ ಮೇಲುಪಂಕ್ತಿ.

'ಕನ್ನಡ ಸಮಸ್ಯೆ' ಅವರ ಹಲವು ಹಳೆಯ ಕಿರು ಹೊತ್ತಗೆಗಳಲ್ಲಿ ಒಂದು ಮೊದಲು ಅದು ೧೯೪೧-೪೨ರ ಸುಮಾರಿನಲ್ಲಿ ಬರೆದ ಒಂದು ಲೇಖನ ಮಾಲೆ. ಕನ್ನಡ ಸಾಹಿತ್ಯ ಪರಿಷತ್ತಿನ ಮುಖಪತ್ರಿಕೆಯಾದ 'ಕನ್ನಡ ನುಡಿ'ಯಲ್ಲಿ ಬೆಳಕು ಕಂಡಿತು. ಸಾಕಷ್ಟು ಟೀಕೆಗೆ ಎಡೆಮಾಡಿಕೊಟ್ಟಿತು. ಕನ್ನಡದ ಸಮಸ್ಯೆ ಎಂದಿನಿಂದ ಇದ್ದದ್ದೇ. ಕನ್ನಡದ ಮುನ್ನಡೆಗೆ ಎಲ್ಲಿಯವರೆಗೆ ಕನ್ನಡಿಗರೇ ಅಡ್ಡಿ ಒಡ್ಡಿ ಹಗೆಗಳಾಗಿ ನಡೆದುಕೊಳ್ಳುವುದನ್ನು ನಿಲ್ಲಿಸುವುದಿಲ್ಲವೋ ಅಲ್ಲಿಯವರೆಗೂ ಕನ್ನಡ ಸಮಸ್ಯೆಗಳನ್ನು ಎದುರಿಸುತ್ತಲೇ ನರಳುತ್ತಿರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ಭಾಷೆ ಹಾಗೂ ಕನ್ನಡ ಶಿಕ್ಷಣ ಕುರಿತ ಸಮಸ್ಯೆಯ ಸಿಕ್ಕುಗಳನ್ನು ಸುಲಿದಿಡಲು ಈ ಗ್ರಂಥದಲ್ಲಿ ನಡೆದಿರುವ ವಿವೇಚನೆ ವಿಶ್ಲೇಷಣೆ ಇಂದಿಗೂ ಬೋಧಪ್ರದ.

ನಮ್ಮಲ್ಲಿ ದೇಶಭಾಷೆಗಳು ಬೋಧನ ಮಾಧ್ಯಮವಾಗುವುದಕ್ಕೆ ಪ್ರಬಲ ವಿರೋಧ ಹೇಳುವ ಜನರ ಕಣ್ ತೆರೆಸಿ ಬಾಯಿ ಮುಚ್ಚಿಸುವ ವಿವೇಕದ ಉತ್ತರ ಅನೇಕ ಕಡೆ ಬಂದಿದೆ. ಕಡೆಕಡೆಗಂತೂ ಅವರು ನೇರವಾಗಿ ದಾಳಿ ಮಾಡಿದ್ದಾರೆ. "ಒಬ್ಬರಿಬ್ಬರು ಐ. ಸಿ. ಎಸ್. ಮಾಡಬೇಕಾಗಿದ್ದರೆ ಇಂಗ್ಲಿಷನ್ನು ಪ್ರತ್ಯೇಕ ಭಾಷೆಯಾಗಿ ಕಲಿಯಲಿ. ಕಾಲೇಜಿನ ವಿದ್ಯೆ ಮುಗಿದ ಮೇಲೆ ಒಂದೆರಡು ವರ್ಷ ಕಲಿಯಲಿ. ಇವೊತ್ತು ಇಂಗ್ಲಿಷ್ ಎಲ್ಲೆಲ್ಲೂ ಇದೆ; ನಾಳೆ ಹಿಂದೀ ರಾಷ್ಟ್ರಭಾಷೆಯಾದರೆ ಆಗ ಈ ಐ. ಸಿ. ಎಸ್. ವಿದ್ಯಾರ್ಥಿಗಳಿಗಾಗಿ ನಮ್ಮ ಶಿಕ್ಷಣ ಮಾಧ್ಯಮವನ್ನು ಹಿಂದೀ ಮಾಡೋಣವೇ? ಆಗ ಅವರು ಸ್ವಂತವಾಗಿಯಾದರೂ ಹಿಂದೀ ಕಲಿಯದೆ ಬಿಟ್ಟಾರೆಯೆ? ಸಂಸ್ಕೃತ ವಿದ್ಯೆ ನಮ್ಮಲ್ಲಿ ಅಪಾರವಾಗಿದ್ದಾಗ 'ಕಾಶೀ ಪಂಡಿತ'ರಾಗಿ ಬಂದವರು ಎಷ್ಟು ಜನ ಇಲ್ಲ? ಫ್ರೆಂಚು, ಜರ್ಮನ್ ಭಾಷೆ ಕಲಿತು ಅಲ್ಲಿ ನೆಲಸಿದ ನಮ್ಮವರು ಇಲ್ಲವೆ? ಅವರಿಗೆ ಯಾರು ಅಡ್ಡ? ಒಂದು ವಿಶಿಷ್ಟ ಸಮಾಜದ ಅವಶ್ಯಕತೆಗೆ ಅನುಸಾರವಾಗಿ ಶಿಕ್ಷಣ ವಿಧಾನವನ್ನು ರೂಪಿಸುವಾಗ, ನಾಲ್ಕು ಜನರ ಅನುಕೂಲಕ್ಕೆ ತಕ್ಕಂತೆ ಎಲ್ಲರಿಗೂ ಏರ್ಪಡಿಸೋಣವೇ? ನಮ್ಮವರಲ್ಲಿ ಶ್ರೀಮಂತರಾದವರಿಗೆ ವರ್ಚಸ್ವಿಗಳಾದವರಿಗೆ ಇಂಜನಿಯರಿಂಗ್ ಹುಚ್ಚು ಹಿಡಿದರೆ ನಮ್ಮ ಓದೆಲ್ಲ ಬರೀ ಇಂಜನಿಯರಿಂಗೇ ಆಗಬೇಕೆ? ನಮಗಾಗಿ ನಾವು ಓದನ್ನು ಕಲಿಯುತ್ತೇವೆಯೋ ಯಾರೋ ಭಾಗ್ಯವಂತರ ತೇರೆಳೆಯುವುದಕ್ಕಾಗಿಯೋ?"

ಇದೇ ಧಾಟಿಯನ್ನು ಇನ್ನೂ ಹಲವು ಕಡೆ ಗುರುತಿಸಬಹುದು. ಅವರು ನೇರವಾಗಿ ಸಮಸ್ಯೆಯ ಆಳಕ್ಕೇ ಇಳಿಯುತ್ತಾರೆ. ಹಗೆಗಳ ನಡುವೆಯೇ ನುಗ್ಗುತ್ತಾರೆ. "ಶಿಕ್ಷಣದಲ್ಲಿ ಮಾತೃ ಭಾಷೆಯನ್ನೇ ಏಕೈಕ ಮಾಧ್ಯಮವಾಗಿ ಮಾಡುವ ಮುನ್ನ ಅಡ್ಡ ಬರುವ ಕೆಲವು ತೊಂದರೆಗಳು, ಭಾರತೀಯ ಭಾಷೆಗಳನ್ನೇ ಶಿಕ್ಷಣ ಮಾಧ್ಯಮವನ್ನಾಗಿ ಮಾಡಬೇಕೆಂದು ನಿರ್ಧರಿಸಿದ ಕೂಡಲೇ ಮುಂಜಾವಿನ ಇಬ್ಬನಿಯಂತೆ ಮಾಯವಾಗುತ್ತವೆ. ಮನಸಿದ್ದ ಕಡೆ ಮಾರ್ಗ ಇದ್ದೇ ಇದೆ. ಆದರೆ ಈ ದಾರಿಯಲ್ಲಿರುವ ಹಿರಿಯ ಆಂತಕ, ನಮ್ಮ ಇಂಗ್ಲಿಷು ವ್ಯಾಮೋಹ. ಇಂಗ್ಲೀಷಿನಲ್ಲಲ್ಲದೆ ಮಾತೃಭಾಷೆಗಳಲ್ಲಿ ತುಂಬಾ ವೈಜ್ಞಾನಿಕ ನಿರಾಕಾರ ಭಾವನೆಗಳನ್ನು ವ್ಯಕ್ತಪಡಿಸಲು ಸಾಧ್ಯವಿಲ್ಲವೆಂಬುದು ವಿಚಿತ್ರವಾದ ಕುರುಡು ನಂಬಿಕೆ. ಈಗಿನ ಶಿಕ್ಷಣ ವಿಧಾನ ನಮ್ಮನ್ನು ಸ್ಥಾನಭ್ರಷ್ಟರನ್ನಾಗಿ ಮಾಡಿದೆ. ನಮ್ಮ ದೃಷ್ಟಿಯನ್ನು ಮಂಜಾಗಿಸಿದೆ. ನಮ್ಮ ಶಿಕ್ಷಣ ವಿಧಾನದಲ್ಲಿರುವ ಅಸಂಬದ್ಧತೆಗಳನ್ನು ಕಾಣುವ ಶಕ್ತಿ ನಮ್ಮಲ್ಲಿ ಇಲ್ಲವಾಗಿದೆ, ಮಹಾಮಹಾವಿಷಯಗಳು ಮೂಲೆ ಸೇರುತ್ತಿರುವಾಗ, ಅಲ್ಪ ವಿಷಯಗಳಿಗೇ ನಾವು ಸಲ್ಲದ ಪ್ರಾಧಾನ್ಯ ಕೊಡುತ್ತಿದ್ದೇವೆ; ಹನುಮಂತರಾಯ ಹಗ್ಗ ತಿನ್ನುತ್ತಿರುವಾಗ, ಪೂಜಾರಿಗೆ ಶಾವಿಗೆ ಕೊಟ್ಟ ಹಾಗೆ."

ಶರ್ಮಾಜಿಯವ ಬರೆಹದ ಹಲವು ಲಕ್ಷಣಗಳನ್ನು ಇಲ್ಲಿ ಉದಾಹರಿಸಿದ ಭಾಗದಲ್ಲೂ ನಾವು ಗುರುತಿಸಬಹುದು : ಸಂಕ್ಷಿಪ್ತತೆ, ಸುಲಭಗ್ರಾಹ್ಯತೆ, ವಿಷಯ ವಿಶ್ಲೇಷಣೆಯ

ನಾಜೂಕು, ಬರೆಹ ಸಪ್ಪೆ ಆಗದಂತೆ ಹಾಸ್ಯದ ಒಪ್ಪವಾದ ಲೇಪ, ಆಡು ಮಾತಿನ ಸೊಗಡು–ಈ ಗುಣಗಳ ಸಮರ್ಥ ಆದರ್ಶ ಬರೆಹಕ್ಕೆ ಹಿಡಿದ ದರ್ಪಣ ಅಲ್ಲವೆ ? ಹೊಸಗನ್ನಡದ ಬೆಳವಣಿಗೆಗೆ ಕೃಷಿ ಮಾಡಿದ ಗಣ್ಯರ ಸಾಲಿನಲ್ಲಿ ಅವರು ಸೇರುತ್ತಾರೆಂಬುದು ನನ್ನ ಗಟ್ಟಿ ನಂಬುಗೆ.

ಕನ್ನಡ ಕನ್ನಡ ಎಂದು ಒಂದೇ ಸಮನೆ ಕೂಗಿ ಕಂಠ ಶೋಷಣೆ ಮಾಡುತ್ತಿರುವ ಜನರೆಲ್ಲ ಮೊಟ್ಟ ಮೊದಲು ಅವಶ್ಯ ಓದಲೇ ಬೇಕಾದ ಕೈಪಿಡಿ 'ಕನ್ನಡ ಸಮಸ್ಯೆ'.

ಅವರ ಕನ್ನಡ ಪ್ರೇಮ ಪ್ರದರ್ಶನಕ್ಕೆ ಜನರ ಚಪ್ಪಾಳೆಗೆ ಹುಟ್ಟಿದ್ದಲ್ಲ. ಅವರ ನಿಡುಬಾಳಿನ ದೃಢ ನಂಬುಗೆಯ ನಿಲುವು ಅದು. ಒಬ್ಬ ಪ್ರಜ್ಞಾವಂತನ ವಿಚಾರ ಧಾರೆಯನ್ನು ಅವರ ಈ ಹೊತ್ತಗೆಯುದ್ದಕ್ಕೂ ಆಲಿಸುತ್ತೇವೆ. ಆ ವಿಷಯದಲ್ಲಿ ಅವರಿಗಿದ್ದ ವಿಶ್ವಾಸ ಹಾಗೂ ತಲಸ್ಪರ್ಶಿಯಾದ ತಿಳುವಳಿಕೆ ಕಂಡು ತಲೆದೂಗುತ್ತೇವೆ.

# ಶ್ರೀಸಾಮಾನ್ಯರಿಗೊಂದು ಭಗವದ್ಗೀತೆ

ಕಮಲಾ ಹಂಪನಾ

ಭಾರತೀಯ ದರ್ಶನಗಳ ಸಾರದಂತಿರುವ ಭಗವದ್ಗೀತೆಯನ್ನು ಕುರಿತು ಅನೇಕ ಆಚಾರ್ಯರು ವ್ಯಾಖ್ಯಾನ ಟೀಕೆ ಟಿಪ್ಪಣಿ ವಿವರಣೆ ತಾತ್ಪರ್ಯ ಬರೆದಿದ್ದಾರೆ. ಆಚಾರ್ಯತ್ರಯರ ಕೃತಿಗಳ ಮಾತಂತಿರಲಿ, ಆಧುನಿಕ ಶ್ರೇಷ್ಠ ವಿದ್ವಾಂಸರೂ ಭಗವದ್ಗೀತೆಯನ್ನು ಕುರಿತು ಬರೆದ ಗ್ರಂಥಗಳ ಲೆಕ್ಕ ದೊಡ್ಡದು. ಮಹಾತ್ಮಾ ಗಾಂಧಿ, ಆಚಾರ್ಯ ವಿನೋಬಾ, ಆ್ಯನಿಬೆಸೆಂಟ್ ಮೊದಲಾದವರು ಆದ್ಯರು. ಕನ್ನಡದಲ್ಲೂ ಹಿಂದಿನಿಂದ ಇಂಥ ಪ್ರಯತ್ನಗಳು ನಡೆದಿವೆ.

ಮೇಲೆ ಹೆಸರಿಸಿದ ಪ್ರಯತ್ನಗಳೆಲ್ಲ ಬಹುವಾಗಿ ಪಂಡಿತ ಮಂಡಲಿಗೆ ಮೀಸಲು. ಕಲಿತವರಿಗೆ ಮಾತ್ರ ಅವು ಕಲ್ಪತರುಗಳು. ಹೆಚ್ಚು ಕಲಿಯದ ಹಳ್ಳಿ ಮುಗ್ಧರಿಗೆ ಆ ವಿಭೂತಿಪುರುಷರ ಉದ್ಗ್ರಂಥಗಳು ಎಟುಕುವುದಿಲ್ಲ. ಹಾಗೆ ನೋಡುವುದಾದರೆ ಜನಸಾಮಾನ್ಯರಿಗೆ ಭಗವದ್ಗೀತೆಯ ತಿರುಳು ವಶವಾಗುವಂತೆ ಬರೆಯುವುದು ಪರಿಚಯಿಸುವುದು ಸುಲಭಸಾಧ್ಯವಲ್ಲ.

ಶರ್ಮಾಜಿಯವರು ಎಲ್ಲರಿಗೂ ಮನಮುಟ್ಟುವ ಸುಲಿದ ಬಾಳೆಯ ಹಣ್ಣಿನಂದದ ಕನ್ನಡ ಭಾಷೆಯಲ್ಲಿ ಭಗವದ್ಗೀತೆಯನ್ನು ಪರಿಚಯಿಸಿದ್ದಾರೆ. ನಮ್ಮ ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ವತಿಯಿಂದ ೧೯೪೯ ರಲ್ಲಿ ಪ್ರಕಟವಾದ ೫೩ ಪುಟಗಳ ಕಿರುಹೊತ್ತಗೆಯಲ್ಲಿ ೧೮ ಅಧ್ಯಾಯಗಳ ಭಗವದ್ಗೀತೆಯ ಸಾರ ಸೋರದಂತೆ, ಸ್ವಾರಸ್ಯ ಜಾರದಂತೆ ಕನ್ನಡಿಸಿದ್ದಾರೆ. ಅವರ ವಿಶಿಷ್ಟ ಕನ್ನಡ ಶೈಲಿಯ ಮೋಡಿ ಇಲ್ಲಿಯೂ ಕೂಡಿಕೊಂಡು ಮಾತು ಮೊನಚಾಗಿದೆ. ಭಗವದ್ಗೀತೆಯ ಬನಿಗೆ ಈ ಶೈಲಿ ಬೇಕು.

ಪ್ರಾರಂಭದಲ್ಲಿ ಕೌರವ ಪಾಂಡವರ ವಿಚಾರವಾಗಿ ಪ್ರಸ್ತಾಪಿಸುತ್ತಾರೆ. ಆ ಬಗೆಯ ಪೀಠಿಕೆ ಈ ಬಗೆಯ ಪುಸ್ತಕಕ್ಕೆ ತೀರ ಅಗತ್ಯ. (ಯಾರಿಗಾಗಿ ಬರೆಯುತ್ತಿದ್ದೇನೆಂಬುದನ್ನು ಲೇಖಕ ನೆನಪಿಡುವುದು ಇನ್ನೂ ಕೆಲವರಿಗೆ ಕಲಿಯಬೇಕಾದ ಪಾಠ.) ಅಷ್ಟು ಭೂಮಿಕೆ ಸಿದ್ಧಪಡಿಸಿದವರೇ ಎರಡನೆಯ ಪುಟದ ಕಡೆಯ ವಾಕ್ಯಕ್ಕೆ ಸರಿಯಾಗಿ ಭಗವದ್ಗೀತೆಯ ವಾತಾವರಣ ನಿರ್ಮಿಸಿಬಿಡುತ್ತಾರೆ. ಅಲ್ಲಿಂದ ಮುಂದಕ್ಕೆ ಉದ್ದಕ್ಕೂ ಓದುಗ ಇಲ್ಲವೇ ಕೇಳುಗ ಒಂದು ಕಥೆ ಓದಿದ, ಕೇಳಿದ ಲವಲವಿಕೆ ಹೊಂದುತ್ತಾನೆ. ಬರೆಹದಲ್ಲಿ, ಇಷ್ಟು ತಾತ್ವಿಕ ಹಿನ್ನೆಲೆಯ ವಿಷಯ ಪ್ರತಿಪಾದನೆಯಿದ್ದರೂ ಆಸಕ್ತಿ ತಗ್ಗುವುದಿಲ್ಲ.

ಅರ್ಜುನನಿಗೆ ಕವಿದ ವ್ಯಾಮೋಹವನ್ನು ಕಳೆಯಲು ಕೃಷ್ಣ ಹೇಳುತ್ತಾನೆ:

"ಅರ್ಜುನ, ಏಕೆ ತಳಮಳಿಸುತ್ತೀಯೆ ? ಏನು ಕಾರಣವಿಲ್ಲದೆ ಸಂಕಟ ಪಡುತ್ತೀಯಲ್ಲ. ತಿಳಿದವರಂತೆ ದೊಡ್ಡ ದೊಡ್ಡ ಮಾತು ಆಡುತ್ತಿದ್ದೀಯೆ. ತಿಳಿದವರು ಸತ್ತವರಿಗಾಗಿ ಆಗಲಿ, ಇದ್ದವರಿಗಾಗಿ ಆಗಲಿ ಅಳುವುದಿಲ್ಲ. ಸಾಯುವುದೇನು, ಇರುವುದೇನು ? ಈ ಮೈಗೆ ಸಾವು ; ಜೀವಕ್ಕೆ ಸಾವೇ ? ಹುಡುಗತನ, ಹರೆಯ, ಮುಪ್ಪು ಹೇಗೋ ಈ ಮೈಗೆ, ಸಾವೂ ಹಾಗೇ ಒಂದು ತೊಡಿಗೆ, ವೇಷ. ಈ ಮೈ ಸತ್ತರೂ ಮಣ್ಣಾದರೂ ಜೀವಕ್ಕೆ ಆತ್ಮಕ್ಕೆ ಮಾತ್ರ ಸಾವಿಲ್ಲ. ಮೈಗೆ ಹುಟ್ಟುಂಟು, ಸಾವುಂಟು. ಆತ್ಮಕ್ಕೆ ಹುಟ್ಟೂ ಇಲ್ಲ, ಸಾವೂ ಇಲ್ಲ. ಆತ್ಮ ಹಿಂದೆಯೂ ಇತ್ತು, ಇವತ್ತೂ ಇದೆ, ಯಾವತ್ತೂ ಇರುತ್ತದೆ. ಅದಕ್ಕೆ ಮುಪ್ಪಿಲ್ಲ, ಅರಿವಿಲ್ಲ. ಇದನ್ನು ತಿಳಿದೂ ನೀನು ಅಳುತ್ತೀಯಲ್ಲ. ನಿನಗೆ ಭ್ರಾಂತಿಯಾಗಿದೆ. ಈಗ ಯುದ್ಧಕ್ಕೆ ಬಂದಿರುವವರು ನಿನ್ನವರೆಂಬ ಮೋಹ ಕವಿದಿದೆ ನಿನಗೆ.

ಅರ್ಜುನ, ಈ ಮೈಗಳು ಏನು ಮಾಡಿದರೆ ತಾನೆ ಉಳಿದಾವು ? ಈ ಜೀವ ಯಾರೇನು ಮಾಡಿದರೆ ತಾನೆ ಅಳಿದಾವು ? ಜೀವಕ್ಕೆ ಮೈ ಒಂದು ವಲ್ಲಿ. ಹಳೆಯ ವಲ್ಲಿಯನ್ನು ಬಿಸುಟು ಹೊಸ ವಲ್ಲಿಯನ್ನು ಹೊದೆಯುವುದಿಲ್ಲವೆ ? ಹಾಗೆ ಜೀವ ಹೊಸ ಹೊಸ ಮೈ ತೊಡುತ್ತದೆ."

ಗ್ರಾಮ್ಯರಿಗೆ ಗ್ರಾಹ್ಯವಾಗಲು ಗದ್ಯ-ಭಾಷೆ ಹೇಗಿರಬೇಕೆಂದರೆ 'ಹೀಗಿರಬೇಕು' ಎಂದು ಹೇಳಬಹುದು, ಇವರ ಪುಸ್ತಕ ತೋರಿಸಿ. ಜನರಿಗೆ ನಿಲುಕುವ ಉಪಮೆಗಳು ಬಂದು ವಿಷಯ ನಿರುಕಾಗುತ್ತದೆ. ಮೂಲದಲ್ಲಿ ಇಲ್ಲದ ಹೇಳಿಕೆ, ಹೋಲಿಕೆ ಇಲ್ಲಿವೆ. ಆದರೆ ಅವು ಅದೆಷ್ಟು ಸಮುಚಿತವಾಗಿ ನಿರೂಪಣೆಯಲ್ಲಿ ಕೋದಿವೆಯೆಂದರೆ ಅವನ್ನು ಪತ್ತೆಹಚ್ಚಿ ಪ್ರತ್ಯೇಕಿಸುವುದು ಕಷ್ಟವಾಗುತ್ತದೆ.

ಅರ್ಜುನನಿಗೆ ಸ್ಥಿರಬುದ್ಧಿ, ಸಮಬುದ್ಧಿ ತಂದುಕೊಡಲು ಕೃಷ್ಣ ತಿಳಿಸಿದ್ದು ಹೀಗೆ:

"ಯಾರು ಎಲ್ಲ ಆಸೆಯನ್ನೂ ತೊರೆದು ತನ್ನೊಳಗೇ ತಾನು ಸಂತೋಷವಾಗಿರುತ್ತಾರೋ ಅವರೇ ಸಮಬುದ್ಧಿಗಳು. ಅಂಥವರಿಗೆ ದುಃಖ ಬಂದರೆ ದುಃಖವಾಗುವುದಿಲ್ಲ ; ಸುಖ ಬಂದರೆ ಮೈ ಮರೆಯುವುದಿಲ್ಲ. ಅವನಿಗೆ ಭಯವಿಲ್ಲ, ಸಿಟ್ಟಿಲ್ಲ ; ಬಯಕೆ ಮೊದಲೇ ಇಲ್ಲ. ಸುಖದುಃಖ ಈ ಮೈಗೆ ಹತ್ತಿದ್ದು. ಆಮೆ ತನ್ನ ಮೈಯನ್ನು ಚಿಪ್ಪಿನೊಳಗೆ ಎಳೆದುಕೊಳ್ಳುವುದಿಲ್ಲವೆ ? ಹಾಗೆ ಈ ಸಮಬುದ್ಧಿ ತನ್ನ ಚದುರಿನಿಂದ ಸುಖ ದುಃಖ ತನಗೆ ಅಂಟದ ಹಾಗೆ, ತನ್ನನ್ನು ಒಳಗೆ ಎಳೆದುಕೊಳ್ಳುತ್ತಾನೆ. ತನ್ನ ಮೈಯನ್ನೇ ಬಿಗಿ ಹಿಡಿಯುತ್ತಾನೆ. ಅಂಥವನನ್ನು ಸ್ಥಿರಬುದ್ಧಿ ಎನ್ನುತ್ತಾರೆ. ಈ ಸಮಬುದ್ಧಿ ಬರಬೇಕು ಎಂದು ಕೆಲವರು ಉಪವಾಸ ವನವಾಸ ಮಾಡುತ್ತಾರೆ. ಇದು ಒಡಲನ್ನು ದಂಡಿಸಿದಂತೆ. ಮನಸ್ಸು ಒಂದಿದೆಯಲ್ಲ ! ಊಟ ಬಿಟ್ಟರೆ ರುಚಿ ಹೋಗುತ್ತದೆಯೆ ? ಹುತ್ತ ಬಡಿದರೆ ಹಾವು ಸಾಯುತ್ತದೆಯೆ ?"

ಕೃಷ್ಣ ತಿಳಿಸಿದ ಗೀತೆ ಅರ್ಜುನನಿಗೆ ತಿಳಿದಂತೆ ಉಳಿದವರಿಗೆ ಅಷ್ಟು ಬೇಗ ಸಮಗ್ರವಾಗಿ ತಿಳಿಯುವುದು ಕಷ್ಟವಾದೀತು. ಕೃಷ್ಣಶರ್ಮರು ಪರಿಚಯಿಸಿರುವ ಭಗವದ್ಗೀತೆ ಮಾತ್ರ ಎಲ್ಲರಿಗೂ ತಿಳಿಯುತ್ತದೆ. ಇವರ ಭಗವದ್ಗೀತೆ ಪರಿಚಯ ಕಲಿಯದವರಿಗೂ ಕಾಮಧೇನು.

# ವಿಚಾರ ಕ್ರಾಂತಿಯ 'ಮಾತಿನ ಮಂಟಪ'

ಅಪ್ಪಣ್ಣರೆಡ್ಡಿ ನಾರಾಯಣಘಟ್ಟ

ಆಧುನಿಕ ಕನ್ನಡ ಗದ್ಯ ಸಾಹಿತ್ಯದಲ್ಲಿ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರದೊಂದು ವಿಶಿಷ್ಟ ಸ್ಥಾನ. ಸರಳವೂ ಶುದ್ಧವೂ ಆದ ತಮ್ಮ ಜೀವನ ವಿಧಾನದಿಂದ ಅಪೂರ್ವ ಅನುಭವವನ್ನು ಗಳಿಸಿ, ಅದರ ಜೊತೆಯಲ್ಲೇ ಸಾರಸ್ವತ ಲೋಕದಲ್ಲಿ ಸಂಚರಿಸಿ ತಮ್ಮದೇ ಆದ ಈ ಸ್ಥಾನವನ್ನು ಪಡೆದಿದ್ದಾರೆ.

ಶ್ರೀ ಕೃಷ್ಣಶರ್ಮರು ಸಂಪ್ರದಾಯ ಶರಣರೂ ಅಲ್ಲ; ಆಧುನಿಕವನ್ನು ಅಪ್ಪಿ ಕೊಂಡವರೂ ಅಲ್ಲ. ಹಳತು – ಹೊಸತುಗಳಲ್ಲಿ ಕಂಡುಬಂದ ಚೈತನ್ಯಮಯ ಅಂಶ ಗಳನ್ನು ಮಾತ್ರ ಸ್ವೀಕರಿಸಿ ನಡೆಸಿದ ಸಮನ್ವಯ ಜೀವನ ಇವರದು. ಗಾಂಧೀಜಿಯವರ ಪ್ರಭಾವವೇ ಇದಕ್ಕೆ ಕಾರಣ. ಇವರು ತಮ್ಮ ಸಾಹಿತ್ಯದಲ್ಲಿ ಈ ಸಮನ್ವಯದ ರಸಪಾಕವನ್ನೇ ಆತ್ಮೀಯತೆಯಿಂದ ಅರ್ಪಿಸಿದ್ದಾರೆ.

ಶ್ರೀ ಕೃಷ್ಣಶರ್ಮರ ಸಾಹಿತ್ಯ ಕೇವಲ ಮನರಂಜನೆಯಲ್ಲೇ ಸೀಮಿತಗೊಳ್ಳುವ 'ಪ್ರಮೋದ ಸಾಹಿತ್ಯ' ಅಲ್ಲ; ಮನಸ್ಸನ್ನು ವಿಕಸನಗೊಳಿಸುವ, ಬುದ್ಧಿಯನ್ನು ಚುರುಕುಗೊಳಿಸುವ, ವಿವೇಚನಾ ಶಕ್ತಿಯನ್ನು ಬೆಳೆಸುವ, ಆತ್ಮ ಶಕ್ತಿಯನ್ನು ಉದ್ದೀಪನಗೊಳಿಸುವ 'ಪ್ರಬೋಧ ಸಾಹಿತ್ಯ'. ಇವರ 'ವರ್ಧಾಯಾತ್ರೆ' ಮತ್ತು 'ಪರ್ಣಕುಟಿ'ಗಳಲ್ಲಿ ಈ ಗುಣಗಳು ತುಂಬಿಕೊಂಡಿವೆ. ಇವರ ವ್ಯಕ್ತಿ ಚಿತ್ರಗಳಲ್ಲಿ ಮತ್ತು ಇನ್ನಿತರ ನೂರಾರು ಬರೆಹಗಳಲ್ಲಿ ಈ ಗುಣಗಳು ಪ್ರತಿಬಿಂಬಿಸುತ್ತಿವೆ.

ಶ್ರೀ ಕೃಷ್ಣಶರ್ಮರ 'ಮಾತಿನ ಮಂಟಪ'ವು ಭದ್ರವಾದ ಎಂಟು ಕಂಬಗಳಿಂದ ಕಟ್ಟಲ್ಪಟ್ಟಿದೆ. 'ಸಾಹಿತ್ಯ', 'ಶಿಕ್ಷಣ', 'ಅರ್ಥ ವಿಚಾರ', 'ಶಾಂತಿ ವಿಜ್ಞಾನ', 'ತತ್ವಚಿಂತನ', 'ಸಮಾಜ' ಮತ್ತು 'ಪ್ರಜಾತಂತ್ರ' ಇವು ಹೊರನೋಟಕ್ಕೆ ಕಂಡು ಬರುವ ಏಳು ಕಂಬಗಳು. ಒಳನೋಟಕ್ಕೆ ಕಂಡುಬರುವ ಮತ್ತೊಂದು ಕಂಬವೇ 'ಯುಗಧರ್ಮ'. ಪ್ರತಿಯೊಂದು ಕಂಬವೂ ಸುಂದರವಾದ 'ವೈಚಾರಿಕ ಶಿಲ್ಪ'ಗಳಿಂದ ಕೂಡಿದ್ದು, ಈ ಮಂಟಪವನ್ನು ವೀಕ್ಷಿಸುವ ವಿಚಾರ ಪ್ರೇಮಿಗಳ ಹೃದಯಗಳನ್ನು ತಣಿಸುತ್ತದೆ.

* * * *

ಸಾಹಿತ್ಯ ನಿರ್ಮಲವಾಗಿರಬೇಕೆಂದು ಬಯಸುವ ಶರ್ಮಾಜಿಯವರು ಅದು ಕೇವಲ ಜನಪ್ರಿಯವಾದರೆ ಸಾಲದು; ಜನಪೂಜ್ಯವೂ ಆಗಿರಬೇಕೆಂದು ತಿಳಿಸುತ್ತಾರೆ.

"ಸಾಹಿತ್ಯದಲ್ಲಿ ಪೂಜ್ಯವಸ್ತು ಇಲ್ಲದೆ ಬರೀ ಪ್ರಿಯ ವಸ್ತು ಇದ್ದರೆ ಅದು ಸಾಹಿತ್ಯವಲ್ಲ. ಪೂಜ್ಯವಸ್ತು ಇದ್ದರೂ ಅಪ್ರಿಯವಾದುದಾದರೆ ಅದು ಸಾಹಿತ್ಯವಲ್ಲ. ಪ್ರಿಯವಲ್ಲದಿದ್ದರೂ ಅಪ್ರಿಯವಾಗಬಾರದು. ಪ್ರಿಯವೂ ಪೂಜ್ಯವೂ ಆಗಿದ್ದರೆ ಅದು ಉತ್ತಮ ಸಾಹಿತ್ಯ.

"....ಸಾಹಿತ್ಯ ಜನಪ್ರಿಯತೆಯನ್ನು ಬಯಸಿ, ಜನರ ಅಭಿರುಚಿಯನ್ನೇ ಆರಾಧಿಸಿದರೆ ಜನರ ಮನಸ್ಸನ್ನು ಅದು ಬೆಳೆಯಿಸಲಾರದು.

"ಜನರ ಮನಸ್ಸನ್ನು ಬೆಳೆಯಿಸಲಾರದುದು, ಜನರ ಹಿತವನ್ನು ಸಾಧಿಸಲಾರದುದು ಸಾಹಿತ್ಯವಲ್ಲ. ಪ್ರಿಯವಾದುದೇ ಹಿತವಲ್ಲ. ಪ್ರಿಯವನ್ನು ಮೀರಿದ್ದು ಹಿತ. ಪ್ರಿಯ ಅಪ್ರಿಯಗಳನ್ನು ಮೀರಿದ್ದು ಹಿತ. ಆ ಹಿತ ಕೂಡಿದ್ದರೆ, ಸ-ಹಿತ ಆಗಿದ್ದರೆ ಅದು ಸಾಹಿತ್ಯ."

* * *

ನಮ್ಮ ಶಿಕ್ಷಣ ಜೀವಂತವಾಗಬೇಕು. ಅದು ಕೇವಲ ಅಕ್ಷರ ಪಂಡಿತರನ್ನು ತಯಾರು ಮಾಡುವ ಯಂತ್ರ ಆಗಬಾರದೆನ್ನುವ ಶರ್ಮಾಜಿಯವರು ಶಿಕ್ಷಣಕ್ಕೆ, ಹೊಸ ತಿರುವು ಕೊಡಬೇಕೆನ್ನುತ್ತಾರೆ. ಹಾಗೆ ಆಗಬೇಕಾದರೆ "ಶಿಕ್ಷಣವನ್ನು ಶಾಸನದಿಂದ ದೂರವಿಡಬೇಕು" ಎಂದು ತಿಳಿವಳಿಕೆಯನ್ನು ಹೇಳುತ್ತಾರೆ.

ಒಂದು ಶಾಲೆಯ ಹೃದಯವೆಂದರೆ ಅದರ ಆಡಳಿತ ವರ್ಗವಲ್ಲ; ಅದರ ಮುಖ್ಯೋಪಾಧ್ಯಾಯರು. ಆದ್ದರಿಂದಲೇ ಶರ್ಮಾಜೀಯವರು, "ಮುಖ್ಯೋಪಾಧ್ಯಾಯರೇ ಶಾಲೆಗಳ ವೈಭವದ ಅಡಿಗಲ್ಲು. ದೇಶದ ನಿರ್ಮಾಣವಾಗುವುದು ಅಲ್ಲೇ. ದೇಶದ ತರುಣರಿಗೆ ರೂಪು ಕೊಡುವುದು ಅಲ್ಲೇ.

"ಈಗಿನ ಅಶಿಸ್ತು-ಅಶಾಂತಿಗಳಿಗೆ ಪ್ರಭಾವಶಾಲಿ ಮುಖ್ಯೋಪಾಧ್ಯಾಯರ ಅಭಾವವೂ ಒಂದು ಕಾರಣ......ಮುಖ್ಯೋಪಾಧ್ಯಾಯರಿಗೆ ಶಾಲೆಯಲ್ಲಿ ಸರ್ವ ಸ್ವಾತಂತ್ರ್ಯವಿರಬೇಕು" ಎನ್ನುತ್ತಾರೆ.

ಶಿಕ್ಷಣದಲ್ಲಿ ಸುಧಾರಣೆ ಹೆಸರಿನಲ್ಲಿ ಬರೀ ಬದಲಾವಣೆ ಆಗುತ್ತಿರುವುದನ್ನು ಕಂಡು ಶರ್ಮಾಜಿಯವರು ಸಾತ್ವಿಕವಾಗಿ ಕೆರಳುತ್ತಾರೆ.

"ಇಂಟರ್ ಮೀಡಿಯಟ್ಟನ್ನು ತೆಗೆದು ಪಿ. ಯು. ಸಿ. ಮಾಡುವುದು, ಮತ್ತೆ ಇದನ್ನು ಕಿತ್ತು ಇಂಟರ್‌ಮೀಡಿಯೆಟ್ ತರುವುದು ಸುಧಾರಣೆಯೇ ?

"ನಾಲ್ಕು ಪುಸ್ತಕದ ಬದಲು ಹದಿನಾಲ್ಕು ಪುಸ್ತಕ ಇಡುವುದು ; ಆಮೇಲೆ ಅಷ್ಟೆಲ್ಲ ಪಾಠ ಮಾಡುವುದು ಆಗುವುದಿಲ್ಲ ಎಂದು ಮತ್ತೆ ನಾಲ್ಕೇ ಪುಸ್ತಕ ಇಡುವುದು. ಇದೂ ಒಂದು ಸುಧಾರಣೆಯೇ ?" ಎಂದು ಗಂಭೀರವಾಗಿ ಪ್ರಶ್ನಿಸುತ್ತಾರೆ.

* * * *

ಆರ್ಥಿಕ ವಿಚಾರದಲ್ಲಿ ಗಾಂಧೀ ವಿಚಾರಗಳಿಗೆ ಪುಷ್ಟಿಕೊಡುವ ರೀತಿಯಲ್ಲೇ, ಅವರ ವಿಚಾರಗಳಿಗೆ ವ್ಯಾಖ್ಯಾನದ ರೂಪದಲ್ಲಿ ಶ್ರೀ ಕೃಷ್ಣಶರ್ಮರು ವಿಮರ್ಶಾತ್ಮಕವಾಗಿ ಬರೆಯುತ್ತಾರೆ.

ನಾವು ಇತ್ತೀಚೆಗೆ ಹಣಕ್ಕೆ ಅಗ್ರಪೂಜೆ ಸಲ್ಲಿಸಿ ಧರ್ಮದ ಆಲಿಂಗನದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ಶರ್ಮಾಜಿಯವರು ಕಟುವಾಗಿ ಟೀಕಿಸುತ್ತಾರೆ.

"....ಹಣವನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಬಳಸಿ, ಅದನ್ನು ಸರ್ವಶಕ್ತ ಆಗುವಂತೆ ಮಾಡಿದ್ದೇವೆ. ದೇವರಿಗೆ ಬದಲಾಗಿ ದುಡ್ಡನ್ನು ಪೂಜೆ ಮಾಡುತ್ತಿದೇವೆ.

"ಅದಕ್ಕಾಗಿ ಹೊಸಕಾಲದ ದೇವಾಲಯುಗಳನ್ನು ಕಟ್ಟಿದ್ದೇವೆ. ಬ್ಯಾಂಕುಗಳಲ್ಲಿ ದುಡ್ಡಿನ ಪೂಜೆ ನಡೆಯುತ್ತಿದೆ.

"ಹಿಂದೆ ದೇವರಿಗೆ ನರಬಲಿಯ ಮೇಲೆ ಬಹಳ ಪ್ರೀತಿ ಇತ್ತಂತೆ. ನರ ರಕ್ತವನ್ನು ಕುಡಿದು, ಮನುಷ್ಯರ ರುಂಡಗಳ ಮಾಲೆಯನ್ನು ಕತ್ತಿನಲ್ಲಿ ಹಾಕಿಕೊಂಡ ದೇವತೆಯನ್ನು ಶಕ್ತಿ ಎನ್ನುತ್ತಿದ್ದೆವು. ಆದಿಶಕ್ತಿ ಎನ್ನುತ್ತಿದ್ದೆವು.

"ಇವತ್ತು ದುಡ್ಡೇ ಶಕ್ತಿ. ಇದಕ್ಕೂ ನರಬಲಿ ಬೇಕು. ದುಡ್ಡಿನದು ಒಂದು ಮೂರ್ತಿಯನ್ನು ಯಾರಾದರೂ ಆಧುನಿಕ ಕವಿ ಇವತ್ತು ವರ್ಣಿಸಿದರೆ, ಯಾರಾದರೂ ಆಧುನಿಕ ಶಿಲ್ಪಿ ಕೆತ್ತಿದರೆ, ಅದರ ಕಾಲಿನ ಕೆಳಗೆ ನರದೇಹಗಳು, ಕತ್ತಿನಲ್ಲಿ ಮನುಷ್ಯರ ರುಂಡಮಾಲೆ ತಪ್ಪಿದ್ದಲ್ಲ."

* * * *

ವಿಜ್ಞಾನವು ಜಗತ್ತಿನಲ್ಲಿ ಶಾಂತಿಯನ್ನು ಪ್ರತಿಷ್ಠಾಪಿಸಬೇಕೇ ವಿನಾ, ಇರುವ ಅಲ್ಪ ಸ್ವಲ್ಪ ಶಾಂತಿಯನ್ನೂ ನಾಶಮಾಡಿ, ಮಾನವೀಯತೆಗೆ ಮಾರಕವಾಗಿ, ಜನಜೀವನವನ್ನು ಅಲ್ಲೋಲ ಕಲ್ಲೋಲ ಮಾಡಬಾರದೆಂಬ ಶಾಂತಿಪ್ರಿಯರೆಲ್ಲರ ಪ್ರತಿನಿಧಿಯಾಗಿ ಶರ್ಮಾಜಿಯವರು ಹೇಳುತ್ತಾರೆ.

"ವಿಜ್ಞಾನ, ಸಮಾಜಶಾಸ್ತ್ರಗಳನ್ನು ಒಂದಾಗಿ ಪೋಸೆಯಬೇಕು. ಒಂದೇ ಗುರಿಯಾಗಿ ಎರಡನ್ನೂ ಅಣಿಮಾಡಬೇಕು. ವಿಜ್ಞಾನ ಅಧ್ಯಾತ್ಮಗಳನ್ನು ಜೊತೆಗೂಡಿಸಬೇಕಾಗಿದೆ.....

"ವಿಜ್ಞಾನಕ್ಕೂ ಅಹಿಂಸೆಗೂ ಮದುವೆ ಮಾಡಬೇಕು. ವಿಜ್ಞಾನಿ ಇನ್ನು ಶಾಂತಿದೂತನಾಗಬೇಕು. ಶಾಂತಿ ಶಾಸ್ತ್ರವನ್ನು ರೂಪಿಸಬೇಕು.

"ಸಂಪ್ರದಾಯನಿಷ್ಠ ಸಮಾಜ ವಿಜ್ಞಾನ ವಸ್ತುನಿಷ್ಠವಾಗಬೇಕು. ವಸ್ತುನಿಷ್ಠ ಭೌತ ವಿಜ್ಞಾನ ಶಾಂತಿನಿಷ್ಠವಾಗಬೇಕು. ಅಹಿಂಸೆ ವೈಜ್ಞಾನಿಕವಾಗಬೇಕು, ವಿಜ್ಞಾನ ಅಹಿಂಸಕವಾಗಬೇಕು.

"ನಮ್ಮ ವಿಜ್ಞಾನದಲ್ಲಿಯೆ ಒಂದು ಕ್ರಾಂತಿ ಬೇಕು. ವಿಜ್ಞಾನ ಈಗ ನಮಗೆ ಅಗಾಧ ಜ್ಞಾನವನ್ನು ನೀಡಿದೆ. ಆದರೆ ಅದರಿಂದ ಸಾಮಾಜಿಕ ಸತ್ಯಶೋಧನೆಗೆ ಉಪಕಾರವಾಗಿಲ್ಲ."

* * * *

ಶ್ರೀ ಕೃಷ್ಣಶರ್ಮರ ತತ್ವಚಿಂತನವು ಭಾರತೀಯ ಪರಂಪರೆಗೆ ಅತ್ಯಂತ ನಿಕಟ ವಾಗಿದೆ. ಅಥವಾ ಅದರಲ್ಲೇ ಮಜ್ಜನ ಮಾಡಿದಂತಿದೆ. ಪ್ರಪಂಚದ ಪ್ರತಿಯೊಬ್ಬ ತತ್ವಚಿಂತಕನೂ ಶರ್ಮಾಜಿಯವರ ವಿಚಾರಗಳನ್ನು ಅಂಗೀಕರಿಸುವುದರಲ್ಲಿ ಸಂಶಯ ವಿಲ್ಲ.

"ದೇವರು ಗ್ರಹಿಕೆಯಲ್ಲ, ಭಕ್ತಿಯ ವಿಷಯ ಎಂದಾರು ಭಕ್ತರು. ಭಕ್ತಿ ಬೇರೆ ಯಲ್ಲ-ಗ್ರಹಿಕೆ ಅಥವಾ ಭಾವನೆಗಳಲ್ಲಿ ಭರವಸೆ, ಶ್ರದ್ಧೆ. ಅದನ್ನೇ ನಂಬಿದೇವೆ ಎಂಬ ಮಾತು. ಸಂಪೂರ್ಣ ವಿಶ್ವಾಸ.

"ದೇವರು ಬರೀ ಗ್ರಹಿಕೆಯಾದರೆ ದೇವರ ಸರ್ವಶಕ್ತಿಯ ಅರಿವು ಆಗದು. ಭಕ್ತಿ, ಪೂಜೆ ಹೇಗೆಸಾಧ್ಯ ಬರೀ ಗ್ರಹಿಕೆಗೆ? ನಾವು ಗಾಬರಿಯಾಗಬೇಕಾಗಿಲ್ಲ. ಗ್ರಹಿ ಕೆಯ, ಭಾವದ ಸಾಮರ್ಥ್ಯ ಅಪಾರ. ಭಾವನೆ ಅಖಂಡದ ಬಾಗಿಲು ತೆರೆಯುತ್ತದೆ. ಅರಿವಿಗೆ ನೆರವಾಗುತ್ತದೆ. ಮಾನವೀಯ ಮೌಲ್ಯಗಳನ್ನು ಏರ್ಪಡಿಸುತ್ತದೆ. ಕತ್ತಲೆಯ ದಾರಿಯಲ್ಲಿ ಬೆಳಕು ಚೆಲ್ಲಿದಹಾಗೆ ಭಾವನೆಯ ಕೆಲಸ. ಗ್ರಹಿಕೆ ಅಥವಾ ಭಾವನೆ ಸೃಜನಾತ್ಮಕ.

"ಮನುಷ್ಯ ಧ್ಯಾನ ಮಾಡುವುದು ಪರತತ್ವವನ್ನು, ಪರಮಾತ್ಮನನ್ನು. ಪರ ಮಾತ್ಮ ತರ್ಕದ ಸೀಮೆಯವನಲ್ಲ; ಅನುಭವ ವೇದ್ಯ. ಪರಮಾತ್ಮನ ಅನುಭವ ಪಡೆದ ಮಹಾನುಭಾವರಿಗೆ ಅದರಲ್ಲಿ ಅಲೌಕಿಕಾನಂದ ಆಗುತ್ತದೆ."

*　　*　　*

ನಮ್ಮ ಸಮಾಜದ ವಿಷಯದಲ್ಲಿ ಶ್ರೀ ಕೃಷ್ಣಶರ್ಮರಿಗೆ ಅತೀವ ಕಳಕಳಿ. ಈ ಸಮಾಜ ಜಾಗ್ರತ ಆಗಬೇಕು, ಶುದ್ಧಿಯಾಗಬೇಕು ಎಂಬುದೇ ಇವರ ಅಂತರಂಗದ ಅಭಿಲಾಷೆ.

ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ಪಾನನಿರೋಧಕ್ಕೆ ಪ್ರಥಮ ಸ್ಥಾನ. ಆದರೆ ಈ ಗಾಂಧೀ ನಾಡಿನಲ್ಲಿ ಬಹುತೇಕ ರಾಜ್ಯಗಳಲ್ಲಿ ಪಾನನಿರೋಧ ರದ್ದಾಗಿದೆ. ಪಟ್ಟಣಗಳಲ್ಲಿ ಹೆಂಡದ ಹೊಳೆ ಹರಿಯುತ್ತಿದೆ. ಹಳ್ಳಿಗಳಂತೂ ಮದ್ಯದ ಮಹಾಪೂರದಲ್ಲಿ ಮುಳುಗಿ ನಿರ್ನಾಮವಾಗುತ್ತಿವೆ. ಇದನ್ನು ಕಂಡು ಶರ್ಮಾಜಿಯವರು ಕೋಪಗೊಂಡಿದ್ದಾರೆ, ದುಃಖಿಸಿದ್ದಾರೆ-"ಗಾಂಧೀಜಿಗೆ ಹೆಂಡದ ಅಭಿಷೇಕ" ಎಂಬ ಲೇಖನದಲ್ಲಿ.

ಇತ್ತೀಚೆಗೆ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಜಾಹಿರಾತುಗಳಲ್ಲಿ ವಿವಿಧ ಭಂಗಿಗಳಲ್ಲಿನ ಚೆಲುವೆಯರ ಚಿತ್ರಗಳು ಅಧಿಕವಾಗುತ್ತಿರುವುದನ್ನು ಶರ್ಮಾಜಿಯವರು ಗಂಭೀರವಾಗಿ ಟೀಕಿಸುತ್ತ, "ಪುಸ್ತಕಗಳಲ್ಲಿ ಬೆತ್ತಲೆ ಹೆಂಗಸಿನ ಚಿತ್ರಗಳನ್ನು ಅಚ್ಚು ಮಾಡಿ ನಮ್ಮ ಸಂಸ್ಕೃತಿಗೆ ಮಂಗಳಾರತಿ ಎತ್ತುತ್ತಿದ್ದಾರೆ ಎಂಬ ಕೂಗು ಇದ್ದೇ ಇದೆ. ಪತ್ರಿಕೆಗಳಲ್ಲಿ ಕೂಡಾ ಪ್ರವೇಶಿಸಬೇಕೆ ಈ ಹೆಣ್ಣು ಹುಚ್ಚಿನ ಆಟ? ಗಂಡಸರ ಕಣ್ಣಿಗೆ ಈ ಹುಚ್ಚು ಹಿಡಿದಿರಬಹುದು. ನಮ್ಮ ಹೆಂಗಸರಿಗಾದರೂ 'ಹೀಗೆ

ನಮ್ಮ ಹೆಣ್ತನವನ್ನು ಭಂಡ ಬೀದಿ ಬಸವಿತನಕ್ಕೆ ಎಳೆಯಬೇಡಿ' ಎಂದು ಹೇಳುವ ಧೈರ್ಯ ಬೇಡವೆ? ನಮಗಾದರೂ ನಾಚಿಕೆಯಾಗಬೇಡವೆ ಈ ಮಾತು ಕೇಳಿ. ಇಂಥಿಂಥ ಚೆಲುವೇನ ತೋರಿಸ್ತೀನಿ ಇದನ್ನು ತಗೋತೀಯ?" ಎಂದು ನಮ್ಮನ್ನು ತೀಕ್ಷ್ಣವಾಗಿ ಪ್ರಶ್ನಿಸುತ್ತಾರೆ.

* * * *

'ಪ್ರಜಾತಂತ್ರ'ವನ್ನು ಕುರಿತು ಅತ್ಯಂತ ವಿಸ್ತಾರವಾಗಿ ಹಾಗೂ ವಿವರವಾಗಿ ಚರ್ಚೆ ಮಾಡಿದ್ದಾರೆ, 'ಮಾತಿನ ಮಂಟಪ'ದಲ್ಲಿ. ಈ ವಿಭಾಗ ಶ್ರೀ ಕೃಷ್ಣಶರ್ಮರು "ಪ್ರಜಾತಂತ್ರದ ಶಾಸ್ತ್ರ"ಗಳು ಎನ್ನುವಷ್ಟರ ಮಟ್ಟಿಗೆ ವಿಚಾರಪೂರ್ಣವಾಗಿದೆ. ಈ ಕುರಿತು ವಿವರಿಸುವುದಕ್ಕಿಂತ ಇವರ ಮಾತುಗಳನ್ನೇ ಬರೆಯುವುದು ಅತ್ಯಂತ ಸೂಕ್ತ.

"ಉತ್ತಮ ರಾಜ್ಯವಾಗಬೇಕಾದರೆ ಅದರಲ್ಲಿ ದಂಡನೆ ನಿಗ್ರಹ ಆದಷ್ಟು ಕಡಮೆ ಇರಬೇಕು. ಎಂದರೆ, ಅಲ್ಲಿ ಆತ್ಮದಂಡನೆ, ಆತ್ಮನಿಗ್ರಹ ಇರಬೇಕು. ಸಮಾಜ ತನ್ನನ್ನು ತಾನೇ ದಂಡಿಸಿಕೊಳ್ಳಬೇಕು, ನಿಗ್ರಹಿಸಬೇಕು. ರಾಜ್ಯದ ನಿಗ್ರಹಕ್ಕಾಗಿ ಕಾಯಬಾರದು. ಅದನ್ನು ಬಯಸಬಾರದು.

"ರಾಜ್ಯನಿಗ್ರಹ ಕಡಿಮೆ ಇದ್ದರೆ ಅದು ಉತ್ತಮ ಪ್ರಭುತ್ವ; ಆತ್ಮನಿಗ್ರಹವಿದ್ದಲ್ಲಿ ರಾಜ್ಯನಿಗ್ರಹ ಕಡಮೆ; ಆದ್ದರಿಂದ, ಆತ್ಮನಿಗ್ರಹದ ಪ್ರಜೆಗಳ ರಾಜ್ಯ ಅತ್ಯುತ್ತಮ. ಎಂದರೆ ಪ್ರಜಾಪ್ರಭುತ್ವವೇ ಅತ್ಯುತ್ತಮ ಎಂದಾಯಿತು. ಪ್ರಜಾಪ್ರಭುತ್ವ ನೇರಾಗಿ ಪ್ರಜೆಗಳದೇ ಸ್ವಯಂ-ಪ್ರಭುತ್ವ, ಸ್ವಯಂ-ಆಡಳಿತ. ಈಗಿನ ಹಾಗೆ ಪ್ರಜಾ-ಪ್ರತಿನಿಧಿ ಪ್ರಭುತ್ವವಲ್ಲ. ಇದು Parlimentary Democracy, Representative Democracy. ಪ್ರಜಾಪ್ರಭುತ್ವ Direct Democracy, People's Democracy.

"ಪ್ರಜಾಪ್ರಭುತ್ವಕ್ಕೂ ಉಳಿದೆಲ್ಲ ಪ್ರಭುತ್ವಗಳಿಗೂ ಇರುವ ವ್ಯತ್ಯಾಸ ಇದು. ಪ್ರಜಾಪ್ರಭುತ್ವದಲ್ಲಿ ಹಿಂಸೆ, ದಂಡನೆ ಕೂಡದು. Phy·ical force has no place in a prfect Democracy. ಅಹಿಂಸೆಯೇ ಪ್ರಜಾಪ್ರಭುತ್ವದ ಆಶ್ರಯ ಸ್ಥಾನ."

ಹೀಗೆ ಶರ್ಮಾಜಿಯವರು ನಮ್ಮ ಪ್ರಜಾತಂತ್ರದಲ್ಲಿನ ಲೋಪ ದೋಷಗಳನ್ನು ಅತ್ಯಂತ ಧೈರ್ಯದಿಂದ ಹೇಳಿ ಅವುಗಳಿಗೆ ತಮ್ಮದೇ ಆದ ರೀತಿಯ ಕ್ರಾಂತಿಕಾರಕ ಪರಿಹಾರಗಳನ್ನೂ ಸ್ಪುಟವಾಗಿ ಹೇಳುತ್ತಾರೆ. ರೋಗಗ್ರಸ್ತವಾಗಿರುವ ನಮ್ಮ ಪ್ರಜಾತಂತ್ರ ಮತ್ತೆ ಆರೋಗ್ಯವಂತವಾಗಬೇಕಾದರೆ ಶ್ರೀ ಕೃಷ್ಣಶರ್ಮರ ವಿಚಾರಗಳನ್ನು ರಾಜಕೀಯದಲ್ಲಿ ಪ್ರವೇಶ ಮಾಡಬಯಸುವ ಮಂದಿಯಾದರೂ ಚಿಂತನ ಮಾಡಬೇಕು.

* * *

'ಮಾತಿನ ಮಂಟಪ' ಕೇವಲ ವಿಚಾರಗಳನ್ನು ತಿಳಿಸುವ 'ವಸಿಷ್ಠ' ಅಲ್ಲ; ವೈಚಾರಿಕ ಕ್ರಾಂತಿಯನ್ನುಂಟುಮಾಡುವ 'ವಿಶ್ವಾಮಿತ್ರ!'

# ಮುನ್ನುಡಿಗಳಿಂದ - ವಿಮರ್ಶೆಗಳಿಂದ

(ಸಂಕಲನ)

**ಗಾಂಧೀ ಸಾಹಿತ್ಯ :**

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರವರು ಕನ್ನಡಿಗರಿಗೆ ಚೆನ್ನಾಗಿ ತಿಳಿದವರಾಗಿದ್ದಾರೆ. ಅವರ ಕನ್ನಡದ ಅಕ್ಕರೆಯನ್ನೂ ದೇಶಕ್ಕಾಗಿ ಅವರು ತೋರಿಸುವ ತ್ಯಾಗಬುದ್ಧಿಯನ್ನೂ ಕನ್ನಡ ನಾಡು ಮೆಚ್ಚಿದೆ....ಇವರು "ಗಾಂಧೀ ಸಾಹಿತ್ಯ"ವನ್ನು ಕನ್ನಡಿಗರಿಗೆ ಒದಗಿಸಿ, ಕನ್ನಡ ಮಕ್ಕಳು ತೇಜಸ್ವಿಗಳಾಗುವಂತೆ ಕಾರ್ಯ ಕೈಗೊಂಡಿರುವುದು ನಮ್ಮ ಭಾಗ್ಯ.

—ಬಿ. ಎಂ. ಶ್ರೀಕಂಠಯ್ಯ

**ರಾಮಾವತಾರ :**

ಸಿದ್ದವನಹಳ್ಳಿಯವರಂತಹ ಸಿದ್ಧಹಸ್ತರು ರಾಮಾಯಣವನ್ನು ಕನ್ನಡಿಸಿರುವುದು ಕನ್ನಡಿಗರ ಭಾಗ್ಯೋದಯ ಎನ್ನಬಹುದು. ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ವಿಷಯಗಳನ್ನು ಸರಳವಾಗಿ ಆಕರ್ಷಕವಾಗಿಡುವುದರಲ್ಲಿ ಕೃಷ್ಣಶರ್ಮರು ಅಪ್ರತಿಮರು. ಈ ಸುಂದರ ಸಾಹಿತ್ಯವು ಕನ್ನಡಿಗರಿಗೆ ನಮ್ಮ ಸಂಸ್ಕೃತಿಯ ನಿಲುಗನ್ನಡಿಯಾಗಿ ಮನೆ ಮನೆಗಳಲ್ಲಿ ನಲಿಯಲಿ ಎಂದು ಆಶಿಸುವೆವು.

—ಶ್ರೀ ಶ್ರೀ ವಿಶ್ವೇಶ್ವತೀರ್ಥ ಶ್ರೀಪಾದಂಗಳವರು
ಶ್ರೀ ಪೇಜಾವರ ಮಠ, ಉಡುಪಿ.

ಭಾರತೀಯರ ಭವ್ಯವಾದ ಧಾರ್ಮಿಕ ಬದುಕು ಮಡುಗಟ್ಟಿದಂತಿರುವ ಕೇವಲ ಪಂಡಿತರ ಸ್ವತ್ತಾಗಿರುವ ಸಂಸ್ಕೃತ ವಾಲ್ಮೀಕಿ ರಾಮಾಯಣವನ್ನು ಪಾಮರರಿಗೆ ಹಂಚಿ, ಅದನ್ನು ಜನಸಾಮಾನ್ಯರೆಲ್ಲರ ಆಸ್ತಿಯನ್ನಾಗಿಸಲು ಶ್ರೀ ಸಿದ್ದವನಹಳ್ಳಿ ಕೃಷ್ಣ ಶರ್ಮರು ರಾಮಾಯಣವನ್ನು, ರಾಮಾವತಾರವನ್ನು ಕೊಟ್ಟು ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆ.

—ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠ, ತುಮಕೂರು.

ಸಂಸ್ಕೃತ ವಾಲ್ಮೀಕಿ ರಾಮಾಯಣವನ್ನು ಶ್ರೀ ಕೃಷ್ಣಶರ್ಮರು ಸರಳವಾದ ತಿಳಿಗನ್ನಡಕ್ಕೆ ಅನುವಾದಮಾಡಿ ಕನ್ನಡ ನಾಡಿಗೆ ಮಹೋಪಕಾರ ಮಾಡಿದ್ದಾರೆ. ಕನ್ನಡಿಗರು ಇದನ್ನು ಓದಿ ಪ್ರಯೋಜನ ಪಡೆಯುವಂತಾಗಲಿ. ಶ್ರೀ ಲಕ್ಷ್ಮೀಹಯಗ್ರೀವ ಸ್ವಾಮಿಯು ಎಲ್ಲರಿಗೂ ಅಂತಹ ಸದ್ಬುದ್ಧಿಯನ್ನು ಕರುಣಿಸಲಿ. ಶ್ರೀ ಕೃಷ್ಣಶರ್ಮರ ಶ್ರಮ ಸಾರ್ಥಕವಾಗಲಿ.

—ಶ್ರೀಮದಭಿನವ ರಂಗನಾಥ ಬ್ರಹ್ಮತಂತ್ರ ಸ್ವಾಮಿಗಳು
**ಶ್ರೀ ಪರಕಾಲ ಮಠ, ಮೈಸೂರು.**

ಪರ್ಣಕುಟಿ :

ಗಾಂಧಿಯವರಂತಹ ಮಹಿಮಾ ಪುರುಷರ ಜೀವನದ ಒಂದು ಚಿತ್ರವನ್ನು ಶ್ರೀಮಾನ್ ಕೃಷ್ಣಶರ್ಮರು ಇಲ್ಲಿ ರಚಿಸಿದ್ದಾರೆ. ಹಿರಿಯ ಒಂದು ಜೀವನವನ್ನು ಅರಿಯುವ ಅಧಿಕಾರದ ಮುಖ್ಯ ಅಂಶ ಅದನ್ನು ಕುರಿತ ಗೌರವ. ಜೊತೆಗೆ ಆ ಹಿರಿಯ ಜೀವನ ಯಾವ ಗುಣಗಳಿಂದ ಕೂಡಿದೆ ಎಂದು ಗ್ರಹಿಸಬಲ್ಲ ಸೂಕ್ಷ್ಮಬುದ್ಧಿ ಇರಬೇಕು. ಇದರ ಮೇಲೆ ಲೋಕಾನುಭವ ಅವಶ್ಯಕ. ವಿಷಯ ಸಂಗ್ರಹವಂತೂ ಅವಶ್ಯಕವೆಂದು ಬೇರೆ ಹೇಳಬೇಕಾಗಿಲ್ಲ. ಶ್ರೀಮಾನ್ ಕೃಷ್ಣಶರ್ಮರಿಗೆ ಈ ಅಧಿಕಾರ ಸಂಪತ್ತು ಎಲ್ಲ ಇದೆ.

ಕೇವಲ ವಿಷಯದ ದೃಷ್ಟಿಯಷ್ಟರಿಂದಲೇ ಅಮೂಲ್ಯವಾಗಿ ಇರಬಹುದಾಗಿದ್ದ ಈ ಗ್ರಂಥ ಶ್ರೀ ಕೃಷ್ಣಶರ್ಮರ ಸಾಹಿತ್ಯ ಕೌಶಲದಿಂದ ಮತ್ತಷ್ಟು ಶ್ರೇಷ್ಠತೆಯನ್ನು ಪಡೆದಿದೆ. ನಮ್ಮ ಈಗಣ ಗದ್ಯಲೇಖನ ಬಹುವಿಧದ ಸೌಂದರ್ಯವನ್ನು ಬೆಳೆಸಿಕೊಂಡಿದೆ. ಶ್ರೀ ಕೃಷ್ಣಶರ್ಮರ ಈ ಗ್ರಂಥದ ಲೇಖನದಲ್ಲಿ ಅದು ವಿಚಿತ್ರವಾದ ಸೌಂದರ್ಯವನ್ನು ಪಡೆದಿದೆಯೆಂದು ನನಗೆ ಕಾಣುತ್ತಿದೆ.

—ಮಾಸ್ತಿ ವೆಂಕಟೇಶ ಅಯ್ಯಂಗಾರ್

'ಪರ್ಣಕುಟಿ' ಗ್ರಂಥವು ಗಾಂಧೀಜಿಯ ಬಗೆಗೆ ತಾತ್ವಿಕ ವಿವೇಚನೆಯನ್ನೊಳಗೊಂಡ ಗ್ರಂಥವಾಗಿದೆ. ತಾತ್ವಿಕ ಚರ್ಚೆಯನ್ನೊಳಗೊಂಡ ಈ ಗ್ರಂಥದ ಶೈಲಿಯಲ್ಲಿ ಒಂದು ರೀತಿಯ ಬಿಗುವು ವ್ಯವಸ್ಥೆಯು ಕಂಡುಬರುವುದುಂಟು. ... ಈ ಗ್ರಂಥವನ್ನು ಓದುತ್ತಿರುವಾಗ ಲೇಖಕರ ಸೂಕ್ಷ್ಮ ನಿರೀಕ್ಷಣೆ, ವಿಪುಲ ಅನುಭವ ಗೋಚರವಾಗುತ್ತವೆ....ಇವರ ಸೂಕ್ಷ್ಮಗ್ರಾಹಿ ಮನಸ್ಸಿನ ಚಿತ್ರಗಳು ಮಾರ್ಮಿಕ ಶೈಲಿಗಳು ನಿರೂಪಿತವಾಗಿ ಉದಾತ್ತ ವಿಷಯ, ಉತ್ತಮ ಶೈಲಿ ಇವುಗಳ ಸಂಗಮದಿಂದ ಒಳ್ಳೆಯ ಸಾಹಿತ್ಯವೇ ಹೊರಹೊಮ್ಮಬೇಕಷ್ಟೆ.

—ಸ. ಸ. ಮಾಳವಾಡ

**ವರ್ಧಾ ಯಾತ್ರೆ :**

ತತ್ತ್ವಬೋಧೆ ದೊಡ್ಡದಲ್ಲ. ಆ ತತ್ತ್ವವನ್ನು ನಿತ್ಯ ಜೀವನದಲ್ಲಿ ಸಣ್ಣಪುಟ್ಟ ಕೆಲಸಗಳಲ್ಲಿ ಸಹ ಪ್ರಯೋಗಮಾಡಿ, ಜೀವ ಲೋಕವನ್ನು ನಡೆಸುವುದೇ ದೊಡ್ಡದು. ಅಂತಹ ಮಹಾ ಪ್ರಯೋಗಶಾಲೆ ವರ್ಧಾ, ವರ್ಧಾಯಾತ್ರೆ ಮಹಾಯಾತ್ರೆ. ಶ್ರೀ ಶರ್ಮರು ಈ ಮಹಾ ಯಾತ್ರಾಫಲವನ್ನು ಕನ್ನಡಿಗರಿಗೆ ತಕ್ಕಮಟ್ಟಿಗೆ ಮಾಡಿಕೊಟ್ಟಿದ್ದಾರೆ.

"ಜೀವನವು ಸುಖ ; ಜೀವನವು ಭವ್ಯ ; ಜೀವನವು ಸ್ವರ್ಗ" ಎಂದು ನೋಡಿದವರ ಬಾಯಲ್ಲಿ ಅನ್ನಿಸಿ ಅವರನ್ನು ಕುಣಿಸುವಂತಹ ಚಿತ್ರಗಳಿವು !

**—ತಿರುಮಲೆ ತಾತಾಚಾರ್ಯ ಶರ್ಮ**

'ವರ್ಧಾಯಾತ್ರೆ'ಯು ತಿಳಿವಿನಲ್ಲಿ ತಾತ್ತ್ವಿಕ ಗ್ರಂಥ, ರೀತಿಯಲ್ಲಿ ಉತ್ತಮ ಸಾಹಿತ್ಯ. ಚಿತ್ರಕನ ಚಿತ್ರಕರ್ಮ ಕೌಶಲದೊಡನೊಡನೆ ನಾಟಕಕಾರನ ಪಾತ್ರಾವಿಷ್ಕರಣದ ಪ್ರಾವೀಣ್ಯವು ಇಲ್ಲಿ ಮಸಗಿದೆ. 'ವರ್ಧಾಯಾತ್ರೆ'ಯು ಇಂದಿನ ಮಹಾಭಾರತದ ಜಾಗ್ರತ ಜೀವನದ ಇತಿಹಾಸದ ಸೆರಗು.

ಈ ಗ್ರಂಥದಲ್ಲಿ ಒಂದು ಮಹಾ ದೋಷವಿದೆ. 'ವರ್ಧಾಯಾತ್ರೆ'ಯನ್ನು ಓದಿದವರಿಗೆ ತೃಪ್ತಿಗಿಂತ ಅತೃಪ್ತಿಯೇ ಹೆಚ್ಚಾಗುವುದು. ಲೇಖಕರು ಉದ್ದೀಪಿಸುವ ಕೌತುಕ ಕುತೂಹಲಗಳು ೧೫೦ ಪುಟದ ವೃತ್ತಾಂತದಿಂದ ಹಿಂಗತಕ್ಕವಲ್ಲ.

**—ದ. ರಾ. ಬೇಂದ್ರೆ**

**ದೀಪಮಾಲೆ :**

ಕೃಷ್ಣಶರ್ಮರು ಬರೆದ ಈ ಕಿರು ಚರಿತ್ರೆಗಳನ್ನು ಓದುವಾಗ, ಇಷ್ಟಕ್ಕೇ ಏಕೆ ಬಿಟ್ಟರು ಎಂದೆನಿಸುವುದು. ಅಷ್ಟೊಂದು ಮೋಹಕ ಶಕ್ತಿ ಇದೆ ಇವರ ಶೈಲಿಯಲ್ಲಿ. ಇವರ ಈ ಲೇಖನಗಳನ್ನು ಓದುವಾಗ ಎ. ಜಿ. ಗಾರ್ಡಿನರ್, ಎಮಿಲ್ ಲಡ್‌ವಿಗ್, ಇಲ್ಲವೆ ಗುಂಥರ್ ಇವರ ನೆನಪಾಗುತ್ತದೆ. ನಿಸರ್ಗ ನಿರ್ಝರದಂತೆ ಇವರ ಶೈಲಿ ಒಮ್ಮೊಮ್ಮೆ ಸ್ಫಟಿಕ ಶಿಲೆಯಲ್ಲಿ ಖಳಖಳ ಹರಿಯುವಂತೆ, ಇನ್ನೊಮ್ಮೆ ಕೊಳಗಳಲ್ಲಿ ಗಂಭೀರವಾಗಿ ಸಾಗಿರುವಂತೆ, ಮತ್ತೊಮ್ಮೆ ಬಂಡೆಯಿಂದ ಬಂಡೆಗೆ ಹಾರುತಿರುವಂತೆ ಕಂಗೊಳಿಸುವುದು. ಅದರಲ್ಲಿ ಯಾವಾಗಲೂ ಒಂದು ಕುಣಿತವಿದೆ. ಒಂದು ಹಗುರವಿದೆ. ಒಂದು ಚಲ್ಲಾಟವಿದೆ.

**—ರಂಗನಾಥ ದಿವಾಕರ**

ಶೈಲಿ ವ್ಯಕ್ತಿತ್ವದ ಪ್ರತೀಕವೆಂಬ ಮಾತಿಗೆ ನಿದರ್ಶನವನ್ನು ನಾವು ಇಲ್ಲಿ ಕಾಣುತ್ತೇವೆ. ಇಲ್ಲಿನ ಬರವಣಿಗೆಯಲ್ಲಿ ಮಾರ್ಮಿಕ ಹಾಸ್ಯ, ವಿವಿಧ ಸಂಗತಿಗಳ ನಿರೂಪಣೆ,

ರಸವತ್ತಾದ ವರ್ಣನೆ, ಬಹು ಶ್ರುತತ್ವ, ನಿಕೃಷ್ಟವಾದ ವಿಮರ್ಶೆ, ಪುರಾಣ ಇತಿಹಾಸ, ರಾಜಕಾರಣದಲ್ಲಿಯ ಕುಶಲ ಹೋಲಿಕೆಗಳು, ಸ್ವಲ್ಪದರಲ್ಲಿಯೇ ಸ್ವಭಾವವನ್ನು ಮೂಡಿಸುವ ಕೌಶಲ್ಯ, ಮನೋರಂಜಕ ಚರ್ಚೆ—ಇವೆಲ್ಲ ಕಂಡುಬರುತ್ತದೆ. ಇದಲ್ಲದೆ ಈ ಲೇಖಕರ ಕಿಡಿನುಡಿಗಳು ಗದ್ಯಶೈಲಿಯಲ್ಲಿ ಅನುಪಮವಾಗಿದೆ.

—ಸ. ಸ. ಮಾಳವಾಡ

**ಕುಲದೀಪಕರು :**

'ಕುಲದೀಪಕರು'—ಎಂಬುದು ಕೆಲವು ವ್ಯಕ್ತಿಚಿತ್ರಗಳ ಸಂಗ್ರಹ. ಇದು ಶರ್ಮರು ಬರೆದ ವ್ಯಕ್ತಿಚಿತ್ರಗಳ ಮೂರನೆಯ ಗುಚ್ಛ. ಈ ಲೇಖಕರು ವ್ಯಕ್ತಿಚಿತ್ರ ವನ್ನು ಬರೆಯುವುದರಲ್ಲಿ ತಮ್ಮದೇ ಆದ ಒಂದು ಹೊಸ ಶೈಲಿಯನ್ನು ಕಲ್ಪಿಸಿಕೊಂಡಿ ದ್ದಾರೆ. ಅವರದು ಬೆಡಗಿನ ಭಾಷೆಯಾದರೂ ಅದರಲ್ಲಿ ಶಕ್ತಿ ಇದೆ; ಆ ಭಾಷೆ ಜೀವಂತವಾಗಿದೆ. ಓದಲು ತೊಡಗಿದರೆ ಮನಸೆಳೆದುಬಿಡುವ ಸವಿಯೂ ಸೊಬಗೂ ಅದರಲ್ಲಿದೆ. ಅವರ ವಾಕ್ಯಸರಣಿಯೂ ಹಾಗೇನೆ, ಯಾವ ಎಡರು ತೊಡರೂ ಇಲ್ಲದೆ ಸಲಿಲವಾಗಿ ಹರಿಯುತ್ತದೆ. ಆ ಶಬ್ದಶಿಲ್ಪಿಯ ಕೈವಾಡವನ್ನು ಹೆಚ್ಚು ಬಣ್ಣಿಸ ಬೇಕಾಗಿಲ್ಲ. ಅವರ ಗ್ರಂಥಗಳೇನು ಕನ್ನಡಿಗರಿಗೆ ಹೊಸವಲ್ಲ; ಎಲ್ಲರೂ ಅವುಗಳ ಸವಿಯನ್ನು ಉಂಡು ಸಂತೋಷಪಟ್ಟವರೆ.

—ಲೀಲಾ ಕಾರಂತ

**ಮಾತಿನ ಮಂಟಪ :**

ಕೃಷ್ಣಶರ್ಮರ ಕನ್ನಡಿ ರಾವುಗನ್ನಡಿಯಲ್ಲ, ಅದು ಚಂದ್ರಕಾಂತ ಶಿಲೆಯಲ್ಲ, ಸೂರ್ಯಕಾಂತ ಶಿಲೆ. ಈ ಸೂರ್ಯಕಾಂತದ ಕೆಳಗೆ ಹಿಡಿದ ಪ್ರಶ್ನೆಗಳ ಜೊಳ್ಳು ಗೂಪವೆಲ್ಲ ಸುಟ್ಟು ಹೋಗಿ ಅವುಗಳ ತಿರುಳಿನ ನಗ್ನಸತ್ಯ ನಮ್ಮನ್ನು ಎದುರಿಸುತ್ತದೆ. ಒಮ್ಮೊಮ್ಮೆ ತಿರುಳಿನ ಭಾಗವೂ ಅಗ್ನಿಸಮರ್ಪಣವಾಗಿದೆಯೆಂದು ಓದುಗರಿಗೆನಿಸ ಬಹುದು. ಆದರೆ ಸೂರ್ಯಕಾಂತದ ವಿಲಾಸದಲ್ಲಿ – 'ಮಾತಿನ ಮಂಟಪ'ದಲ್ಲಿ ಅದು ಅಲ್ಲಲ್ಲಿ ಅನಿವಾರ್ಯ. ಸೂರ್ಯಕಾಂತ ಶಿಲೆಯ ಅದ್ಭುತ ಪ್ರತಿಭೆಯನ್ನು ಅನುಭವಿ ಸಲು ಒಂದೆರಡು ಸಲ ಬೆರಳು ಸುಟ್ಟುಕೊಂಡರೆ ತಪ್ಪಲ್ಲ. ಕೃಷ್ಣಶರ್ಮರ ಕ್ರಾಂತಿ ದರ್ಶನದಲ್ಲಿ ಸೂರ್ಯಕಾಂತದ ಗುಣವಿದೆ.

—ವಿ. ಕೃ. ಗೋಕಾಕ್

ಇವರ ರಾಜಕೀಯದಂತೆ ಕಲೆಯ ಮೀಮಾಂಸೆ ಕೂಡ ರಸ್ಕಿನ್, ಟಾಲ್ ಸ್ಟಾಯ್, ಗಾಂಧೀಜೀಯವರಂಥವರ ವಿಚಾರಸರಣಿಯಿಂದ ರೂಪಿತವಾದದ್ದು.

ಆದರೆ ಸಾಹಿತ್ಯದ ಪ್ರತ್ಯಕ್ಷವಾದ ಬರವಣಿಗೆ ಮಾತ್ರ ಇವರಿಗೆ ಅನಿವಾರ್ಯವಾದ ವ್ಯಾಪಾರವಾಗಿದೆ. ಸೋದ್ದಿಶ್ಯ ಸಾಹಿತ್ಯವನ್ನು ಇವರು ನಿರುದ್ದಿಶ್ಯವಾಗಿ ಸೃಷ್ಟಿ ಮಾಡಿದ್ದಾರೆ....ರಾಜಕೀಯದಲ್ಲೇ ಆಗಲಿ, ಸಾಹಿತ್ಯದಲ್ಲೇ ಆಗಲಿ ಕೃಷ್ಣಶರ್ಮರು ಪ್ರಚಂಡ ಧೀಮಂತರು. ಸುಶಿಕ್ಷತನ ಮಡಿ ಮೈಲಿಗೆಯ ಭಾವನೆ ಇವರನ್ನು ಸೋಕಿಲ್ಲವಾದರೂ ಬುದ್ಧಿಜೀವಿಯ ಅನಾಸಕ್ತಿ ಇವರಲ್ಲಿ ಬೇಕಾದಷ್ಟಿದೆ.

—**ಕೀರ್ತಿನಾಥ ಕುರ್ತಕೋಟಿ**

ಗೆಳೆಯರ ಗುಂಪಿನ

# ಯತಿರಾಜ ರಾಮಾನುಜ

(ಮೊದಲನೆ ಭಾಗ)

---

ಜಿ. ಪಿ. ರಾಜರತ್ನಂ

ನನಗೆ ತಿಳಿದ ಮಟ್ಟಿಗೆ, ಶ್ರೀಮದ್ರಾಮಾನುಜಾಚಾರ್ಯರನ್ನು ಕುರಿತು ಹೊಸ ಕನ್ನಡದಲ್ಲಿ ಪ್ರಕಟವಾದ ಮೊತ್ತಮೊದಲನೇ ಪುಸ್ತಕ ಇದು. ಪುಸ್ತಕವೇನೂ ದೊಡ್ಡದಲ್ಲ. ಕ್ರೌನ್ ೧/೮ ಆಕಾರದ ೪೨ ಪುಟ ಮಾತ್ರ. ಜೊತೆಗೆ ೬ ಪುಟ ಮುಖಪತ್ರ ಇತ್ಯಾದಿ. ಒಟ್ಟು ೪೮ ಪುಟ.

ಪುಸ್ತಕದ ಮೇಲೆ ಬರೆದವರ ಹೆಸರಿಲ್ಲ. ಬೆಲೆ ಇಲ್ಲ. ೧೯೨೬ರಲ್ಲಿ ಬೆಂಗಳೂರು ಪ್ರೆಸ್ಸಿನಲ್ಲಿ ಅಚ್ಚಾಯಿತೆಂಬ ವಿವರ ಮಾತ್ರ ಇದೆ. ಬರೆದವರ ಹೆಸರು ಅಚ್ಚಾಗದಿದ್ದರೂ, ಇದು **ಶ್ರೀಮಾನ್ ಸಿದ್ದವನಹಳ್ಳಿ ಕೃಷ್ಣಶರ್ಮರು** ಬರೆದದ್ದೆಂದು ನಮಗೆ ಅವರಿಂದಲೇ ತಿಳಿದುಬಂದಿದೆ. ಆಗ ಅವರು ಧಾರವಾಡದ 'ಗೆಳೆಯರ ಗುಂಪಿನವರು' ಆಗಿದ್ದರಿಂದ ಪುಸ್ತಕ ಗುಂಪಿನ ಹೆಸರಿನಲ್ಲಿದೆ.

ಪುಸ್ತಕಕ್ಕೆ ಏನೂ ಮುನ್ನುಡಿಯಿಲ್ಲ. ಅರ್ಪಣೆಯ ಪುಟದಲ್ಲಿ **'ಶ್ರೀ ಶ್ರೀ ಯತಿರಾಜ ರಾಮಾನುಜನಿಗೆ'** ಎಂಬ ಸಮರ್ಪಣೆ ಇದೆ. ಅದರ ಕೆಳಗೆ—

'ಶ್ರೇಯಾನ್ ದ್ರವ್ಯಮಯಾಜ್ಞಾತ್ ಜ್ಞಾನಯಜ್ಞಃ ಪರಂತಪ'

ಎಂಬ ಗೀತಾ ವಾಕ್ಯವಿದೆ. ಅದರ ಅಡಿಯಲ್ಲಿ 'ಜಯಮ್ಮ' ಎಂಬ ಹೆಸರಿದೆ.*

ಇದರ ಮುಂದಿನ ಪುಟದಲ್ಲಿ—**'ಅವತಾರ ಸಮರ್ಥನೆ'** ಎಂಬ ಶೀರ್ಷಿಕೆಯ ಕೆಳಗೆ — ಬ್ರಹ್ಮಾಂಡ ಪುರಾಣ, ಭೂತಪುರೀ ಮಹಾತ್ಮ್ಯ, ಭಾರ್ಗವ ಪುರಾಣ, ಯಾದವಗಿರಿ ಮಹಾತ್ಮ್ಯ, ಭಾಗವತ, ಬ್ರಹ್ಮವೈವರ್ತ ಪುರಾಣ, ಮತ್ತು ಹಾರೀತ ಸ್ಮೃತಿ ಇವುಗಳಿಂದ ಶ್ರೀ ರಾಮಾನುಜರ ಅವತಾರಕ್ಕೆ ಸಂಬಂಧಿಸಿದ ಭವಿಷ್ಯತ್ ಸೂಚೀವಾಕ್ಯಗಳನ್ನು ಉದ್ಧರಿಸಿಕೊಟ್ಟಿದ್ದಾರೆ.

ಇಲ್ಲಿಂದ ಮುಂದಕ್ಕೆ ರಾಮಾನುಜ ಕಥಾವಸ್ತು, ೯ ಖಂಡಗಳಲ್ಲಿ.

"ಶ್ರೀ ವೈಷ್ಣವ ಧರ್ಮಕ್ಕೆ ಗುರು ಗ್ರಹವು ಅನುಕೂಲಸ್ಥಾನದಲ್ಲಿದ್ದ ಕಾಲ. ಶ್ರೀರಂಗದಲ್ಲಿ ನಾಥಮುನಿ ಯಮುನಾಚಾರ್ಯ

---

*ಶ್ರೀಮತಿ ಜಯಮ್ಮ ಶರ್ಮಾಜಿಯವರ ತಂಗಿ. ತಂಗಿಯ ಹೆಸರಿನಲ್ಲಿ ಶರ್ಮಾಜಿ ಪುಸ್ತಕವನ್ನು ಸಮರ್ಪಿಸಿದ್ದಾರೆ.

ಪ್ರಭೃತಿಗಳ ನೇತೃತ್ವದಲ್ಲಿ ಶ್ರೀವೈಷ್ಣವ ಮಂಡಲಿಯು ಕೀರ್ತಿಗೆ ಹೆಚ್ಚಳದಿಂದ ಸಿಚ್ಚಳವಾಗಿ ಬೆಳಗುತ್ತಿತ್ತು. ಬರಿಯ ತರ್ಕಾಟನಕ್ಕೆ ಮನಸೋತು ಮಿಥ್ಯಾವಾದಿಗಳಷ್ಟೇ ಅಲ್ಲದೆ ಮಿಥ್ಯಾಚಾರಿಗಳೂ ಆಗಿದ್ದ ಅವಿಚಾರೀ ವಿಚಾರವಂತರ ಬಣಗದ ಹೃದಯದಲ್ಲಿ ಭಕ್ತಿಸಾಮೃತದ ಹೊಳೆ ಹರಿಯಲು ಮೊದಲಾಗುತ್ತಿದ್ದ ಕಾಲ. ಸತ್ಯ, ಮಿಥ್ಯ, ಬ್ರಹ್ಮ, – ಏನೇನೋ ಕೇವಲ ಶಬ್ದಮಯ ವೇದಾಂತದ ವಾದಗಳ ಕಟುಧ್ವನಿಯಡಗಿ ಭಾಗವತದ ಧರ್ಮದ ಭಕ್ತಿಯ ಮೃದು ಮಧುರ ದಿವ್ಯಗಾನವು ರಸವಂತ ಹೃದಯದಲ್ಲಿ ಉಕ್ಕಿ ತುಳುಕಿ ಚೆಲ್ಲಾಡಿ ಹರಿಯುತ್ತಿದ್ದ ಕಾಲ. ಆಳ್ವಾರರು ಆಚಾರ್ಯರು—ಎಲ್ಲಾ ಒಂದೇ ದಿವ್ಯಗಾನದ ಪ್ರವಾಹ.

"ತರ್ಕ ತರ್ಕವೆಂದು ಕುಣಿದು ಜನರು ಬೇಸತ್ತು ಭಕ್ತಿಯ ಹಾದಿ ಕಂಡು ಕುಣಿಯಲು ಮೊದಲಿಟ್ಟರು. ಯಮುನಾಚಾರ್ಯರು ತಾರ್ಕಿಕರಲಿ ತಾರ್ಕಿಕರಂತೆಯೂ ಭಕ್ತರಲಿ ಭಕ್ತರಂತೆಯೂ ಹೊಳೆದು ಶ್ರೀವೈಷ್ಣವ ಧರ್ಮದ ಕೀರ್ತಿಸ್ತಂಭವಾಗಿದ್ದರು. ಭಕ್ತರ ಅರಸರಾ ಯಮುನಾಚಾರ್ಯ. ಅವರ ಹೆಸರೇ 'ಆಳವಂದಾರ್'— ಆಳಬಂದವರು, ಭಕ್ತರನಾಳ ಬಂದವರು.

ಅಂಥ ಸಮಯದಲ್ಲೇ ಶ್ರೀ ಮದ್ರಾಮಾನುಜಾಚಾರ್ಯರು ಹುಟ್ಟಿದುದು ............"

—ಎಂದು ಪುಸ್ತಕ ಆರಂಭವಾಗುತ್ತದೆ. ಮುಂದುವರಿದು,

"ಆಚಾರ್ಯರ ಕಾಲದ ವಿದ್ಯಾಭ್ಯಾಸವು ಈಗಿನ ಕಾಲದಂತೆ ಬೇಕುಬೇಡಾದ ಕಾಟವಾಗಿರಲಿಲ್ಲ. ಆ ಗುರುಕುಲವಾಸದ ವಿದ್ಯೆಯ ಸೊಬಗೇ ಬೇರೆ, ಶಿಕ್ಷಣ ಕ್ರಮವೇ ಬೇರೆ, ವಿದ್ಯೆಯೇ ಬೇರೆ. 'ಅಕ್ಕಿ ಬೆಳೆಯ ವಿದ್ಯೆ' ಕಲಿತದ್ದ ಕಾರಿಬಿಡುವುದು ಮಾತ್ರವೇ ಬಲ್ಲ ಯಂತ್ರಗಳು, ಆಚಾರ ರಂಗದಲ್ಲಿಳಿಯದ ವಿಚಾರ: 'ವಚನದಲಿ ಶುಚಿ ಏರ ಸಾಧುತ್ವ' —ಇವು ಯಾವುದು ಆಗ ಇರಲಿಲ್ಲ. ತನುಮನಧನಗಳನ್ನು ಗುರುವಿಗರ್ಪಿಸಿ ಗುರುವಿನ ಗುಲಾಮನಾಗಬೇಕಾದ ಅಗತ್ಯ ಈಗಿಲ್ಲ. ಈಗ ವಿದ್ಯೆ ಸುಲಭಲಭ್ಯ. ಆಗ ಹಾಗಿರಲಿಲ್ಲ. ಗುರುವಿನ ಗುಲಾಮನಾಗದೆ ಏನೂ ಇಲ್ಲ. ಆಚಾರ್ಯಾನುಗ್ರಹವಾಗದೆ ಯಾವುದೂ ಇಲ್ಲ. ಯಾಕೆ? ವಿದ್ಯೆಯೆಂದರೆ ಭವಾರ್ಣವಸೇತುವೆಂದೇ ಅವರ ಅಭಿಪ್ರಾಯವಿತ್ತು. ಮುಕುತಿಯೇ ಅವರ ವಿದ್ಯೆಯ ಫಲ. ಆದುದರಿಂದಲೇ ಗುರುವಿನ ಗುಲಾಮನಾಗಬೇಕಾದ ಅಗತ್ಯ. ಈಗ ಮುಕುತಿಯೂ ಬೇಡ, ಆಚಾರ್ಯಾನುಗ್ರಹವೂ ಬೇಡ. ವಿದ್ಯೆಯೊಂದು ಬಂದರೆ ಸಾಕಂತೆ

"ಗುರುಸೇವೆಯೇ ಗುರುಕುಲವಾಸದ ಮಾಧುರ್ಯ ಗುರುಸೇವೆಯಿಲ್ಲದ ಗುರುಕುಲವಾಸದ ಕೆಚ್ಚಲಲಿರುವ ಉಣ್ಣೆಯಂತೆ. ದೇಹವನು ಗುರುವಿಗಧೀನಮಾಡಿ ಗಳಿಗೆಗಳಿಗೆಯೂ ಗುರುಸನ್ನಿಧಿಯಲಿ ಗುಲಾಮನಂತೆ ಎಲ್ಲ ಕೆಲಸವನೂ ಮಾಡುತ್ತ ಆನಂದ ದೇವಾಲಯದೊಳಗಿನ ದೇವತೆಯನಾರಾಧಿಸುವುದರ ಮಧುರತೆಯನು ನಾವು ಬಲ್ಲೆವೇನು ಭುಭುಕ್ಷುಗಳು? ಮುಮುಕ್ಷುಗಳ ಸೊತ್ತು ಆ ಸಂತೋಷ..!

ಎಂದು ಶ್ರೀ ರಾಮಾನುಜರು ಯಾದವ ಪ್ರಕಾಶರ ಹತ್ತಿರ ವಿದ್ಯಾಭ್ಯಾಸಮಾಡಿದನ್ನು ವರ್ಣಿಸುತ್ತಾರೆ.

**ಯತಿರಾಜ ರಾಮಾನುಜ** ಪುಸ್ತಕದೊಳಗಿನ ಬರವಣಿಗೆ ಪರಿಚಯವಾಗಲೆಂದು ಮೇಲಿನ ಖಂಡಗಳನ್ನು ಎತ್ತಿಕೊಟ್ಟಿದೆ. ರಾಮಾನುಜರು ತಮ್ಮಗುರುವಿನ ಆಜ್ಞೆಯನ್ನು ಉಲ್ಲಂಘಿಸಿ, ದ್ವಯ ಮಂತ್ರದ ರಹಸ್ಯಾರ್ಥವನ್ನು ಲೋಕಕ್ಕೆ ತಿಳಿಯಪಡಿಸಿದ ಹೊತ್ತಿನಲ್ಲಿ ಗುರು ತಮ್ಮ ಶಿಷ್ಯನನ್ನು ಕೊಂಡಾಡಿದರು :

"ಯತಿರಾಜನ ಪರಮೌದಾರ್ಯಬುದ್ಧಿ, ಸ್ವಾರ್ಥತ್ಯಾಗದ ಪರಾಕಾಷ್ಠೆ, ದಯಾಳುತನಗಳು ಅವರ ಮನಸನು ಕರಗಿಸಿವು. 'ನನ್ನ ಕೊಳಕು ಎದೆಯೊಳಗೇಕೆ ಈ ದಯಾಳುತನ ಹರಿಯಲಿಲ್ಲ. ಹುಳಿತ ಹೃದಯವಿದು. ಕುರುಡು ಜೀವವಿದು. ಯತಿರಾಜ, ನೀನು ಮರ್ತ್ಯಮಾನವನಲ್ಲ. ಅವತಾರಿ ಶೇಷನೇ ಸರಿ. ಅಲ್ಲದಿರಲು ಈ ಪರಹಿತದ ಪರಾಕಾಷ್ಠೆ ಹೇಗೆ ಬಂದೀತು? ನಿಜ. ನೀನು ಅವತಾರಿ ಶೇಷನೇ ನಿಜ.' ಗೋಷ್ಠಿಪೂರ್ಣರ ಹೃದಯದ ಎಲ್ಲಿ ರಸವು ಬಲು ದಿನದಿಂದ ಇದ್ದ ಕಳೆಯೇರಿ ಒಡೆದಂತಾಗಿ ಮನೋಹರ ಪ್ರವಾಹವಾಗಿ ಹರಿಯಿತು. 'ಮಗು, ಇಂದಿನಿಂದ ನಿನಗೆ **ಎಂಬೆರುಮಾನಾರ್** ಎಂದು—ನನ್ನ ಸ್ವಾಮಿ—ಹೆಸರಾಗಲಿ. ನೀನು ನನ್ನೊಡೆಯನೇ ನಿಜ. ಇನ್ನು ವಿಶಿಷ್ಟಾದ್ವೈತವು ರಾಮಾನುಜ ಸಿದ್ಧಾಂತವೆನಿಸಲಿ. ತಿರುಮಂತ್ರವನೇ ಏಕೆ ಎಲ್ಲವನೂ ಜಗತ್ತಿಗೆ ಸಾರು. ಇನ್ನುಳಿದ ರಹಸ್ಯಗಳನೂ ನಿನಗೆ ಹೇಳುವೆ.' ಗೋಷ್ಠಿಪೂರ್ಣರಿಗೆ ಯತಿರಾಜನ ಮೇಲೆ ಕೊನೆಗಾಣದ ಒಲವು ಮೊಳೆಯಿತು."

ಶ್ರೀ ರಾಮಾನುಜರು ಗಾರ್ಹಸ್ಥ್ಯವನ್ನು ಬಿಟ್ಟು ಯತ್ಯಾಶ್ರಮವನ್ನು ಸ್ವೀಕರಿಸಿದವರೆಗೆ ಇರುವ ಈ ಅಚ್ಚುಕಟ್ಟಾದ ಪುಟ್ಟಪುಸ್ತಕ ಪುನರ್ಮುದ್ರಣ ಕಾಣದಿರುವುದೂ ಇದರ ಎರಡನೆಯ ಭಾಗ ಬಾರದಿದ್ದದೂ ನಮ್ಮ ದುರದೃಷ್ಟ.

# ಶಬ್ಧಶಿಲ್ಪದ 'ರಾಮಾವತಾರ'

ಬಿ. ಶ್ರೀ. ಪಾಂಡುರಂಗರಾವ್

"ರಾಮಾವತಾರ" ೧೫೮೯ರಷ್ಟು ಪುಟಗಳ ವಿಸ್ತಾರವುಳ್ಳ ಒಂದು ಬೃಹದ್ಗ್ರಂಥ. ವಾಲ್ಮೀಕಿ ರಾಮಾಯಣ ಸಂಸ್ಕೃತ ಭಾಷೆಯಲ್ಲಿ ಅತಿಸರಳ ಶೈಲಿಯ ಮಹಾಕಾವ್ಯವೆಂದು ಪ್ರಸಿದ್ಧವಾಗಿದೆ. ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರ 'ರಾಮಾವತಾರ'ವೂ ಅಷ್ಟೆ. ಸರಳದಲ್ಲಿ ಸರಳವಾಗಿ ಹೃದಯಂಗಮವಾಗಿ ಸಾಮಾನ್ಯ ಓದುಗನನ್ನು ಕೂಡ ಸೆರೆ ಹಿಡಿಯುತ್ತದೆ. ಶ್ರೀ ಶರ್ಮರನ್ನು ಒಂದು ಸಂದರ್ಭದಲ್ಲಿ ಒಬ್ಬ ವ್ಯಾಪಾರಿ ಸಂಧಿಸಿದರಂತೆ. ಅವರು ಅಂಥ ವಿದ್ಯಾವಂತರೇನೂ ಅಲ್ಲ. ಸರಳವಾದ ಕಥೆ ಕಾದಂಬರಿಗಳನ್ನು ಓದಿ ಗ್ರಹಿಸುವ ಸಾಮಾನ್ಯ ಓದುಗ. ಅವರು ಶರ್ಮರನ್ನು ನೋಡುತ್ತಲೇ ಕೈಮುಗಿದು, "ಅದೆಷ್ಟು ಚೆನ್ನಾಗಿ ಸುಲಭವಾಗಿ 'ರಾಮಾವತಾರ'ವನ್ನು ಬರೆದಿದ್ದೀರಿ. ನಾನು ಓದಿ ತುಂಬ ಸಂತೋಷಪಟ್ಟೆ. ಅರ್ಥವಾಯಿತು" ಎಂದು ಪ್ರಶಂಸಿಸಿದರಂತೆ.

ಶ್ರೀ ಕೃಷ್ಣಶರ್ಮರ ಸರಳ ಶೈಲಿಯ ಧೀಮಂತ ಗದ್ಯದ 'ರಾಮಾವತಾರ'ದ ಪ್ರಾರಂಭವೇ ಸಾಕು ಓದುಗರನ್ನು ತನ್ನ ಮೋಡಿಯ ಗಾಡಿಯಿಂದ ತಲೆದೂಗಿಸುತ್ತದೆ.

ಮೂಲ ಸಂಸ್ಕೃತದ ರಾಮಾಯಣದ ಮೊದಲ ಸರ್ಗದ ೧೦೦ ಶ್ಲೋಕಗಳ ಸಾರಾಂಶವನ್ನು ಶ್ರೀ ಕೃಷ್ಣಶರ್ಮರು ತಮ್ಮ 'ರಾಮಾವತಾರ'ದ ಮೊದಲ ಅಧ್ಯಾಯದಲ್ಲಿ ಕೇವಲ ಹದಿನಾರು ಸಾಲುಗಳಲ್ಲಿ ಬಹಳ ಸಂಗ್ರಹವಾಗಿ ಹೇಳಿದ್ದಾರೆ. ಒಂದು ಪದಕ್ಕೆ ಒಂದು ವಾಕ್ಯ, ಅತಿ ದೀರ್ಘವಾದ ವಾಕ್ಯವೆಂದರೆ ಅದು ಕೇವಲ ಎಂಟು ಪದಗಳ ಸಮುಚ್ಚಯ. ಇಷ್ಟು ಸರಳವಾಗಿ, ಹತ್ತೆಂಟು ಪದಗಳ ವಾಕ್ಯಗಳಲ್ಲಿ ಒಂದು ಮಹಾಕಾವ್ಯವನ್ನು ಓದಿಸಿಕೊಂಡು ಹೋಗುವ ಎದೆಗಾರಿಕೆ ಶ್ರೀ ಶರ್ಮರಿಗೇ ಶಕ್ಯ.

ಶ್ರೀ ಕೃಷ್ಣಶರ್ಮನು ಶಬ್ಧಶಿಲ್ಪದಿಂದ 'ರಾಮಾವತಾರ' ಎಂಬ ಸುಂದರ ವಿಗ್ರಹವನ್ನು ಕೆತ್ತಿದ್ದಾರೆ. ಅದನ್ನು ಓದಿಯೇ ಆನಂದಿಸಬೇಕು.

# ಗೋಸಂವರ್ಧನ ಕ್ಷೇತ್ರದಲ್ಲಿ ಶರ್ಮರು

---

ದತ್ತಾತ್ರೇಯ ಮಂಜುನಾಥ ಬುರಡೆ

ಯಾವದೇ ಒಂದು ಸಾರ್ವಜನಿಕ ಕ್ಷೇತ್ರದಲ್ಲಿ ಧ್ಯೇಯಸಿದ್ಧಿಗೆ ಎರಡು ಸಾಧಕರ ಸಾಧನೆ ಅನಿವಾರ್ಯವೆಂದು ನಮ್ಮೆಲ್ಲರ ಅನುಭವ. ಮಹರ್ಷಿ ವೇದವ್ಯಾಸರ ವಾಕ್ಯದಲ್ಲಿ ಹೇಳುವದಾದರೆ ಅರ್ಜುನ ಮತ್ತು ಶ್ರೀಕೃಷ್ಣ ಇಬ್ಬರು ಇದ್ದಲ್ಲಿ ಆ ಕಾರ್ಯವು ವಿಜಯಶಾಲಿ ಎಂಬುದು ನಿಶ್ಚಿತ. ೧೯೫೦ ರಲ್ಲಿ ಕರ್ನಾಟಕದಲ್ಲಿ ಗಾಂಧೀಜಿ ಪ್ರಣೀತ ಗೋಸಂವರ್ಧನೆಯ ಮಹಾನ್ ಕಾರ್ಯವನ್ನೇನೋ ಪ್ರಾರಂಭಿಸಲಾಯಿತು. ಆದರೆ ಅದು ಕೇವಲ ಸಭೆ - ಸಮ್ಮೇಲನಗಳಲ್ಲೆ ಸೀಮಿತವಿತ್ತು. ಪ್ರತ್ಯಕ್ಷ ಕಾರ್ಯಕ್ಕೆ ಅವಶ್ಯಕವಿದ್ದ ಜನ ೧೯೫೩ ತನಕ ಕಾಣಿಸಲಿಲ್ಲ. ನನ್ನ ಮಟ್ಟಿಗೆ ನಾನು ಒಂಟಿ ಆಗಿ ಒಂದು ಕಾಡಿನಲ್ಲಿ ಆಶ್ರಮವೇನೋ ಪ್ರಾರಂಭ ಮಾಡಿದೆ. ಅರ್ಜುನನಂತೆ ನನಗೂ ದಿಗ್ಭ್ರಮೆ. ಗೋಸಂವರ್ಧನದ ಕಾರ್ಯ ಮಹಾತ್ಮಾ ಗಾಂಧೀಜಿ ಹೇಳಿದಂತೆ ಒಂದು ವಿಕಟ ಸಾಹಸ. ಸ್ವರಾಜ್ಯ ಗಳಿಸುವದಾದರೂ ಸುಲಭ. ನಿರಾಶಾಜನಕ ಪರಿಸ್ಥಿತಿಯಲ್ಲಿ ನನಗೆ ಅಪರಿಚಿತವಾಗಿದ್ದ ಶ್ರೀ ಕೃಷ್ಣಶರ್ಮರು ತಾವಾಗಿ ಬಂದು ಕೂಡಿಕೊಂಡ ನಂತರ ಗೋಸಂವರ್ಧನದ ಕಾರ್ಯ ಸುಗಮವಾಗಿ ಪ್ರಾರಂಭವಾಯಿತು. ನಂತರ ಅದು ಒಂದು ರಿಜಿಸ್ಟರ್ಡ್ ಟ್ರಸ್ಟ್ ಆಗಿ ಬೆಳೆಯಿತು. ಮುಂದೆ ಬೆಂಗಳೂರು ಮತ್ತು ಅನ್ಯಜಿಲ್ಲೆಗಳಲ್ಲಿ ಸುಮಾರು ೧೦೦ ಹಳ್ಳಿಗಳ ೧೦೦೦ ಗೋವುಗಳಲ್ಲಿ ತಳಿ ಅಭಿವೃದ್ಧಿ ಕಾರ್ಯ ೧೯೬೦ ರೊಳಗೆ ಮುಗಿಸಲಾಯಿತು. ಸಾರ್ವಜನಿಕರಲ್ಲಿ ಇದರ ಪ್ರಭಾವ ಬೆಳೆದು ಸಂಘದ ಟ್ರಸ್ಟಕ್ಕೆ ೧೦೦ ಎಕರೆ ಜಮೀನು ದಾನವಾಗಿ ಪಡೆಯಲಾಗಿ ಮುಂದೆ ಮೈಸೂರು ಪ್ರದೇಶ ಗೋಶಾಲಾ ಪಿಂಜರಾಪೋಲ ಫೇಡರೇಶನ ವಿಭಾಗವೊಂದು ಪ್ರಾರಂಭಿಸಲಾಗಿ ಸರಕಾರದ ಮಾನ್ಯತೆ, ಸಹಾಯ ಕೂಡ ಪಡೆಯಲಾಯಿತು. ಸಂಘದಲ್ಲಿ ನಾನು ಒಬ್ಬ ವಿಧಾಯಕ ಕಾರ್ಯಕರ್ತ ಮತ್ತು ೩-೪ ಗೆಳೆಯರು. ಆದರೆ ಸಂಸ್ಥೆ ಬೆಳೆಯಲಿಕ್ಕೆ ಶ್ರೀ ಕೃಷ್ಣಶರ್ಮರ ಕರ್ಮಕುಶಲತೆ, ಸಾಹಿತ್ಯಿಕ ದೃಷ್ಟಿ, ಸರ್ವೋದಯ ವಿಚಾರಧಾರೆ, ನಿಸ್ವಾರ್ಥ ದುಡಿತ, ತ್ಯಾಗ, ಬೌದ್ಧಿಕ, ವೈಜ್ಞಾನಿಕ ಮಾರ್ಗದರ್ಶನ, ಗಾಂಧೀ ತತ್ವದಲ್ಲಿ ಅಪಾರ ಶ್ರದ್ಧೆ, ದೇವಭಕ್ತಿ, ಭ್ರಾತೃಭಾವನೆ ಮತ್ತು ನಿರಹಂಕಾರಿ ವೃತ್ತಿ ಇವೇ ಕಾರಣ. ಈ ದೈವಿಸಂಪತ್ತಿಯಿಂದ ಕೂಡಿದ ಮಹಾಪುರುಷ ಶ್ರೀ ಶರ್ಮಾಜಿ. ಕರ್ನಾಟಕದ ಗೋಸಂವರ್ಧನೆಯಲ್ಲಿ ತನ್ನ ತನು, ಮನ, ಧನ ಅರ್ಪಿಸಿದ ಈ ಮಹಾಪಿತನಿಗೆ ಅನಂತ ಪ್ರಣಾಮ.

# "ಇವರ ಹಿಂದು ಹೆಜ್ಜೆಲಿ"

ದಾಮೋದರ ಮುಂದಡಾ

ರಾಜಕೀಯದ ಸಂದರ್ಭದಲ್ಲಿ ಮಾತನಾಡುವಾಗ, ಅಧಿಕಾರಕ್ಕೂ ಬಲಕ್ಕೂ ನಡುವಣ ವ್ಯತ್ಯಾಸವನ್ನು ಅನೇಕರು ಅರಿತುಕೊಳ್ಳರು. ಬಲ ಇಲ್ಲದ ಅಧಿಕಾರ ಅನಾವಶ್ಯಕ, ಹಾಗೂ ಹೆಚ್ಚು ಕಾಲ ನಿಲ್ಲದಿರಬಹುದು. ಆದರೆ ಬಲವಾದರೊ ಆಜ್ಞೆ ಮಾಡಿ ಅಧಿಕಾರವನ್ನು ಬಳಸಬಲ್ಲದು.

ಈ ದೇಶದಲ್ಲಿ ಅಹಿಂಸಾತ್ಮಕ ರಚನಾತ್ಮಕ ಕ್ರಾಂತಿ ಆಗಬೇಕೆಂದು ಗಾಂಧೀಜಿ ಬಯಸಿದರು. ರಚನಾತ್ಮಕ ಹಾಗೂ ಅಹಿಂಸಾತ್ಮಕ ಬದಲಾವಣೆಗೆ, ಒಂದು ಸಂಘಟನೆ ಅಗತ್ಯ. ಆ ಸಂಘಟನೆಗೆ ಸದ್ದಿಲ್ಲದೆ ಸತತವಾಗಿ ನಡೆಯುವ ರಚನಾತ್ಮಕ ಕಾರ್ಯದಿಂದ ಮಾತ್ರ ಸಾಧ್ಯ. ಜನತೆ ರಚನಾತ್ಮಕ ಕಾರ್ಯಕ್ರಮವನ್ನು ಪೂರಾ ನಡೆಸಿದರೆ ಸಾಕು, ಬ್ರಿಟಿಷರೊಡನೆ ಹೋರಾಟವೇ ಬೇಕಿಲ್ಲ. ಸ್ವರಾಜ್ಯ ತಾನೇ ಬರುತ್ತದೆ. ಎಂದು ಗಾಂಧೀಜಿ ಆಗಿಂದಾಗ್ಗೆ ಹೇಳುತ್ತಿದ್ದುದು ಏಕೆ ಎಂಬುದನ್ನು ನಾವು ಅರಿಯಬಹುದು. ಈ ದರ್ಶನ ಹಾಗೂ ದೃಢನಂಬಿಕೆಯ ಆಧಾರದ ಮೇಲೆಯೇ ಅವರು "ಒಂದೇ ವರ್ಷದಲ್ಲಿ ಸ್ವರಾಜ್ಯ" ಎಂಬ ಕರೆಕೊಟ್ಟಿದ್ದುದು. ಆ ಒಂದು ವರ್ಷದಲ್ಲಿ ನಾವು ಸ್ವರಾಜ್ಯಗಳಿಸದೆ ಹೋದುದಕ್ಕೆ – ಮುಂದೆ ತಡವಾಗಿ ಗಳಿಸಿದರೂ – ನಾವು ಅವರ ರಚನೆಗಳನ್ನು ಪಾಲಿಸಲು ವಿಳಂಬ ಮಾಡಿದ್ದೇ ಕಾರಣ.

ಬ್ರಿಟಿಷ್ ಆಡಳಿತದ ಭಾರತ ಪ್ರದೇಶದಲ್ಲಿ ಏನು ಅಗತ್ಯವಾಗಿತ್ತೋ, ಅದು ಭಾರತದ ದೇಶೀಯ ಸಂಸ್ಥಾನಗಳಲ್ಲಿ ಹೆಚ್ಚು ಅಗತ್ಯವಾಗಿತ್ತು. ಅದರಲ್ಲೂ, ಸಾಮಾಜಿಕ ಜೀವನವೇ ಸೊನ್ನೆಯಾಗಿದ್ದ ಹೈದರಾಬಾದಿನಲ್ಲಿ ಮತ್ತೂ ಹೆಚ್ಚು ಅಗತ್ಯವಾಗಿತ್ತು. ಇದನ್ನು ಕಂಡುಕೊಂಡವರು ಕಡಮೆ. ಸಮ್ಮೇಳನಗಳು, ನಿರ್ಣಯಗಳು, ನಿಜಾಂ ಸಾಹೇಬರಿಗೆ ಒಪ್ಪಿಸಿದ ಅರ್ಜಿ ಅಹವಾಲು ಬೇಡಿಕೆ ಎಷ್ಟೋ! ಆದರೆ ನಿಮಗೆ ಸಾಮರ್ಥ್ಯ ಇಲ್ಲದಿದ್ದರೆ ಕೇಳುವವರಾರು ?

ಇದನ್ನು ಶೀಘ್ರದಲ್ಲಿ ಅರ್ಥಮಾಡಿಕೊಂಡವರು ಒಬ್ಬ ಪುಟ್ಟ ವ್ಯಕ್ತಿ ಕೃಷ್ಣ ಶರ್ಮರು ! ಹೈದರಾಬಾದಿನಲ್ಲಿಯೂ ಈ ಸಾಮರ್ಥ್ಯವನ್ನು ಉಂಟುಮಾಡಬೇಕಾದ ಅವಶ್ಯಕತೆ ಅವರ ಸೂಕ್ಷ್ಮವೂ ಉಜ್ವಲವೂ ಆದ ದೃಷ್ಟಿಗೆ ಗೋಚರಿಸಿತು. ಇದಕ್ಕೆ ಅಹಿಂಸೆಯ ತರಬೇತಿ ಬೇಕಾಗಿತ್ತು. ಆ ತರಬೇತಿಗೆ ಸಾಂಘಿಕ ರಚನೆ ಅಗತ್ಯ.

ನೂಲುವ ಸಪ್ತಾಹ ಎಂದು ಸಣ್ಣದಾಗಿ ಆರಂಭವಾಯಿತು. ಖಾದಿ ಭಂಡಾರ ತೆರೆದವು. ಪ್ರಭಾತಫೇರಿ ನಡೆದವು. ಉಪ್ಪಿನ ಸತ್ಯಾಗ್ರಹದಲ್ಲಿ ಪಾಲುಗೊಳ್ಳಲು ತಳಮಳಿಸುತ್ತಿದ್ದ ಯುವಜನ ಅನೇಕರು ಮುಂಬೈ, ಬೆಳಗಾಂ ಹಾಗೂ ವಿಜಯವಾಡಗಳಿಗೆ ಹೊರಟಿದ್ದರು. ಆದರೆ ಶರ್ಮರು ಅವರಲ್ಲಿ ಅನೇಕರನ್ನು ರಚನಾತ್ಮಕ ಕಾರ್ಯವನ್ನು ಒಡನೆಯೆ ಆರಂಭಿಸುವ ಸಲುವಾಗಿ ಸಂಸ್ಥಾನದಲ್ಲೆ ನಿಲ್ಲಲು ಮನವೊಪ್ಪಿಸಿದರು.

ಹೀಗೆ ನಿಲ್ಲಲು ಯುವಜನರನ್ನು ಒಪ್ಪಿಸುವುದು ಸುಲಭವಾಗಿರಲಿಲ್ಲ. ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮದೆಲ್ಲವನ್ನೂ ತಮ್ಮ ಬಂಧು ಬಳಗ ಎಲ್ಲರನ್ನೂ ತ್ಯಾಗ ಮಾಡಲು ಅವರು ಕಾತರರಾಗಿದ್ದರು. ಆದರೆ ಶರ್ಮಾಗೆ ತಮ್ಮ ತರ್ಕಸಾಮರ್ಥ್ಯದಿಂದ, ಆದರ್ಶದ ನಿಷ್ಠೆಯಿಂದ ಆ ಉತ್ಸಾಹೀ ತರುಣರನ್ನು ಒಪ್ಪಿಸಿದರು. ಅನಂತರ ಆ ಜನ ಮನಃಪೂರ್ತಿಯಾಗಿ ಕಾರ್ಯನಿರತರಾದರು. ಆದರೆ ಶರ್ಮಾಜಿ ಇದ್ದುದು ಮಾತ್ರ ಎಂದೂ ಹಿನ್ನೆಲೆಯಲ್ಲೆ! ಸದ್ದಿಲ್ಲದ ಕಾರ್ಯದಲ್ಲಿ ಅವರಿಗೆ ನಂಬಿಕೆ. ಅಂಥ ಕಾರ್ಯ ಶಕ್ತಿಪೂರ್ಣ, ಅದು ಎಂದಾದರೊಮ್ಮೆ ಶಾಂತಿಯುತ ಕ್ರಾಂತಿಯನ್ನು ತರಬಲ್ಲದು ಎಂದು ಅವರ ನಂಬಿಕೆ. ಯಾವುದೇ ಕೆಲಸವನ್ನು ಶಕ್ತಿಯುತ ಮಾಡಬೇಕಾದರೂ ನಮ್ಮಲ್ಲಿ ಶಕ್ತಿಯ ಭಂಡಾರ ಇರಬೇಕು. ಶರ್ಮಾಜಿಯವರಲ್ಲಿ ಈ ಗುಣದ ಕೊರತೆ ಇರಲಿಲ್ಲ. ಅವರಲ್ಲಿದ್ದ ಈ ವಿಶಿಷ್ಟ ಶಕ್ತಿ ಜೊತೆಗೆ ಮನವೊಲಿಸುವಂತಹ ಸಾಮರ್ಥ್ಯದ ವರಗುಣ, ಇವೇ ಅಯ್ಯಂಗಾರ್, ಎಂ. ಹನುಮಂತರಾವ್, ಆರ್.ಎಸ್. ನಾಯಕ ಹಾಗೂ ಇತರ ಹಿರಿಯರನ್ನೂ ಮೆಚ್ಚಿಸಿದ್ದು. ಅವರು ಕೈಆಡಿಸದೆ ಯಾವ ಸಾರ್ವಜನಿಕ ಕಾರ್ಯದ ಬರೆಹದ ಕರಡೂ ಪೂರ್ಣಗೊಳ್ಳದು. ಹೈದರಾಬಾದಿನಲ್ಲಿನ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದ ಅನೇಕ ಐತಿಹಾಸಿಕ ದಾಖಲೆಗಳ ಒಕ್ಕಣೆ ಅವರದೇ. ಅವರು ಹೈದರಾಬಾದನ್ನು ಬಿಟ್ಟು ಹೋಗಬೇಕಾಗಿ ಬಂದ ಮೇಲೆಯೂ, ಸಂಸ್ಥಾನದ ಹೊರಗೆ ಸಭೆ ನಡೆದಾಗಲೆಲ್ಲ, ತಮ್ಮ ಸಲಹೆ ಕೊಡಲು, ರಾಜಕೀಯ ಚರ್ಚೆಗಳಲ್ಲಿ ಭಾಗವಹಿಸಲು ಅವರನ್ನು ಕರೆಸಲಾಗುತ್ತಿತ್ತು.

ಅವರ ಗಡೀಪಾರಿನ ಕತೆಯೇ ಒಂದು ಇತಿಹಾಸ. ದಿವಂಗತ ಪಂಡಿತ ಮೋತೀಲಾಲರ ವಾರ್ಷಿಕದಿನವನ್ನು ಆಚರಿಸಲು ಬಯಸಿದೆವು. ಆತ ತೀರಿಕೊಂಡಾಗ ಪೇಟೆಗಳೆಲ್ಲ ಮುಚ್ಚಿದ್ದವು, ಭಾರಿ ಮೆರವಣಿಗೆ ಹೊರಟಿತ್ತು. ಅಂಥ ಮನಮುಟ್ಟುವ ಕಾರ್ಯಕ್ರಮ ಹೈದರಾಬಾದಿನಲ್ಲಿ ಕಂಡದ್ದೇ ಇಲ್ಲ ಆ ಮೊದಲು. ವಾಮನರಾವ್ ನಾಯಕ ಹಾಗೂ ಎಂ. ಹನುಮಂತರಾಯರಂಥ ಹಿರಿಯರೂ ಕಿರಿಯರ ಒತ್ತಾಯದ ವಿಶ್ವಾಸಕ್ಕೆ ಮನಸೋತು ಭಾಗವಹಿಸಿದ್ದರು. ಈಗ ಪ್ರಥಮ ವಾರ್ಷಿಕದಿನವನ್ನು ಮರೆತುಬಿಡುವುದೇ ? ಒಂದು ಸಭೆ ಏರ್ಪಾಟಾಯಿತು. ಶ್ರೀಮತಿ ಪದ್ಮಜಾ ನಾಯ್ಡು (ಬಂಗಾಳದ ಮಾಜಿ ರಾಜ್ಯಪಾಲರು), 'ರೈತ' ಸಂಪಾದಕರಾದ ಶ್ರೀ ನರಸಿಂಗರಾವ್ ಹಾಗೂ ಶ್ರೀ ಕೃಷ್ಣಶರ್ಮರು ಮಾತನಾಡಲು ಒಪ್ಪಿದರು.

ಸಭೆಯನ್ನು ನಡೆಸಕೂಡದು ಎಂದು, ಸಭಾಧ್ಯಕ್ಷನಾಗಿದ್ದ ನನ್ನ ಮೇಲೆ ಜಿಲ್ಲಾ ಮ್ಯಾಜಿಸ್ಟ್ರೇಟರು ನೋಟೀಸು ಜಾರಿಮಾಡಿದರು. ಭಾರಿ ಜನಸಮುದ್ರವೇ ನೆರೆದಿತ್ತು. ಸರ್ಕಾರವೂ ಹಾಜರಿತ್ತು. ಶಸ್ತ್ರಬಲ ಸೇನೆ, ತುಪಾಕಿ ಎಲ್ಲವೂ ಸಜ್ಜಾಗಿದ್ದವು ಜನರ ಜೊತೆ ಕಾದಲು ! ಅಂಥ ಪ್ರದರ್ಶನ ಜನಕ್ಕೆ ಕಾಣಸಿಕ್ಕಿದ್ದು ಅದೇ ಮೊದಲ ಸಲ ! ಜನ ಕದಲಲು ನಿರಾಕರಿಸಿದರು. ಸಭೆ ಸೋಕಾಗಿ ನಡೆಯಿತು !

ಮುಂದೆ ಆದದ್ದು ಗಡೀಪಾರು, ಸಭಾಧ್ಯಕ್ಷನಾದ ನನಗೆ ಹಾಗೂ ಒಬ್ಬ ಭಾಷಣಕಾರ ಶ್ರೀ ಶರ್ಮಾಜಿಗೆ ! ಏಕೆಂದರೆ ನಾವಿಬ್ಬರೂ ಸಂಸ್ಥಾನಕ್ಕೆ ಹೊರಗಿನವರಾಗಿದ್ದೆವಲ್ಲ ! ನಾನು ಹುಟ್ಟಿದ್ದು ಔರಂಗಾಬಾದಿನಲ್ಲಿ. ಶರ್ಮಾಜಿಯೊ ಬಹುಕಾಲದಿಂದಲೂ ಹೈದರಾಬಾದಿನವರೇ ಆಗಿದ್ದರು. ಆದರೆ ನಮ್ಮಿಬ್ಬರನ್ನೂ ಆಚೆಗೆ ಕಳಿಸುವುದೇ ಸರಿ ಎನ್ನಿಸಿತ್ತು ಸರ್ಕಾರಕ್ಕೆ.

ಕ್ರಾಂತಿಯ ಬೀಜವನ್ನು ಆಗಲೇ ಬಿತ್ತಲಾಗಿತ್ತು. ಅದು ಶೀಘ್ರದಲ್ಲೇ ಹೈದರಾಬಾದ್ ಸಂಸ್ಥಾನ ಕಾಂಗ್ರೆಸ್ ಆಗಿ ರೂಪುಗೊಂಡಿತು. ಸ್ವಾಮಿ ರಾಮಾನಂದ ತೀರ್ಥರು ವಿಷಯವನ್ನು ಒತ್ತಿ ಹೇಳಿದರು. ಶ್ರೀ ಗೋವಿಂದರಾವ್ ನಾನಲ್, ಶ್ರೀ ರವಿನಾರಾಯಣರೆಡ್ಡಿ, ಶ್ರೀ ರಾಮಕೃಷ್ಣ ಧೋವೆ, ಶ್ರೀ ಜನಾರ್ಧನರಾವ್ ದೇಸಾಯಿ ಹಾಗೂ ಶ್ರೀ ಶ್ರೀನಿವಾಸರಾವ್ ಬೋರೀಕರ್ ಇವರೇ ಮೊಟ್ಟಮೊದಲಿನ ಸಮಿತಿಯ ಸದಸ್ಯರು. ಎಲ್ಲರೂ ದಸ್ತಗಿರಿಯಾದರು. ಅನಂತರ ಚಳುವಳಿ ಮಹಾತ್ಮಗಾಂಧಿಯವರ ಮಾರ್ಗದರ್ಶನದಲ್ಲಿ ನಡೆಯಿತು. ಚಳುವಳಿಯನ್ನು ಮುನ್ನಡೆಸಲು, ಶ್ರೀಗಳಾದ ಹೇಡಾಜಿ, ಷರಾಫ್, ಶರ್ಮಾಜಿ ಹಾಗೂ ನಾನು ಸೇರಿದ್ದ ಒಂದು ಖಾಸಗಿ ಸಮಿತಿ ರಚನೆಯಾಯಿತು. ಚಳುವಳಿ ಬಲವಾಯಿತು. ಹೇಡಾಜಿಯವರು ಹೈದರಾಬಾದಿನಲ್ಲಿ ಚಳುವಳಿಯನ್ನು ಸಂಘಟಿಸಿದರು. ಷರಾಫರು ಔರಂಗಾಬಾದಿನಲ್ಲಿ ವಿದ್ಯಾರ್ಥಿಗಳನ್ನು ಹುರಿದುಂಬಿಸಿದರು. ಸುಮಾರು ಮುನ್ನೂರು ಜನ–ಹಿರಿಯರು–ಸರ್ಕಾರಿ ಆಜ್ಞೆಗಳನ್ನು ಉಲ್ಲಂಘಿಸಿ ಸೆರೆಗೆ ಒಳಗಾದರು. ಕೊನೆಯ ಸತ್ಯಾಗ್ರಹ ನಡೆಸಿದ ತಂಡದ ಮುಂಚೂಣಿಯಲ್ಲಿ ಶ್ರೀ ಕಾಶೀನಾಥರಾವ್ ವೈದ್ಯ ಇದ್ದರು. ಮುಂದೆ ಅವರು ಹೈದರಾಬಾದಿನ ವಿಧಾನಸಭಾಧ್ಯಕ್ಷರಾದರು. ಅವರ ಮನವೊಲಿಸಿದ ಕೀರ್ತಿ ಶ್ರೀ ಹೇಡಾಜಿ ಹಾಗೂ ಶ್ರೀ ಶರ್ಮಾಜಿಯವರಿಗೆ ಸಲ್ಲಬೇಕು. ಏಕೆಂದರೆ ಇಬ್ಬರಲ್ಲೂ ಶ್ರೀ ವೈದ್ಯರಿಗೆ ಅಪಾರ ಶ್ರದ್ಧೆ. ಶ್ರೀ ಹೇಡಾಜಿ ಹಾಗೂ ಶ್ರೀ ಷರಾಫರ ಕಾರ್ಯ ಹಾಗೂ ಸಂಘಟನಾಕೌಶಲ ಸರ್ವಮಾನ್ಯವಾಯಿತು. ಆರ್ಯಸಮಾಜದ ಹಾಗೂ ಹಿಂದೂ ಸಭೆಯ ಚಳುವಳಿಗಳನ್ನು ನಮ್ಮದರ ಸಮಯಕ್ಕೆ ಜೋಡಿಸದಿರುವಂತೆ ಅವುಗಳ ಮುಖಂಡರನ್ನು ನಾವು ಒಲಿಸಲು ಯತ್ನಿಸಿದೆವು. ಏಕೆಂದರೆ ಸಂಸ್ಥಾನದ ಕಾಂಗ್ರೆಸ್ ಪೌರಹಕ್ಕುಗಳಿಗಾಗಿ ಯಾವ ಹೋರಾಟ ನಡೆಸಿತೋ ಸಫಲವಾಯಿತೆಂದರೆ ಆರ್ಯಸಮಾಜ ಹಾಗೂ ಹಿಂದೂಸಭೆಗಳ ಬೇಡಿಕೆಗಳೂ ಈಡೇರಿದಂತೆಯೇ. ಆದರೆ ಅವರು ಒಪ್ಪಲಿಲ್ಲ. ಮಹಾತ್ಮಾ ಗಾಂಧಿ ಸಹ ಶ್ರೀ ಘನಶ್ಯಾಮ ಗುಪ್ತ ಹಾಗೂ ಅವರ ಸಂಗಡಿಗರನ್ನು ಒಪ್ಪಿಸಲು ಯತ್ನಿಸಿ

ಸೋತರು. ಆ ಗೆಳೆಯರು ತಮ್ಮ ಪಟ್ಟು ಬಿಡಲಿಲ್ಲ. ಸಂಸ್ಥಾನ ಕಾಂಗ್ರೆಸ್ಸು ಯಾವುದೇ ಕೋಮುವಾದಿ ಇಲ್ಲವೇ ಮತೀಯ ಸಂಸ್ಥೆಗಳಿಂದಲೂ ಸಂಬಂಧಪಟ್ಟಿರಲಿಲ್ಲ ಎಂಬುದನ್ನು ತೋರಿಸಿಕೊಡಲು ಇದ್ದುದು ಒಂದೇ ದಾರಿ, ಚಳುವಳಿಯಿಂದ ದೂರ ನಿಲ್ಲುವುದು. ಕಾಂಗ್ರೆಸ್ಸು ಹಾಗೆಯೆ ಮಾಡಿ ಕಣದಿಂದ ಹಿಮ್ಮೆಟ್ಟಿ ಚಳುವಳಿಯನ್ನು ತಾತ್ಕಾಲಿಕವಾಗಿ ನಿಲ್ಲಿಸಿತು. ಇದರಿಂದ ಎಲ್ಲ ವಿಚಾರವಂತರ ಹಾಗೂ ಇತರ ರಾಜಕೀಯವೇತ್ತರ ಮನಸ್ಸಿನಮೇಲೆ ಹಾಗೂ ಸರ್ಕಾರದ ಮೇಲೆ ಅಸದೃಶ ಪರಿಣಾಮ ಆಯಿತು.

ಮಹಾತ್ಮಾಜಿ ಹಾಗೂ ಸೇಠ್ ಜಮುನಾಲಾಲ ಬಜಾಜರು ಸಮಸ್ಯೆಯನ್ನು ಕೈಗೆತ್ತಿಕೊಂಡು ಸರ್ ಅಕ್ಬರ್ ಹೈದರಿ ಅವರೊಂದಿಗೆ ಪ್ರಸ್ತಾಪ ನಡೆಸಿದರು. ನಾಯಕರ ಬಿಡುಗಡೆಗಾಗಿ ಶ್ರೀ ಕೃಷ್ಣಶರ್ಮ ಹಾಗೂ ಶ್ರೀ ಹೆಚ್. ಸಿ. ಹೇಡಾ ಮುಖ್ಯ ಪಾತ್ರ ವಹಿಸಿದರು. ಅವರು ಆಗಿಂದಾಗ್ಯೆ ಗಾಂಧೀಜಿಯನ್ನು ಕಂಡು ಸಂಸ್ಥಾನದ ವಿದ್ಯ ಮಾನಗಳನ್ನು ತಿಳಿಸುತ್ತಿದ್ದರು.

ಈ ವೇಳೆಗೆ ಶರ್ಮಾಜಿ ಬೆಂಗಳೂರಿನಲ್ಲಿ ಕಾರ್ಯಾರಂಭ ಮಾಡಿದ್ದರು. ಅವರದು ಒಳ್ಳೆ ಹರಿತವಾದ ಲೇಖನಿ. ಕನ್ನಡ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಗಾಂಧೀ ತತ್ತ್ವವನ್ನು ಪ್ರಚಾರ ಮಾಡಿದರು. ಕ್ಷಿಪ್ರದಲ್ಲೆ ಅವರು ಗಾಂಧೀ ಸಾಹಿತ್ಯ ಸಂಘ, ಪುಸ್ತಕ ಭಂಡಾರವನ್ನು ಸ್ಥಾಪಿಸಿದರು. ಗೆಳೆಯರ ಹಾಗೂ ವಿಶ್ವಾಸಿಗಳ ತಂಡವನ್ನು ಕಟ್ಟಿದರು.

ಶ್ರೀ ಬಿ. ರಾಮಕೃಷ್ಣರಾಯರ ಮುಂದಾಳುತನದಲ್ಲಿ ಹೈದರಾಬಾದಿನ ಮೊದಲ ಮಂತ್ರಿ ಮಂಡಲ ರಚಿತವಾದಾಗ, ರಾಜ್ಯ ಕಾಂಗ್ರೆಸ್ ನಾಯಕರು, ಶ್ರೀ ಕೃಷ್ಣ ಶರ್ಮರನ್ನು ಹೈದರಾಬಾದಿನಲ್ಲಿ ಬಂದು ಇರಲು ಆಹ್ವಾನಿಸಿದರು. ಆದರೆ ಶರ್ಮಾಜಿ ತಮ್ಮ ಕಾರ್ಯಕ್ಕೆ ಯಾವುದೇ ಪ್ರತಿಫಲವನ್ನು ಬಯಸಿದವರಲ್ಲ. ದೂರ ಇರಲು ನಿರ್ಣಯಿಸಿದರು. ಅಧಿಕಾರಷಾಹೀ ರಾಜಕೀಯದ ಸೆರಳಿನ ಸುಳಿವನ್ನು ಅವರು ಆಗಲೇ ಕಂಡಿದ್ದರು. ಆ ಹಾದಿಯನ್ನು ತುಳಿಯಲು ಒಪ್ಪಲಿಲ್ಲ. ಬಯಸಿದ್ದರೆ ಅವರು ಯಾವುದಾದರೂ ಇಲಾಖೆಯ–ಅದರಲ್ಲೂ ಪ್ರಕಟಣ ಶಾಖೆಯ ಮುಖ್ಯಸ್ಥರಾಗ ಬಹುದಿತ್ತು. ಆದರೆ ಅವರು ತಮ್ಮ ಸೇವೆಯನ್ನು ಸಂಪಾದನೆಯ ಬಂಡವಾಳವಾಗಿ ಹೂಡಲು ಎಂದೂ ಯೋಚಿಸಿರಲಿಲ್ಲ. ಶರ್ಮಾಜಿಯವರು ಸರ್ವೋದಯ ಚಳುವಳಿ ಯಿಂದಲೂ ಹೊರತಾಗಿ ನಿಂತರು, ವಿನೋಬಾಜಿಯ ಕರ್ನಾಟಕ ಪ್ರವಾಸ, ಅದರಲ್ಲೂ ಬೆಂಗಳೂರಿನ ಪ್ರವಾಸದ, ಯಶಸ್ಸಿನ ಅವರ ಶ್ರಮವೇ ಬಹುಮಟ್ಟಿಗೆ ಕಾರಣವಾಗಿದ್ದರೂ ಸಹ.

ಅವರು ತಮ್ಮ ಸುತ್ತ ನಿಸ್ವಾರ್ಥ ಕಾರ್ಯಕರ್ತರ ಒಳ್ಳೆಯ ತಂಡವನ್ನೇ ನಿರ್ಮಿಸಿ ದ್ದಾರೆ. ತಾವು ಗೈದ ಸೇವೆಗೆ ಯಾವುದೇ ಪ್ರತಿಫಲವನ್ನು ಬಯಸದಂಥ ತಂಡಕ್ಕೆ ಸೇರಿದವರು ಅವರು. ಈಗೀಗ ಅಂಥ ಕಾರ್ಯಕರ್ತರೇ ಅಪರೂಪ. ಇಷ್ಟು ಕಾಲವೂ

ನಡೆದ ಗಾಂಧೀ ತತ್ತ್ವಪ್ರಸಾರದ ಐತಿಹಾಸಿಕಕಾರ್ಯ ಎಂದಾದರೊಮ್ಮೆ ಫಲಕೊಟ್ಟೀತು, ರಚನಾತ್ಮಕ ಕೆಲಸ ಇಲ್ಲದೆ, ಸೂಕ್ತ ತತ್ತ್ವದ ಆಧಾರ ಇಲ್ಲದೆ ನಿಜವಾದ ಶಕ್ತಿ ದುರ್ಲಭ. ಈ ನಿಟ್ಟಿನಲ್ಲಿ ಶರ್ಮಾಜಿಯವರು ಅಗ್ರಗಾಮೀ ಕೆಲಸವನ್ನು ಮಾಡಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಅವರ ಸ್ಥಾನ ವಿಶಿಷ್ಟವಾದುದು. ಯಾರಿಗೂ ಸರಿಸಮನಾದುದು. ತಾವು ವಿನೋಬಾಜಿಯವರ ಶಿಷ್ಯರೆಂದುಕೊಳ್ಳುವ ಮಂದಿ ಬಹಳ ಈಗ. ಆದರೆ 'ಗೀತಾ ಪ್ರವಚನ'ವನ್ನು ಕನ್ನಡಕ್ಕೆ ಅನುವಾದಿಸಿ ಕೊಟ್ಟು, ಕನ್ನಡಿಗರಿಗೆ ವಿನೋಬಾಜಿಯನ್ನು ಪರಿಚಯಮಾಡಿಕೊಟ್ಟವರಲ್ಲಿ ಶರ್ಮಾಜಿಯೇ ಮೊಟ್ಟಮೊದಲಿಗರು. ಎಲ್ಲಕ್ಕೂ ಮಿಗಿಲಾಗಿ ಅವರೊಬ್ಬ ಪ್ರಥಮ ಶ್ರೇಣಿಯ ನಿಸ್ವಾರ್ಥ ಕಾರ್ಯಕರ್ತರು. ಅಂತೆಯೆ ನಾನು ಹೇಳುವುದು, ಅವರ ಹಿಂಡು ಹೆಚ್ಚಲಿ! ತಥಾಸ್ತು.

# ಕೃಷ್ಣಶರ್ಮರು-ಕನ್ನಡ ಸಾಹಿತ್ಯ ಪರಿಷತ್ತು

**ವೆಂಕಟೇಶ ಸಾಂಗಲಿ**

"**ಈ**ಗ ರಾಜಕೀಯ ಹೋರಾಟ ಮುಗಿದು ದೇಶ ಸ್ವತಂತ್ರವಾಗಿದೆ. ತನ್ನ ಭಾಷೆ, ಸಂಸ್ಕೃತಿಗಳನ್ನು ಮತ್ತೆ ಚಿಗುರಿಸಿ, ಬೆಳೆಯಿಸುವ ಕಾಲ ಬಂದಿದೆ. .... ಸಾಹಿತ್ಯದ, ಸಂಸ್ಕೃತಿಯ ಮೃದುಶಕ್ತಿ ದೇಶದ ಧಮನಿಗಳಲ್ಲಿ ಓಡಾಡಿದ್ದರೆ ಬರೀ ರಾಜಕೀಯ ಧಾಂದಲೆ, ಆರ್ಥಿಕದ ಕೋಟಲೆ ಹೆಚ್ಚಾಗಿ ಜನಕ್ಕೆ ಅಗತ್ಯವಾಗಿ ಬೇಕಾದ ಮುಖ್ಯ ಸಂಸ್ಕಾರ ಇಲ್ಲದಾಗುತದೆ........"

ಕೃಷ್ಣಶರ್ಮರ ಈ ಮಾತುಗಳು ಸ್ವಾತಂತ್ರ್ಯೋತ್ತರ ಭಾರತದ ಸಾಂಸ್ಕೃತಿಕ ಅಗತ್ಯಗಳನ್ನು ಸೂಚಿಸುತ್ತವೆ. ಬಹುವ್ಯಾಪಿಯಾಗಿದ್ದ ಅವರ ಸಾರ್ವಜನಿಕ ಜೀವನದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಒಂದು ಕಾರ್ಯರಂಗವಾದದ್ದು ಈ ಸಂದರ್ಭದಲ್ಲಿ. ಕಲಬುರ್ಗಿಯಲ್ಲಿ ದಿನಾಂಕ ೬-೩-೧೯೪೯ರಲ್ಲಿ ಸೇರಿದ್ದ ಮೂವತ್ತು ಮೂರನೆಯ ವಾರ್ಷಿಕಾಧಿವೇಶನದಲ್ಲಿ ಸಮ್ಮೇಳನಾಧ್ಯಕ್ಷ ಉತ್ತಂಗಿ ಚನ್ನಪ್ಪನವರು ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆ ಹೊಂದಿದರು. ಕೃಷ್ಣಶರ್ಮರು ಕಾರ್ಯದರ್ಶಿಯಾಗಿ ಆಯ್ಕೆಯಾದರು.

ಅಧ್ಯಕ್ಷರು ಪರಸ್ಥಳದಲ್ಲಿ. ಆದುದರಿಂದ ಪರಿಷತ್ತಿನ ನಿತ್ಯದ ವ್ಯವಹಾರಗಳಿಗೆ ಕಾರ್ಯದರ್ಶಿಗಳೇ ಆಗ ಸಂಚಾಲಕರು. ಅಂದಿನ ಪರಿಷತ್ತಿನ ಆರ್ಥಿಕ ತೊಂದರೆಯನ್ನು ಕುರಿತು ಕಾರ್ಯದರ್ಶಿಗಳು ಹೀಗೆ ಹೇಳಿದ್ದಾರೆ: "ಪರಿಷತ್ತಿನ ನಿತ್ಯಗಟ್ಟಲೆಯ ವೆಚ್ಚ ತಿಂಗಳಿಗೆ ರೂ. ೫೦೦. ನಮಗೆ ಬರುವ ವರಮಾನ ತಿಂಗಳಿಗೆ ರೂ. ೩೩೦. ತಿಂಗಳಿಗೆ ರೂ. ೧೭೦ ನಮಗೆ ನಷ್ಟವಾಗುತ್ತದೆ. ಇದಲ್ಲದೆ ಹೆಚ್ಚು ಕಟ್ಟಳೆಯ ವೆಚ್ಚ ಬೇರೆ. ಪ್ರವಾಸ, ಕಾರ್ಯ ಸಮಿತಿಯ ವೆಚ್ಚ, ಪ್ರಕಟನೆಗಳಿಗೆ ಬೇಕಾದ ಬಂಡವಾಳ, ಜಾಣ-ಕಾವ ಪರೀಕ್ಷೆಗಳಿಗೆ ತಗಲುವ ವೆಚ್ಚ, ಕನ್ನಡ ಕೋಶಕ್ಕೆ ಸರಕಾರ ಕೊಡುವ ಹಣಕ್ಕೆ ಮಿಕ್ಕು ನಾವು ಮಾಡುವ ವೆಚ್ಚ ಇವೆಲ್ಲವೂ ಸುಮಾರು ತಿಂಗಳಿಗೆ ರೂ.೧೫೦ಕ್ಕೆ ಕಡಮೆ ಇಲ್ಲದಂತೆ ವೆಚ್ಚವಾಗುತ್ತದೆ. ಎಲ್ಲ ಒಟ್ಟು ತಿಂಗಳಿಗೆ ೨೭೦-೩೦೦ ರೂ. ಸಾಲದೆ ಬರುತ್ತದೆ. ಇದರಿಂದ ನಮ್ಮ ಶಾಶ್ವತ ನಿಧಿಗಳ ಅಸಲನ್ನೇ ನಾವು ಬಳಸಿ ಕಾಲ ನೂಕುವಂತಾಗಿದೆ. ಬಹಳ ಸಂಕಟವಾಗುವ ಸ್ಥಿತಿ........ಕೊನೆಯ ಪಕ್ಷ ಒಂದು ಸಾವಿರ ಸದಸ್ಯರನ್ನಾದರೂ ಮಾಡಬೇಕು" ಎಂದು ಪರಿಷತ್ತಿನ ಪ್ರದೇಶ ಸಮಿತಿಗಳಲ್ಲಿ ಮನವಿ ಮಾಡಿಕೊಂಡರು.

ಅದುವರೆಗೆ ಮೈಸೂರು ಸರಕಾರ ಕೊಡುತ್ತಿದ್ದ ಒಂದು ಸಾವಿರ ರೂಪಾಯಿಯು ಕನ್ನಡ-ಕನ್ನಡ ಕೋಶದ ವಾರ್ಷಿಕ ಸಹಾಯಧನ ೧೯೪೯ರಿಂದ ಎರಡು ಸಾವಿರಕ್ಕೆ ಏರಿತು. ಬೆಂಗಳೂರು ಪೌರಸಭೆ ವರ್ಷಕ್ಕೆ ೫೦೦ ರೂ. ಕೊಡಮಾಡಿತು. ಆದರೆ ಸುಮಾರು ಇಪ್ಪತ್ತು ಸಾವಿರ ರೂ. ವಾರ್ಷಿಕ ವೆಚ್ಚದ ಯೋಜನೆಗೆ ಇದು ಏನೇನೂ ಸಾಲದು. ಮೈಸೂರು ಪೌರಸಭೆಯಿಂದ ೨೦೦ ರೂ. ವಾರ್ಷಿಕ ಸಹಾಯ ದ್ರವ್ಯ ವನ್ನು ಸಂಪಾದಿಸಿದರು. 'ಪರಿಷತ್ತು ಕರ್ನಾಟಕದ ಸಂಸ್ಥೆ. ಕನ್ನಡ ಕೋಶ ಇಡೀ ದೇಶದ ಕೆಲಸ. ಇದಕ್ಕೆ ಎಲ್ಲ ಕಡೆಯಿಂದಲೂ ಸಹಾಯ ದೊರೆಯಲಿ' ಎಂದು ಅವರು ಮಾಡಿಕೊಂಡ ಮನವಿಗೆ ನಾಡಿನ ಹಲವಾರು ಕಡೆಗಳಿಂದ ಪ್ರೋತ್ಸಾಹ ದೊರೆಯಿತು.

ಸದಸ್ಯ ಸಂಪತ್ತನ್ನು ಹೆಚ್ಚಿಸಲು ಸಾಕಷ್ಟು ಪ್ರಯತ್ನ ನಡೆಯುತ್ತಿರುವಾಗಲೇ ಶರ್ಮರ ವಿಧಾಯಕ ದೃಷ್ಟಿ ಪರಿಷತ್ತಿನ ಕಾರ್ಯಕ್ರಮಗಳ ಕಡೆಗೆ ಹರಿದಿತ್ತು. ಸೋಮೇಶ್ವರ ಶತಕ, ಹರಿಶ್ಚಂದ್ರ ರಾಜ್ಯ ಸಮರ್ಪಣೆ, ವಡ್ಡಾರಾಧನೆ, ಸರ್ವೋದಯ, ಮಾನವನ ಹಕ್ಕುಗಳು, ಕರ್ಣಾಟಕ ಕಲೆಗಳು-ಮೊದಲಾದ ಪ್ರಕಟಣೆಗಳು ಈ ಕಾಲದಲ್ಲಿ ಅಚ್ಚಾದವು. ಸಾಹಿತ್ಯ ಪರೀಕ್ಷೆಗಳಿಗೆ ಪರಿಷತ್ತಿನಲ್ಲಿ ತರಗತಿಗಳನ್ನು ಆರಂಭಿಸ ಲಾಯಿತು. ಗಮಕ ತರಗತಿಗಳು, ಸ್ಪರ್ಧೆಗಳು, ದತ್ತಿನಿಧಿ ಉಪನ್ಯಾಸಗಳು— ಅವಂತೂ ಸರಿಯೇ. ಹಿಂದೆಯೇ ಗ್ರಂಥಕರ್ತರಿಂದ ಬರಮಾಡಿಕೊಂಡಿದ್ದ ಗ್ರಂಥಗಳಲ್ಲಿ ಉತ್ತಮವೆಂದು ತೀರ್ಮಾನವಾದ ಪುಸ್ತಕಗಳಿಗೆ ಬಹುಮಾನ ಕೊಡಲಾಯಿತು. ಪುಸ್ತಕ ಭಂಡಾರ, ವಾಚನಾಲಯಗಳಲ್ಲಿ ಹೊಸ ವ್ಯವಸ್ಥೆ ಏರ್ಪಟ್ಟಿತು.

ಈ ವರ್ಷದಲ್ಲಿ ನಡೆದ ಅತ್ಯಂತ ಸ್ಮರಣಾರ್ಹವಾದ ಸಮಾರಂಭವೆಂದರೆ ರನ್ನ ಕವಿಯ ಸಹಸ್ರವಾರ್ಷಿಕ ಉತ್ಸವ. "ರನ್ನನಂಥ ಮಹಾಕವಿಯನ್ನು ಪಡೆದು ಅವನ ಜನ್ಮದ ಸಹಸ್ರ ವರ್ಷೋತ್ಸವವನ್ನು ನಡೆಸುವ ಭಾಗ್ಯ ಬಯಸಿದವರಿಗೆಲ್ಲ ಲಭಿಸತಕ್ಕ ದಲ್ಲ. ಭರತಖಂಡದಲ್ಲಿ ಮಾತ್ರವೇ ಏಕೆ? ಹೊರಗಿನ ಪ್ರಪಂಚದಲ್ಲಿ ಕೂಡ, ಇಷ್ಟೊಂದು ಪ್ರಾಚೀನನೂ ಶ್ರೇಷ್ಠನೂ ಆದ ಕವಿ ತಮ್ಮಲ್ಲಿ ಆಗಿಹೋದನೆಂದು ಹೆಮ್ಮೆ ಪಡುವ ಪುಣ್ಯ ಎಷ್ಟು ಜನ ವರ್ಗಗಳಿಗಿದೆ?"— ಈ ಮಾತಿನಲ್ಲಿ ಈ ಸಮಾರಂಭ ವನ್ನು ವಿಜೃಂಭಣೆಯಿಂದ ನಡೆಸಬೇಕೆಂದು ಶರ್ಮರು ಕನ್ನಡ ಜನತೆಗೆ ಕರೆಕೊಟ್ಟರು. ನಾಡಿನ ನಾನಾ ಮೂಲೆಗಳಲ್ಲಿ ಉತ್ಸವ ನಡೆದವು. ಡಿಸೆಂಬರ್ ತಿಂಗಳಲ್ಲಿ ಪರಿಷತ್ತಿನಲ್ಲಿ ಮೂರು ದಿನಗಳ ಸಂಭ್ರಮದ ಉತ್ಸವ ನಡೆಯಿತು.

ಪರಿಷತ್ತಿನ ಕಟ್ಟಡವನ್ನು ವಿಸ್ತರಿಸುವ ಯೋಜನೆ ಆಗಲೇ ನಡೆದಿತ್ತು. ಇಂಜನಿಯರರೊಂದಿಗೆ ಪರಿಶೀಲನೆ, ಕಟ್ಟಡಕ್ಕಾಗಿ ಧನಸಂಗ್ರಹದ ಪ್ರಯತ್ನ ಮುಂದು ವರಿದವು.

ಪರಿಷತ್ತಿನ ಕಾರ್ಯದರ್ಶಿಯ ಪದದೊಂದಿಗೆ 'ಕನ್ನಡ ನುಡಿ'ಯ ಸಂಪಾದಕತ್ವ ವನ್ನು ಶರ್ಮರು ವಹಿಸಿಕೊಂಡಿದ್ದರು. ಅವರ ಅವಧಿಯಲ್ಲಿ 'ನುಡಿ'ಯ ಧ್ವನಿ ರಾಜಕೀಯ ಮತ್ತು ಸಾಹಿತ್ಯಿಕ ವಲಯಗಳಲ್ಲಿ ಗೌರವ ಪಡೆಯಿತು. ಶರ್ಮರ

ಲೇಖನಿ ಪರಿಷತ್ತಿನ ಸಂದೇಶವನ್ನು ನಾಡಿನಲ್ಲೆಲ್ಲ ಬಿತ್ತರಿಸಿತು. ವಿನೋಬಾ ಅವರ ಸಾಹಿತ್ಯಿಕ ಮತ್ತು ಸಾಮಾಜಿಕ ವಿಚಾರಗಳು 'ನುಡಿ'ಯಲ್ಲಿ ಪ್ರಕಟವಾದುವು. ರಾಷ್ಟ್ರ ಭಾಷೆ, ದೇಶಭಾಷೆ, ಗಡಿನಾಡಿನ ಕನ್ನಡ, ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡದ ಸ್ಥಾನ ಇತ್ಯಾದಿ ವಿಷಯಗಳ ಬಗ್ಗೆ ಪರಿಷತ್ತಿನ ಧೋರಣೆಯನ್ನು ಶರ್ಮರು ತುಂಬ ಸಮರ್ಥ ವಾಗಿ ಪ್ರತಿಪಾದಿಸಿದರು.

ಹಿಂದೆ ಕಲಬುರ್ಗಿಯ ವಿಶೇಷ ಅಧಿವೇಶನದಲ್ಲಿ, ಪರಿಷತ್ತಿನ ನಿಬಂಧನೆಗಳ ತಿದ್ದುಪಡಿಗಾಗಿ ಒಂದು ಸಮಿತಿ ರಚಿತವಾಗಿತ್ತು. ತಿರುಮಲೆ ತಾತಾಚಾರ್ಯ ಶರ್ಮರು ಅಧ್ಯಕ್ಷರು; ಸಿ. ಕೃಷ್ಣಶರ್ಮರು ಕಾರ್ಯದರ್ಶಿಗಳು. ಈ ಸಮಿತಿಯು ನಿಬಂಧನೆಗಳಲ್ಲಿ ಹಲವು ಮಾರ್ಪಾಡುಗಳನ್ನು ಸೂಚಿಸಿ ೧೯೫೦ರ ಫೆಬ್ರುವರಿಯಲ್ಲಿ ಸೊಲ್ಲಾಪುರದಲ್ಲಿ ವಿಶೇಷ ಸಭೆಯಲ್ಲಿ ಮಂಡಿಸಿತು. ಈ ಮಾರ್ಪಾಡುಗಳಲ್ಲಿ ಮುಖ್ಯ ವಾದುವುಗಳಲ್ಲಿ ಕಾರ್ಯದರ್ಶಿ ಕೋಶಾಧ್ಯಕ್ಷರ ಆಯ್ಕೆಯನ್ನು ಕುರಿತದ್ದು ಒಂದು. ಆ ಮೊದಲು ಸಕಲ ಸದಸ್ಯರ ಸಭೆಯಲ್ಲಿ ಸೂಚಿತವಾದ ಹೆಸರುಗಳಲ್ಲಿ ಅಧ್ಯಕ್ಷರು, ಕಾರ್ಯದರ್ಶಿ, ಕೋಶಾಧ್ಯಕ್ಷರೆಂದು ಆಯ್ಕೆಮಾಡಿಕೊಳ್ಳಬಹುದಾಗಿತ್ತು. ಆದರೆ ಈ ಹೊಸ ಬದಲಾವಣೆಯ ಪರಿಣಾಮವಾಗಿ ಕಾರ್ಯದರ್ಶಿ, ಮತ್ತು ಕೋಶಾಧ್ಯಕ್ಷರನ್ನು ನಿಯಮಿತ ಮಾಡಿಕೊಳ್ಳುವ ಅಧಿಕಾರವನ್ನು ಅಧ್ಯಕ್ಷರಿಗೆ ವಹಿಸಿಕೊಡಲಾಯಿತು. ಮತ್ತೆ ಶ್ರೀ ಸಿ. ಕೃಷ್ಣಶರ್ಮರು ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ ನಿಯಮಿತ ಗೊಂಡರು. ಅವರು ಮುಂದುವರಿದಿದ್ದರೆ ಪರಿಷತ್ತಿನ ಶಕ್ತಿ ಇನ್ನೂ ಬೆಳೆಯುತ್ತಿತ್ತು. ಆದರೆ ಕೆಲವು ತಿಂಗಳನಂತರ ಕಾರ್ಯನಿಮಿತ್ತ, ತಮ್ಮನ್ನು ಆ ಸ್ಥಾನದಿಂದ ಬಿಡುಗಡೆ ಮಾಡುವಂತೆ ಕೇಳಿಕೊಂಡರು.

ಪದಾಧಿಕಾರಿಯಾಗಿ ಪರಿಷತ್ತಿನೊಂದಿಗೆ ಅವರ ಸಂಬಂಧ ಅಲ್ಪಾವಧಿಯದಾಗಿ ದ್ದರೂ ಪರಿಷತ್ತಿನ ಚರಿತ್ರೆಯಲ್ಲಿ ಮಹತ್ವಪೂರ್ಣವಾದುದು; ಕಿರಿಯ ಕಾರ್ಯಕರ್ತರಿಗೆ ಮಾರ್ಗದರ್ಶಕವಾಗಿ ಉಳಿಯುವಂಥದು.

# ಶರ್ಮಾಜಿ ಮತ್ತು ನಮ್ಮ ಬ್ಯಾಂಕು

ಅ. ನ. ನಂಜುಂಡಯ್ಯ

ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರು ದೊಡ್ಡ ಸಾಹಿತಿ, ಗಾಂಧೀವಾದಿ, ಭಾಷಣಕಾರ, ವಿಚಾರವಂತ, ಪತ್ರಿಕೋದ್ಯೋಗಿ ಇತ್ಯಾದಿ ಎಂದು ಹೆಸರುವಾಸಿ ಆಗಿದ್ದಾರೆ. ಅಷ್ಟೇ ಖ್ಯಾತಿ ಅವರದು ಸಂಸ್ಥೆಗಳನ್ನು ಕಟ್ಟುವುದರಲ್ಲಿ. ಸಹಕಾರ ಕ್ಷೇತ್ರಕ್ಕೂ ಅವರಿಂದ ಸಂದ ಸೇವೆ ಅಮೂಲ್ಯ. ಅದಕ್ಕೆ ಜೀವಂತ ನಿದರ್ಶನ ಬೆಂಗಳೂರು ಮಲ್ಲೇಶ್ವರದಲ್ಲಿರುವ ಶ್ರೀರಾಮ ಕೋ ಆಪರೇಟಿವ್ ಬ್ಯಾಂಕು. ಅದರ ಮೂಲಕವೇ ನನಗೂ ಅವರ ನಿಕಟ ಸಂಪರ್ಕ ಲಭಿಸಿತು. ನನ್ನ ಬದುಕಿಗೆ ಬೆಳಕೂ ದೊರಕಿತು.

1952ರ ಮಾತು. ನನಗೆ ಹೆಚ್ಚು ಜನರ ಪರಿಚಯು ಇರಲಿಲ್ಲ. ಒಂದು ದಿನ ನಮ್ಮ ಬಂಧುಗಳಾದ ಶ್ರೀ ಹೊ. ಶ್ರೀನಿವಾಸಯ್ಯ ಹೇಳಿದರು : "ಮಲ್ಲೇಶ್ವರದ ತೆಂಗಿನ ಮರದ ರಸ್ತೆಯಲ್ಲಿ ಬಡವರೇ ಕಟ್ಟಿರುವ ರಾಮಮಂದಿರ ಒಂದಿದೆ. ನಾವು ಬಡಜನ ಬಹಳ ಇದ್ದೇವೆ. ನಮ್ಮಲ್ಲಿ ಈಗೀಗ ಸ್ವಲ್ಪವಿದ್ಯೆ ಬರುತ್ತಿದೆ. ಈ ಜನಕ್ಕೆ ಆರ್ಥಿಕ ಅನುಕೂಲ ಇಲ್ಲ. ಸಾಲ ಸೋಲ ಚೀಟಿಗಳಲ್ಲಿ ಸಿಕ್ಕಿ ನರಳುತ್ತಿದ್ದಾರೆ. ಇವರ ಅನುಕೂಲಕ್ಕಾಗಿ ಒಂದು ಸಹಕಾರ ಬ್ಯಾಂಕ್ ಏಕೆ ಆರಂಭಿಸಬಾರದು ? ನಮ್ಮ ಸಿದ್ಧವನಹಳ್ಳಿ ಕೃಷ್ಣಶರ್ಮರು ಈ ಬಗ್ಗೆ ಎಲ್ಲ ಸಹಕಾರ ಮಾರ್ಗದರ್ಶನ ನೀಡಲು ಒಪ್ಪಿದ್ದಾರೆ. ಅವರಿಗೂ ಸಹಕಾರ ಸಂಘಗಳ ಡೆ|| ರಿಜಿಸ್ಟ್ರಾರ್ ಶ್ರೀ ಮರುದೇವೆಗೌಡರಿಗೂ ಚೆನ್ನಾಗಿದೆ. ನೀವೂ ಜೊತೆಗೆ ಸೇರಿ. ಸಂಸ್ಥೆ ಕಟ್ಟಲಿ" ಎಂದು ಹೇಳಿ ಒಂದು ಅರ್ಜಿಗೆ ರುಜು ಹಾಕಿಸಿಕೊಂಡರು.

ಒಂದುದಿನ ಸದರಿ ಶ್ರೀರಾಮ ಮಂದಿರದ ಸದಸ್ಯರ ಸಭೆ ನಡೆಯಿತು. ಶರ್ಮಾಜಿಯ ಪರಿಚಯು ಆದದ್ದು ಅಲ್ಲೇ. ಆ ಕೆಲನಿಮಿಷಗಳಲ್ಲೇ ಅವರ ಬಗ್ಗೆ ನನಗೆ ಗೌರವ ಶ್ರದ್ಧೆ ಹುಟ್ಟಿತು. ಕಾರಣ ಅವರ ಸತ್ಯವಂತಿಕೆ, ಸರಳತೆ, ಖಂಡಿತವಾದ ಮಾತುಗಾರಿಕೆ. ಈ ಗುಣಗಳು ನನಗೂ ಪ್ರಿಯ. ಅಂತೆಯೇ ಶರ್ಮಾಜಿಯವರನ್ನು ಒಪ್ಪಿಕೊಂಡೆ. ಹೀಗೆ ಆರಂಭವಾದ ಸಂಪರ್ಕ ಮುಂದೆ ಬೆಳೆಯಿತು. ಆದರಿಂದ ನಾನು ಅನೇಕ ವಿಷಯ ಪಾಠ ಕಲಿತುಕೊಂಡೆ. ಆ ಸಂಪರ್ಕದ ಮೂಲಕವೇ ಗಾಂಧಿ ಸಾಹಿತ್ಯ ಸಂಘದ ನಂಟೂ ಬೆಳೆಯಿತು. ಕ್ರಮೇಣ ಆ ಸಂಘದ ಬಳಗದಲ್ಲಿ ಒಬ್ಬನಾದೆ. ಇಂದಿಗೂ ಹಾಗೇ ಇದ್ದೇನೆ.

ಅವರ ಹಾಗೂ ಶ್ರೀನಿವಾಸಯ್ಯ ಮುಂತಾದವರ ಪ್ರಯತ್ನದಿಂದಾಗಿ ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್ 1953 ರಲ್ಲಿ ಆರಂಭವಾಯಿತು. ಶರ್ಮಾಜೀಯವರೇ ಅಧ್ಯಕ್ಷರು. ನಾವು ಕೆಲವರು ಸಮಿತಿ ಸದಸ್ಯರು. ನನ್ನ ಸ್ವಭಾವದಿಂದ ಕೆಲಸದಿಂದ ನಾನು ಶರ್ಮಾಜಿಯವರ ವಿಶ್ವಾಸಕ್ಕೆ ಪಾತ್ರನಾದೆ. ಅಲ್ಲಿಂದ ಮುಂದೆ ಹತ್ತಾರು ವರ್ಷ ಶರ್ಮಾಜಿ ಮುಂದೆ ನಿಂತು ಸಂಸ್ಥೆಯನ್ನು ಕಟ್ಟಿ ಬೆಳಸಿದರು, ಮೈಸೂರು ದೇಶಕ್ಕೇ ಮಾದರಿಯಾಗಿ, ಸರ್ಕಾರದ ಬಹುಮಾನಗಳಿಸುವ ಸ್ಥಿತಿಗೂ ತಂದರು.

ಸಾರ್ವಜನಿಕ ಹಣ ಎಂದರೆ ವಿಷ. ಅದನ್ನು ಬಹು ಜೋಕೆಯಿಂದ ನೋಡಿ ಕೊಳ್ಳಬೇಕು. ನಮ್ಮ ಸ್ವಂತ ಹಣಕ್ಕಿಂತ ಚೆನ್ನಾಗಿ ನೋಡಿಕೊಳ್ಳಬೇಕು ಎಂದು ಅವರ ವಿಚಾರ. ಅದರಂತೆಯೇ ಅವರು ಹಲವು ಸಂಪ್ರದಾಯ ರೂಢಿಸಿದರು. ಕಾರ್ಯಕಾರೀ ಸಮಿತಿ ಸಭೆಗೆ ಕಾಫಿ ವಗೈರೆ ಕೂಡದು ಎಂದರು. ಇಂದಿಗೂ ಆ ಪದ್ಧತಿ ಉಳಿದಿದೆ. ನಡುವೆ ಒಬ್ಬರು ಕಾಫಿ ಬೇಕು ಎಂದು ಗೊಣಗಿದಾಗ ಶರ್ಮಾಜಿ ಕೈಯಿಂದ ಹಣಹಾಕಿ ತರಿಸಿಕೊಟ್ಟರು. ಬ್ಯಾಂಕಿನ ನಾಲ್ಕು ಜನದ ಹಣದಲ್ಲಿ ನಾವು ತಿನ್ನುವುದು ಬೇಡ ಎಂದರು. ಮೊದಲ ಮೂರುವರ್ಷ ಸರ್ವಸದಸ್ಯರ ವಾರ್ಷಿಕ ಸಭೆಗೂ ಕಾಫಿ ತಿಂಡಿ ಇರಲಿಲ್ಲ. ಕೆಲವರಿಗೆ ಇದು ಹಿಡಿಸಲಿಲ್ಲ. ಸಂಸ್ಥೆಯ ಖರ್ಚಿನಲ್ಲಿ ಚೆನ್ನಾಗಿ ಮೇಜವಾನಿ ನಡೆಸಬೇಕೆಂದು ಅವರ ಇಚ್ಛೆ, ಅದಕ್ಕೆ ಶರ್ಮಾಜಿ ಉತ್ತರ: "ನಮ್ಮ 300 ಸದಸ್ಯರಲ್ಲಿ ಸಭೆಗೆ ಬರುವವರು 70-80 ಜನ, ಅಷ್ಟು ಜನದ ಹಣದಲ್ಲಿ ನಾವಿಷ್ಟೇ ಜನ ತಿನ್ನುವುದು ಸರಿಯೇ ? ಎಲ್ಲರೂ ಸಭೆಗೆ ಬರಲಿ. ಎಲ್ಲರೂ ತಿಂಡಿ ತಿನ್ನಲಿ". ನ್ಯಾಯವಾದ ಮಾತೇ. ಆದರೆ ಜನ ಒಪ್ಪಬೇಕಲ್ಲ ! ನಾವು ಎಷ್ಟೋಸಲ ಶರ್ಮಾಜಿಗೆ ಹೇಳಬೇಕಾಯಿತು. ಕಾಫಿ ತಿಂಡಿ ಇಲ್ಲದಿದ್ದರೆ ಸಭೆಗೆ ಜನ ಬರುವುದಿಲ್ಲ ಎಂದು ಒಂದೇ ಸಮನೆ ಹೇಳಬೇಕಾ ಯಿತು. ಕೊನೆಗೆ ಬರೀ ಕಾಫಿ ತರಿಸಲು ಒಪ್ಪಿದರು.

ಮೊದಲ ಮೂರುವರ್ಷ ಸಮಿತಿ ಸದಸ್ಯರೇ ಸ್ವಯಂ ಸೇವೆ ಮಾಡಿ ಬ್ಯಾಂಕಿನ ವಹಿವಾಟು ನಡೆಸಬೇಕು. ನೌಕರರನ್ನು ಇಟ್ಟುಕೊಳ್ಳಬಾರದು ಎಂದು ಅವರ ಇನ್ನೊಂದು ಸೂಚನೆ. ಹಾಗೇ ನಡೆಯಿತು. ನಾವೇ ಹಲವರು ಎಲ್ಲ ವ್ಯವಹಾರಗಳನ್ನೂ ಕೆಲಸಗಳನ್ನೂ ನಿರ್ವಹಿಸಿದೆವು. ಹಲವಾರು ಅಡ್ಡಿ ಆತಂಕ ಒದಗಿದರೂ ಬಿಡದೆ ಅವರ ಬೆಂಬಲದಿಂದ ಸಂಸ್ಥೆಯನ್ನು ಬೆಳೆಸಿದೆವು.

ಸಂಸ್ಥೆಗೆ ಹೊಸ ಸದಸ್ಯರನ್ನು ಸೇರಿಸಿಕೊಳ್ಳುವಾಗ, ಸಾಲ ಕೊಡುವಾಗ ಎಲ್ಲದ ರಲ್ಲೂ ಶರ್ಮಾಜಿಯವರದು ಕಟ್ಟುನಿಟ್ಟಾದ ನಿಯಮಪಾಲನೆ. ಅವರಿಗೆ ಎಲ್ಲರೂ ಒಂದೇ. ಅವರಿಗೆ ಒಂದೇ ವಿಚಾರ ಎಂದರೆ ಬಡವರಿಗೆ, ಅದರಲ್ಲೂ ವಿದ್ಯೆ ಇಲ್ಲದ ಜನಕ್ಕೆ ಮೊದಲ ಅವಕಾಶ ಕೊಡಬೇಕು ಎಂದು. ವಿದ್ಯಾವಂತರಿಗೆ ಹಲವು ದಾರಿ ಇದೆ. ಬಡವರಿಗೆಲ್ಲಿದೆ ? ಅಲ್ಲದೆ ಅರಿಯದ ಜನ ನಂಬಿಕೆಯಿಂದ ಶ್ರದ್ಧೆಯಿಂದ ನಡೆದುಕೊಳ್ಳು ತ್ತಾರೆ. ವಿದ್ಯಾವಂತರು ಎನಿಸಿಕೊಳ್ಳುವ ಎಷ್ಟೋಜನ ಕಿತಾಪತಿ ಮಾಡುತ್ತಾರೆ.

ಇಂತಹವರನ್ನು ದೂರ ಇಟ್ಟಿರಬೇಕು ಎಂದು ಅವರ ಬುದ್ಧಿವಾದ. ಇದರ ಸತ್ಯ ನಮಗೆ ಬ್ಯಾಂಕಿನ ಮುಂದಿನ ಘಟನೆಗಳಿಂದ ಚೆನ್ನಾಗಿ ತಿಳಿಯುಬಂತು.

ಚುನಾವಣೆ ಸ್ಪರ್ಧೆ ಬೇಡ, ಆದಷ್ಟು ಒಮ್ಮತದಿಂದ ಸಮ್ಮತಿಯಿಂದ ಆಡಳಿತ ನಡೆಯುಲಿ ಎಂಬುದು ಅವರ ಇನ್ನೊಂದು ವಿಚಾರ. ಅದರಂತೆ ಹಲವು ವರ್ಷ ಬ್ಯಾಂಕಿನ ಅಧಿಕಾರ ವರ್ಗಕ್ಕೆ ಸ್ಪರ್ಧೆ ಚುನಾವಣೆ ಏನೂ ಇರಲಿಲ್ಲ. ಸಭೆಯಲ್ಲಿ ಶರ್ಮಾಜಿ ಇಂತಿಂಥ ಕಡೆಯಿಂದ ಇಂತಿಂಥ ಪ್ರತಿನಿಧಿ ಇರಲಿ ಎಂದರೆ ಎಲ್ಲರಿಗೂ ಒಪ್ಪಿಗೆಯಾಗುತ್ತಿತ್ತು. ಮುಂದೆ ಎಲ್ಲ ಸಂಸ್ಥೆಗಳಂತೆ ಇಲ್ಲೂ ಒಡಕು ಆಗಿ ಸ್ಪರ್ಧೆ ಅನಿವಾರ್ಯವಾದಾಗ ಶರ್ಮಾಜಿ ತಾವು ಸ್ಥಾನದಲ್ಲಿ ಮುಂದುವರಿಯಲು ಒಪ್ಪಲಿಲ್ಲ. ಒಂದೆರಡು ಚುನಾವಣೆ ನಡೆದಾಗಲೂ ಅವರೇ ಮೊದಲಿಗರಾಗಿ ಆರಿಸಿ ಬಂದರು. ಆದರೂ ಅವರಿಗೆ ಇದು ಹಿಡಿಸಲಿಲ್ಲ. ಸದ್ಯದಲ್ಲೇ ನಿವೃತ್ತರೂ ಆದರು.

ಶರ್ಮಾಜಿ ಸಭೆ ನಡೆಸುವುದೇ ಒಂದು ವಿಶಿಷ್ಟ ರೀತಿಯಲ್ಲಿ. ಎಲ್ಲರಿಗೂ ಮಾತಾಡಲು ಅವಕಾಶ ಕೊಡುವರು. ಅದರಲ್ಲೂ ವಿರೋಧಿಗಳಿಗೇ ಹೆಚ್ಚು ಅವಕಾಶ. ಚರ್ಚೆ ವಾದ ವಿವಾದ ಎಲ್ಲವನ್ನೂ ತಾಳ್ಮೆಯಿಂದ ಕೇಳುವರು, ಗ್ರಹಿಸುವರು. ಕೊನೆಗೆ ತಮ್ಮ ಅಭಿಪ್ರಾಯ ತೀರ್ಮಾನ ತಿಳಿಸುವುದು. ಅವರ ಮಾತು ಎಲ್ಲರಿಗೂ ಒಪ್ಪಿಗೆಯಾಗುತ್ತಿತ್ತು. ಅಂಥ ವಿವೇಕದ ಮಾತು. ನಮಗೆಲ್ಲ ಆಶ್ಚರ್ಯ.

ಒಮ್ಮೆ ಸದಸ್ಯತ್ವ ಕೊಡುವ ಬಗ್ಗೆ ವಿವಾದ ಆದಾಗ ತಮ್ಮ ಮಗನಿಗೆ ಕೊಟ್ಟಿದ್ದ ಸದಸ್ಯತ್ವವನ್ನೇ ಬಿಟ್ಟುಕೊಟ್ಟರು. ಮುಂದೆ ನೋಡೋಣ, ಅವಸರವೇನು ಎಂದರು.

ತಾವು ಯಾವ ಯಾವ ಸಂಘ ಸಂಸ್ಥೆಗಳಲ್ಲಿ ಅಧಿಕಾರ ಸ್ಥಾನದಲ್ಲಿದ್ದರೂ ಅವುಗಳ ಹಣವನ್ನು ತಂದು ಈ ಬ್ಯಾಂಕಿನಲ್ಲಿ ಠೇವಣಿ ಇಡುತ್ತಿದ್ದರು. ತಮ್ಮ ಮಕ್ಕಳ ಮದುವೆಗಳನ್ನು ಬಹು ಸರಳವಾಗಿ ನೆರವೇರಿಸಿ, ಉಳಿದ ಹಣವನ್ನೆಲ್ಲಾ ಆಯಾ ಮಕ್ಕಳ ಹೆಸರಿನಲ್ಲಿ ಬ್ಯಾಂಕಿನಲ್ಲಿ ಠೇವಣಿ ಇಡುತ್ತಿದ್ದರು. ಇವೆಲ್ಲದರಿಂದ ಬ್ಯಾಂಕು ತನ್ನ ಬಾಲ್ಯದಲ್ಲಿ ಚೆನ್ನಾಗಿ ಬೆಳೆಯಲು ಸಾಧ್ಯವಾಯಿತು.

ನಮ್ಮ ನಮ್ಮ ದಿನದಿನದ ವ್ಯವಹಾರದಲ್ಲಿ ಅನೇಕ ಮಾತು, ಚರ್ಚೆ, ವಾದ, ವಿವಾದ, ವಿರೋಧ, ಜಗಳ ಸಹ ಆಗುತ್ತಿದ್ದವು. ತಪ್ಪು ನೆಪ್ಪು ಇರುತ್ತಿತ್ತು. ಶರ್ಮಾಜಿ ಮಾತ್ರ ಎಂದೂ ತಾಳ್ಮೆ ಕೆಡಿಸಿಕೊಂಡವರಲ್ಲ. ತುಂಬ ಅಸಮಾಧಾನ ಆದರೆ ಮಾತಿನಲ್ಲಿ ಸ್ವಲ್ಪ ಬಿಸಿ ಇರುತ್ತಿತ್ತು ಅಷ್ಟೆ. ಅದೇ ಸೂಚನೆ ಅವರಿಗೆ ಬೇಸರ ಆಗಿದೆ ಎಂದು.

ಮೇಲೆ ಹೇಳಿದ್ದರಿಂದ ಬ್ಯಾಂಕಿನ ಕಾರ್ಯ ಏನೂ ತೊಡಕಿಲ್ಲದೆ ನಡೆಯಿತು ಎಂದು ಯಾರೂ ಭಾವಿಸಬಾರದು. ಅದಕ್ಕೂ ಬಾಲಗ್ರಹಗಳು ಬಡಿದೇ ಬಡಿದವು.

ಆದರೆ ಶರ್ಮಾಜಿ ಎಲ್ಲ ವಿಷಯವನ್ನು ತಾವು ನುಂಗಿ ನಿಂತು ಬ್ಯಾಂಕನ್ನು ಕಷ್ಟಗಳಿಂದ ಪಾರು ಮಾಡಿದರು. ಇಲ್ಲವಾದರೆ ಈ ಸಂಸ್ಥೆ ಎಂದೋ ಏನೋ ಆಗಿ ಹೋಗುತ್ತಿತ್ತು. ಇಂಥ ಒಂದೆರಡು ಸಂದರ್ಭ ತಿಳಿಸಬೇಕು.

1953 ರಲ್ಲಿ ಶ್ರೀನಿವಾಸಯ್ಯ ಜರ್ಮನಿಗೆ ಹೋದರು. ಬ್ಯಾಂಕಿನ ಸಮಿತಿಯಲ್ಲಿ ಅಸಹಕಾರ ಮೊದಲಾಯಿತು. ಶರ್ಮಾಜಿಗೆ ನಾವು ನಾಲ್ಕಾರು ಮಂದಿಯ ಬೆಂಬಲ. ನಾವಿಷ್ಟೇ ಜನ ಶ್ರೀನಿವಾಸಯ್ಯ ವಾಪಸು ಬರುವವರೆಗೂ ಹಾಗೂ ಹೀಗೂ ತಳ್ಳಿದೆವು. 1954 ಕೊನೆಗೆ ಅವರು ಬಂದರು. 1955ರ ವೇಳೆಗೆ ಗೃಹಕೃತ್ಯದ ನಿಮಿತ್ತ ನಾನು ಬ್ಯಾಂಕಿನ ಕೆಲಸಕ್ಕೆ ದಿನವೂ ಗಮನಕೊಡಲಾಗಲಿಲ್ಲ. ಎಲ್ಲ ಪರಿಸ್ಥಿತಿಯ ದುರ್ಲಾಭ ಪಡೆದು, ಸಮಿತಿಯ 8 ಜನ ರಾಜೀನಾಮೆ ಇತ್ತರು. ಶರ್ಮಾಜಿಯ ಮೇಲೆ ಇಲ್ಲದ ಆರೋಪ ಹೊರಿಸಿದರು. ವಾರ್ಷಿಕ ಸಭೆ ಇನ್ನೂ 6–7 ತಿಂಗಳು ಇತ್ತು. ನೋಡೋಣ ಇವರು ಹೇಗೆ ನಡೆಸುವರೊ ಎಂದು ಆ ಜನದ ಧೋರಣೆ. ಒಂದು ಸಮಿತಿಯ ಸಭೆಯಲ್ಲಿ ರಾತ್ರಿ 9 ಘಂಟೆಗೆ ಅವರು ಬೀಗದ ಕೈಗಳನ್ನು ಎಸೆದು ಹೊರಟುಬಿಟ್ಟರು. ಆಗ ಉಳಿದಿದ್ದವರು ಶರ್ಮಾಜಿ—ನಾನು ಇಬ್ಬರೇ. "ನಂಜುಂಡಯ್ಯ ಬೀಗದಕೈ ತೆಗೆದು ಕೊಳ್ಳಿ. ನೋಡೋಣ ಮುಂದೆ" ಎಂದರು. ತೆಗೆದುಕೊಂಡೆ. ಮನೆಗೆ ಹೋಗುವ ದಾರಿಯಲ್ಲಿ ಶ್ರೀನಿವಾಸಯ್ಯ ಬಂದರು. ಇಬ್ಬರೂ ನನಗೆ ಧೈರ್ಯ ಹೇಳಿದರು: "ಈಗ ನೀವು ಹಿಂದೆಗೆಯಬಾರದು. ಮನಸ್ಸು ಮಾಡಿ ನಿಲ್ಲಬೇಕು. ಸಂಸ್ಥೆ ಉಳಿಯಬೇಕು. ನಮ್ಮ ಸಹಕಾರ ಏನಿದ್ದರೂ ಕೊಡುತ್ತೇವೆ. ಧೈರ್ಯವಾಗಿ ಕೆಲಸಮಾಡಿ. ಸರ್ವ ಸದಸ್ಯರ ಸಭೆ ನಡೆಸಿ, ನಂತರ ನೋಡೋಣ" ಎಂದರು. ನನಗೂ ಕೆಲಸ ತಿಳಿಯದು. Cash Book, OB, CB, Balance Sheet ಏನೂ ಗೊತ್ತಿಲ್ಲ. ಆದರೆ ಇವರ ಧೈರ್ಯದ ಮೇಲೆ ಒಪ್ಪಿಕೊಂಡೆ. ಶರ್ಮಾಜಿಯ ಲೆಕ್ಕ ವಹಿವಾಟು ಎಲ್ಲ ಹೇಳಿ ಕೊಟ್ಟರು. ನಾನೂ ನನ್ನ ತಮ್ಮನೂ ಬಾಗಿಲು ತೆರೆದರೆ ಉಂಟು ಇಲ್ಲವಾದರೆ ಇಲ್ಲ. ಹಾಗಿತ್ತು. ಒಂದು ದಿನವಂತೂ ರಾತ್ರಿ ಲೆಕ್ಕ ತಾಳೆಮಾಡಬೇಕಾದರೆ 12 ಗಂಟೆ ಆಯಿತು. ಹಣಬೇರೆ ಜಾಸ್ತಿ ಸೇರಿತ್ತು. ಮನೆಗೆ ಹೋಗಲು ಹೆದರಿ, ನಾವು ಬ್ಯಾಂಕಿನಲ್ಲೇ ಮಲಗಬೇಕಾಯಿತು. ಇದಕ್ಕೆಲ್ಲ ನನಗೆ ಧೈರ್ಯ ಬಂದದ್ದು ಶರ್ಮಾಜಿಯವರ ಸಹವಾಸದಿಂದಲೇ. ಮುಂದಿನ ಕೆಲಸ ಹೇಗೊ ನಡೆಯಿತು. ವಾರ್ಷಿಕ ಸಭೆಯೂ ನಡೆಯಿತು, ಹೆಚ್ಚಿನ ರೀತಿಯಲ್ಲೇ ನಡೆಯಿತು. ಕೊನೆಗೆ ಎಲ್ಲರೂ, ಅಸಹಕಾರ ತೋರಿದ ಆ ಜನರನ್ನೇ ತರಾಟೆಗೆ ತೆಗೆದುಕೊಂಡರು. ಶರ್ಮಾಜಿಯವರಿಗೇ ಬಹುಮತದ ಬೆಂಬಲ ಕೊಟ್ಟು ನೀವು ಹೇಳಿದಂತೆ ಕೇಳುತ್ತೇವೆ ಎಂದರು. ಅವರಿಗೆ ತಿಳಿದಿತ್ತು ಶರ್ಮಾಜಿ ಇಲ್ಲದಿದ್ದರೆ ಸಂಸ್ಥೆ ಮುಳುಗಿಹೋಗುತ್ತದೆ ಅಂತ.

ಮುಂದಿನ ವರ್ಷಕ್ಕೆ ಶ್ರೀನಿವಾಸಯ್ಯ, ನಾನು ಕಾರ್ಯದರ್ಶಿಗಳಾದೆವು. ಕೆಲಸ ಹೆಚ್ಚಿನ ರೀತಿಯಲ್ಲಿ ನಡೆಯಿತು. ಆದರೂ ವಿಷ ಬೀಜ ಮೊಳೆತಿತ್ತು. ಚುನಾವಣೆಯೂ ನಡೆಯಬೇಕಾಯಿತು. ನನ್ನಮೇಲೂ ಅಪವಾದ ಬಂದು ಇವನು ಸಮಿತಿಯಲ್ಲಿ ಇರಬಾರದು ಎಂದು ಒತ್ತಾಯ ಬಂತು. ಒಬ್ಬನಿಗಾಗಿ ಸಂಸ್ಥೆಗೆ ತೊಂದರೆ ಆಗದಿರಲಿ ಎಂದು ಶರ್ಮಾಜಿ ನನ್ನನ್ನು ಕೈ ಬಿಟ್ಟರು. ನಿಷ್ಠುರವಾದ ನಿಯಮಪಾಲನೆ, ಶಿಸ್ತು, ನಿಸ್ವಾರ್ಥ ಸೇವೆಯ ಪ್ರತಿಫಲ ಏನು ಎಂಬುದು ನನಗೆ ಅರಿವಾಯಿತು. ನಾನು ಅಂದಿ

ನಿಂದ ದೂರ ಇರಬೇಕಾಯಿತು. ಶರ್ಮಾಜಿಯವರೂ 1968 ರಲ್ಲಿ ನಿವೃತ್ತರಾದರು. ಅಲ್ಲಿಂದಾಚೆಗೆ ಅವರ ಆರೋಗ್ಯವೂ ಕುಗ್ಗಿತು. ನನ್ನ-ಗಾಂಧೀ ಸಾಹಿತ್ಯ ಸಂಘದ ಸಂಪರ್ಕ ಮಾತ್ರ ಬೆಳೆದು ಬಂದಿದೆ.

ಸಂಸ್ಥೆಯನ್ನು ಕಟ್ಟುವುದರಲ್ಲಿ ಶರ್ಮಾಜಿ ಎಷ್ಟು ನಿಪುಣರು, ಎಷ್ಟು ಉದಾತ್ತ ಅವರ ವಿಚಾರ ಅವರ ಆಚಾರ ಎನ್ನುವುದನ್ನು ತಿಳಿಯಲು ಮಲ್ಲೇಶ್ವರದ ಶ್ರೀರಾಮ ಕೋ ಆಪರೇಟಿವ್ ಬ್ಯಾಂಕಿನ ಕಥೆಯನ್ನು ಅರಿಯಬೇಕು.

# ಶಾಸನಮುಕ್ತ ಸಮಾಜಕ್ಕೊಂದು ನಮೂನೆ

ಎಸ್. ಎನ್. ಸುಬ್ಬರಾವ್

"That government is best which rules least" ಎಂಬ ಪಾಶ್ಚಾತ್ಯ ನಾಣ್ನುಡಿಯಿಂದೊಡನೆ, ಮಾರ್ಕ್ಸ್, ಗಾಂಧಿ ಮತ್ತಿತರ ಎಲ್ಲ ಆಧುನಿಕ ರಾಜಕೀಯ ಚಿಂತಕರ ವಿಚಾರದಂತೆಯೂ, ನಾಗರಿಕರು ಹೆಚ್ಚು ಸುಖವನ್ನನುಭವಿಸ ಬೇಕಾದರೆ, 'ಅವರ ಮೇಲೆ ಶಾಸನದ ಹೊರೆ ಸಾಧ್ಯವಾದಷ್ಟು ಕಡಿಮೆ ಇರಬೇಕು' ಎಂಬ ತತ್ವವೇ ಮೂಲ ಆಧಾರ. ಮಾರ್ಕ್ಸ್ 'ಕಟ್ಟಕಡೆಗೆ ರಾಜ್ಯವೇ ಕ್ಷೀಣವಾಗುವುದು–ಆಗ ನಾಗರಿಕನು ಪೂರ್ಣ ಸುಖವನ್ನನುಭವಿಸುವನು' ಎಂದು ಕಲ್ಪನೆ ಮಾಡಿದ್ದರೆ, ಗಾಂಧೀಜಿ 'ಭಾರತದಲ್ಲಿ ರಾಜ್ಯವಿಹೀನ ಸಮಾಜ ಸ್ಥಾಪನೆ'ಯ ಕಲ್ಪನೆಯನ್ನು ದೇಶದ ಮುಂದಿಟ್ಟಿದ್ದರು.

ಈ ಮಹದುದ್ದೇಶವನ್ನು ಮುಂದಿಟ್ಟು ಕೊಂಡು ಕೆಲಸಕ್ಕೆ ತೊಡಗಿದ ಸಂಸ್ಥೆಗಳು ಅನೇಕ. ರಷ್ಯ ಮತ್ತಿತರ ದೇಶಗಳಲ್ಲಂತೂ ಸಂಪೂರ್ಣ ರಾಷ್ಟ್ರವನ್ನೇ ಇದೇ ಆಧಾರದ ಮೇಲೆ ಕಟ್ಟುವ ಕಾರ್ಯಕ್ರಮವನ್ನು ಇಟ್ಟುಕೊಂಡೇ ಕ್ರಾಂತಿಗಳು ಕಾರ್ಯಗತವಾದವು.

ಆದರೆ, ಈ ಸಿದ್ಧಾಂತವು ವ್ಯವಹಾರದಲ್ಲಿ ಕಾಣುವುದು ಅತ್ಯಂತ ಕಷ್ಟಸಾಧ್ಯ. ಅಂತೆಯೇ ಬಹುಶಃ ಪೂರ್ಣಸಂತುಷ್ಟ ನಾಗರಿಕನನ್ನು ಕಾಣುವುದೂ ಕಷ್ಟಸಾಧ್ಯ! ಈ ಮಾತು ಭಾರತಕ್ಕೆ ಮತ್ತು ಅಷ್ಟೇ ಪ್ರಮಾಣದಲ್ಲಿ ಇನ್ನಿತರ ದೇಶಗಳಿಗೂ ಅನ್ವಯಿಸುತ್ತದೆ. ಹಾಗಿದ್ದೂ ಅನೇಕ ಹಿರಿಯ ಚಿಂತಕರು ಈ ವಿಚಾರದಲ್ಲಿ ಶ್ರದ್ಧೆ ಇಟ್ಟಿರುವುದು ಮತ್ತು ಇತರ ಯಾವ ವ್ಯವಸ್ಥೆಯಲ್ಲಿಯೂ ಮಾನವನಿಗೆ ಸಮಾಧಾನ ಸಿಗದಿರುವುದು – ಈ ಎರಡು ಕಾರಣಗಳಿಂದ 'ಶಾಸನ ಮತ್ತು ಸಮಾಜ' [illegible] ಪ್ರಯೋಗಗಳಂತೂ ಸತತ ನಡೆದೇ ಇವೆ. ಸಮಾಧಾನದ ಅಭಾವವು ಆರ್ಥಿಕ ವೃದ್ಧಿಯಿಂದ ಮುಂದರಿದ ದೇಶಗಳಲ್ಲಿ ಹೆಚ್ಚಿರುವುದರಿಂದ, ಈ ದಿಶೆಯ ಪ್ರಯೋಗಗಳೂ ಆ ದೇಶಗಳಲ್ಲಿ ಹೆಚ್ಚು ನಡೆಯುತ್ತಿವೆ.

ಮೂರು ದಶಕಗಳ ಹಿಂದೆ ಬೆಂಗಳೂರಿನ ಒಂದು ಮೂಲೆ–ಮಲ್ಲೇಶ್ವರದಲ್ಲಿ ಅನಾಯಾಸ ಮತ್ತು ಅಗೋಚರವಾಗಿಯೇ ಈ ದಿಶೆಯಲ್ಲಿ ಒಂದು ಪವಿತ್ರ ಯಾಗದ ಬೀಜಾಂಕುರವಾಯಿತು. ಗಾಂಧೀ ಸಾಹಿತ್ಯ ಸಂಘದ ಇತಿಹಾಸ, ಉದ್ದೇಶ, ಕಾರ್ಯ

ಕ್ರಮ, ಇನ್ನಿತರ ವಿವರಣೆಗಳನ್ನು ಈ ಸಂಸ್ಕರಣದ ಇತರ ಲೇಖನಗಳಲ್ಲಿ ಕಾಣಬಹುದಾದುದರಿಂದ ಈ ಲೇಖನದ ಸೀಮಿತ ಲಕ್ಷ್ಯವಿಷ್ಟೆ—ಸಂಘದ ರಚನೆಯಲ್ಲಿ ಎದ್ದು ಕಾಣುತ್ತಿದ್ದ 'ಶಾಸನ ಮುಕ್ತಿ'ಯ ವಿಮರ್ಶೆ. ಅದೇ ದೃಷ್ಟಿಬಿಂದುವನ್ನು ವಿವರಿಸುವ ಸಂದರ್ಭ ಬಂದಾಗ ದೇಶದ ನಾನಾ ಭಾಗಗಳಲ್ಲಿ ನಾನು ಗಾಂಧೀ ಸಾಹಿತ್ಯ ಸಂಘದ ಉದಾಹರಣೆಯನ್ನೇ ಕೊಡುತ್ತಿರುತ್ತೇನೆ.

ನಾನು 1949ರಲ್ಲಿ ಬೆಂಗಳೂರು ಬಿಟ್ಟಾಗಿನಿಂದ ನನಗೂ-ಸಂಘಕ್ಕೂ ಸಂಬಂಧವು ದೂರದ್ದಾಯಿತು. ಕೆಲವೊಮ್ಮೆ ಪತ್ರದಿಂದ ಅಥವಾ ವರ್ಷಕ್ಕೊಂದು ಬಾರಿ ಬೆಂಗಳೂರಿಗೆ ಹೋದಾಗ ಸಂಪರ್ಕವಾಗುತ್ತಿರುತ್ತದೆ. ಆ 'ಶಾಸನ ಮುಕ್ತ' ವಾತಾವರಣವಂತೂ ಇನ್ನೂ ನಡೆದುಬರುತ್ತಿರುವುದು ಆನಂದದ ವಿಷಯ.

ಗಾಂಧೀ ಸಾಹಿತ್ಯ ಸಂಘಕ್ಕೊಂದು ಸಂವಿಧಾನ ಇನ್ನೂ ತಯಾರಾಗಿದೆಯೋ ಇಲ್ಲವೋ ತಿಳಿಯದು. ಆಗಂತೂ ಇರಲಿಲ್ಲ. ಸಂವಿಧಾನ ಇಲ್ಲದೇ ಇದ್ದುದೇ ಅದರ ವೈಶಿಷ್ಟ್ಯ! ಸಂವಿಧಾನವೇ ಇಲ್ಲದಿದ್ದಲ್ಲಿ ಸಂಸ್ಥೆಗೊಬ್ಬ ಅಧ್ಯಕ್ಷ, ಮತ್ತಿತರ ಪದಾಧಿಕಾರಿಗಳು, ಅವರ ಚುನಾವಣೆಗಳು ಇವೆಲ್ಲ ಏಕೆ ಬೇಕು? ಅನಾದಿ ಕಾಲದಿಂದಲೂ ಸುಸೂತ್ರವಾಗಿ ನಡೆದುಬರುತ್ತಿರುವ ಭಾರತೀಯ ಕುಟುಂಬದ ಕೆಲಸವು ಹೇಗೆ ನಡೆಯುತ್ತಿದೆ? ಅದಕ್ಕೆ ಯಾರು ಅಧ್ಯಕ್ಷ? ಯಾರು ಕಾರ್ಯದರ್ಶಿ? ಸಂಸ್ಥೆಗಳೂ ಹಾಗೇ ಏಕೆ ನಡೆಯಬಾರದು? ಅದು ಸಾಧ್ಯ ಎನ್ನಲು ಗಾಂಧೀ ಸಾಹಿತ್ಯ ಸಂಘವು ಒಂದು ಜೀವಂತ ಉದಾಹರಣೆ.

ಸಂವಿಧಾನವಿಲ್ಲ, ಪದಾಧಿಕಾರಿಗಳಿಲ್ಲ, ಕೂಡಿಟ್ಟ ಹಣವಿಲ್ಲ, ಕಾರ್ಯಾಲಯಕ್ಕೊಂದು ಕೊಠಡಿ ಇಲ್ಲ—ಆದರೆ, ಕಾರ್ಯಕರ್ತರಲ್ಲಿ ಎಷ್ಟು ಆತ್ಮೀಯ ಭಾವನೆ, ಕಾರ್ಯಕ್ರಮಗಳಲ್ಲಿ ಎಷ್ಟು ವೈಭವ ಮತ್ತು ಸಂಸ್ಥೆಯಲ್ಲಿ ಎಷ್ಟು ಉತ್ಸಾಹ! ವರ್ಷಕ್ಕೊಮ್ಮೆ ಕಾರ್ಯಕರ್ತರ ಸಭೆ ನಡೆಯುತ್ತಿತ್ತು-ಅದೇ ಸಂಸ್ಥೆಯ ಕಾರ್ಯಕಾರೀ ಸಭೆ, ಅದೇ ಸಾಧಾರಣ ಸಭೆ-ಅದೇ ಎಲ್ಲವೂ! ಸಭೆಯ ಕಾರ್ಯಕಲಾಪದ ನಿಯಮಗಳಾದರೂ ಏನಿತ್ತು? ಗಾಂಧೀ ಜಯಂತಿ ಉತ್ಸವಗಳ ಕಡೆಯ ದಿನದ ಕಾರ್ಯಕ್ರಮದ ನಂತರ ಬಂದ ನೂರಾರು ಜನರಿಗೂ ಪ್ರಸಾದವಿತರಣೆ ಆಗುತ್ತಿತ್ತು. ಹಸಿ ಕಡಲೆಕಾಯಿ-ಬೆಲ್ಲ. ಜನರು ಹೋದ ಮೇಲೆ ಸಕ್ರಿಯ ಕಾರ್ಯಕರ್ತರು ಮಾತ್ರ ಸಭಾಸ್ಥಳದಲ್ಲಿ ಉಳಿಯುತ್ತಿದ್ದರು. ಉಳಿದ ಹಸಿ ಕಡಲೆಕಾಯಿ-ಬೆಲ್ಲದ ಸುತ್ತ ಎಲ್ಲರೂ ಕೂತು 'ಹರಟೆ' ಹೊಡೆಯುತ್ತಿದ್ದರು. ಸ್ವಾಭಾವಿಕವಾಗಿಯೇ ಹರಟೆಯ ನಡುವೆ, ನಡೆದ ಕಾರ್ಯಕ್ರಮದ ವರದಿ, ಹಾಗೂ ಮುಂದಿನ ವರ್ಷ ಕೈಗೊಳ್ಳಬೇಕಾದ ಕೆಲಸಗಳ ಯೋಜನೆಗಳು ಚರ್ಚೆಗೆ ಬರುತ್ತಿದ್ದುವು. ಅದಕ್ಕನುಗುಣವಾಗಿ ಕೆಲಸ ಸಾಗುತ್ತಿತ್ತು!

ಹಿಂದೆ ಭಾರತದ 'ಸ್ವರ್ಣಯುಗ'ದ ಕಾಲದಲ್ಲಿನ ಪಂಚಾಯಿತಿ ರಾಜ್ಯವು ಬಹುಶಃ ಹೀಗೇ ನಡೆದಿತ್ತೋ ಏನೊ. ಮುಖಂಡತ್ವದ ಚುನಾವಣೆಯ ಜಗಳವಿಲ್ಲ;

ಲಂಚ, ರುಷುವತ್ತಿಲ್ಲ, ಹಣದ ದುರುಪಯೋಗವಿಲ್ಲ. ಈ ರೀತಿಯ 'ಸಾರ್ವಭೌಮ ಪ್ರಜಾಪ್ರಭುತ್ವ'ವು ಭಾರತದ ಪ್ರತಿಯೊಂದು ಹಳ್ಳಿಯಲ್ಲೂ ಜನ್ಮ ತಾಳಬೇಕೆಂಬುದೇ ಗಾಂಧೀಜಿಯ ಸ್ವಪ್ನವಾಗಿತ್ತು. ಇಂದಿನ ಪ್ರತಿ ಹೆಜ್ಜೆಗೂ ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಹಾಯ, ಮಾರ್ಗದರ್ಶನಗಳನ್ನಪೇಕ್ಷಿಸುವ ಗ್ರಾಮರಚನೆ, ಅದಕ್ಕೆ ಪೂರ್ಣ ವಿರೋಧರೂಪ! ಗಾಂಧೀ ಸಾಹಿತ್ಯ ಸಂಘದ ಪ್ರಯೋಗವು ನಮ್ಮ ಹಳ್ಳಿಗಳಿಗೆ ಮಾದರಿಯಾಗಬಲ್ಲದೇ?

ಸಂಘದ ಸಫಲ ಪ್ರಯೋಗದ ಪ್ರೇರಕ ಶಕ್ತಿ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ ಅವರದು. ಸಂಘದ ರಚನೆಯಲ್ಲಿ ಅವರು ತಮಗಾಗಿ ಯಾವತ್ತೂ ಯಾವ ಪದವಿಯನ್ನೂ ಬಯಸಲಿಲ್ಲ. ಅವರಲ್ಲಿದ್ದ ನಿಃಸ್ವಾರ್ಥ ಬುದ್ಧಿಯೇ ಅವರನ್ನು ಸಂಘದ ಸರ್ವಸ್ವವನ್ನಾಗಿ ಮಾಡಿತ್ತು. ಮಿಡಲ್ ಸ್ಕೂಲ್, ಹೈಸ್ಕೂಲ್, ಕಾಲೇಜುಗಳಿಂದ ಬಂದ ಸಣ್ಣ-ದೊಡ್ಡ ವಿದ್ಯಾರ್ಥಿಗಳಿಗೆ ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಅವರು ಕೊಡುತ್ತಿದ್ದ ಬೌದ್ಧಿಕ, ಆಧ್ಯಾತ್ಮಿಕ ಮಾರ್ಗದರ್ಶನವೇ ಅವರ ನಿಧಿ ಆಗಿತ್ತು. ಬಹಳ ಸುಲಭವಾದ ಶಬ್ದಗಳಲ್ಲಿ ಗಾಢವಾದ ವೇದಾಂತ, ರಾಜನೀತಿ ಸಮಾಜನೀತಿ, ಅರ್ಥಶಾಸ್ತ್ರ-ಎಲ್ಲವನ್ನೂ ಎಲ್ಲರಿಗೂ ತಿಳಿಯುವಂತೆ ಹೇಳುತ್ತಿದ್ದರು, ಈಗಲೂ ನನಗೆನ್ನಿಸುತ್ತದೆ—ಶರ್ಮಾ ಅವರು ಭಾರತ ಸಂಚಾರ ಮಾಡಲು ಮುಂದು ಬಂದಿದ್ದರೆ ದೇಶದ ಗಾಂಧೀ ವಿಚಾರವೇತ್ತರಲ್ಲಿ ಅವರು ಸರ್ವಶ್ರೇಷ್ಠರಲ್ಲೊಬ್ಬರಾಗುತ್ತಿದ್ದರು.

ಗಾಂಧಿ ಸಾಹಿತ್ಯ ಸಂಘದ ಪರಿವಾರವು ದೇಶದಾದ್ಯಂತ ಹರಡಿರುವುದು ಬಹಳ ಆನಂದ-ಅದರಲ್ಲಿಯೂ ಸಂಘದ ಪ್ರತಿನಿಧಿಗಳೆಲ್ಲರೂ ಉತ್ತಮ ಕ್ಷೇತ್ರಗಳನ್ನೇ ತಯಾರು ಮಾಡಿರುವರು—ಸಂಘದ ಜಯಸಿಂಹರಾವ್ ಇಂದು ಜಯಭಾಯಿ ಆಗಿ ವಿನೋಬಾಜಿ ಜತೆ ಇದಾರೆ (ಅವರ ಸ್ವಭಾವಕ್ಕೆ 'ಸಿಂಹ' ಹೆಸರು ಒಪ್ಪುವುದಿಲ್ಲವೆಂದು ವಿನೋಬಾಜಿ ಮತ), ಸಂಘದ ರಾಮು ಈಗ ರಾಮಕೃಷ್ಣಾಶ್ರಮದ ಹಿರಿಯ ಸ್ವಾಮಿಗಳು, M. B. ಸುಬ್ರಹ್ಮಣ್ಯಂ ಅವರು B. S. ಮಂದಾಸೆರೆ ಆಗಿ ಡಾ. ಜೆ. ಸಿ. ಕುಮಾರಪ್ಪನವರ ನಿಕಟವರ್ತಿಗಳಾಗಿದ್ದು ಇಂದು ಗಾಂಧೀ ಗ್ರಾಮದಲ್ಲಿ ಸೇವೆ ಸಲ್ಲಿಸುತ್ತಿರುವರು. ಸಂಘದ M. S. K. (ಕೃಷ್ಣಮೂರ್ತಿ) ಈಗ S. K. ಮೀರ ಮೀರಾ-ಖಾದಿ ಗ್ರಾಮೋದ್ಯೋಗ ಆಯೋಗಕ್ಕೆ ಸಲಹಾಗಾರರಾಗಿದ್ದು, ಪಿಂಗಾಣಿ ಕ್ಷೇತ್ರದಲ್ಲಿ ಗೃಹೋದ್ಯೋಗಕ್ಕೆ ಒಂದು ವಿಶಿಷ್ಟಸ್ಥಾನ ನಿರ್ಮಿಸಿಕೊಟ್ಟಿದ್ದಾರೆ. ಸಂಘದ ಶ್ರೀನಿವಾಸರು ಈಗ ರಾಮಕೃಷ್ಣಾಶ್ರಮದ ಸ್ವಾಮಿ, ಸಂ. ಕೃಷ್ಣಸ್ವಾಮಿಯವರು ಬೆಂಗಳೂರಿನಲ್ಲಿ ಎಲ್ಲಿ ಭಜನೆಯಾದರೂ ಮೊದಲು ಆಹ್ವಾನಿಸಲ್ಪಡುತ್ತಾರೆ—ಹೀಗೆ ಹಲವಾರು ಪ್ರತಿನಿಧಿಗಳು ಹಲವಾರು ಕ್ಷೇತ್ರಗಳಲಿದ್ದು ಗಾಂಧೀ ವಿಚಾರದ ಮಾಧುರ್ಯವನ್ನು ಹರಡುತ್ತಿರುವುದು ತೃಪ್ತಿಕರ ವಿಷಯ.

ಹಿಂದಿನಂತೆ ಮಾರ್ಗದರ್ಶನ ಮಾಡುವ ಶಕ್ತಿ ಶರ್ಮಾಜಿಗೆ ಹಿಂತಿರುಗಲೆಂದು ನಮ್ಮೆಲ್ಲರ ಹಾರೈಕೆ.

# ಸರ್ವೋದಯ ಆಚಾರ್ಯ

ಸ್ವಾಮಿ ವಿಶ್ವಾನಂದ

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರ ಕಾರ್ಯಕ್ಷೇತ್ರ ಕರ್ನಾಟಕಕ್ಕೆ ಸೀಮಿತವಾಗಿದ್ದರೂ ಆರಂಭದಲ್ಲಿ ಅಖಿಲ ಭಾರತ ಕ್ಷೇತ್ರದಲ್ಲಿ ಕೆಲಸ ಮಾಡಿದ್ದಾರೆಂಬುದು ಅನೇಕರಿಗೆ ಗೊತ್ತಿದೆ.

ಕಾಂಗ್ರೆಸ್ ಅಖಿಲ ಭಾರತ ಸಂಸ್ಥೆಯಾಗಿದ್ದರೂ ಆಗಿನ ಕಾಲದಲ್ಲಿ ಅದು ದೇಶೀಯ ಸಂಸ್ಥಾನಗಳಲ್ಲಿ ಪೂರ್ಣರೂಪದಲ್ಲಿ ಕೆಲಸ ಮಾಡಲಾಗದ್ದನ್ನು ಅರಿತಿದ್ದ ಗಾಂಧೀಜಿ ಸ್ಟೇಟ್ಸ್ ಪೀಪಲ್ಸ್ ಕಾನ್‌ಫರೆನ್ಸ್‌ಗೆ ಉತ್ತೇಜನ ಕೊಟ್ಟರು. ನಮ್ಮ ಕೃಷ್ಣಶರ್ಮರೂ ಆ ಕಾನ್‌ಫರೆನ್ಸ್‌ಗೆ ಬಲ ಇತ್ತರು. ಅದಕ್ಕಾಗಿ ಜವಾಬ್ದಾರಿ ವಹಿಸಿ ಕೆಲಸ ಮಾಡಿದರು.

೧೯೪೪ರ ಚಳುವಳಿಯಲ್ಲಿ ಸೆರೆಮನೆಯಲ್ಲಿ ಮಹದೇವ ದೇಸಾಯಿ ನಂತರ ಕಸ್ತೂರಬಾರವರು ದಿವಂಗತರಾದರು. ಅವರ ನೆನಪಿಗಾಗಿ, ೭೫ನೆಯ ವರ್ಷದ ಜಯಂತಿಗಾಗಿ, ೭೫ ಲಕ್ಷ ರೂಪಾಯಿ ನಿಧಿ ಸಂಗ್ರಹಿಸಿ ಅರ್ಪಿಸಬೇಕೆಂದು ದೇಶ ತೀರ್ಮಾನಿಸಿತು. ಅದೇ "ಕಸ್ತೂರಬಾ ನಿಧಿ". ಅದನ್ನು ಗ್ರಾಮೀಣ ಸ್ತ್ರೀಯರ, ಮಕ್ಕಳ ಅಭಿವೃದ್ಧಿಗೆ ಉಪಯೋಗಿಸಬೇಕೆಂದು ಗಾಂಧೀಜಿ ಆದೇಶವಿತ್ತರು. ಪೂಜ್ಯ ಥಕ್ಕರ ಬಾಪಾ ಆ ನಿಧಿಗೆ ಕಾರ್ಯದರ್ಶಿಗಳು. ಕಲ್ಕತ್ತೆಯ ಒಂದು ಸಭೆಯಲ್ಲಿ ಅವರನ್ನು ಕಂಡಾಗ "ಬಾ ನಿಧಿಗೆ ಮೈಸೂರಿನಲ್ಲಿ ಎಷ್ಟು ಕೂಡಿಸುವಿರಿ" ಎಂದು ಕೇಳಿದರು. "ಎರಡು ಲಕ್ಷ ಕೂಡಿಸುವುದು ಕಷ್ಟವಲ್ಲ" ಎಂದೆ. ಕೆಲವೇ ದಿನಗಳಲ್ಲಿ ಸುಮಾರು ಆ ಮೊತ್ತದ ರಶೀತಿಗಳು ನನ್ನ ವಿಳಾಸಕ್ಕೆ ಬಂದೇಬಿಟ್ಟವು. ಹಣ ವಸೂಲಿಗೆ ಮಾರ್ಗ ಹುಡುಕಬೇಕಾಗಿ ಬಂತು. ಕೃಷ್ಣಶರ್ಮರಲ್ಲಿಗೆ ಹೋದೆ. ವಸೂಲಿಗೆ ಸಮಿತಿಯೊಂದನ್ನು ರಚಿಸಲು ಅವರು ನನ್ನನ್ನು ಶ್ರೀ ವೆಂಕಾಜಿರಾಯರಲ್ಲಿಗೆ ಕರೆದುಕೊಂಡು ಹೋದರು. ಕೃಷ್ಣಶರ್ಮ ಕಾರ್ಯದರ್ಶಿಗಳಾಗುವುದಾದರೆ, ತಾವು ಜವಾಬ್ದಾರಿ ವಹಿಸಿಕೊಳ್ಳುವುದಾಗಿ ವೆಂಕಾಜಿರಾಯರು ಹೇಳಿದರು. ಅಂತೂ ಈರ್ವರೂ ಒಂದಾಗಿ ಕೆಲವೇ ತಿಂಗಳಲ್ಲಿ ಎರಡಲ್ಲ ಎರಡೂಕಾಲು ಲಕ್ಷ ಹಣ ಕೂಡಿಸಿದರು. ಕೃಷ್ಣಶರ್ಮರ ನಯವಾದ ಮಾತು, ಶ್ರದ್ಧೆ, ತ್ಯಾಗಗಳ ಕಾರಣದಿಂದಾಗಿ ಈ ಕೆಲಸ ಸಾಧ್ಯವಾಯಿತು. ಮುಂದೆಯೂ ಅನೇಕ ಸಲ ಅವರು ಸಾರ್ವಜನಿಕ ಜೀವನದಲ್ಲಿ ಹಣ ಕೂಡಿಸಬೇಕಾಗಿ ಬಂತು.

ಅವರು ಕೇಳಿದಾಗ ಜನ ಇಲ್ಲವೆನ್ನಲ್ಲ. ಆದರೆ ಅವರು ಒಂದು ಕಾಸನ್ನೂ ಸ್ವಂತಕ್ಕೆ ಪಡೆಯಲಿಲ್ಲ.

ಕೃಷ್ಣಶರ್ಮರ ಸುಸಂಸ್ಕೃತ ಜೀವ ಭೇದಭಾವವನ್ನು ಒಪ್ಪಲಿಲ್ಲ. ಧಾರ್ಮಿಕ ದೃಷ್ಟಿಯಿಂದ ಸ್ವಲ್ಪಮಟ್ಟಿಗೆ ಹಿಂದಿನ ಸಂಪ್ರದಾಯಗಳಿಗೆ ಅಂಟಿದ್ದರೂ, ಅವರ ಅಂತರಾತ್ಮ ಎಲ್ಲ ಮತಗಳನ್ನೂ ಎಲ್ಲ ಧರ್ಮಗಳ ಅನುಯಾಯಿಗಳನ್ನೂ ತನ್ನಲ್ಲಿ ಸೇರಿಸಿಕೊಂಡಿದೆ. ಸರ್ವಧರ್ಮ ಸಮತಾಭಾವವನ್ನು ಅವರು ಚೆನ್ನಾಗಿ ಪೋಷಿಸಿದ್ದಾರೆ. ಹಿಂದೂ ಮುಸಲ್ಮಾನ್ ಕ್ರೈಸ್ತರೆಲ್ಲರನ್ನು ಒಟ್ಟುಗೂಡಿಸಿ ಅವರಿಂದ ಆಯಾ ಧರ್ಮಗಳ ಪ್ರಾರ್ಥನೆಗಳನ್ನು ಮಾಡಿಸಿದರು.

ಸರ್ವಧರ್ಮ ಸಮತಾಭಾವವನ್ನು ಪ್ರಚಾರಗೊಳಿಸಲು ನಾವು ಏರ್ಪಡಿಸಿದ್ದ ಎರಡು ಅಖಿಲ ಭಾರತ ಸಮ್ಮೇಳನಗಳ ಹಿಂಬದಿಯಲ್ಲಿದ್ದು ಅದಕ್ಕೆ ಬೇಕಾದ ಆರ್ಥಿಕ ಆಧ್ಯಾತ್ಮಿಕ ಸಹಾಯವನ್ನು ಕೊಡಿಸಿ, ಯಶಸ್ವಿಗೊಳಿಸಿದರು.

ಕೃಷ್ಣಶರ್ಮರ ವಿಶ್ವಪ್ರೇಮ ಅವರನ್ನು " ಅಖಿಲ ವಿಶ್ವ ಯುದ್ಧ ನಿರೋಧ " ಸಮ್ಮೇಳನಕ್ಕೆ ಎಳೆದುಕೊಂಡು ಹೋಯಿತು. ಗಾಂಧೀ ಗ್ರಾಮದಲ್ಲಿ ಮೂರುದಿನ ನಡೆದ War Resisters Conference ಗೆ ಬಂದಿದ್ದರು. ತಮ್ಮ ಶಾಂತ ವ್ಯಕ್ತಿತ್ವದಿಂದ ಅನೇಕರ ಮನ ಸೆಳೆದರು.

ಆಚಾರ್ಯರ ವಂಶದಲ್ಲಿ ಹುಟ್ಟಿದ ಅವರು ನಿಜವಾಗಿಯೂ ಆಚಾರ್ಯರೆನಿಸಿಕೊಳ್ಳಲು ಅರ್ಹರಾಗಿದ್ದಾರೆ. ಅವರನ್ನು ಸರ್ವೋದಯ ಆಚಾರ್ಯರೆಂದು ಘೋಷಿಸುವುದು ಬಹು ಸೂಕ್ತವಾಗಿದೆ.

# ಹೋರಾಟಕ್ಕೆ ಸ್ಫೂರ್ತಿಯ ಚಿಲುಮೆ

ಕೆ. ಶ್ರೀನಿವಾಸರಾವ್

'ಸ್ವಾತಂತ್ರ್ಯ-ಸ್ವರಾಜ್ಯ'- ಇವೇ ಅಂದಿನ ಯುವಜನ ಪೀಳಿಕೆಯ ಗುರಿಯಾಗಿತ್ತು. ಆ ಗುರಿಯನ್ನು ಸಾಧಿಸಲು ಗಾಂಧೀಜಿ ತಮ್ಮದೇ ಆದ ರೀತಿಯಲ್ಲಿ ಸ್ವಾತಂತ್ರ್ಯ ಹೋರಾಟವನ್ನು ಪ್ರಾರಂಭಿಸಿದ್ದರು. ಗಾಂಧೀ ಗಾಳಿ ಎಲ್ಲರಮೇಲೂ ಬೀಸಿತು. ಒಳಗೆ ಅಡಗಿದ್ದ ಕಿಡಿ ಪ್ರಜ್ವಲಿಸಿತು. ಹೋರಾಟ ಎಲ್ಲಕಡೆ ಹರಡಿತು.

ಗಾಂಧೀಜಿಯ ಪ್ರಭಾವಕ್ಕೆ ಒಳಗಾಗಿ, ಅವರನ್ನು ನೋಡಿ ಮಾರ್ಗದರ್ಶನ ಪಡೆದು ಹೊಸ ಹುರುಪಿನಿಂದ ಜನರನ್ನು ಕಟ್ಟಲು ತೊಡಗಿದ ಪ್ರಮುಖ ಹೋರಾಟ ಗಾರರಲ್ಲಿ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಒಬ್ಬರು. ತ್ಯಾಗ, ವಿಚಾರನಿಷ್ಠೆ, ಬರ ಬಹುದಾದ ಕಷ್ಟಗಳನ್ನೆಲ್ಲ ಎದುರಿಸುವಂಥ ಕಠೋರ ಜೀವನ, ಹೋರಾಟಕ್ಕೆ ಬೇಕಾದ ಈ ಎಲ್ಲ ಅಗತ್ಯಗಳನ್ನು ಶ್ರೀ ಕೃಷ್ಣಶರ್ಮರು ಪಡೆದು, ತಾವೂ ಸಿದ್ಧರಾಗಿ, ಸಹಕಾರ್ಯ ಕರ್ತರನ್ನೂ ತಮ್ಮೊಂದಿಗೇ ಕರೆದೊಯ್ದರು.

ಒಮ್ಮೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ "ಸೇವಾಗ್ರಾಮದಲ್ಲಿ ಒಂದುದಿನ" ಎಂಬ ವಿಷಯವಾಗಿ ಮಾತನಾಡಿದರು. ಆ ಗಾಂಧೀ ವಿಚಾರಧಾರೆಯನ್ನು ಸ್ಫುಟವಾದ ಸರಳ ವಾದ ಕನ್ನಡದಲ್ಲಿ ಕೇಳುವ ಯೋಗ ಅಂದು ನಮಗೆ ಒದಗಿತ್ತು. ಅಂತಹ ಭಾಷಣ ಗಳ ಪ್ರಭಾವವೊ, ಪರಿಸ್ಥಿತಿಯ ಸುಳಿಯೊ ಅಂತೂ ಹಲವಾರು ಯುವಕರು ಶಾಲೆಗೆ ಸಲಾಂ ಹೊಡೆದು ಸತ್ಯಾಗ್ರಹಕ್ಕೆ ಧುಮುಕಿದರು, ಶರ್ಮಾಜಿಯವರ ಸಲಹೆ ಪಡೆದು.

ಅಂದಿನ ಹೋರಾಟದ ಮುಂಚೂಣಿಯಲ್ಲಿದ್ದ ಕೃಷ್ಣಶರ್ಮರ ಸೇವೆ ಮಾರ್ಗದರ್ಶನ ನಾಡಿಗೆ ದೊರೆತದ್ದು ನಮ್ಮೆಲ್ಲರ ಹೆಮ್ಮೆ. ೪೨ರ ಚಲೇಜಾವ್ ಚಳುವಳಿಯಲ್ಲಿ ಯುವ ಕರು ವಿದ್ಯಾರ್ಥಿಗಳು ಅವರ ಮಾರ್ಗದರ್ಶನ ಪಡೆದು ತಮ್ಮ ಪಾತ್ರವನ್ನು ನಿರ್ವಹಿಸಿ ದರು. ಪತ್ರಿಕಾ ಸಂಪಾದಕರಾಗಿ, 'Quit India' ಸಂದೇಶವನ್ನು 'ಇನ್ನು ಸಾಕು' ಎಂದು ಕನ್ನಡದಲ್ಲಿ ಪ್ರಕಟಿಸಿದರು. ಅದಕ್ಕಾಗಿ ಬೆಂಗಳೂರಿನ ಸೆಂಟ್ರಲ್ ಜೈಲಿಗೆ ಬಂದಿಳಿದರು. ಜೈಲಿನಲ್ಲೂ ಅವರ ಸಹವಾಸ ನಮಗೆ ಸಿಕ್ಕಿತಲ್ಲ ಎನ್ನುವಷ್ಟರಲ್ಲಿಯೆ ಅವರು ಹೊರಗೆ ಹೋದರು. ಶ್ರೀ ಶರ್ಮರಂಥವರು ಒಳಗಿರಲಿ ಹೊರಗಿರಲಿ ಎಲ್ಲಿಯೆ ಇರಲಿ ಹುಟ್ಟಾ ಹೋರಾಟಗಾರರು. ಅನ್ಯಾಯವನ್ನು ಎಂದೂ ಸಹಿಸರು. ತಮ್ಮ ಪ್ರಖರ ಲೇಖನಿಯಿಂದ ವಿಶ್ವಕರ್ಣಾಟಕ, ಕನ್ನಡ ಹರಿಜನ, ಸರ್ವೋದಯ, ಭೂದಾನ,

ಸಂಯುಕ್ತ ಕರ್ನಾಟಕ ಮುಂತಾದ ಪತ್ರಿಕೆಗಳ ಮೂಲಕ ಜನಶಕ್ತಿಯನ್ನು ಹೊಡೆದೆಬ್ಬಿಸುತ್ತಿದ್ದರು. ಯುವಕರಂತೂ ಇವರ ಶೈಲಿಗೆ, ವಿಚಾರತೀವ್ರತೆಗೆ ಮಾರುಹೋಗಿ ಅವರನ್ನು ಭೇಟಿಯಾಗಲು ಬಂದು ಮತ್ತಷ್ಟು ಸ್ಫೂರ್ತಿ ಪಡೆದು ಕಾರ್ಯರಂಗಕ್ಕಿಳಿಯುತ್ತಿದ್ದರು. ಅವರ 'ವರ್ಧಾಯಾತ್ರೆ' 'ಪರ್ಣಕುಟಿ' 'ಕುಲದೀಪಕರು' ಇತ್ಯಾದಿ ಪುಸ್ತಕದ ವಿಶೇಷ ಪ್ರಭಾವ ಜನರ ಮೇಲೆ ಬಿದ್ದು ಸ್ವಾತಂತ್ರ್ಯ ಹೋರಾಟದ ಕಿಡಿಗಳು ನಾಡಿನಲ್ಲೆಲ್ಲ ಚಿಮ್ಮಿದವು.

ಹತ್ತಾರು ಸಂಘ ಸಂಸ್ಥೆಗಳ ಜನ, ಹತ್ತಾರು ಭಾವನೆಯ ಜನ, ಹತ್ತಾರು ಸಮಸ್ಯೆಗಳ ಜನ, ಕಿರಿಯರು ಹಿರಿಯರು ಎಲ್ಲರೂ ಅವರ ಬಳಿಗೆ ಬಂದು ಸೂಕ್ತ ಸಲಹೆ, ಮಾರ್ಗದರ್ಶನ ಪಡೆಯುತ್ತಿದ್ದುದರ ದೃಶ್ಯ ಶ್ರೀ ಕೃಷ್ಣಶರ್ಮರೊಂದಿಗೆ ಕೆಲಸ ಮಾಡುತ್ತಿದ್ದ ನನಗೆ ನಿತ್ಯನೂತನ ಪಾಠ ಕಲಿಸುತ್ತಿತ್ತು.

ಇಂಥವರ ನಾಡು-ನುಡಿಗಳ ಸೇವೆ ನಮಗೆ ದಾರಿದೀಪವಾಗಲಿ.

# ಪಾದರಸದಂತೆ ಚಟುವಟಿಕೆ

ಬಿ. ಕಾಮಾಕ್ಷಮ್ಮ

ಸುಮಾರು ೩೦-೩೫ ವರುಷಗಳ ಹಿಂದಿನ ಮಾತು. ಬೆಂಗಳೂರು ಮಲ್ಲೇಶ್ವರದ ಹನ್ನೊಂದನೆಯ ಅಡ್ಡರಸ್ತೆಯ ಬಸ್‌ಸ್ಟಾಪ್ ಬಳಿ ಶ್ರೀ ಶರ್ಮರ ದರ್ಶನ ಆಗಾಗ್ಗೆ ಆಗುತ್ತಿತ್ತು. ಗೆಳೆಯರಿಂದ ಸುತ್ತುವರಿದ ಅವರು ತಮ್ಮ ಮಾತಿನ ಮೋಡಿಯಲ್ಲಿ ಎಲ್ಲರನ್ನೂ ಸೆರೆ ಹಿಡಿಯುತ್ತಿದ್ದರು. ಅವರು ಹರಿದ ಬಸ್ಸಿನಲ್ಲಿ ಬೇರೆಯವರಿಗೆ ಮಾತನಾಡಲು ತೋರದು. ರಾಜನೈತಿಕ ಆಂದೋಲನದ ಕೊನೆಯ ದಿನಗಳವು. ಶರ್ಮರ ಮಾತಿನ ಮಧ್ಯೆ ಸ್ವಾತಂತ್ರ್ಯದ ಕಿಡಿಗಳು ಒಮ್ಮೊಮ್ಮೆ ಹಾರಿದರೆ ಮತ್ತೊಮ್ಮೆ ಸಿಡಿಬಾಂಬುಗಳು ಹಾರುವುವು. ಮತ್ತೊಮ್ಮೆ ಹಾಸ್ಯದ ಚಟಾಕಿಗಳಿಗೆ ಮಿತಿ ಇಲ್ಲ. ಪಾದರಸದಂತೆ ಚಟುವಟಿಕೆ. ಬಸ್ಸಿನಿಂದ ನಾವು ಇಳಿಯಬೇಕಾದ ಜಾಗ ಬಂದೇಬಿಟ್ಟಿತಲ್ಲ, ಇವರ ಮಾತು ಕೇಳುವ ಅವಕಾಶ ತಪ್ಪಿತಲ್ಲ ಎಂದು ನಮಗೆ ಒಮ್ಮೊಮ್ಮೆ ಬೇಸರವಾಗುತ್ತಿತ್ತು.

ಶ್ರೀ ಶರ್ಮರ ಮನೆಗೆ ನಾನು ಕಾರ್ಯಾಂತರದಿಂದ ಎಂದಾದರೂ ಹೋದರೆ ಬೆಳಗಿನ ಹೊತ್ತು ಅವರು ಬರವಣಿಗೆಯಲ್ಲಿ ನಿರತರಾಗಿರುತ್ತಿದ್ದರು. ನಾನು ತೊಂದರೆ ಕೊಟ್ಟೆನೇನೋ ಎಂದು ಅಳುಕಿದರೆ ಅವರಿಗೇನೂ ಬೇಸರವಿಲ್ಲ. ಬಂದ ಕಾರಣ ವಿಚಾರಿಸಿ ಸೂಕ್ತವಾದ ಸಲಹೆ ಕೊಡುವರು. ಒಮ್ಮೆ ಮಾತ್ರ ಅವರು ತಮ್ಮ ಮಗಳ ಮದುವೆಯ ಕರೆಯೋಲೆಗಳಿಗೆ ವಿಳಾಸ ಬರೆಯುತ್ತಿದ್ದರು. ನಿಜ, ಇಡೀ ದೇಶದ ಕೆಲಸ ತಾವು ಮಾಡಿದರೂ ತಮ್ಮ ಮನೆಯ ಕೆಲಸ ತಾವೇ ಮಾಡಬೇಕಲ್ಲ! ನಂದಗೋಕುಲದಂತೆ ಅವರ ಪರಿವಾರ. "ನಮ್ಮ ಅಣ್ಣನನ್ನ ಪೋಲೀಸರು ಜೈಲಿಗೆ ಕರೆದೊಯ್ದರು" ಎಂದು ಆಗ ಹೇಳಿಕೊಂಡು ಕಳವಳಪಟ್ಟ ಹೆಣ್ಣುಮಗು ಇಂದು ತನ್ನ ಮನೆಯಲ್ಲಿ ಗೃಹಿಣಿ ಆಗಿದಾಳೆ.

ಗಾಂಧೀ ಭಕ್ತರಿಗೆ ಆಗ ಶ್ರೀ ಕೃಷ್ಣಶರ್ಮರ ಮನೆ ಸದಾಕಾಲ ತೆರೆದಿತ್ತು. ಅವರ ಧರ್ಮಪತ್ನಿ ಶ್ರೀಮತಿ ಪ್ರಮೀಳಾರವರು ಎಲೆಮರೆಯ ಕಾಯಿಯಂತೆ ಮನೆಯಲ್ಲಿದ್ದು, ಬರುತ್ತಿದ್ದ ಅತಿಥಿಗಳನ್ನು ಸತ್ಕರಿಸುತ್ತಿದ್ದರು. ಶರ್ಮರ ಬೇಕು ಬೇಡಗಳನ್ನು ಗಮನಿಸಿ ಅವರ ಸಾಹಿತ್ಯ ಸೇವೆಗೆ ಆಕೆ ನೆರವಾಗಿದ್ದಾರೆ.

ಯಾವ ಪ್ರಾಂತ್ಯದಲ್ಲಿ ಇವರು ನೆಲಸಿದ್ದರೂ ಅಲ್ಲಿನ ಸಾಹಿತ್ಯ ಭಂಡಾರ ತುಂಬ ಬಲ್ಲಷ್ಟು ನಿಧಿ ಶರ್ಮರಲ್ಲುಂಟು. ಕನ್ನಡನಾಡಿನ ಭಾಗ್ಯ! ಇಲ್ಲಿ ನೆಲೆಸಿ ನಾಡಿನ ಸೇವೆ, ಸರಸ್ವತಿಯ ಸೇವೆ ಮಾಡಿದ್ದಾರೆ.

ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರು ಚಿರಕಾಲ ಬಾಳಿ ಬದುಕಿ ಎಲ್ಲರಿಗೂ ಪ್ರೇರಣೆ ಕೊಡುತ್ತ ಇರಲಿ ಎಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

# ಶ್ರೀ ಕೃಷ್ಣಶರ್ಮ ಅವರು ಸೇವೆ ಸಲ್ಲಿಸಿದ ಸಂಸ್ಥೆಗಳು

೧. ಅಖಿಲ ಭಾರತ ದೇಶೀಯ ಸಂಸ್ಥಾನ ಪ್ರಜಾ ಪರಿಷತ್ತು
(All India States peoples Conference)
೨. ಕನ್ನಡ ಶಾಲೆ, ಹೈದರಾಬಾದು
೩. ಕನ್ನಡ ಸಾಹಿತ್ಯ ಪರಿಷತ್ತು
೪. ಮೈಸೂರು ರಾಜ್ಯ ಪ್ರಕಾಶಕರ ಮತ್ತು ಪುಸ್ತಕ ವ್ಯಾಪಾರಿಗಳ ಸಂಘ
೫. ಭಾರತ ಸೇವಾದಳ
೬. ಮೈಸೂರು ರಾಜ್ಯ ಕಾಂಗ್ರೆಸ್ ಸಮಿತಿ (ಬೆಂಗಳೂರು ನಗರ)
೭. ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್, ಮಲ್ಲೇಶ್ವರ
೮. ಆಂಜನೇಯ ಕೋ ಆಪರೇಟಿವ್ ಬ್ಯಾಂಕ್, ಶೇಷಾದ್ರಿಪುರ
೯. Bangalore Education Society, Malleswarm
೧೦. ಗಣೇಶನಗರ ನಿವೇಶನದಾರರ ಸಂಘ, ಮಲ್ಲೇಶ್ವರ
೧೧. ಗಾಂಧೀ ಸ್ಮಾರಕ ನಿಧಿ, ಬೆಂಗಳೂರು
೧೨. ಭೂದಾನ ಯಜ್ಞ ಸಮಿತಿ, ಬೆಂಗಳೂರು
೧೩. ಸರ್ವಸೇವಾ ಸಂಘ, ಬೆಂಗಳೂರು
೧೪. ದಕ್ಷಿಣ ಭಾರತ ಕೃಷಿ ಗೋ ಸೇವಾಸಂಘ, ಬೆಂಗಳೂರು
೧೫. ದಕ್ಷಿಣ ಭಾರತ ಪುಸ್ತಕ ಸಂಸ್ಥೆ, ಮದರಾಸು
(Southern Languages Book Trust)
೧೬. ಅಖಿಲ ಭಾರತ ವಿದ್ಯಾರ್ಥಿ ಕಾಂಗ್ರೆಸ್
೧೭. ಮಲ್ಲೇಶ್ವರಂ ಕೋ ಆಪರೇಟಿವ್ ಸೊಸೈಟಿ, ಮಲ್ಲೇಶ್ವರಂ
೧೮. ವಿದ್ಯೋದಯ ಸಭಾ, ಮೈಸೂರು
೧೯. ಶ್ರೀನಿವಾಸ ಮಂದಿರ ಧರ್ಮಸಂಸ್ಥೆ, ಬೆಂಗಳೂರು
೨೦. ಬೆಂಗಳೂರು ನಗರ ಪುಸ್ತಕ ಭಂಡಾರ, ಸಮಿತಿ
(Bangalore city Library Authority)
೨೧. ಮೈಸೂರು ರಾಜ್ಯ ಪುಸ್ತಕ ಭಂಡಾರ ಸಂಘ
(Mysore State Library Association)
೨೨. ಪ್ರಭಾತ ಸಾಹಿತ್ಯ, ಬೆಂಗಳೂರು

೨೩. Fellowship of friends of Truth
(ಸತ್ಯ ಮಿತ್ರರ ಕೂಟ)

೨೪. ಬಹಾಯಿ ತತ್ತ್ವ ಪ್ರಚಾರ ಚಳುವಳಿ

೨೫. ಗಾಂಧೀ ಸಾಹಿತ್ಯ (ಪ್ರಕಾಶನ) ಬೆಂಗಳೂರು

೨೬. ಗಾಂಧೀ ಶತಮಾನೋತ್ಸವ ಸಮಿತಿ, ಮೈಸೂರು ಸರ್ಕಾರ, ಬೆಂಗಳೂರು

೨೭. ಗಾಂಧೀ ಸಾಹಿತ್ಯ ಸಂಘ, ಮಲ್ಲೇಶ್ವರ, ಬೆಂಗಳೂರು.

೨೮. Literary and Dramatic Association, Mysore

೨೯. Association for Pre-primary Education, Bangalore.

೩೦. ನಿಜಾಂ ಕರ್ನಾಟಕ ಪರಿಷತ್ತು, ಹೈದರಾಬಾದು

೩೧. Hyderabad Political Committee

೩೨. ಹೈದರಾಬಾದು ಸಂಸ್ಥಾನ ಕಾಂಗ್ರೆಸ್

೩೩. ಮೈಸೂರು ಸಂಸ್ಥಾನ ಕಾಂಗ್ರೆಸ್

೩೪. ಸಾಹಿತ್ಯ ಮಂದಿರ, ಹೈದರಾಬಾದು

೩೫. ಆಂಧ್ರ ಮಹಾಸಭೆ, ಹೈದರಾಬಾದು.

೩೬. ಮಹಾರಾಷ್ಟ್ರ ಪರಿಷತ್ತು, ಹೈದರಾಬಾದು

೩೭. ಮೈಸೂರು ಪ್ರದೇಶ ಚಿತ್ರಕಲಾ ಪರಿಷತ್ತು

೩೮. ವರದಾಚಾರ್ ಸ್ಮಾರಕ ಕಲಾಸಂಘ, ಬೆಂಗಳೂರು

೩೯. ಕರ್ಣಾಟಕ ಸಂಘ, ಚಿತ್ರದುರ್ಗ

೪೦. ಅರುಂಧತೀಯ ಮಹಾಸಭೆ, ಹೈದರಾಬಾದು

## ಪತ್ರಿಕೋದ್ಯಮ

### ಸಂಪಾದಕರು :

ವಿಶ್ವಕರ್ನಾಟಕ
ಜಯ ಕರ್ನಾಟಕ
ಸರ್ವೋದಯ
ಜೀವನ
ಕನ್ನಡ ಹರಿಜನ
ವಾಹಿನಿ
ಕನ್ನಡ ನುಡಿ
ಭೂದಾನ

### ಧಾರಾವಾಹಿ ಲೇಖಕರು
(Columnist)

ಸಂಯುಕ್ತ ಕರ್ನಾಟಕ
ಪ್ರಜಾವಾಣಿ
ಪ್ರಜಾಮತ
ಕರ್ಮವೀರ
ಕನ್ನಡಪ್ರಭ
ವಾಣಿ

# ಕೃಷ್ಣಶರ್ಮ: ಬದುಕು - ಬವಣೆ

---

ನೀಲತ್ತಹಳ್ಳಿ ಕಸ್ತೂರಿ

**ದೊಡ್ಡ** ಸಿದ್ದವನಹಳ್ಳಿ ಚಿತ್ರದುರ್ಗದ ಬಳಿಯ ಗ್ರಾಮ. ಈಗ ಸಿದ್ದವನಹಳ್ಳಿ ಎಂದೇ ಸುಪರಿಚಿತ. ಅಲ್ಲಿನ ನಿಷ್ಠಾವಂತ ಸಂಪ್ರದಾಯಸ್ಥ ಶ್ರೀ ವೈಷ್ಣವ ಮನೆತನದ ಶ್ರೀ ರಂಗಾಚಾರ್ಯರೇ ಶರ್ಮರ ತೀರ್ಥರೂಪರು. ತಾಯಿ ಶ್ರೀಮತಿ ಶೇಷಮ್ಮ. ನಾಲ್ಕು ಜನರಿಗೆ ನೆರವಾಗಿ ಬೆಳಕಾಗಿ ಬದುಕಿದ ಹಿರಿಯರು. ಶರ್ಮರ ಜನನ ಆಗಸ್ಟ್ ಏಳು, ಸಾವಿರದ ಒಂಭೈನೂರು ನಾಲ್ಕನೆಯ ಇಸವಿ. ಇವರಿಗೆ ಅಣ್ಣಂದಿರು ಶ್ರೀಗಳಾದ ಶೇಷಾಚಾರ್ ಹಾಗೂ ಸುಂದರಾಚಾರ್. ತಮ್ಮಂದಿರು ಶ್ರೀಗಳಾದ ರಾಜಗೋಪಾಲ್ ಮತ್ತು ವೇಣುಗೋಪಾಲ್. ತಂಗಿಯರು ಮೂವರು: ಶ್ರೀಮತಿಯರಾದ ಜಯಲಕ್ಷ್ಮಮ್ಮ, ಕಮಲಮ್ಮ ಹಾಗೂ ರತ್ನಮ್ಮ. ತುಂಬಿದ ಮನೆತನ. ಮೊದಲ ಭಾವನವರೇ ಸುಪ್ರಸಿದ್ಧ ಶಿಕ್ಷಣತಜ್ಞ ಶ್ರೀ ಕೆ. ಎಸ್. ಆಚಾರ್ಲು.

ಶರ್ಮಾಜಿಯವರ ಪತ್ನಿ, ಅವರ ಬದುಕಿನ ಉಬ್ಬರದಲ್ಲೂ ಇಳಿತದಲ್ಲೂ ಜೊತೆಗಾತಿ ಶ್ರೀಮತಿ ಪ್ರಮೀಳಮ್ಮ. ಮದನಪಲ್ಲಿಯ ಶ್ರೀ ಕಸ್ತೂರಿರಂಗಾಚಾರ್ ಹಾಗೂ ಶ್ರೀಮತಿ ಅಲಮೇಲಮ್ಮನವರ ಪುತ್ರಿ. ಬಳ್ಳಾರಿ, ಹೈದರಾಬಾದುಗಳಲ್ಲೆಲ್ಲ ಬಳಗ ಓಡಾಟ.

ಹಿರಿಯರ ಕುಟುಂಬದಂತೆಯೇ ಶರ್ಮಾಜಿಯವರದೂ ತುಂಬಿದ ಮನೆ. ಮೂವರು ಪುತ್ರರು, ಆರುಜನ ಹೆಣ್ಣುಮಕ್ಕಳು. ಸ್ವಾತಂತ್ರ್ಯ ಚಳುವಳಿ, ಜೈಲು, ಬಹಿಷ್ಕಾರ, ಓಡಾಟ, ಸಾರ್ವಜನಿಕ ಕಾರ್ಯ, ಅನಿಶ್ಚಯತೆ ಇವೆಲ್ಲದರ ನಡುವೆಯೇ ಮಕ್ಕಳಿಗೆ ಶಿಕ್ಷಣ, ಮದುವೆ ಇತ್ಯಾದಿ. ಎಲ್ಲ ಸಮಾರಂಭಗಳೂ ತೀರ ಸರಳ.

ಶರ್ಮಾಜಿಯವರ ಶಿಕ್ಷಣ ಹಳ್ಳಿಯಲ್ಲಿ ಆರಂಭ. ಆಮೇಲೆ ಚಿತ್ರದುರ್ಗ. ಮುಂದೆ ಮೈಸೂರು. ಅಲ್ಲಿ ದೇಶಪ್ರೇಮದ ಗಾಳಿ ಬೀಸಿ, ಅವರ ಕಾಲೇಜು ಶಿಕ್ಷಣ ಅರ್ಧಕ್ಕೇ ಮುಕ್ತಾಯ. ಲೋಕವೇ ಶಾಲೆ. ಅನುಭವ ಅಧ್ಯಯನ ಪ್ರತಿಭೆ ಎಲ್ಲದರಿಂದ ಪಡೆದ ಅರಿವು ಅಪಾರ. ರಾಜಕೀಯ, ಇತಿಹಾಸ, ಸಾಹಿತ್ಯ, ಆರ್ಥಿಕ ವಿಚಾರ, ಶಿಕ್ಷಣ ಯಾವುದೇ ವಿಷಯವಾಗಲಿ ಇವರಿಗೆ ಅಂಗೈ ನೆಲ್ಲಿಕಾಯಿ. ಸ್ಫಟಿಕದಂತೆ ನಿಚ್ಚಳ. ಹರಿತವಾದ ತಾರ್ಕಿಕಬುದ್ಧಿ, ಪಾದರಸದಂಥ ಚುರುಕು ನಡೆ, ನಿರರ್ಗಳವಾದ ಮಾತಿನ ಮಲುಕು, ನಿರಂತರ ಓಡಾಟ, ಸಭೆ, ಭಾಷಣ, ಬರವಣಿಗೆ, ಸಂಘಟನೆ, ಹಣವಸೂಲಿ,

ಪತ್ರಿಕೋದ್ಯಮ. ಒಂದಲ್ಲ ಎರಡಲ್ಲ. ಅದ್ಭುತ ಚೇತನದ ನೂರು ಬಗೆಯ ಮಿಂಚು, ಚಮಕು.

೧೯೨೦-೨೧ ರ ಸುಮಾರಿಗೆ ತಾರಾನಾಥರಾಯರ ಸೆಳೆತ. ಪ್ರೇಮಾಯತನ ಆಶ್ರಮಕ್ಕೆ ಪಯಣ. ಮತ್ತೆ ಮರಳಿದ ನಂತರ ಮದುವೆ. ಮುಂದೆ ಧಾರವಾಡದ 'ಗೆಳೆಯರ ಗುಂಪಿ'ನಲ್ಲಿ 'ಸಖ್ಯಯೋಗ'ದ ಸಾಧನೆ. ಕನ್ನಡದ ಮುಂಬೆಳಗಿನ ಮಹಾ ಚೇತನ ಸ್ವರೂಪರಾದ ಬೇಂದ್ರೆ, ಗೋಕಾಕ್, ಮುಗಳಿ, ಮಧುರಚೆನ್ನ, ಬೆಟಗೇರಿ, ಸಾಲಿ, ವಿನೀತ, ನಾರಾಯಣ ಸಂಗಮ, ಪ್ರಹ್ಲಾದ ನರೇಗಲ್ಲ, ಕೃಷ್ಣ ಕುಮಾರ ಕಲ್ಲೂರ, ದೇಸಾಯಿ ದತ್ತಮೂರ್ತಿ ಮೊದಲಾದವರ ಜೊತೆ ಚರ್ಚೆ, ಅಧ್ಯಯನ, ವಾದವಿವಾದ, ಬರವಣಿಗೆ, ಹರಟೆ, ಎಲ್ಲವೂ. 'ಹರಟೇಮಲ್ಲ'ರೆಂದೇ ಖ್ಯಾತಿ.

೧೯೨೭ರ ಸುಮಾರಿಗೆ ಹೈದರಾಬಾದು. ಮೊದಲು ಅಲ್ಲಿ ಶಾಲಾ ಮಾಸ್ತರಿಕೆ, ಜೊತೆಗೆ ನಾಡು ನುಡಿಗಳ ಕೆಲಸ. ರಾಜಕೀಯ ಜಾಗೃತಿ. ಹೈದರಾಬಾದು ಕಾಂಗ್ರೆಸ್ಸು, ನಿಜಾಂ ಕರ್ನಾಟಕ ಸಾಹಿತ್ಯ ಪರಿಷತ್ತು, ಆಂಧ್ರ ಮಹಾಸಭೆ, ಮಹಾರಾಷ್ಟ್ರ ಪರಿಷತ್ತು, ಪುರುಸೊತ್ತಿಲ್ಲದ ಓಡಾಟ, ಎರಡುಸಲ ಜೈಲುವಾಸ. 'ಡೆಕ್ಕನ್ ಕ್ರಾನಿಕಲ್' ನಲ್ಲಿ ಬರವಣಿಗೆ. ರಾಜಕೀಯ ಬಾಣಪ್ರಯೋಗ. ೧೯೩೬ಕ್ಕೆ ಹೈದರಾಬಾದಿನಿಂದ ಗಡೀಪಾರು. ಹೊರಟದ್ದು ಮುಂಬೈಗೆ. ಹೋದದ್ದು ವರ್ಧಾಗೆ. ಸೇವಾಗ್ರಾಮ ದಲ್ಲಿ ಭಾರತ ಭಾಗ್ಯವಿಧಾತನ ದರ್ಶನ. ಗಾಂಧೀವಿಚಾರದ ಪ್ರಭಾವ. ದೇಶೀಯ ಸಂಸ್ಥಾನ ಪ್ರಜಾಪರಿಷತ್ತಿನ ಕಾರ್ಯದರ್ಶಿ. ಆಗಲೇ ಜವಹರಲಾಲರಿಗೆ ಕಾರ್ಯದರ್ಶಿ. ೧೯೩೬ ರಿಂದ ೪೦ರ ವರೆಗೆ ನೆಹರೂ ಜೊತೆ ಕೆಲಸ.

ಧಾರವಾಡದಿಂದ ಜಯಕರ್ನಾಟಕದ ಕರೆ. ಅಲ್ಲಿ ಪತ್ರಿಕಾ ಕಾರ್ಯ. ಮುಂದೆ, ೧೯೪೦ ರಲ್ಲಿ ಬೆಂಗಳೂರಿನ ವಿಶ್ವ ಕರ್ನಾಟಕದ ಸಂಪರ್ಕ. ಅದರ ಸಂಪಾದಕತ್ವ, ಜೊತೆಗೇ ಕನ್ನಡ ಹರಿಜನ ಪ್ರಕಟನೆ. ಪತ್ರಿಕೆಯಲ್ಲಿ ಕ್ರಾಂತಿವಾಣಿಯ ಮೊಳಗು. ಜನ ಕಟ್ಟುವ ಓಡಾಟ, ಲೇಖನಗಳ ಬಿರುಸಿಗಾಗಿ ಎರಡು ಬಾರಿ ಜೈಲುವಾಸ, ನಡು ನಡುವೆಯೆ ಸಾಹಿತ್ಯದ ಸುಗ್ಗಿ. ಯತಿರಾಜ ರಾಮಾನುಜ ಮೊದಲ ಪುಟ್ಟ ಪುಸ್ತಕ. ವರ್ಧಾಯಾತ್ರೆ, ದೀಪಮಾಲೆ, ಕುಲದೀಪಕರು, ಪರ್ಣಕುಟಿ, ನಿರ್ಭಾಗ್ಯ ಬೋರೇಗೌಡ, ಕನ್ನಡದ ಕಿಡಿಗಳು, ಕನ್ನಡ ಸಮಸ್ಯೆ, ಇತ್ಯಾದಿ ಇತ್ಯಾದಿ. ಕನ್ನಡ ತಾಯಿಗೆ ಹೊಸ ಬಗೆಯ ಗದ್ಯಶೈಲಿಯ ಸಿಂಗಾರ. ಮಸಾನೀ ಅವರ ನಮ್ಮ ಹಿಂದುಸ್ತಾನ ಅನುವಾದ. ೧೯೪೨ ಮಲ್ಲೇಶ್ವರದ ಗಾಂಧೀ ಸಾಹಿತ್ಯ ಸಂಘ ಸ್ಥಾಪನೆ. ದೇಶಪ್ರೇಮಿಗಳಾಗಿ ಆದರ್ಶನಿಷ್ಠರಾಗಿ ಯುವಜನರನ್ನು ರೂಪಿಸುವ ಕೇಂದ್ರ, ಕುಲುಮೆ. ಚಿಂತನ-ಮಂಥನ, ಮಾತಿನ ಮಂಟಪ, ಹರಟೆ, ಎಲ್ಲ ನಡೆದೇ ಇತ್ತು.

೧೯೪೯-೫೦ರಲ್ಲಿ ಕನ್ನಡ ಸಾಹಿತ್ಯಪರಿಷತ್ತಿನ ಕಾರ್ಯದರ್ಶಿತನ. ಸೊಲ್ಲಾಪುರದ ಸಾಹಿತ್ಯ ಸಮ್ಮೇಳನ. ಬೆಂಗಳೂರು ಕಾಂಗ್ರೆಸ್ಸಿನಲ್ಲಿ ಪ್ರಭಾವಯುತ ಕಾರ್ಯ. ಚುನಾವಣಾ ಓಡಾಟ. ೧೯೪೮ ರಲ್ಲಿ ಬಾಪೂ ಮರಣ. ಮುಂದೆ ಎಲ್ಲ ಗಾಂಧೀ ಕಾರ್ಯವೇ.

ಗಾಂಧೀ ಸಾಹಿತ್ಯರಚನೆ, ಪ್ರಕಟಣೆ, ಪ್ರಸಾರ. ೧೯೬೦-೬೧ ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಕನ್ನಡ ವಿಭಾಗದ ಮುಖ್ಯಸ್ಥ. 'ಸರ್ವೋದಯ' ಪತ್ರಿಕೆ. ಕಿರಿಯ ಲೇಖಕರಿಗೆ ಪ್ರೋತ್ಸಾಹ, ದಾರಿದೀಪ.

ವಿನೋಬಾಜಿಯ ಭೂದಾನಯಜ್ಞದಲ್ಲಿ ಮುಂಚೂಣಿ ಕಾರ್ಯಕರ್ತ. ವಿಚಾರ ಕ್ರಾಂತಿಯ ಹರಿಕಾರ. ಭೂದಾನ ಪತ್ರಿಕೆ, ಲೇಖನ, ಅನುವಾದ, ಯಾತ್ರೆ, ಭಾಷಣ, ವ್ಯಾಖ್ಯಾನ, ಚರ್ಚೆ, ಸಂಘಟನೆ.

೧೯೫೮, ಬಡವರ ಬ್ಯಾಂಕು ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್‌ಸ್ಥಾಪನೆ. ೧೨ ವರ್ಷದ ನಿರಂತರ ಮಾರ್ಗದರ್ಶನ ದುಡಿತ. ಅದರ ಮಾದರಿಯಲ್ಲೇ ಆಂಜನೇಯ ಬ್ಯಾಂಕ್ ಸ್ಥಾಪನೆ. ನಡುನಡುವೆ ಹತ್ತಾರು ಸಂಘ ಸಂಸ್ಥೆಗಳ ಸಂಪರ್ಕ, ಶ್ರೀನಿವಾಸ ಮಂದಿರದ ಅನಾಥಾಲಯ, ವಿದ್ಯೋದಯ ಸಭಾ, ಬೆಂಗಳೂರು ಎಜ್ಯುಕೇಷನಲ್ ಸೊಸೈಟಿ, ಶಾರದಾ ಸಂಗೀತ ಸಭಾ, ನರ್ಸರಿ ಶಿಕ್ಷಣ ಸಂಘ, ಗಾಂಧೀ ಸ್ಮಾರಕ ನಿಧಿ, ಗೋಸೇವಾ ಸಂಘ, ಪ್ರಕಟಣಕಾರರ ಸಂಘ, ಒಂದಲ್ಲ ಎರಡಲ್ಲ. ಕೈತುಂಬ ಕೆಲಸ, ತಲೆತುಂಬ ವಿಚಾರ, ಬಾಯಿತುಂಬ ಮಾತು.

1965-66ರಲ್ಲಿ 'ರಾಮಾವತಾರ' ಪ್ರಕಟಣೆ. ಜೊತೆಗೇ ಮುನಷಿಯವರ ಕೃಷ್ಣಾವತಾರದ ಅನುವಾದ, ನೆಹರು-ಮೋತಿಲಾಲ್, ಜವಹರಲಾಲ್, ರಾಜೇಂದ್ರಪ್ರಸಾದ್ ಆತ್ಮಕಥೆ ಮೊದಲಾದ ಬೃಹತ್ ಗ್ರಂಥಗಳ ಅನುವಾದ. 'ಜೀವನ' ಪತ್ರಿಕೆಯ ಸಂಪಾದಕತ್ವ.

ಎಲ್ಲ ರಚನಾತ್ಮಕ ಕಾರ್ಯದಲ್ಲೂ ಸೇವೆ, ಸಹಕಾರ, ಎಲ್ಲೂ ಅಂಟಿಕೊಳ್ಳದ ಅನಾಸಕ್ತಿಯೋಗ. ಸ್ವಂತಕ್ಕೆ ಏನೂ ಮಾಡಿಕೊಳ್ಳದ ನಿಸ್ವಾರ್ಥತೆ. ನಿರಂತರ ಕರ್ಮಯೋಗ, ಜ್ಞಾನಯಜ್ಞ.

ಈಗ ಮೂರು ನಾಲ್ಕು ವರ್ಷದಿಂದ ಅಸ್ವಸ್ಥತೆ. ದುಡಿದು ದುಡಿದು, ಚಿಂತಿಸಿ ಚಿಂತಿಸಿ, ಬರೆದು ಬರೆದು, ಓಡಾಡಿ ಓಡಾಡಿ, ಮಾತಾಡಿ ಮಾತಾಡಿ ದಣಿದ ಜೀವ, ಚೇತನ ಇಂದು ಮನೆಗೇ ಸೀಮಿತ, ಶಯ್ಯಾಬಂಧಿತ.

ಇದು ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ ಅವರ ಬದುಕಿನ ಮಸಕು ಚಿತ್ರ.

# “ವ್ರತ ಇದ್ದರೆ ಸಾಕು”

**ನಂ. ಕೃಷ್ಣಸ್ವಾಮಿ**

ಗಾಂಧೀಜಿ ಭಾರತದ ಆತ್ಮದಂತೆ ಇದ್ದರು. ಮೈಸೂರಿನಲ್ಲಿ ಅವರ ವಾಣಿ ಶರ್ಮಾಜಿ.

ಗಾಂಧೀ ವಾದದಲ್ಲಿ ಉಜ್ವಲ ನಂಬಿಕೆ, ಗಾಂಧೀಜಿಯಲ್ಲಿ ಅಚಲ ನಿಷ್ಠೆ, ಪರಿಶುದ್ಧವಾದ ವೈಯಕ್ತಿಕ ಜೀವನ-ಇವೆಲ್ಲ ಅವರ ವೈಶಿಷ್ಟ್ಯ.

ಆದ್ದರಿಂದಲೇ ಅವರನ್ನು ಮೈಸೂರಿನ ನಾಯಕರೆಲ್ಲರೂ ಗುರುಸ್ಥಾನದಲ್ಲಿ ನೋಡುತ್ತಿದ್ದರು. ರೆಡ್ಡಿ, ಸಿದ್ದಲಿಂಗಯ್ಯ, ಭಾಷ್ಯಂ ಮೊದಲಾದವರು ಅವರ ಸಲಹೆ ಪಡೆಯುತ್ತಿದ್ದರು. ಅವರು ಮಂತ್ರಿಪದವಿಗೆ ಎಂದೂ ಆಸೆಪಟ್ಟವರಲ್ಲ, ಆದರೆ ಮಂತ್ರಿಗಳೇ ಅವರ ಮಾರ್ಗದರ್ಶಿತ್ವವನ್ನು ಬಯಸುತ್ತಿದ್ದರು. ಅದು ಕೆಲವು ಕಾಲ ಮಾತ್ರ. ಭಾರತದ ರಂಗದಿಂದ ಬಾಪೂಜಿ ನಿರ್ಗಮಿಸಿದಾಗಲೇ ಶರ್ಮಾಜಿಯವರ ಪ್ರಾಮುಖ್ಯವೂ ಕಡಮೆಯಾಯಿತೆಂದೂ ಕಾಣುತ್ತದೆ. ದೀಪವೇ ಇಲ್ಲದಿದ್ದಾಗ ಅದರ ಬೆಳಕನ್ನು ಪ್ರತಿಫಲಿಸುತ್ತಿದ್ದ ಕನ್ನಡಿಯನ್ನು ಯಾರು ಕೇಳುತ್ತಾರೆ? ರಾಷ್ಟ್ರದ ಇತರ ಕಡೆಗಳಲ್ಲಿಯೂ ಗಾಂಧೀವಾದಿಗಳು ಹಿನ್ನೆಲೆಗೆ ಸರಿದರು. ಬೇರೊಂದು ತರಹೆಯ ಮುಂದಾಳುಗಳು ಮುಂದೆ ಬಂದರು.

ಶರ್ಮಾಜಿಯವರ ನಾಯಕತ್ವ ಇತರ ನಾಯಕರನ್ನು ಕಟ್ಟುವಂತಹುದು. ಅವರ ಹೆಮ್ಮೆ ಎಂದರೆ—ಇದನ್ನು ಅವರೇ ನನಗೆ ಕೆಲವು ಸಲ ಹೇಳಿಕೊಂಡಿದ್ದಾರೆ—ಕೆಲವು ಶುದ್ಧಾತ್ಮರಾದ ಯುವಜನರನ್ನು ಜೊತೆಗೂಡಿಸಿಕೊಂಡು ಅವರ ಜೀವನವನ್ನು ಆದರ್ಶಪೂರ್ಣವನ್ನಾಗಿಸಲು ಸಹಾಯ ಮಾಡಿದ್ದು. ಗಾಂಧೀ ಸಾಹಿತ್ಯ ಸಂಘದ ತರುಣರು ಇಂದು ರಾಮಕೃಷ್ಣಾಶ್ರಮದ ಸಂನ್ಯಾಸಿಗಳಾಗಿ ಹೆಸರು ಪಡೆದಿದ್ದಾರೆ. ಸರ್ವೋದಯ ಕಾರ್ಯದ ಮುಂದಿನ ಪಂಕ್ತಿಗಳಲ್ಲಿದ್ದಾರೆ. ಇದು ಅವರಿಗೆ ಹೆಚ್ಚಿನ ಸಂತೋಷವನ್ನು ತಂದುಕೊಟ್ಟಿದೆ.

ಅವರ ಜೀವನವೇ ಗಾಂಧೀ ವಾದವಾಗಿತ್ತು. ಅವರ ನರನರಗಳಲ್ಲಿಯೂ ಗಾಂಧೀ ಸ್ಮೃತಿಯಿತ್ತು. ಬಾಯಿ ತೆರೆದರೆ ಗಾಂಧೀ ಆದರ್ಶ ಹೊರಹೊಮ್ಮುತ್ತಿತ್ತು. ಬಾಯಿ ಮಾತಿನಲ್ಲಿ ಮಾತ್ರವಲ್ಲ, ಅವರ ಜೀವನವೇ ಆ ಆದರ್ಶದಲ್ಲಿ ನಡೆದಿತ್ತು. ಗಾಂಧೀ ಆರೋಗ್ಯ ಸೂತ್ರವನ್ನು ಅನುಸರಿಸಿದ ಅವರ ಮನೆಯಲ್ಲಿ ಕರಿದ ತಿಂಡಿಗಳನ್ನೇ ಮಾಡುತ್ತಿರಲಿಲ್ಲ. ವ್ರತ-ಅದೇ ಜೀವನಕ್ಕೆ ಅಗತ್ಯ ಎಂದು ಅವರ ನಂಬಿಕೆ. ನಮ್ಮ ದೇಶ ಉದ್ಧಾರವಾಗಬೇಕಾಗಿದ್ದರೆ ಪ್ರತಿಯೊಬ್ಬನಿಗೂ ಎರಡು ಮೋಟಾರು ಕಾರು ಬರಬೇಕಾಗಿಲ್ಲ. ಎಲ್ಲರಿಗೂ ಒಂದೊಂದು ವ್ರತ ಇದ್ದರೆ ಸಾಕು ಎಂದು ಅವರು ನಂಬಿದ್ದರು, ಹಾಗೆಯೇ ನಡೆದಿದ್ದಾರೆ.

# ಧೀಮಂತತೆಯ ಪ್ರಜ್ಞೆ

ನೀ. ಶ್ರೀ. ರಂಗಾಚಾರ್

ಮೂವತ್ತು ವರ್ಷಗಳ ಹಿಂದಿನ ಮಾತು. ಗಾಂಧೀಜಿಯ ಸತ್ಯಾಗ್ರಹ ಚಳುವಳಿ ದೇಶದಲ್ಲೆಲ್ಲ ಸಮರೋತ್ಸಾಹ ತುಂಬಿದ್ದ ಕಾಲ. ಆಗ ಹೈಸ್ಕೂಲು ವಿದ್ಯಾರ್ಥಿ ನಾನು ತುಮಕೂರಿನಲ್ಲಿ.

ಒಂದು ದಿನ ಜಗುಲಿಗೆ "ವೆಂಕಟಾಚಾರ್ರು ಇದಾರೆಯೆ" ಎಂಬುದಾಗಿ ಯಾರೊ ಮೆದುವಾಗಿ ಕೂಗಿದರು. ಓದುತ್ತಿದ್ದ "ವಿಶ್ವಕರ್ಣಾಟಕ" ಹಿಡಿದುಕೊಂಡೇ ನಾನು ಹೊರಗೆ ಬಂದೆ. ಶುಭ್ರ ಖಾದೀ ಲುಂಗಿ, ಜುಬ್ಬ ಧರಿಸಿದ್ದ ಒಬ್ಬ ವ್ಯಕ್ತಿ ನಿಂತಿದ್ದರು. ಟೊಮ್ಯಾಟೋ ಬಣ್ಣ, ದಷ್ಟಪುಷ್ಟ ಮೈ. ಆದರೆ ವಾಮನಮೂರ್ತಿ, ಗೋಮಟೇಶನಂತೆ ದುಂಡು ತಲೆ, ಅದೇ ಗೊಮ್ಮಟನದೇ ಹುಸಿನಗೆ. ಸುಂದರ ಪುರುಷ. ನನ್ನನ್ನು ನೋಡಿ,

"ಏನಪ್ಪ ನೀನು ವೆಂಕಟಾಚಾರ್ರ ಮಗನೆ ?" ಎಂದರು.

"ಹೌದು" ಎಂದೆ ನಾನು.

"ಏನದು ಪೇಪರು ?"

"ವಿಶ್ವಕರ್ಣಾಟಕ"

"ಓಹೊ, ಆ ದ್ರೋಹಿ ಪೇಪರ್ ಓದುತ್ತೀಯಾ ?" ಎಂದರು ನಸುನಗುತ್ತ.

"ಯಾಕೆ ಸಾರ್ ದ್ರೋಹಿ ಎನ್ನುತ್ತೀರಾ? ಇದನ್ನು ಓದುತ್ತಿದ್ದರೆ ನನಗೂ ಸ್ಕೂಲು ಬಿಟ್ಟು ಸತ್ಯಾಗ್ರಹಕ್ಕೆ ಹೋಗೋಣ ಅನ್ನಿಸುತ್ತೆ."

"ಓಹೋಹೋ. ಭಾರೀ ಉತ್ಸಾಹಿ ಇದೀಯಲ್ಲಾ !"

ಅಷ್ಟರಲ್ಲೇ ತಂದೆತಾಯಿಯವರು ಒಳಗಿನಿಂದ ಬಂದು "ಅಯೋ, ಇದೇನು ಇಲ್ಲೆ ನಿಂತುಬಿಟ್ಟಿರಿ, ಒಳಗೆ ಬನ್ನಿ, ಯಾವಾಗ ಬಂದದ್ದು ?" ಅಂದು ನನ್ನ ಕಡೆ ತಿರುಗಿ "ಇದೇನೋ ಬಂದವರು ಯಾರು ಎಂದು ತಿಳಿಯದೆ ಹೊರಗೇ ಮಾತನಾಡುತ್ತ ನಿಂತುಬಿಟ್ಟೆ. ಅಷ್ಟೂ ತಿಳಿಯಬೇಡವೇ !" ಎಂದರು. ನಾನು "ಹೇಗೆ ಕೇಳಲಿ ಯಾರು ಎಂದು ?" ಅಂದೆ. "ತಿಳೀಲಿಲ್ವೇನೊ ? ಇವರೇ ಸಿದ್ದವನಹಳ್ಳಿ...." ಎಂದು ತಂದೆಯವರು ಶರ್ಮಾಜಿಯವರ ಕಡೆ ತಿರುಗಿ "ಶರ್ಮ, ನಮ್ಮ ಶ್ರೀನಿವಾಸನಿಗೆ ನಿಮ್ಮ ಲೇಖನ ಎಂದರೆ ಸಾಕು ಹುಚ್ಚು !" ಎಂದರು.

ನನ್ನ ಎಳೆಯ ಮನಸ್ಸಿನ ಮೇಲೆ ರಾಷ್ಟ್ರದ ಮಹತ್ತಿಯ ಛಾಪು ಮೂಡಿ, ರಕ್ತದಲ್ಲಿ ಬಿಸಿಯಾಡಿಸುತ್ತಿದ್ದ ಆ ಲೇಖನಗಳ ಕರ್ತೃ ಶರ್ಮಾಜಿಯನ್ನು ಹಾಗೆ ಅಂದು ನೋಡಿ ಮನ ತುಂಬಿ ಬಂತು. ಆ ದಿನವನ್ನು ಎಂದೆಂದೂ ಮರೆಯಲಾರೆ.

ಮುಂದೆ ಬೆಂಗಳೂರಿನಲ್ಲಿ ಅವರ ಹತ್ತಿರದ ಸಂಪರ್ಕ ಸಹವಾಸ ದೊರೆಯಿತು, ಗಾಂಧೀ ಸಾಹಿತ್ಯ ಸಂಘದಿಂದಾಗಿ.

ಶರ್ಮಾಜಿಯವರನ್ನು ದೇಶ ಒಬ್ಬ ಭಾರಿ ರಾಜಕೀಯ ಮುಖಂಡರೆಂದು, ಲೇಖಕರೆಂದು, ಯುಗಪ್ರವರ್ತಕ ಗಾಂಧೀ ಸಾಹಿತಿಯೆಂದು ಗುರುತಿಸಿದೆ. ಹೌದು ಇದೆಲ್ಲ ನಿಜ. ಜತೆಗೆ ನಮಗೆ ನಾವು ಕೆಲಜನ ಅವರ ಕಿರಿಯ ಸಹೋದ್ಯೋಗಿಗಳಿಗೆ ಶರ್ಮಾಜಿ ಇವೆಲ್ಲಕ್ಕಿಂತ ಹೆಚ್ಚಾಗಿ ಬಹಳೇ ಹತ್ತಿರದ ಆತ್ಮೀಯರಾದ ಮಾರ್ಗದರ್ಶಿ. ಹುಚ್ಚಾಗುತ್ತಿದ್ದ ನಮ್ಮ ಕೆಚ್ಚನ್ನು ಸರಿಯಾದ ದಾರಿಗೆ ತಿರುಗಿಸಿ ಬೆಳಕಿನ ದಾರಿ ತೋರಿಸಿ, ಜೀವನಕ್ಕೆ ಒಂದು ಸಾರ್ಥಕತೆಯ ಮೈಕಟ್ಟು ರೂಪ ದೊರಕಿಸಿಕೊಟ್ಟ ಮಹಾಶಿಲ್ಪಿ. ದ್ರೋಣಾಚಾರ್ಯ ಹಾಗೂ ಕೃಷ್ಣ ಏಕೀಭವಿಸಿದ ಮೂರ್ತಿ.

ಜೀವನ ಸಾಗುತ್ತಿದೆ, ದೇಶದಲ್ಲಿ ಸ್ವಾತಂತ್ರ್ಯದೊಡನೆಯೆ ಸಾಕಷ್ಟು ಉಚ್ಛೃಂಖಲತೆ ಲಾಲಸಿಕೆ ಬೆಳೆದಿದೆ. ಹೋರಾಟದ ಕಾಲದ ಉತ್ಸಾಹ ಇಲ್ಲವಾಗುತ್ತಿದೆ. ಜೀವನೋಪಾಯಕ್ಕೆ ಬಡಿದಾಡಬೇಕಾಗಿದೆ. ಕೆಲಸದ ನೆವದಿಂದ ನಾನು ಭಾರತದಲ್ಲಿ ಸಾಕಷ್ಟು ಅಲೆದಿದ್ದೇನೆ. ಅಸಾಮು, ಬಂಗಾಳ, ಅರುಣಾಚಲ ಪ್ರದೇಶಗಳಲ್ಲಿನ ವನಶ್ರೀ, ಅಗಾಧ ನದೀವ್ಯೂಹಗಳು, ಉತ್ತುಂಗ ಹಿಮಾಲಯದ ತಪ್ಪಲಿನಲ್ಲಿ ನಿಂತು ಈ ದೇಶದ ಅಗಾಧತೆಗೆ ಬೆರಗಾಗಿದೇನೆ. ಅಲ್ಲೆಲ್ಲ ಶರ್ಮಾಜಿಯವರು ನಮಗೆ ಈ ದೇಶದ ಬಗ್ಗೆ ಹೇಳಿಕೊಟ್ಟ ಹೆಮ್ಮೆಯ ಸೂಕ್ತಿಗಳು ನೆನಪಿಗೆ ಬಂದು, ಭಾವನಾಪರವಶನಾಗಿ ಮೂಕನಾಗುವ ಸಂದರ್ಭಗಳೂ ಒದಗಿಬಂದಿವೆ ! ಜೊತೆಗೆ ಎಷ್ಟೋ ಬಾರಿ ಪ್ರಲೋಭ ಲಾಲಸೆಗಳ ನೆರಳೂ ಹಾದಿಯುದ್ದ ತನ್ನ ಕರಿಯ ಸೆರಗನ್ನು ಹಾಸಿವೆ– ಆ ವೇಳೆಯಲ್ಲಿ ಶರ್ಮಾಜಿಯ ನೆನಪು, ಅವರ ಧೀಮಂತತೆಯ ಪ್ರಜ್ಞೆ ನನ್ನನ್ನು ಎಚ್ಚರಿಸಿ ಅರಿವನ್ನಿತ್ತು ಕಾಪಾಡಿದೆ. ಈ ಅರಿವಿಗಾಗಿ ನಾನೆಂದೆಂದೂ ಋಣಿ !

"ಕರುಣಾಳು ಬಾ ಬೆಳಕೇ, ಮುಸುಕಿದೀ ಮಬ್ಬಿನಲಿ ಕೈ ಹಿಡಿದು ನಡೆಸೆನ್ನನು"

# "ನೆಲೆ ತೋರಿದವರು"

ಎನ್. ಪಂಕಜ

"ಯಾರದು?" ಕ್ಷೀಣ ಧ್ವನಿಯಲ್ಲಿ ಕೇಳಿದರು ಶರ್ಮಾಜಿ.

"ನಾನು-ಎನ್. ಪಂಕಜ"

"ಬಾಮ್ಮ – ಸೌಖ್ಯವೇ ?"

ತಮ್ಮ ದುರ್ಬಲ ಸ್ಥಿತಿಯಲ್ಲೂ ನನ್ನ ಸೌಖ್ಯದ ಚಿಂತೆ !

ಒಂದಾನೊಂದು ಕಾಲದಲ್ಲಿ ಪುಟ್ಟ ಹುಡುಗನಂತೆ ಹುರುಪಿನಿಂದ ಓಡಾಡುತ್ತಿದ್ದ ಅವರ ಈಗಿನ ಸ್ಥಿತಿಯನ್ನು ಕಂಡು ಕಣ್ಣಲ್ಲಿ ನೀರು ಬಂತು. ಹತ್ತು ಜನರಿಗೆ ಉಪಕಾರ ಮಾಡಿದ ಜೀವ, ಸದಾ ಏನಾದರೊಂದು ಬರೆಯುತ್ತಲೇ ಇದ್ದ ಕರ ಹೀಗಾಗಬಾರದಿತ್ತು !

"ನಿಮ್ಮಿಂದ ಒಂದು ಉಪಕಾರವಾಗಬೇಕಿತ್ತು" ಅನುಮಾನಿಸುತ್ತಲೇ ಕೇಳಿದೆ.

'ಬೇಡಿ, ಅವರ ಕೈಲಾಗೊಲ್ಲ. ಬೇರೆ ಯಾರ ಹತ್ತಿರವಾದರೂ ಮುನ್ನುಡಿ ಬರೆಸೋಣ' ಎಂದು ಸಂಘದವರು ಹೇಳಿದ್ದು ಎಷ್ಟು ನಿಜ ! ಆದರೂ ಬಹುದಿನದ ಬಯಕೆ, ತಡೆಯಲಾರದೆ ಬಂದಿದ್ದೆ. ಈಗ ಏನೂ ತೋಚದೆ ನಿಂತಿದ್ದೆ.

"ಏನಿಲ್ಲ — ನನ್ನ ಎರಡನೆಯ ಕಾದಂಬರಿ ಹೊರಬಂತು. ಇದಕ್ಕೆ ಮುನ್ನುಡಿ ಬರೆದುಕೊಡತೀನಿ ಅಂದಿದ್ದಿರಿ ನೀವು. ಅದಕ್ಕೆ....ಅದಕ್ಕೆ...." ತಡವರಿಸುತ್ತ ನಿಂತೆ.

"ಬಂತೇ ? ಬಹಳ ಸಂತೋಷಾಮ್ಮ. ಹೆಸರೇನು ಇಟ್ಟೆದ್ದಿ ?" ಒಬ್ಬ ತಾಯಿಯನ್ನು ಅವಳ ಮಗುವಿನ ಹೆಸರನ್ನು ಕೇಳುವಷ್ಟು ಆಸಕ್ತಿಯಿಂದ ಕೇಳಿದರು.

"ಬರಲೆ ಇನ್ನು....ಯಮುನೆ ? ಅಂತ ಹೆಸರು."

"ಚೆನ್ನಾಗಿದೆ. ಎಷ್ಟು ಪುಟಗಳಿವೆ ?"

ಹೀಗೇ ಪ್ರಶ್ನೋತ್ತರ.

"ನಿಮ್ಮ ಕೈಲಿ ಸಾಧ್ಯವಿಲ್ಲ ಅಲ್ಲವೇ ?" ವ್ಯಥೆಯಿಂದ ನುಡಿದೆ.

ನಕ್ಕರು-ಅವರ ಸಹಜ ಆತ್ಮೀಯ ನಗುವದು.

"ಅಷ್ಟು ನಿರಾಶೆಯೇಕೆ? ಇಟ್ಟು ಹೋಗಮ್ಮ. ಇದಾಗಲ್ಲ ನನ್ನ ಭಂಟರು. ಯಾರಾದರೊಬ್ಬರ ಕೈಲಿ ಓದಿಸಿ ಕೇಳಿ ಮುನ್ನುಡಿ ಹೇಳಿ ಬರೆಸಿದರಾಯ್ತು."

ಹಾಗೆಯೆ ಮಾಡಿದರು.

ನನ್ನ ಮೊದಲ ಕಾದಂಬರಿಯನ್ನು ಕಾವ್ಯಾಲಯದವರು ತೆಗೆದುಕೊಂಡಾಗ ಶರ್ಮಾಜಿ ಪಟ್ಟ ಹರ್ಷ ಇನ್ನೂ ನಿನ್ನೆ ಮೊನ್ನೆಯಂತಿದೆ. ಎರಡನೆಯದನ್ನು ಗೀತಾ ಪಬ್ಲಿಕೇಷನ್ಸ್‌ನವರಿಗೆ ಕೊಡಲು ಅನುಮಾನಿಸಿದಾಗ "ಧಾರಾಳವಾಗ್ಲಮ್ಮ, ಕೊಡು" ಎಂದು ಹೇಳಿ ಅವರ ಕೂಡ ಸಹ ಮಾತಾಡಿ ಆಶೀರ್ವದಿಸಿದರು. ಅದರ ಫಲವೋ ಎಂಬಂತೆ ಅದೇ ಕಾದಂಬರಿಯನ್ನು ಚಲನಚಿತ್ರಕ್ಕೆ ತೆಗೆದುಕೊಂಡಾಗ (ಸಿಪಾಯಿ ರಾಮುಗೆ), ಮತ್ತೆ ಶರ್ಮಾಜಿಯವರನ್ನು ಕಂಡುಬರಲು ಹೋಗಿದ್ದೆ. ಆಗ ಮತ್ತೂ ಕ್ಷೀಣವಾಗಿದ್ದರು. ನಾನು ಶುಭ ಸಮಾಚಾರ ತಿಳಿಸಿದಾಗ, ಮಲಗಿದ್ದಲ್ಲಿ ಕೈಮುಗಿದು "ಶ್ರೀರಾಮ ಜಯರಾಮ" ಎಂದರು ಮೆಲ್ಲಗೆ ನಿಧಾನವಾಗಿ.

ಹತ್ತು ಜನರಿಗೆ ಉಪಕಾರ ಮಾಡುವ, ಮಾಡಿದ ಜೀವ ಎಲ್ಲರಿಗೂ ಬೇಕಾಗಿದ್ದ ಶಕ್ತಿ ಛೇ ಹೀಗೇಕೆ ಆಯಿತು ?

ಕಲ್ಪನೆಗಳ ಕರೆಗೆ ಓಗೊಟ್ಟು ಹಿಂದುಮುಂದು ಯೋಚಿಸದೆ, ವಿಶಾಲ ಸಾಹಿತ್ಯ ಸಾಗರದಲ್ಲಿ ಧುಮುಕಿದಾಗ ದಡ ಕಾಣದೆ ಆಳ ತೋರದೆ ಸುಳಿ ತಪೆದು ಮನಸೋತು ತೊಳಲಾಡಿದಾಗ ನನಗೆ ನೆಲೆ ತೋರಿದವರು ಇವರೇ ! ಶರ್ಮಾಜಿ.

# ಎರಡು ಅನುಭವಗಳು

ನೀ. ಕೃ. ರಾಮಶೇಷ

ನನಗೆ ಬಿ.ಎಸ್.ಸಿ. ಪರೀಕ್ಷೆ ತೇರ್ಗಡೆ ಆಗಿ ಕೆಲಸ ದೊರೆಯದೆ ನನ್ನ ಓದು ಎಲ್ಲ ಕುಂಠಿತ ಆಗಿ ಮಾನಸಿಕ ಜೀಸಸವನ್ನು ನಮ್ಮಣ್ಣ ಕಸ್ತೂರಿಯ ಮುಂದೆ ಹೇಳಿಕೊಂಡಾಗ ಆತ ನನ್ನನ್ನು ಶರ್ಮಾಜಿಯ ಬಳಿಗೆ ಕರೆದೊಯ್ದು. "ಬಳೇಪೇಟೆಯಲ್ಲಿ ಶ್ರೀನಿವಾಸ ಮಂದಿರ ಇದೆ ನೋಡು. ಅಲ್ಲಿನ ಪುಸ್ತಕ ಭಂಡಾರ ನೋಡಿಕೊಳ್ಳುವವರು ಬೇಕಾಗಿದೆ. ನೋಡು ಆ ಕೆಲಸ ನಿನಗಾದರೆ ನೋಡಿಕೋ, ಸಂಬಳ ಎಷ್ಟು ಗೊತ್ತೇ? ತಿಂಗಳಿಗೆ ಒಂಭತ್ತು ರೂಪಾಯಿ!" ಮರುಮಾತಾಡದೆ ಒಪ್ಪಿಕೊಂಡೆ. ಊಟ ಕಸ್ತೂರಿಯ ಮನೆಯಲ್ಲಿ, ಕೆಲಸ ಶ್ರೀನಿವಾಸ ಮಂದಿರದ ಪುಸ್ತಕ ಭಂಡಾರದಲ್ಲಿ. ಬೆಳಿಗ್ಗೆ ಎಂಟೂವರೆ ಯಿಂದ ಮಧ್ಯಾಹ್ನ ಹನ್ನೆರಡರವರೆಗೆ, ಸಂಜೆ ನಾಲ್ಕೂವರೆಯಿಂದ ರಾತ್ರಿ ಎಂಟರವರೆಗೆ. "ನಾಳೆ ಬೆಳಿಗ್ಗೆ ಬಂದುಬಿಡು. ರಿಪೋರ್ಟ್ ಮಾಡಿಕೋತೀಯಂತೆ." ಇಷ್ಟೆ ಅವರು ಎಂದದ್ದು.

ನಾನು ಅಲ್ಲಿ ಕೇವಲ ಒಂದು ತಿಂಗಳು ಮಾತ್ರ ಕೆಲಸ ಮಾಡಿದರೂ ಶರ್ಮಾಜಿ ಯವರ ವೇಳಾನಿಯಮ, ಓರಣ, ಅಚ್ಚುಕಟ್ಟು ಎಲ್ಲದರಲ್ಲೂ ಶಿಸ್ತು ನನಗೆ ಚೆನ್ನಾಗಿ ಕಂಡುಬಂತು. ಶ್ರೀನಿವಾಸ ಮಂದಿರದ ಬಡ ವಿದ್ಯಾರ್ಥಿಗಳ ನಿಲಯದ ಮೇಲ್ವಿಚಾರಣೆ ಅವರೇ ಮಾಡುತ್ತಿದ್ದದ್ದು. ವಿದ್ಯಾರ್ಥಿಗಳೊ ಎಳೆಯರಿಂದ ಹಿಡಿದು ಎಂಜನೀರಿಂಗ್ ಓದುವ ಪ್ರೌಢರ ತನಕ. ವಿಧವಿಧ ದೂರುಗಳು, ಜಗಳ. ಊಟದ ವೇಳೆಯಲ್ಲಿ ಆಗಾಗ ಸಡಿಲಾಗುವ ನಿಯಮ–ಇವನ್ನೆಲ್ಲ ಶರ್ಮಾಜಿ ನೋಡಿ ವಿಚಾರಿಸಿ ಸರಿಪಡಿಸುತ್ತಿದ್ದ ರೀತಿ, ಸರಳವಾಗಿ ಮನ ಮುಟ್ಟುವಂತೆ ಹೇಳುತ್ತಿದ್ದ ಅವರ ಬುದ್ಧಿಯ ಮಾತು, ಎಲ್ಲ ನನಗೆ ತುಂಬ ಹಿಡಿಸಿದವು. ಏನೇ ಆದರೂ ಒಂದು ಶಿಸ್ತಿನ ಕಟ್ಟು ಅದಕ್ಕಿರುತ್ತಿತ್ತು. ವೇಳೆ ಮೀರಿಹೋದಾಗ ಒಮ್ಮೆ ನನಗೆ ಅವರೇ ಅದೇ ನಿಧಾನದಲ್ಲೆ ಹೇಳಿದ್ದರು: "ನೀನು ಹೀಗೆ ಇನ್ನುಮೇಲೆ ಮಾಡಕೂಡದು. ಇಲ್ಲಿ ವೇಳೆ ಮೀರಿಬರುವ, ಶಿಸ್ತು ತಪ್ಪುವ ಅವಕಾಶ ಇಲ್ಲ." ಅಷ್ಟೇ ದೃಢ! ಇದರ ಋಣವನ್ನು ನಾನು ಚೆನ್ನಾಗಿಯೆ ಅನು ಭವಿಸಿದೆ. ನನ್ನನ್ನು ತಿದ್ದಿಕೊಂಡೆ.

"ರಾಮಾವತಾರ" ಪ್ರಕಟಣೆಯ ಸಂದರ್ಭದಲ್ಲಿ ಪೂಜನೀಯ ಸಿದ್ಧಗಂಗೆಯ ಮಠಾಧೀಶರೂ ವಿದ್ವಾಂಸರೂ ಆದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಬಂದಿದ್ದರು.

ಉಡುಪಿಯ ಪೇಜಾವರ ಮಠದ ಶ್ರೀ ಶ್ರೀಗಳಿಂದಲೂ ಆಶೀರ್ವಚನ ಸಂದೇಶ ಬಂದಿತ್ತು. ಆ ಸಮಾರಂಭದ ಸಂಭ್ರಮ ನನ್ನ ಮನಸ್ಸಿನ ಭಿತ್ತಿಯಲ್ಲಿ ಇಂದೂ ಚೆನ್ನಾಗಿ ಅಚ್ಚೊತ್ತಿದೆ. ಅಂದೇ ನಾನು ಕಂಡದ್ದು ಶರ್ಮಾಜಿಯ ಯುಕ್ತಿನ ಓಡಾಟವನ್ನು. ಆದರೂ ಅಂದೇಕೊ ಸ್ವಲ್ಪ ಬಳಲಿದವರಂತೆ ತೋರುತ್ತಿದ್ದರು. ಇನ್ನೊಂದು ದುಃಖದ ಸಂಗತಿ ಎಂದರೆ, ಶರ್ಮಾಜಿಯವರಿಗೆ ಅಂದು ಮಾತನಾಡಲಾಗಲೇ ಇಲ್ಲ. ಧ್ವನಿವರ್ಧಕದ ಮುಂದೆ ನಿಂತಾಗ, ಅವರ ಮುಖ ಕೆಂಪಾಗಿ, ಕಣ್ಣುಗಳಲ್ಲಿ ನೀರು ಬಂದು ಗಂಟಲಲ್ಲಿ ಗದ್ಗದ ಶಬ್ದ ಬಂದಿತಷ್ಟೇ. ನಿರರ್ಗಳವಾಗಿ ಗಂಟೆಗಟ್ಟಲೆ ಹರಿಯುತ್ತಿದ್ದ ಅವರ ವಾಗ್ಝರಿ ಅಂದು ಬತ್ತಿಹೋಯಿತೇನೊ. ಉದ್ವೇಗಪೂರ್ಣರಾದಂತೆ ಕಂಡುಬಂದ ಶರ್ಮಾಜಿ ಎಷ್ಟೇ ಪ್ರಯತ್ನಿಸಿದರೂ ಮಾತನಾಡಲಾಗಲೇ ಇಲ್ಲ. ವೇದಿಕೆಯ ಮೇಲಿದಿದ್ದು ಅದೇ ಕೊನೆ. ಅಂದು ಆಡಿದ್ದೇ, ಆಡತೊಡಗಿ ವಿಫಲರಾದದ್ದೇ ಕೊನೆ. ಮುಂದೆ ಅವರ ಮಾತುಗಳ ಸವಿ ನಮಗೆ ಸಿಗಲಿಲ್ಲ.

ಎಲ್ಲರ ಮನಸ್ಸಿಗೂ ತುಂಬ ಸಂಕಟವಾಯಿತು. ಸ್ವಯಂ ಅವರಿಗೇ ತಮಗೇನಾಯಿತೊ ತಿಳಿಯಲಿಲ್ಲವಂತೆ.

ಅವರಿಂದ ಅರಿವನ್ನು ಪಡೆದು ಮೊಗೆದು ಕುಡಿದು ನಾವೂ ಆ ಹಿರಿಯ ಜೀವ ನಡೆದ ನುಡಿದ ಜಾಡನ್ನ ಮಾತಿನಂತರಾಳವನ್ನ ಗ್ರಹಿಸಿ ಉತ್ತಮರಾಗುವ ಸಾರ್ಥಕ್ಯ ಪಡೆಯಲು ಅವರ ಮಹಾ ಚೇತನವೇ ಸಹಾಯಕ.

# ಮಾತು ಉಪದೇಶ, ನಡೆ ಆದರ್ಶ

ಎಂ. ಆರ್. ರಮಾಕಾಂತರಾವ್

ನಾವು ಸಂಘದ ಗೆಳೆಯರು ಪ್ರತಿನಿತ್ಯ ಶರ್ಮಾಜಿಯವರ ಅನುಭವದ ನುಡಿಗಳನ್ನು ಕೇಳಿ ಕಲಿತ ಪಾಠ ಬಹಳ. ಅವರ ರಾಜಕೀಯ ನೈಪುಣ್ಯ, ಸಾಹಿತ್ಯದಲ್ಲಿನ ವಿಶಿಷ್ಟ ಪ್ರಭಾವಯುತ ಶೈಲಿ ಇವುಗಳಿಗಿಂತ ನನಗೆ ಬಹಳವಾಗಿ ಹಿಡಿಸಿರುವುದು ಅವರ ಸರಳತೆ, ವ್ಯವಹಾರಜ್ಞಾನ, ಸಮಾನದೃಷ್ಟಿ.

ಸರಳತೆಯಲ್ಲಿ ಅವರಿಗೆ ಸರಿಹೋಲುವವರು ಬಹು ವಿರಳ. ಒಮ್ಮೆ ಒಬ್ಬ ಮಹನೀಯರು ಅವರನ್ನು "ಶರ್ಮಾಜಿ ನೀವು ಯಾವಾಗಲೂ ಸಂಸಾರ ತಾಪತ್ರಯಗಳಿಲ್ಲದೆ ಸುಖವಾಗಿದೀರಲ್ಲಾ, ಇದರ ಗುಟ್ಟೇನು?" ಎಂದು ಕೇಳಿದರಂತೆ. ಅದಕ್ಕೆ ಶರ್ಮಾಜಿ, "ನನ್ನ ಕಾಲು ನೋಡಿ ಚಪ್ಪಲಿ ಇಲ್ಲ. ನನ್ನ ಬಟ್ಟೆ ಅಗ್ಗದ ಒರಟು, ಖಾದಿ. ಹೀಗೆ ನನಗೆ ಅಗತ್ಯವೆನಿಸಿದ ವಸ್ತುಗಳಿಗೆ ಮಾತ್ರ ನಾನು ಖರ್ಚು ಮಾಡುವುದು. ಅದೂ ಮಿತವಾಗಿ. ಅನಗತ್ಯ ವಸ್ತುಗಳಿಗೆ ಆಸೆಪಡುವುದೂ ಇಲ್ಲ. ದೊರಕದಿದ್ದರೆ ನಿರಾಸೆಯಿಂದ ಮನಸ್ಸು ಕೆಡಿಸಿಕೊಳ್ಳುವುದೂ ಇಲ್ಲ" ಎಂದು ಉತ್ತರ ಕೊಟ್ಟರಂತೆ.

ಶರ್ಮಾಜಿಯವರ ವ್ಯವಹಾರ ಜ್ಞಾನ ಅಪಾರ. ಅವರು ಚತುರ ಲೆಕ್ಕಣಿಗರು. ಸಾರ್ವಜನಿಕ ಸಂಸ್ಥೆಗಳಲ್ಲಿ ದಿನವಹಿ ಲೆಕ್ಕ ವ್ಯವಹಾರ ಎಷ್ಟು ಮುಖ್ಯ ಎಂಬುದರ ಅರಿವು ಅವರಿಂದ ನಮಗೆ ಉಂಟಾಗಿದೆ.

ಶರ್ಮಾಜಿಯವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಮೇಲು ಕೀಳು ಭಾವನೆಗೆ ಅವಕಾಶ ಇಲ್ಲ. ಸಮಾನತೆಯ ಬಗ್ಗೆ ಹಲವಾರು ಸಲ ಅವರೊಡನೆ ವಿಚಾರ ವಿನಿಮಯ ಮಾಡಿದಾಗ ನಾವು ಕಲಿತ ಪಾಠ ಅಪಾರ. ಅವರು ಎಂದೂ ಅಧಿಕಾರವಾಣಿಯಿಂದ ಯಾರಿಗೂ ಕೆಲಸ ಹೇಳಿದವರಲ್ಲ. ಸಂಘದ ಗೆಳೆಯರು ಯಾರಿಗಾದರೂ ಸ್ವಲ್ಪ ಅನಾರೋಗ್ಯವಾಗಿ ಸಂಘಕ್ಕೆ ಬಾರದೆ ಇದ್ದಾಗ, ಗೆಳೆಯರ ಸಂಗಡ ಶರ್ಮಾಜಿಯೇ ಅವರ ಮನೆಗೆ ಹೋಗಿ ಯೋಗಕ್ಷೇಮ ವಿಚಾರಿಸಿ ಬರುತ್ತಿದ್ದರು.

ಒಮ್ಮೆ ಗೆಳೆಯರೊಬ್ಬರ ಮದುವೆಗೆ ನಾವು ಮೈಸೂರಿಗೆ ಹೊರಟಿದ್ದೆವು. ಶರ್ಮಾಜಿ ಸಹ ಜೊತೆಗಿದ್ದರು. "ಖರ್ಚು ಏನಾಗುವುದೊ ಯಾರಾದರೂ ಕೊಡಿ. ಕೊನೆಯಲ್ಲಿ ಹಂಚಿಕೊಳ್ಳೋಣ" ಎಂದರು. ಒಟ್ಟಾಗಿ ಇರಬೇಕು ಎನ್ನುವುದು ಅವರ ಮತ. ಹಾಗೆಯೆ ಟಿಕೆಟ್ಟಿಗೆ, ದಾರಿಯಲ್ಲಿ ಮದ್ದೂರಿನ ಕಾಫಿ-ತಿಂಡಿಗೆ ಎಲ್ಲದಕ್ಕೂ

ಒಬ್ಬರು ಹಣಕೊಟ್ಟು ಲೆಕ್ಕ ಇಟ್ಟುಕೊಂಡೆವು. ಮದ್ದೂರಿನಲ್ಲಿ ಶರ್ಮಾಜಿ ವಿನಾ ಉಳಿದ ಎಲ್ಲರೂ ಗಡದ್ದು ತಿಂಡಿ ಹೊಡೆದೆವು. ಅವರು ಕಾಫಿ ಮಾತ್ರ ತೆಗೆದುಕೊಂಡರು.. ಕೊನೆಗೆ ಅವರನ್ನು ಕೇವಲ ಟಿಕೇಟಿನ ಹಣಮಾತ್ರ ಕೇಳಿದೆವು. ಆದರೆ ಅವರು ಒಪ್ಪುತ್ತಾರೆಯೇ? "ನಾನು ಏನೂ ತಿನ್ನಲಿಲ್ಲ ಎಂದು ಸುಮ್ಮನೆ ಇರುವುದೇ? ಗುಂಪಿನೊಡನೆ ಇದ್ದಾಗ ಸುಖ ದುಃಖ, ಆದಾಯ ವೆಚ್ಚ ಎಲ್ಲ ಸಮಾನ" ಎಂದು ಹೇಳಿ ನಮ್ಮ ಕಾಫಿ ತಿಂಡಿ ಖರ್ಚನ್ನು ಹಂಚಿಕೊಂಡರು.

ಪೂಜ್ಯ ರಾಜರತ್ನಂ ಅವರು ಹೇಳುವ ಹಾಗೆ ದೊಡ್ಡವರ ಮಾತು ನಮಗೆ ಉಪದೇಶ, ಅವರ ನಡೆ ನಮಗೆ ಆದರ್ಶ.

# " ಆಸಕ್ತಿಯನ್ನು ಕೆರಳಿಸಿದರು "

ಜಿ. ರಾಘವ

ಸ್ವಾತಂತ್ರ್ಯ ಬಂದ ತರುಣ. ಎಲ್ಲೆಲ್ಲಿಯೂ ಉತ್ಸಾಹ, ಸಂತೋಷ ಸಮಾರಂಭಗಳು. ಅಂತೆಯೇ ನಮ್ಮೂರಿನ ಶಾಲೆಯಲ್ಲಿ ಒಂದು ಭಾಷಣ ಏರ್ಪಾಟಾಗಿತ್ತು. ಭಾಷಣಕಾರರಾಗಿ ಬಂದಿದ್ದವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಮುಖ ಪಾತ್ರ ವಹಿಸಿದ್ದವರು. ಅಂದಿನ ಅವರ ಮಾತಿನ ವೈಖರಿ ಎಲ್ಲರನ್ನೂ ಮೈಮರೆಯುವಂತೆ ಮಾಡಿತು. ವ್ಯಕ್ತಿ ಬಹು ಸರಳ. ಇಂತಹ ವ್ಯಕ್ತಿ ನಮ್ಮೆಲ್ಲರ ಆಸಕ್ತಿಯನ್ನು ಕೆರಳಿಸಿ ನಮ್ಮಲ್ಲಿ ದೇಶ ಪ್ರೇಮವನ್ನು ತುಂಬಿದರು. ಅವರೇ ನಮ್ಮ ಶರ್ಮಾಜಿಯವರು.

ನನಗೆ ಅವರ ವಿಚಾರದಲ್ಲಿ ಎರಡು ವಿಧದಲ್ಲಿ ಅಭಿಮಾನ. ನಮ್ಮ ಸಂಬಂಧಿಕರೊಬ್ಬರು ಇದ್ದ ಊರಿಗೆ ಸೇರಿದವರೆಂದು ಒಂದು, ರಾಷ್ಟ್ರನಾಯಕರ ಜೊತೆಯಲ್ಲಿದ್ದವರು ಎಂದು ಇನ್ನೊಂದು. ನಮ್ಮ ತಂದೆಯವರೂ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರಿಂದ ನಮ್ಮ ಮನೆಯಲ್ಲಿಯೂ ಚಳುವಳಿ ಬಗ್ಗೆ ನಾಯಕರ ಬಗ್ಗೆ ವಿಶೇಷ ಆಸಕ್ತಿ, ಅಭಿಮಾನ. ಅಂತೆಯೆ ಶರ್ಮಾಜಿ ಬಗ್ಗೆ ನಮಗೆ ಆದರ ಅಭಿಮಾನ.

ಇಂತಹ ವ್ಯಕ್ತಿಯ ಪರಿಚಯ, ಶಿಷ್ಯತ್ವ ನನಗೆ ಶೀಘ್ರದಲ್ಲಿಯೇ ದೊರಕುತ್ತದೆಂದು ನಾನು ಕನಸಿನಲ್ಲಿಯೂ ಕಂಡಿರಲಿಲ್ಲ-ಬೆಂಗಳೂರಿಗೆ ಬಂದಮೇಲೆ ಗಾಂಧೀ ಸಾಹಿತ್ಯ ಸಂಘದಲ್ಲಿ ಈ ಸಾಮೀಪ್ಯ, ಪರಿಚಯ ದೊರಕಿತು. ಅದು ನನ್ನ ಪುಣ್ಯ.

ಶರ್ಮಾಜಿ ರಾಜಕಾರಣಿ, ಸ್ವಾತಂತ್ರ್ಯ ಹೋರಾಟಗಾರ, ಭಾಷಣಕಾರ, ಸಾಹಿತಿ, ಸಮಾಜ ಸೇವಾಕರ್ತ. ಇದರಂತೆಯೆ ಶಿಕ್ಷಣ ಅವರ ಇನ್ನೊಂದು ಆಸಕ್ತಿ. ಶಿಕ್ಷಣ ಮಾರ್ಪಾಟು ಹೊಂದದ ಹೊರತು ದೇಶ ಪ್ರಗತಿಹೊಂದದೆಂಬ ಭಾವನೆಯನ್ನು ಹೊಂದಿದ್ದವರಲ್ಲಿ ಅವರೂ ಒಬ್ಬರು. ಗಾಂಧೀಜಿಯಂತೆ ನಮ್ಮ ರಾಷ್ಟ್ರದ ಧರ್ಮ ಸಂಸ್ಕೃತಿಯ ತಳಹದಿಯ ಮೇಲೆಯೆ ನಮ್ಮ ರಾಷ್ಟ್ರದ ಶಿಕ್ಷಣವೂ ರೂಪುಗೊಳ್ಳಬೇಕೆಂದು ಅವರ ಆಸೆ. ಅದಕ್ಕಾಗಿ ಶ್ರಮಿಸಿದರೂ ಕೂಡ. ಮೂಲಶಿಕ್ಷಣದ ಬಗ್ಗೆ ಇವರ ಅನ್ಯ ಭಾಷೆಯ ಪುಸ್ತಕಗಳನ್ನು ಕನ್ನಡಿಸಿದ್ದಾರೆ. ದೇಶಪ್ರೇಮಿಯಾದವನಿಗೆ ದೇಶಾಭ್ಯುದಯಕ್ಕೆ ಕಾರಣವಾದ ಶಿಕ್ಷಣದಲ್ಲಿ ಇಷ್ಟು ಆಸಕ್ತಿ ಇರಬೇಕಾದದ್ದೆ. ಅವರೊಡನೆ ಶಿಕ್ಷಣದ ಬಗ್ಗೆ ಚಿಂತನಮಾಡುವ ಸಂದರ್ಭಗಳು ಎಷ್ಟೋ ಒದಗಿ ಬರುತ್ತಿತ್ತು.

ಅವರ ಸ್ನೇಹಪರತೆ ಅಪಾರ. ಅನೇಕರಿಗೆ ಬರೆಹದಲ್ಲಿ, ಭಾಷಣದಲ್ಲಿ, ಸಂಘಟನೆಯಲ್ಲಿ ಮಾರ್ಗದರ್ಶನ ನೀಡಿದ್ದಾರೆ. ನನಗೆ ಇನ್ನೂ ಜ್ಞಾಪಕವಿದೆ. ಒಮ್ಮೆ ಅವರು

ಮಂಗಳೂರಿಗೆ ಉಪನ್ಯಾಸಕ್ಕೆ ಹೋದಾಗ ನನ್ನನ್ನೂ ಕರೆದುಕೊಂಡು ಹೋದರು. ಉದ್ದೇಶ ನನಗೂ ಉಪನ್ಯಾಸ ಕಲೆಯಲ್ಲಿ ತರಪೇತಿ ಕೊಡಬೇಕೆಂಬುದು. ಆದರೆ ಅವರು ಹಿಮಾಲಯ, ನಾನು ಸಣ್ಣ ಗುಡ್ಡ.

ಅವರ ಸರಳತೆ, ವಾಗ್ಮಿತೆ, ಸಹೃದಯತೆ, ಬುದ್ಧಿಪ್ರಖರತೆ, ತರ್ಕನೈಪುಣ್ಯ, ಸಹಚಿಂತನ ಇವುಗಳಲ್ಲೆಲ್ಲ ಪಾಲುಗೊಂಡವರೇ ಬಲ್ಲವರು ಅವುಗಳ ಸೊಗಸನ್ನು, ಮಹತ್ವವನ್ನು.

ಅವರು ಹಿಂದಿನಂತೆಯೇ ಓಡಾಡುತ್ತ ನಮಗೆಲ್ಲ ದಾರಿತೋರುತ್ತ ಗೆಲವನ್ನು ನಲವನ್ನು ತುಂಬುತ್ತ ಇರಲು ಆಗುತ್ತಿಲ್ಲವಲ್ಲ ಎಂಬುದೇ ನಮಗೆ ದೊಡ್ಡ ಚಿಂತೆ. ಮತ್ತೆ ಆರೋಗ್ಯವಂತರಾಗಲಿ ಎಂಬುದೇ ನಮ್ಮ ಹಿರಿಯ ಬಯಕೆ.

# ಚುರುಕು ಮನುಷ್ಯ

ರಾ. ವೆ. ಕರಗುದರಿ

ಆ ಮೊದಲು ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರನ್ನು ನೋಡದಿದ್ದವರು, ಅವರು ಬರುತ್ತಾರೆಂದು ದಾರಿಕಾಯುತ್ತ ನಿಂತಿರುವವರ ಗುಂಪಿನಲ್ಲಿ ಇದ್ದರೆ, ಕೃಷ್ಣ ಶರ್ಮರು ಬಂದದ್ದು ತಿಳಿಯುವಂತೆಯೇ ಇಲ್ಲ. "ಎಲ್ಲಿ ಇದ್ದಾರೆ?" ಎಂದು ಕೇಳುತ್ತ, ಅವರನ್ನು ತೋರಿಸಿದಾಗ "ಓಹೋ! ಇವರೇ ಏನು?" ಎಂದು ಕೇಳುವ ಪ್ರಸಂಗವೂ ಅವರಿಗೆ ಬರುವುದು.

ಹಾಗೆ ಇದ್ದಾರೆ ಕೃಷ್ಣಶರ್ಮರು, ಕುಳ್ಳವ್ಯಕ್ತಿ. ನಿರಿಗೆಗಳನ್ನು ಹಾಗೆಯೇ ಇಳಿಬಿಟ್ಟು ಉಟ್ಟ ಧೋತರ, ಬಿಳಿ ಅಂಗಿ, ಅದರ ಮೇಲೆ ಜಾಕೀಟು. ಇಷ್ಟು ಅವರ ಉಡುಪು.

ಹೀಗೆಂದು ಅವರನ್ನು ಹೇಗೊ ಹಾಗೆ ಮಾತಾಡಿಸಿದವರು ಬೆಚ್ಚಿಬಿದ್ದು ಹಿಂದೆ ಸರಿಯಬೇಕಾಗುವುದು. ಬಹು ಚುರುಕು ವ್ಯಕ್ತಿ, ಲೆಕ್ಕ ತಪ್ಪಿದ ವರ್ತನೆಯನ್ನು ಸಹಿಸಿಕೊಳ್ಳಲಾರರು. ಮಾತೂ ಅಷ್ಟೇ; ಸ್ಪಷ್ಟ ಮತ್ತು ಖಾರಮಯ.

ಇಂಥವರು ಸರಳ ವ್ಯಕ್ತಿಯಾಗಿರುತ್ತಾರೆ. ಕಟುಭಾಷಿಗಳ ಹೃದಯವು ಯಾವಾಗಲೂ ಸ್ವಚ್ಛವಾಗಿರುತ್ತದೆ.

ರಾಷ್ಟ್ರೀಯ ವೃತ್ತಿಯವರೆಂದಮೇಲೆ ಕೃಷ್ಣಶರ್ಮರನ್ನು ಖಾದಿಯ ಉಡುಪಿನಲ್ಲಿಯೇ ನೋಡುತ್ತೇವೆ. ಗಾಂಧೀ ಭಕ್ತರೆಂದಮೇಲೆ ಸತ್ಯ, ಅಹಿಂಸೆ, ಜನತೆಯನ್ನು ಉದ್ಧರಿಸಬೇಕೆಂಬ ಹವ್ಯಾಸ, ಇವೇ ಮೊದಲಾದ ಅಸಿಧಾರಾವ್ರತದ ನಿಯಮ-ನಿಬಂಧನೆಗಳಿಗೆ ಕೃಷ್ಣಶರ್ಮರು ಗುರಿಯಾಗಿದ್ದರೆ ಆಶ್ಚರ್ಯವೇನಿಲ್ಲ.

# " ಕೈದೀವಿಗೆಯಾದರು "

ಎಸ್. ವಿ. ವೆಂಕಟಾಚಲಂ

೧೯೪೨. ನಾನಿನ್ನೂ ಹುಡುಗ. ೧೨-೧೪ ವರ್ಷ ವಯಸ್ಸಿರಬಹುದು. ಗಾಂಧೀ ಜಯಂತಿಯ ಖರ್ಚಿಗೆ ಹಣ ವಸೂಲಿ ಮಾಡಬೇಕಿತ್ತು. ಶರ್ಮಾಜಿ ಬರೆದ ವಿನಂತಿ ಸಹಿತವಾದ ಪುಸ್ತಕ ಹಿಡಿದು ಊರೆಲ್ಲ ತಿರುಗಿ, ನಾನು ಸಂಘಕ್ಕೆ ದಾಖಲಾದ ವರ್ಷವೇ ಎಲ್ಲರಿಗಿಂತಲೂ ಹೆಚ್ಚು ಹಣ ವಸೂಲು ಮಾಡಿದೆ. ಶರ್ಮಾಜಿ, ನನ್ನ ಬೆನ್ನು ತಟ್ಟಿದರು. ನನ್ನ ಹೆಮ್ಮೆಗೆ ಪಾರವಿರಲಿಲ್ಲ. 'ಈ ವರ್ಷ ನೀನು ಪುಸ್ತಕ ಭಂಡಾರಕ್ಕೆ ಕಾರ್ಯದರ್ಶಿ ಆಗು' ಎಂದರು. ಅಂದಿನಿಂದ ಆರಂಭವಾಯಿತು, ಶರ್ಮಾಜಿಯವರೊಡನೆ ನನ್ನ ಸಂಪರ್ಕ.

ಪುಸ್ತಕ ಭಂಡಾರದ ಬೀಗದಕ್ಕೈ ಶರ್ಮಾಜಿ ಮನೆಯಲ್ಲಿರುತ್ತಿತ್ತು. ತರಲು, ಅನಂತರ ವಾಪಸುಕೊಡಲು ಅವರ ಮನೆಗೆ ಹೋಗುತ್ತಿದ್ದೆ. ಕಾಲಾನಂತರದಲ್ಲಿ ಅವರ ಮನೆಯ ಮಕ್ಕಳಲ್ಲಿ ನಾನೂ ಒಬ್ಬನಾಗಿಬಿಟ್ಟೆ. ನನ್ನ ಕನ್ನಡ ಬರೆವಣಿಗೆ 'ಮುದ್ದಾಗಿದೆ' ಎಂದು ಎಲ್ಲರೂ ಹೇಳುತ್ತಿದ್ದರು. ಅಲ್ಲದೆ ಕನ್ನಡ ಬರಹವನ್ನು ತ್ವರಿತವಾಗಿ ಬರೆಯ ಬಲ್ಲವನಾದುದರಿಂದ ಶರ್ಮಾಜಿ 'ಸರ್ವೋದಯ' ಮಾಸಿಕದ ಕರಡು ಬರೆಯಲು ನನ್ನನ್ನು ಕರೆದರು. ಅದು ನನ್ನ ಸುಯೋಗ. ದಿನಗಟ್ಟಲೆ, ತಿಂಗಳುಗಟ್ಟಲೆ ಅವರ ಮನೆಗೆ ಹೋಗಿ ಕರಡುಗಳನ್ನು ಪ್ರಕಟಣೆಗಾಗಿ ಬರೆದೆ. ಆ ಸಂದರ್ಭದಲ್ಲಿ ಅವರ ಚುರುಕಿನ ಮಾತುಗಳ ಅದ್ಭುತ ಶೈಲಿಯ ಕನ್ನಡವನ್ನು ಬರೆಹಕ್ಕೆ ಇಳಿಸುತ್ತ ಮೈಮರೆಯುತ್ತಿದ್ದೆ. ಹಾಗೇ ಬರೆಯುತ್ತ ಬರೆಯುತ್ತ ನಾಲ್ಕು ಮಾತು ನಾನೇ ಸ್ವತಃ ಬರೆಯಬಲ್ಲ ಧೈರ್ಯಬಂತು.

ಆದರೆ ನಾನು ಸಾಹಿತಿಯಲ್ಲ, ಬರೀ ಕೆಲಸಗಾರ. ಕನ್ನಡದಲ್ಲಿ ಮಮತೆ ಇದ್ದ ಕಾರಣ ನಾನು 'ಸಂಧಿಯಲ್ಲಿ ಸಮಾರಾಧನೆ' ಮಾಡಿ 'ಸರ್ವೋದಯ'ದ ಕರಡು ಬರೆದು ಅವರಿಗೆ 'ಗಣೇಶ' ನಾದೆ.

ಅವರ ಮೇಲ್ಪಂಕ್ತಿ ನನಗೆ ಜೀವನದಲ್ಲಿ ಕೈದೀವಿಗೆ ಆಗಿದೆ. ಅಡ್ಡದಾರಿ ಹಿಡಿಯದೆ ಸನ್ಮಾರ್ಗದಲ್ಲಿ ನಡೆದು ಕಾಲವನ್ನು ಸದುಪಯೋಗ ಮಾಡಲು ಮಾರ್ಗದರ್ಶನ ದೊರೆತುದು ಅವರಿಂದಲೇ.

# ಕಿಟ್ಟು - ದತ್ತು

ಸಿದ್ದವನಹಳ್ಳಿ

ಒಲವಿನ ಗೆಳೆಯಾ !

ನಿನ್ನ ಪತ್ರವು ನನ್ನ ಕೊರಲನ್ನು ಹೂಮಾಲೆಯಾಗಿ ಸುತ್ತುವರಿದಿದೆ. ಸ್ವಲ್ಪ ಬಿನ್ನವಾಗಿದ್ದ ನನಗೆ ನಿನ್ನ ಕಾಗದದ ದರುಶನವು ಪ್ರಹರ್ಷವನ್ನು ಬೀರಿದೆ. ನಿನ್ನ ಮುಂಚಿನ ಕಾಗದವು Postman ನ ಚಾಪಲ್ಯದಿಂದ ಚದುರಿಹೋಗಿಲ್ಲ ; ಮನೆಯವರು ಮೈಮರೆತು ಅದನ್ನು ಮೈಗರೆಸಿರಬೇಕು. ನಿನ್ನ ಕಾಗದಗಳನ್ನು ಕಳೆದುಕೊಳ್ಳುವದೆಂದರೆ ನನಗೆಂತಹ ಕೊಡಲಿಯ ಪೆಟ್ಟು! ಅಯ್ಯೋ! ಆ ಕಾಗದದ ಆಶಯವನ್ನು ನಿನ್ನೀ ಕಾಗದದಲ್ಲಿ ಓದಿದ ಮೇಲಂತೂ ಆ ಕಾಗದದ ಕಳ್ಳತನಕ್ಕಾಗಿ ಕಣ್ಣನಿಗರೆದಿದ್ದೇನೆ. ನಿನ್ನ-ನಮ್ಮ ಧ್ಯೇಯಗಳನ್ನು ವಿವರಿಸುವ ಮಾತುಗಳು ದೃಢವಿಶ್ವಾಸದಿಂದೊಗೆದ ವಿಶ್ವಾಸದ ಫಲವಾಗಿವೆ. ಆದರೆ, ಕುಟುಂಬಿಕನ ಅವಶ್ಯಕವಾದ ಗುರು, ತಾಯಿ, ಗೆಳೆಯ, ಹೆಂಡಿರಲ್ಲಿ ನನಗಿನ್ನೂ ನಂಬಿಕೆ ಇಲ್ಲ. ನನ್ನ ಈಗಿನ ಮನೋವೃತ್ತಿಗೆ ಅದರ ಪೂರ್ಣ ಅನುಭವವು ಬಂದಿಲ್ಲ. ಈಗಿನ ಚಿತ್ತವೃತ್ತಿಯನ್ನೇ ಹೊರಗೆಡಹಿದರೆ-ನನ್ನ ಅಭಿಪ್ರಾಯದಲ್ಲಿ-ಗಂಭೀರ ಜೀವನದ ಸಂಪೂರ್ಣತೆಗೆ ಗುರು-ಗೆಳೆಯರಿಬ್ಬರೇ.

ನನ್ನ ಮತದಲ್ಲಿ ಗೆಳೆತನವು ಒಂದು ವಿವಾಹ ಬಂಧನ. ಇಬ್ಬರ ಸುಖ ದುಃಖಗಳೂ ಆ ಬಂಧನದ ಮೇಲೆಯೇ ನಿರ್ಭರಗೊಳ್ಳುತ್ತವೆ. ಗೆಳೆತನವು ದಾಳ ಬಿದ್ದಂತೆ; ಅದು ಕ್ಷಣಕ್ಕಾಗಿಯಲ್ಲ; ಸಂಪೂರ್ಣ ಜೀವಿತಕ್ಕೆ. ಸಾಧ್ಯವಿದ್ದರೆ-(ಇದೇ ನಮ್ಮ ಗುರಿ) ಆತ್ಮಗಳ ಮೇಳನದಲ್ಲಿ ಕಲ್ಪಾಂತದವರೆಗೆ, ವಿಶ್ವದ ಇರವಿನ ಕಡೆಯವರೆಗೆ ಗೆಳೆತನವು ಗೆಳೆಯರಿಬ್ಬರನ್ನೂ ತಮ್ಮ ಹೃದಯಗಳನ್ನು ಹೊರಕ್ಕೆ ತೆಗೆದು ತಿಳಿಯನ್ನು ಮರೆಮಾಡಿ ಅಲ್ಲಿರುವ ಎಲ್ಲವನ್ನೂ ಮುಚ್ಚು ಮರೆಯಿಲ್ಲದೆ ತೋರಿಸುವುದು. ದಯೆ, ಕನಿಕರ, ಉದಾತ್ತತೆ ಇವೆಲ್ಲವೂ ಗೆಳೆತನದ ಅಂಗ ಗಳು ಮಾತ್ರ. ನಿಜವಾದ ತಿರುಳೆಂದರೆ, ನಗ್ನರಾಗಿ ಒಬ್ಬರನ್ನೊಬ್ಬರು ಅಪ್ಪಿ, ಮುದ್ದಾಡಿ, ದೇಹವನ್ನು ಮರೆತು ಎರಡೂ ಆತ್ಮಗಳನ್ನು ಒಂದನ್ನಾಗಿ ಮಾಡಿ-ಆ ಪವಿತ್ರ ಪ್ರೇಮದ ಸ್ವಪ್ನಗಳನ್ನು ಕೊರಲಿಗೆ ಮಾಲೆ ಹಾಕಿಕೊಂಡು ನಲಿದು, ನಕ್ಕು, ನಾಟ್ಯವಾಡುವದೇ. ಆ ಮದುವೆಯಲ್ಲಿ ಈ ಅನಿರ್ವಚನೀಯ

ಅನಂತ–ಆತ್ಮಾನಂದಕರವಾದ ಸೊಬಗಿನ ಸವಿಯಿಲ್ಲ. ಏಕೆ? ನನ್ನ ಮತದಲ್ಲಿ ಗಂಡಸಿಗೂ ಹೆಂಗಸಿಗೂ ಪ್ರೀತಿ ಬೆಳೆಯುವದಕ್ಕೆ ಕಾರಣ ಕಾಮುಕತೆಯೇ. ಅವರ ಆತ್ಮ ಕುಸುಮಗಳ ಪರಿಮಳವೇ ಬೇರೆ. ಅದರ ನಿಸ್ಸೀಮಮಾತು ಪರಮ ಹಂಸ ಪುರುಷರಿಗೆ ಸಲ್ಲದು.

ನನ್ನ ದುರದೃಷ್ಟದಿಂದಲೋ ಸುದೈವದಿಂದಲೋ ನಿನ್ನ ಮತ್ತೊಂದು ಮಾತಿನ ಅಸಂಗೀಕಾರವನ್ನು ಮಾಡಬೇಕಾಗಿದೆ. ಹುಟ್ಟಿದ ಮನೆಯ ವಸುತಿನವು ನಮ್ಮ ಹೃದಯದ ಇಕ್ಕಟ್ಟಾದ ಬಾಗಿಲವನ್ನು ತೆರೆದು ಪ್ರೇಮಸಾಗರವನ್ನು ನುಗ್ಗಿಸುವದೆಂದು ನನಗೆ ತೋರದು. ಇದು ನನ್ನ ಹೃದಯದಲ್ಲಿ ಕುದಿಯುವ ಭಾವನೆ. ನನಗೆ ನನ್ನ ಜನ್ಮಗೃಹವಾಗಲೀ, ಬಳಗದವರ ಸಾಮೀಪ್ಯವಾಗಲೀ ಎಂದೂ ಅಂತಹ ಸುಖವನ್ನು ಕೊಟ್ಟಿಲ್ಲ. ನನ್ನ ನರಗಳ ರಕ್ತವು ಎಂದೂ ಆ ಸಂತಸದಿಂದ ಬಿಸಿಯೇರಿಲ್ಲ. ಕೆಲವು ಗಳಿಗೆಗಳಲ್ಲಿ ಒಲವಿನ ನಳಿದೋಳಿಲ್ಲದುದರಿಂದ – ಆತ್ಮಕ್ಕೆ ದೇಹಕ್ಕಲ್ಲ – ಪ್ರಿಯವಾದ ವಸ್ತು ಸಾನ್ನಿಧ್ಯವಿಲ್ಲಪ್ಪರಿಂದ ಮನವು ಬೇಸರಗೊಂಡು ನರಗಳು ತಣ್ಣಗಾಗಿವೆ. ನನ್ನನುಭವದ ಬಲದಿಂದ ಒತ್ತಿ ಹೇಳುವ ಮಾತಿದು–ಏಕೆ? ನನ್ನೀ ಎಳೆಯ ಬಾಳಿನಲ್ಲಾಗಲೀ ಪವಿತ್ರ ಪ್ರೇಮದ ಅನುಭವವಾಗಿದೆ–ಮಾನವನಿಗೆ, ಪ್ರೇಮೋಪಾಸಕನಾದ, ಒಲವಿನ ಕುತುಕನಾದವನಿಗೆ ನಿಜವಾದ ದರ್ಶನದಿಂದ ಅಂತರಂಗದಲ್ಲಿ ಪ್ರಹರ್ಷವುಂಟಾಗುವ, ಬೇಕು ಬೇಕೆಂದು ಬಯಸುವ ಮನೆಯೆಂದರೆ–ಒಲವಿನ ಗೆಳೆಯನ ನಲವಿನ ನಳಿದೋಳೇ. ಇದಲ್ಲದೆ ಇನ್ನಾವುದೂ ಇಂಥ ಸುಖವೀಯಲಾರದು. ಒಲವಿನ ಗೆಳೆಯರು ಕಾಡಿನಲ್ಲಿದ್ದರೂ ಅವನನ್ನು ಸಂತಸದ ಬೀಡನ್ನಾಗಿ ಮಾಡಬಹುದಲ್ಲವೇ? ತಂಗಿ ಜಯಮ್ಮನ ಸಾಮೀಪ್ಯವು ನನಗೆಷ್ಟೋ ಆನಂದದಾಯಕವಾಗಲಿ–ಅವಳೆನ್ನ ಒಡಹುಟ್ಟಿದವಳಲ್ಲ. ಅನಂತನ ಭಾರ್ಯೆ–ಅದ್ಭುತ ಪ್ರತಿಭೆಯ ಹದಿನೇಳು ವರ್ಷದ ಹುಡುಗಿ. ಅವಳ ಇನ್ನೊಂದು ಗೀತವನ್ನೀಗ ಕಳುಹಿದ್ದೇನೆ. ಓದಿ—ಹಾಡಿ—ನೋಡು.

ಹರಟೆಯ ಮಲ್ಲನೆಂಬ ಬಿರುದನ್ನು ಇನ್ನಾರಿಗಾದರೂ ಬಿಡಬೇಕಾದೀತೆಂಬ ಭಯವೆಳ್ಳಷ್ಟೂ ಇಲ್ಲ. ನಾನು ಸ್ವಭಾವತಃ ಹರಟೆಗೊಲಿದವ. ಬರುವಾಗ ಇನ್ನೊಂದೆರಡು ಹರಟೆಗಳನ್ನು ತರುವೆನು.

ನನ್ನ ಬರವಿಗಾಗಿ, ನೀನೆಷ್ಟು ಆಸೆ ಪಡುತ್ತಿರುವೆಯೋ, ಅಲ್ಲಿಗೆ ಬರಲು ನನ್ನ ಮನಸ್ಸು ಅಷ್ಟು ಆಸೆಪಡುವದೆಂದು ನಾನು ಬೇರೆ ಹೇಳಬೇಕೆ? ನಿನ್ನ ಹೃದಯದ ಸಂತಸವನ್ನು ನಾನು ಪ್ರತಿ ತರಂಗಿಸುವೆನೆಂದು ಆಸೆಗೊಂಡಿದ್ದೇನೆ. ಬರುತ್ತೇನೆ–ನಿನ್ನ ಬಳಿಗೆ. ಸುತ್ತಿ ಸುತ್ತಿ ಗೂಡಿಗೆ ಬರುವ ಹಕ್ಕಿಯಂತೆ ಬರುತ್ತೇನೆ. ಮಲಗಿ ನಿದ್ದೆ ಮಾಡುತ್ತಿರುವ ಎಳೆ ಮಗುವಿನ ಬಳಿಗೆ ಅಂಜೆಗಾಲಿಡಲು ಮುದ್ದಿಡಲು ಬರುವ ಶರತ್ಪ್ರಭಾತದಂತೆ ಬರುತ್ತೇನೆ. ನವಿಯ ಸರಿಯನ್ನು

ಕರೆವ ಕೊಳಲನೂದುವವನ ಬಳಿಗೆ ವೇಣುಪ್ರಿಯನು ಹಾಡುತ್ತ ಬರುವಂತೆ ಬರುತ್ತೇನೆ.

ನಿನಗೆ ಮಾತ್ರ ಒಂದು ಗುಟ್ಟನ್ನು ಬಿಚ್ಚಿ ಹೇಳುತ್ತೇನೆ. ನಿಜವಾಗಿ ನನ್ನ ಮನೆಯಲ್ಲಿ ನಾನು ಪರದೇಶಿ. ಏಕೆಂದರೆ, ಎಲ್ಲವೂ ಬರಿಯ ಮಮತೆಯ ಕಟ್ಟು. ಅಲ್ಲದೆ ನನ್ನ ಸ್ವಭಾವಕ್ಕೆ ಹೊಂದುವ ಪ್ರಕೃತಿಯುಳ್ಳವರಾಗೂ ಇಲ್ಲಿದ್ದವರಲ್ಲಿ ಇಲ್ಲ. ಒಲವಿನ ಅನಂತ ಶಕ್ತಿಯನ್ನವರೇನರಿಯಬಲ್ಲರು. ಪಾಪ!

ನಿನ್ನ (ನನ್ನ) ಎಲ್ಲ ಗೆಳೆಯರಿಗೂ ಅಭಿವಂದನೆಗಳು. ಹೆಚ್ಚೇನು? ಇನ್ನು ಕೆಲದಿನಗಳಲ್ಲಿಯೇ ನಿನ್ನಡಿಯಲ್ಲಿ ಬಂದು ಮಲಗುವೆನು. ಆ ಕಾಲವು ಬೇಗನೇ ಬರಲೆಂದೇ ನನ್ನ ಆಸೆ.

ನಿನ್ನವನೇ
ಕಿಟ್ಟು

ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ ಅವರು
ಶ್ರೀ ದ. ರಾ. ಬೇಂದ್ರೆ ಅವರಿಗೆ ಬರೆದ ಒಂದು ಪತ್ರ.

‘ಗೆಳೆಯ’ ಸಂಪುಟ ೧ ಸಂಚಿಕೆ ೨ ಪುಟ ೨೧-೨೪
ಆಷಾಢ ಪೌರ್ಣಿಮೆ. ಕರ್ಕಸಂಕ್ರಾಂತಿ. ರಕ್ತಾಕ್ಷಿ ೧೮೪೬

# ನಾ ಕಂಡಂತೆ

* * * * *

ಶ್ರೀ ಕೃಷ್ಣಶರ್ಮರ 'ಪರ್ಣಕುಟಿ'ಯನ್ನು ತರಗತಿಯಲ್ಲಿ ಪಾಠಹೇಳುವ ಸಂದರ್ಭದಲ್ಲಿ ಚೆನ್ನಾಗಿಯೇ ಓದಿಕೊಂಡಿದ್ದೆ. ಅವರ 'ದೀಪಮಾಲೆ' 'ವರ್ಧಾಯಾತ್ರೆ' ಇವನ್ನು ಒಮ್ಮೆ ಓದಿ ಮರೆತಿದ್ದೇನೆ. ಒಮ್ಮೆ ಓದಿದ್ದನ್ನು ಮರೆಯುವ ಗುಣ ದೇವರು ನನಗೆ ಕರುಣಿಸಿರುವ ಭಾಗ್ಯ ಎನ್ನಲೇ ? ಶ್ರೀ ಕೃಷ್ಣಶರ್ಮರಲ್ಲಿ ನನ್ನ ಪ್ರೀತಿ, ಗೌರವ ಅಪಾರ.

—ಎಂ. ವಿ. ಸೀತಾರಾಮಯ್ಯ

ಶ್ರೀ ಕೃಷ್ಣಶರ್ಮರು ನನಗೆ ಪರಮ ಆಪ್ತರು, ಹಿರಿಯರು, ಮಾರ್ಗದರ್ಶಿಗಳು.

—ತ. ಸು. ಶಾಮರಾಯ

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ ನನ್ನ ಆತ್ಮೀಯ ಗೆಳೆಯ ಹಾಗೂ ಹಿತೈಷಿ.

—ಕಡಿದಾಳ್ ಮಂಜಪ್ಪ

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಹಿರಿಯ ಸಾಹಿತಿಗಳು. ಕನ್ನಡ ಗದ್ಯ ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆ ನೀಡಿದವರು.

—ಎಚ್ಚೆಸ್ಕೆ

ಪರ್ಣಕುಟಿ :

Your exquisite pen-portrait prime
Of Bapoo, simple, sweet sublime,
Gladdens soul and saddens heart !
Surest sing of supreme art !

—ಕೈಲಾಸಂ
10–4–42
Dindigul

a'toi

# ಶ್ರೀ ಕೃಷ್ಣಶರ್ಮ ಅವರ ಬರಹಗಳು

ಅ. ಸ್ವಂತ ಬರಹಗಳು

೧. ಗಾಂಧೀ ಸಾಹಿತ್ಯ

ಪರ್ಣಕುಟಿ
ವರ್ಧಾಯಾತ್ರೆ
ಸತಿ ಕಸ್ತೂರಿ ಬಾ

೨. ವಿನೋಬಾ–ಸರ್ವೋದಯ ಸಾಹಿತ್ಯ

ಸಹಕಾರ–ಸರ್ವೋದಯ
ಭೂದಾನದ ಕಥೆ
ವಿನೋಬಾ

೩. ಜೀವನ ಚಿತ್ರ–ವ್ಯಕ್ತಿಚಿತ್ರ

ಯತಿರಾಜ ರಾಮಾನುಜ
ದೀಪಮಾಲೆ
ಕುಲದೀಪಕರು
ಕನ್ನಡದ ಕಿಡಿಗಳು
ಸರದಾರ ವಲ್ಲಭಭಾಯಿ
ಜಮುನಲಾಲ ಬಜಾಜ್
ನೆನಪಿನ ಚಿತ್ರಗಳು

೪. ಇತರ

ಕನ್ನಡ ಸಮಸ್ಯೆ
ದೇಶೀ ಸಂಸ್ಥಾನಗಳಲ್ಲಿ
ನಿರ್ಭಾಗ್ಯ ಬೋರೇಗೌಡ
ಕಾಮಧೇನು
ಭಗವದ್ಗೀತೆ
ಸಹಕಾರ–ಪಂಚಾಯಿತಿ
ಮಾತಿನ ಮಂಟಪ (೨ ಭಾಗ)
ವಿದ್ಯಾರ್ಥಿಗಳಲ್ಲಿ ಆಶಿಸ್ತು
ತುಂಗಭದ್ರಾ ಯೋಜನೆ
ನಮ್ಮ ಊರು
ನಮ್ಮ ಭೂಮಿ
ಸಿರಿಗನ್ನಡ
ಖಗೋಳ ಪುರಾಣ

ಆ. ಅನುವಾದಗಳು

೧. ಗಾಂಧೀ ಸಾಹಿತ್ಯ

(ಮೂಲ : ಗಾಂಧೀಜಿ)

ಸಂವಾದಮಾಲೆ
ಪ್ರಸಾದ ದೀಕ್ಷೆ
ಸಂಕ್ಷಿಪ್ತ ಆತ್ಮಕಥೆ
ಹಿಂದ್ ಸ್ವರಾಜ್ಯ
ಮಂಗಳ ಪ್ರಭಾತ
ಅನಾಸಕ್ತಿಯೋಗ
ರಾಜಕೀಯ ಪತ್ರಗಳು
ಗೀತಾಮಾತೆ
ಸಂಭಾಷಣೆ
ಪತ್ರಗುಚ್ಛ
ಗೃಹಮಾಧುರಿ
ಮೂಲ ಶಿಕ್ಷಣ
ಜೀವನ ಶಿಕ್ಷಣ
ಆರೋಗ್ಯ ರಹಸ್ಯ

ಸರ್ವೋದಯ
ನೀತಿಧರ್ಮ
ನಿರ್ಮಾಣ ಕಾರ್ಯಕ್ರಮ
ಇನ್ನು ಸಾಕು
ರಾಜನೀತಿ
ಆಗಸ್ಟ್ ೯ರ ತರುವಾಯ
ಮಾತಾಗಾಂಧಿ (ಮನೂಗಾಂಧೀ)
ಗಡಿನಾಡಿನಲ್ಲಿ (ಮಹದೇವದೇಸಾಯಿ)
ದಿನಚರಿಯ ಕೆಲವು ಪುಟಗಳು (,,)
ನನ್ನ ಜೊತೆಗಾರರು (ಗಾಂಧೀಜಿ)
ಗಾಂಧೀಜಿ (ಮಿಲ್ಲೀಗ್ರಹಾಂ ಪೋಲಕ್)
ವ್ಯಾವಹಾರಿಕ ಅಹಿಂಸೆ (ಕಿಶೋರ ಲಾಲ್ ಮಶ್ರೂವಾಲಾ)
ಶಾಶ್ವತ ಅರ್ಥಶಾಸ್ತ್ರ (ಜೆ.ಸಿ. ಕುಮಾರಪ್ಪ)
ನಯಿ ತಾಲೀಂ
ನಯಾತಾಲೀಮಿನಲ್ಲಿ ಕಲಾ ಶಿಕ್ಷಣ (ನಿರ್ಮಲಾ ದೇಶಪಾಂಡೆ)
ಪೂರ್ವಬುನಿಯಾದಿ (ಶಾಂತಾ ನಾರೂಳಕರ್)
ಬಾಳುವೆಯ ತಳಹದಿ
ಮಹಾತ್ಮ ಗಾಂಧೀ (ಜಗತರಾಮ ದವೆ)
ಬಂಗಾರದ ಮಾಯೆ (ಕಿ.ಮಶ್ರೂವಾಲಾ)
ಶಿಕ್ಷಣ ಮಾಧ್ಯಮ
ಗಾಂಧೀಜಿಯ ಆಧ್ಯಾತ್ಮ ಸಾಧನೆ (ಕಾಕಾ ಕಾಲೇಲಕರ)
ಮೂಲಶಿಕ್ಷಣ–ಹೊಚ್ಚಹೊಸಗೀಳು (ಜೆ. ಬಿ. ಕೃಪಲಾನಿ)
ಮಹಾತ್ಮ ಗಾಂಧೀ
ಗಾಂಧೀ ಯೋಜನೆ (ಶ್ರೀಮನ್ನಾರಾಯಣ)
ಮಹಾತ್ಮ ಗಾಂಧೀ (ಜವಹರಲಾಲ ನೆಹರು)
ಮಹಾತ್ಮ ಗಾಂಧೀ (ರೊಮೇರೋಲಾ)

೨. ವಿನೋಬಾ–ಸರ್ವೋದಯ ಸಾಹಿತ್ಯ

(ಮೂಲ : ವಿನೋಬಾ)
ಸರ್ವೋದಯ ವಿಚಾರ
ಭೂದಾನಯಜ್ಞ ಯಾತ್ರೆ
ಸರ್ವೋದಯ ಯಾತ್ರೆ
ದೀಕ್ಷಾ
ಕಾರ್ಯಕರ್ತರಿಗೆ
ಗೀತಾ ಪ್ರವಚನ
ಸ್ಥಿತ ಪ್ರಜ್ಞದರ್ಶನ
ಸಾಹಿತ್ಯ–ಸಾಹಿತಿ
ಗಾಂಧಿ–ಮಾರ್ಕ್ಸ
ಭೂದಾನ ಗಂಗೆ
ರಾಮನಾಮ
ಶ್ರದ್ಧಾಂಜಲಿ
ಒಟ್ಟಾಗಿ–ಒಳ್ಳೆಯವರಾಗಿ
ಹಳ್ಳಿ ಹಳ್ಳಿಯಲ್ಲಿ ಸ್ವರಾಜ್ಯ
ಧರ್ಮಚಕ್ರ ಪ್ರವರ್ತನೆ
ಶಾಸನಮುಕ್ತ ಸಮಾಜ
ಸರ್ವೋದಯ ದೃಷ್ಟಿ
ಉಪನಿಷತ್ ಅಧ್ಯಯನ
ಈಶಾವಾಸ್ಯವೃತ್ತಿ
ಸ್ವರಾಜ್ಯ ಶಾಸ್ತ್ರ
ಶಿಕ್ಷಣ ವಿಚಾರ
ಆಶ್ರಮ ಜೀವನ
ಶಾಂತಿಸೇನೆ
ನಾಮಮಾಲೆ
ಬಿರುಗಾಳಿ ಬರಲಿದೆ
ನಮ್ಮ ರಾಜ್ಯ
ಮಾನವೀಯ ಕ್ರಾಂತಿ

ಗ್ರಾಮರಾಜ್ಯ
ಸಾಮ್ಯವಾದ-ಸಾಮ್ಯಯೋಗ
ಭೂ ಕ್ರಾಂತಿಯ ಕಥೆ
ಬೆಂಗಳೂರಿನಲ್ಲಿ ವಿನೋಬಾ
ಲೋಕರಾಜ್ಯ
ಹಳ್ಳಿಯಲ್ಲಿ ಬಂಡಾಯ
ಸರ್ವೋದಯ ಸಾಂಸ್ಕೃತಿಕ ಆಧಾರ
ಸರ್ವೋದಯ ಒಂದು ದರ್ಶನ
(ದಾದಾ ಧರ್ಮಾಧಿಕಾರಿ)

೩. ಜೀವನಚಿತ್ರ–ವ್ಯಕ್ತಿ ಚಿತ್ರ
ರಾಜೇಂದ್ರಪ್ರಸಾದ್–ಆತ್ಮಕಥೆ
(ರಾಜೇಂದ್ರಪ್ರಸಾದ್)
ನೆಹರು–ಮೋತಿಲಾಲ್ ಜವಹರಲಾಲ್
(ಬಿ.ಆರ್. ನಂದಾ)
ವುಡ್ರೋ ವಿಲ್ಸನ್

೪. ಇತರ
ವೇದ ಧರ್ಮ (ಕೃಷ್ಣದತ್ತಭಟ್ಟ)
ಹಿಂದೂ ಧರ್ಮ ,,
ನಮ್ಮ ಹಿಂದೂಸ್ತಾನ (ಮಿನೂ ಮಸಾನಿ)
ಭಾರತ ಸಮಸ್ಯೆ
ವಿಧಿ ಸೆಳೆದತ್ತ
ತಿಳಿವಿನ ಹಣತೆ (ಅಬ್ದುಲ್ ಬಹಾ)
ಪಂಚಾಯಿತಿ ರಾಜ್ಯ
ಸಂಕಲನ
ಸಹಕಾರ ಸಂಘ
ಕಾರ್ಯ ನಿರ್ವಾಹಕ ಸಮಿತಿ
ಗ್ರಾಮಾಂತರ ಋಣಪರಿಶೀಲನೆಯ
ವರದಿ (ರಿಸರ್ವ್ ಬ್ಯಾಂಕ್)
ಸ್ವಾತಂತ್ರ್ಯದ ಹದಿನೇಳು ಹೆಜ್ಜೆ
(ಭಾರತ ಸರ್ಕಾರ)
ತೆಲುಗಿನ ಕತೆಗಳು

ಅಸ್ಸಮಿಯಾ ಕತೆಗಳು
ಹೊಟ್ಟೆಗಿಲ್ಲವೇಕೆ?
ಸ್ವರಾಜ್ಯವೇ ಶರಣ್ಯ
ಹಿಟ್ಲರ್ ಯಾರು?
ಮಹಾಯುದ್ಧದ ನಕ್ಷೆಗಳು
ಮೆಸೊಪೊಟಾಮಿಯಾ ಸಾಹಿತ್ಯ
(ಕೃಷ್ಣಚೈತನ್ಯ)
ಪ್ರಾಚೀನ ಈಜಿಪ್ಟ್ ಸಾಹಿತ್ಯ (,,)
ಕೃಷ್ಣಾವತಾರ (೫ ಭಾಗ
ಕೆ. ಎಂ. ಮುನಷಿ)
ಜಗತ್ಕಥಾವಲ್ಲರಿ (ಜವಹರಲಾಲ ನೆಹರು)
ರಾಮಾವತಾರ (೩ ಭಾಗಗಳು
–ವಾಲ್ಮೀಕಿ)
ಪಂಚಾಯಿತಿ ಶಾಸನ
(ಮೈಸೂರು ಸರ್ಕಾರ)
ನಮ್ಮ ಪಾರ್ಲಿಮೆಂಟು
(ಅನಂತಶಯನಂ ಅಯ್ಯಂಗಾರ್)
ಹಿಂದೂ ಕುಟುಂಬ ಪ್ರರ್ನದರ್ಶನ
(ಪಟ್ಟಾಭಿ ಸೀತಾರಾಮಯ್ಯ)
ಗತಕಾಲದ ಗುರುತುಗಳು
(ಎಫ್.ಜಿ. ಪಿಯರ್ಸ್)
ಆಧುನಿಕ ಮಾನವನ ಹೋರಾಟ
(ಎಫ್.ಜಿ. ಪಿಯರ್ಸ್)
ಭೂವಿವರಣೆ (ಡಡ್ಲಿಸ್ಟ್ಯಾಂಪ್)
ಅಮೇರಿಕಾದ ರಾಜಕೀಯ ಪದ್ಧತಿ

೫. ಸಂಪಾದಿತ
ಮೂಲಶಿಕ್ಷಣದ ಕೈಪಿಡಿ
ಸಮಾಜ ಶಿಕ್ಷಣ
ಭೂದಾನ ಯಜ್ಞ ಸಮಗ್ರದರ್ಶನ
ವಿನೋಬಾ ವಿಚಾರ ಲಹರಿ
ಗಾಂಧೀ ಮತ್ತು ಕರ್ನಾಟಕ

# 'ಸಿದ್ಧಹಸ್ತ' ಲೇಖಕರ ಪರಿಚಯ

೧. ತಿ. ತಾ. ಶರ್ಮ, ಬೆಂಗಳೂರು. ಹಿರಿಯ ಸಾಹಿತಿ, ಪತ್ರಿಕೋದ್ಯಮಿ.
೨. ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಬೆಂಗಳೂರು. ಸಂಗೀತ, ಸಾಹಿತ್ಯ ವಿದ್ವಾಂಸರು, ಕೇಂದ್ರ ಸಂಗೀತ ನಾಟಕ ಅಕಾಡೆಮಿ ಗೌರವ ಸದಸ್ಯ.
೩. ದ. ರಾ. ಬೇಂದ್ರೆ (ಅಂಬಿಕಾತನಯದತ್ತ), ಧಾರವಾಡ. ಹಿರಿಯ ಕವಿ.
೪. ಸಿ. ನಿಜಲಿಂಗಪ್ಪ, ಧಾರವಾಡ. ಮಾಜಿ ಮುಖ್ಯಮಂತ್ರಿ, ಮೈಸೂರು ರಾಜ್ಯ ಹಾಗೂ ಅಖಿಲ ಭಾರತ ಕಾಂಗ್ರೆಸ್ ಮಾಜಿ ಅಧ್ಯಕ್ಷ.
೫. ಕೆ. ಸಿ. ರೆಡ್ಡಿ, ಬೆಂಗಳೂರು. ಮಾಜಿ ಮುಖ್ಯಮಂತ್ರಿ, ಮೈಸೂರು ರಾಜ್ಯ, ಮಾಜಿ ರಾಜ್ಯಪಾಲ, ಮಧ್ಯಪ್ರದೇಶ.
೬. 'ರಾಶಿ' (ಎಂ. ಶಿವರಾಂ), ಬೆಂಗಳೂರು. ಸುಪ್ರಸಿದ್ಧ ವೈದ್ಯ ಹಾಗೂ ಸಾಹಿತಿ.
೭. ಪು. ತಿ. ನರಸಿಂಹಾಚಾರ್ಯ, ಮೈಸೂರು. ಹಿರಿಯ ಕವಿ.
೮. ಶ್ರೀನಿವಾಸ ತೋಳಪ್ಪಾಚಾರ್ಯ, ಹೊಸಪೇಟೆ. ಶರ್ಮಾಜಿಯವರ ಷಡ್ಡಕರು.
೯. ಕೆ. ಪಟ್ಟಾಭಿರಾಮನ್, ಕೋಲಾರ. ಸರ್ವೋದಯ ನಾಯಕರು.
೧೦. ವಿ. ಕೃ. ಗೋಕಾಕ್ (ವಿನಾಯಕ), ಬೆಂಗಳೂರು. ಸುಪ್ರಸಿದ್ಧ ಕವಿ, ಮಾಜಿ ಉಪಕುಲಪತಿ, ಬೆಂಗಳೂರು ವಿಶ್ವವಿದ್ಯಾಲಯ.
೧೧. ಟೇಕೂರು ಸುಬ್ರಹ್ಮಣ್ಯಂ, ಬಳ್ಳಾರಿ. ಅಧ್ಯಕ್ಷ, ಮೈಸೂರು ರಾಜ್ಯ ಗಾಂಧಿ ಸ್ಮಾರಕ ನಿಧಿ.
೧೨. ನಿರಂಜನ (ಕುಳಕುಂದ ಶಿವರಾಯ), ಬೆಂಗಳೂರು. ಸಾಹಿತಿ, 'ಜ್ಞಾನ ಗಂಗೋತ್ರಿ'ಯ ಪ್ರಧಾನ ಸಂಪಾದಕರು.
೧೩. ಬಸವರಾಜ ಕಟ್ಟೀಮನಿ, ಧಾರವಾಡ. ಸಾಹಿತಿ, ಮೈಸೂರು ವಿಧಾನ ಪರಿಷತ್ ಸದಸ್ಯ.
೧೪. ನ. ಮ. ಕೊ. ಸೋಗಿ, ಹರಿಹರ. ಪ್ರಿನ್ಸಿಪಾಲ್, ಎಸ್. ಜೆ. ವಿ. ಪಿ. ಕಾಲೇಜ್, ಮಾಜಿ ಶಿಕ್ಷಣ ಉಪಸಚಿವ, ಮೈಸೂರು ರಾಜ್ಯ.
೧೫. ಎನ್ಕೆ (ಎನ್. ಕೆ. ಕುಲಕರ್ಣಿ), ಧಾರವಾಡ. ಆಕಾಶವಾಣಿ ಕಾರ್ಯಕ್ರಮ ನಿರ್ದೇಶಕ (ನಿವೃತ್ತ), ಸಾಹಿತಿ.
೧೬. ನಿಂ. ನೀ. ಸಣ್ಣಕ್ಕಿ, ಗೋಕಾಕ. ಶಿಕ್ಷಕರು.

೧೭. ಸ. ನಾರಾಯಣ, ಚಿತ್ರದುರ್ಗ. ತರುಣ ಲೇಖಕರು.

೧೮. ಎಚ್. ಶ್ರೀನಿವಾಸಯ್ಯ, ಬೆಂಗಳೂರು. ಗಾಂಧೀ ಸಾಹಿತ್ಯಸಂಘದ ಟ್ರಸ್ಟಿ, ಭಾರತ್ ಅರ್ತ್ ಮೂವರ್ಸ್‌ನಲ್ಲಿ ಡಿಸೈನ್ ಇಂಜಿನಿಯರ್.

೧೯. ಕೆ. ಎಸ್. ನಾರಾಯಣಸ್ವಾಮಿ, ಬೆಂಗಳೂರು. ಸಂಚಾಲಕ, ಗಾಂಧೀ ಶಾಂತಿ ಪ್ರತಿಷ್ಠಾನ.

೨೦. ಕೆ. ಸಂಪದ್ಗಿರಿರಾವ್ (ದಿವಂಗತ), ಪ್ರಸಿದ್ಧ ಶಿಕ್ಷಣ ತಜ್ಞ, ಸಾಹಿತಿ.

೨೧. ಬಿ. ಎಸ್. ರಾಮಾಚಾರ್ಯ, ಗುಡಿಬಂಡೆ. ಸಾಹಿತಿ ಹಾಗೂ ಗಾಯಕ.

೨೨. ವಿ. ಎಸ್. ನಾರಾಯಣರಾವ್, ಬೆಂಗಳೂರು. 'ವಿಚಾರ ಸಾಹಿತ್ಯ'ದ ಡೈರೆಕ್ಟರ್, ಲೇಖಕರು.

೨೩. 'ಭಾರತಿ' (ತಿರುಮಲೆ ರಾಜಮ್ಮ), ಬೆಂಗಳೂರು. ಹಿರಿಯ ಲೇಖಕಿ, ಸಂಗೀತ ವಿದುಷಿ.

೨೪. ಡಾ॥ ನಾಡಿಗ ಕೃಷ್ಣಮೂರ್ತಿ, ಮೈಸೂರು. ಮೈಸೂರು ವಿಶ್ವವಿದ್ಯಾಲಯದ ಪತ್ರಿಕೋದ್ಯಮ ವಿಭಾಗದ ಮುಖ್ಯಸ್ಥ.

೨೫. ಅರ್ಚಿಕ ವೆಂಕಟೇಶ, ಬೆಂಗಳೂರು. ಸಾಹಿತಿ, ಪತ್ರಿಕೋದ್ಯಮಿ.

೨೬. ತಿರುಮಲೆ ಶ್ರೀನಿವಾಸ ಆಚಾರ್ಯ, ಬೆಂಗಳೂರು. ನಿವೃತ್ತ ಸರ್ಕಾರಿ ಅಧಿಕಾರಿ, 'ಜೀವನ' ಪತ್ರಿಕೆ ನಿರ್ವಾಹಕರು.

೨೭. ಡಿ. ವೇಣುಗೋಪಾಲಾಚಾರಿ, ಬಳ್ಳಾರಿ. ವಕೀಲರು.

೨೮. ಗೊರೂರು ರಾಮಸ್ವಾಮಿ ಅಯ್ಯಂಗಾರ್, ಗೊರೂರು. ಹಿರಿಯ ಸಾಹಿತಿ.

೨೯. ಜಿ. ವಿ. ನಾರಾಯಣಮೂರ್ತಿ, ಚಿಕ್ಕನಾಯಕನಹಳ್ಳಿ. ಸರ್ವೋದಯ ಕಾರ್ಯಕರ್ತ, ಗಾಂಧೀ ಸಾಹಿತಿ.

೩೦. ಮಿರ್ಜಿ ಅಣ್ಣಾರಾಯ, ಸೇಡಬಾಳ. ಶಿಕ್ಷಕ, ಸಾಹಿತಿ.

೩೧. ಕೃಷ್ಣಮೂರ್ತಿ ಪುರಾಣಿಕ, ಗೋಕಾಕ. ಪ್ರಸಿದ್ಧ ಕಾದಂಬರಿಗಾರರು.

೩೨. ಸಿ. ಕೆ. ನಾಗರಾಜರಾವ್, ಬೆಂಗಳೂರು. ಸಾಹಿತಿ.

೩೩. ಮ. ಗ. ಸೆಟ್ಟಿ, ಬೆಂಗಳೂರು. ಖಾದೀ ಆಯೋಗದ ಉದ್ಯೋಗಿ, ಸಾಹಿತಿ.

೩೪. ಬಿ. ಗೋ. ರಮೇಶ್, ಬೆಂಗಳೂರು. ಗಾಂಧೀ ಸಾಹಿತ್ಯ ಸಂಘದ ಗೆಳೆಯ, ಸಾಹಿತ್ಯಪ್ರೇಮಿ, ಇಂಜಿನಿಯರ್.

೩೫. ಹಂಪ. ನಾಗರಾಜಯ್ಯ, ಬೆಂಗಳೂರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಾಪಕ, ಸಾಹಿತ್ಯ ಪರಿಷತ್ ಕಾರ್ಯದರ್ಶಿ.

೩೬. ಕಮಲಾ ಹಂಪನಾ, ಮೈಸೂರು. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಾಪಕಿ, ಲೇಖಕಿ.

೩೭. ಅಪ್ಪಣ್ಣರೆಡ್ಡಿ ನಾರಾಯಣಘಟ್ಟ, ಬೆಂಗಳೂರು. ಶಿಕ್ಷಕ, ಲೇಖಕ.

೩೮. ಜಿ. ಪಿ. ರಾಜರತ್ನಂ, ಬೆಂಗಳೂರು. ಹಿರಿಯ ಸಾಹಿತಿ.

೩೯. ಬಿ. ಶ್ರೀ. ಪಾಂಡುರಂಗರಾವ್, ಬೆಂಗಳೂರು. ಸಾಹಿತಿ, 'ವಸಂತ' ಮಂಟಪದ ನಿರ್ವಾಹಕ.

೪೦. ದತ್ತಾತ್ರೇಯ ಮಂಜುನಾಥ ಬುರಡೆ, ಬೆಂಗಳೂರು. ದಕ್ಷಿಣ ಭಾರತ ಕೃಷಿ ಗೋಸೇವಾ ಸಂಘದ ಕಾರ್ಯದರ್ಶಿ.

೪೧. ದಾಮೋದರ ಮುಂದಡಾ, ಹೈದರಾಬಾದಿನಲ್ಲಿ ಶರ್ಮಾಜಿಯವರ ಒಡನಾಡಿ, ಸರ್ವೋದಯ ನಾಯಕ.

೪೨. ವೆಂಕಟೇಶ ಸಾಂಗಲಿ, ಬೆಂಗಳೂರು. ತಂತಿ ಇಲಾಖೆಯಲ್ಲಿ ಅಧಿಕಾರಿ, ಸಾಹಿತ್ಯ ಪರಿಷತ್ ಕಾರ್ಯದರ್ಶಿ.

೪೩. ಅ. ನ. ನಂಜುಂಡಯ್ಯ, ಬೆಂಗಳೂರು. ಶ್ರೀರಾಮ ಕೋ-ಆಪರೇಟಿವ್ ಬ್ಯಾಂಕ್ ಸ್ಥಾಪಕ ಸದಸ್ಯ.

೪೪. ಎಸ್. ಎನ್. ಸುಬ್ಬರಾವ್, ಮೊರೇನ (ಗ್ವಾಲಿಯರ್). ಸೇವಾದಳ ನಾಯಕ, ಪ್ರಸಕ್ತ ಚಂಬಲ್ ಕಣಿವೆಯ ಡಕಾಯಿತರ ಸೇವಾಶ್ರಮದಲ್ಲಿ ಕಾರ್ಯಕರ್ತ.

೪೫. ಸ್ವಾಮಿ ವಿಶ್ವಾನಂದ, ಬೆಂಗಳೂರು. ಸರ್ವೋದಯ ಕಾರ್ಯಕರ್ತ ಹಾಗೂ ವಿಶ್ವಭ್ರಾತೃತ್ವ ಸಂಘದ ಕಾರ್ಯಕರ್ತ.

೪೬. ನೀಲತ್ತಹಳ್ಳಿ ಕಸ್ತೂರಿ, ಬೆಂಗಳೂರು. ಅಂಚೆ ಇಲಾಖೆ ಉದ್ಯೋಗಿ, ಗಾಂಧೀ ಸಾಹಿತ್ಯ ಸಂಘದ ಗೆಳೆಯ.

೪೭. ಸಂ. ಕೃಷ್ಣಸ್ವಾಮಿ, ಬೆಂಗಳೂರು. ಎಲ್. ಆರ್. ಡಿ. ಇ. ನಲ್ಲಿ ಅಧಿಕಾರಿ, ಭಜನಗಾಯಕ, ಸಂಘದ ಗೆಳೆಯ.

೪೮. ಸಿ. ಶ್ರೀ. ರಂಗಾಚಾರ್, ಬೆಂಗಳೂರು. ಭಾರತ ಸರ್ಕಾರದ ಜಲ-ವಿದ್ಯುತ್ ಆಯೋಗದಲ್ಲಿ ಇಂಜನಿಯರ್, ಗಾಂಧೀ ಸಾಹಿತ್ಯ ಸಂಘದ ಗೆಳೆಯ.

೪೯. ಎಂ. ಆರ್. ರಮಾಕಾಂತರಾವ್, ಬೆಂಗಳೂರು. ಎಚ್. ಎಂ. ಟಿ. ಉದ್ಯೋಗಿ, ಸಂಘದ ಗೆಳೆಯ.

೫೦. ಎನ್. ಪಂಕಜ, ಬೆಂಗಳೂರು. ಲೇಖಕಿ, ಸಂಘದ ಗೆಳತಿ.

೫೧. ಬಿ. ಕಾಮಾಕ್ಷಮ್ಮ, ಬೆಂಗಳೂರು. ಶಿಕ್ಷಕಿ, ಸರ್ವೋದಯ ಕಾರ್ಯಕರ್ತೆ, ಸಂಘದ ಗೆಳತಿ.

೫೨. ಸಿ. ಶ್ರೀ. ರಾಮಶೇಷ, ಬೆಂಗಳೂರು. ವಿಮಾ ಆಯೋಗದಲ್ಲಿ ಉದ್ಯೋಗಿ, ಸಾಹಿತ್ಯಪ್ರೇಮಿ, ಸಂಘದ ಗೆಳೆಯ.

೫೩. ಜಿ. ರಾಘವ, ಬೆಂಗಳೂರು. ವಿಜಯ ಟೀಚರ್ಸ್ ಕಾಲೇಜ್ ಅಧ್ಯಾಪಕ, ಸಂಘದ ಗೆಳೆಯ.

೫೪. ಎಸ್. ವಿ. ವೆಂಕಟಾಚಲಂ, ಋಷಿವ್ಯಾಲಿ, ಮದನಪಲ್ಲಿ. ಶಿಕ್ಷಕ, ಸಂಘದ ಗೆಳೆಯ.

೫೫. ರಾ. ವೆ. ಕರಗುದರಿ, ಹುಬ್ಬಳ್ಳಿ. ಲೇಖಕ, ಪತ್ರಕರ್ತ

---